

ಡಾ॥ ಹಂಪನಾ ಅಭಿನಂದನ ಗ್ರಂಥ



ನಕರು:

ಎ.ಚ್. ಜೆ. ಲಕ್ಕಪ್ಪಗೌಡ

ಸುಕನ್ಯಾ ಮಾರುತಿ

# ಸಂಕೃತಿ

(ಡಾ. ಹಂಪನಾ ಅಭಿನಂದನ ಗ್ರಂಥ)



ಸನ್ಮಾನ್ಯ ಶ್ರೀ ಎಂ. ಜಿ. ನಾಗರಾಜ್ ಅವರಿಗೆ
ವಂದನಾಪೂರ್ವಕವಾಗಿ

15/12/88

ಸಂಪಾದಕರು
ಪ್ರೊ. ಎಚ್. ಜೆ. ಲಕ್ಕಪ್ಪಗೌಡ
ಸುಕನ್ಯಾ ಮಾರುತಿ

ಪ್ರಕಾಶಕರು
ಡಾ. ಹಂಪನಾ ಅಭಿನಂದನ ಸಮಿತಿ
ಬೆಂಗಳೂರು

SANKRUTHI – A Collection of articles by different Authors, Edited by Prof. H. J. Lakkappa Gowda and Sukanya Maruthi, Published by Hampana Abhinandana Samithi Bangalore, Pages 316+xvi Price : Rs 50-00 1988







ಬೆಲೆ : ಐವತ್ತು ರೂಪಾಯಿ

ಲಕ್ಷ್ಮೀ ಮುದ್ರಣಾಲಯ
ಚಾಮರಾಜಪೇಟೆ, ಬೆಂಗಳೂರು-೧೮

## ಸಂಪಾದಕರ ಮಾತು

ಒಂದು ವ್ಯಕ್ತಿತ್ವವು ತನ್ನ ಕಾರ್ಯಸಾಧನೆಗಳಿಂದ ಅರಳುತ್ತದೆ. ನಾಡಿನ ಜನತೆಯ ಸಂಸ್ಕೃತಿಯ ಬೆಳವಣಿಗೆಗೆ ಶ್ರಮಿಸಿ ನಾಡಿನ ಜನರ ಬದುಕನ್ನು ಹಸನುಗೊಳಿಸುವಲ್ಲಿ ಶ್ರಮಿಸುತ್ತಡೆ. ಪ್ರತಿಯೊಬ್ಬ ಸಾಧಕನ ವ್ಯಕ್ತಿತ್ವವು ಈ ದಿಸೆಯಲ್ಲಿ ಕಾರ್ಯೋನ್ಮುಖ ವಾಗಿ ಜನರ ಪ್ರೀತ್ಯಾದರಗಳಿಗೆ ಪಾತ್ರವಾಗುತ್ತದೆ. ಇಡೀ ನಾಡೇ ಅವರನ್ನು ಗೌರವ ದಿಂದ ಕಾಣುತ್ತಿರುತ್ತದೆ. ಇಂದು ಗೌರವ ಭಾಜನರಾಗಿರುವ ವಿಶಿಷ್ಟ ವ್ಯಕ್ತಿಗಳೆಲ್ಲರ ವ್ಯಕ್ತಿತ್ವವು ಇದೇ ರೀತಿ ಅರಳಿರುವಂತಹುದು. ಈ ರೀತಿ ಅರಳಿ ಅಪಾರವಾದ ಸಾಧನೆ–ಸಿದ್ಧಿಗಳನ್ನು ಎಸಗಿರುವುದರಿಂದಲೇ ಎಲ್ಲರ ಗೌರವಕ್ಕೂ ಪಾತ್ರವಾಗಿರು ವಂತಹುದು. ಆದ್ದರಿಂದಲೇ ಅವರ ಚೇತನ ಉಳಿದ ವ್ಯಕ್ತಿಗಳಿಗೆ ಆದರ್ಶವಾಗುತ್ತದೆ; ಮಾರ್ಗದರ್ಶಕವಾಗುತ್ತದೆ; ಅನುಕರಣೀಯವಾಗುತ್ತದೆ. ಈ ರೀತಿ ಆಗಬೇಕಾದರೆ ಮನುಷ್ಯನ ಸತತವಾದ ಶ್ರಮ, ದುಡಿಮೆ, ಪ್ರಯತ್ನಗಳಿಂದ ತನ್ನ ವ್ಯಕ್ತಿತ್ವವನ್ನು ಉನ್ನತಮಟ್ಟದಲ್ಲಿ ರೂಪಿಸಿಕೊಳ್ಳಬೇಕು. ಆ ಮೂಲಕ ಜನರ ಪ್ರೀತ್ಯಾದರಗಳಿಗೆ ಪಾತ್ರವಾಗಬೇಕು. ಇದು ಸುಲಭ ಸಾಧ್ಯವಾದುದೇನಲ್ಲವಾದರೂ ಡಾ. ಹಂಪನಾ ಅಂತಹವರಿಗೆ ಕಷ್ಟವೇನೂ ಆಗಿಲ್ಲ. ಇವರು ತಮ್ಮ ಐದು ದಶಕಗಳ ಬದುಕಿನಲ್ಲಿ ಕನ್ನಡ ನಾಡು, ನುಡಿ, ಸಂಸ್ಕೃತಿಗೆ ತಮ್ಮದೇ ಆದ ವಿಶಿಷ್ಟ ಕೊಡುಗೆಯನ್ನು ನೀಡಿ ಜನರ ಭಾಷೆಯ ಸಂಸ್ಕೃತಿಯ ಏಳಿಗೆಗೆ ಕಾರಣರಾಗಿದ್ದಾರೆ. ಹಾಗೆಯೇ ತಮ್ಮ ಉಜ್ವಲವಾದ ಅನುಕರಣೀಯವಾದ ವ್ಯಕ್ತಿತ್ವದಿಂದ, ಪರೋಪಕಾರ, ಪ್ರೀತಿ, ವಿನಯ, ವಿಶ್ವಾಸ, ಸೌಜನ್ಯ, ಉದಾರತೆ ಸರಳತೆ–ಮುಂತಾದ ಗುಣಗಳಿಂದ ದುರ್ಬಲ ವರ್ಗಗಳ ಜನರ ಪ್ರೀತಿಯನ್ನು ಗಳಿಸಿದ್ದಾರೆ.

ಭಾಷಾವಿಜ್ಞಾನ, ಗ್ರಂಥಸಂಪಾದನೆ, ಕಾದಂಬರಿ, ಜೀವನಚರಿತ್ರೆ, ಪ್ರಬಂಧ, ವಿಮರ್ಶೆ, ಸಂಶೋಧನೆ, ಜಾನಪದ, ಶಿಶುಸಾಹಿತ್ಯ, ಅಲಂಕಾರಶಾಸ್ತ್ರ, ಅನುವಾದ– ಇತ್ಯಾದಿಯಾಗಿ ಸಾಹಿತ್ಯದ ಹಲವು ಕ್ಷೇತ್ರಗಳಲ್ಲಿ ಸುಮಾರು ಐವತ್ತಕ್ಕೂ ಹೆಚ್ಚು ಕೃತಿ ಗಳನ್ನು ೨೫೦ಕ್ಕೂ ಹೆಚ್ಚು ಲೇಖನಗಳನ್ನು ಹೊರತಂದಿರುವ ಡಾ. ಹಂಪ. ನಾಗರಾಜಯ್ಯ ಅವರು ಸದಾ ಹಸನ್ಮುಖಿಗಳು. 'ಮೂರ್ತಿಗಿಂತ ಕೀರ್ತಿ ದೊಡ್ಡದು' ಎಂಬಂತೆ ಇವರ ವ್ಯಕ್ತಿತ್ವ; ಇವರು ಸದಾಚಟುವಟಿಕೆಯ ಚಿಲುಮೆ. ಸಂಕಟ, ನೋವು ತೆಗಳಿಕೆಗಳನ್ನು ಉತ್ಸಾಹ, ಸಂತೋಷ, ಹೊಗಳಿಕೆಗಳನ್ನಾಗಿ ಮಾರ್ಪಡಿಸಿ ಸ್ವಾಗತಿಸುವ ಅವರ ಮನೋಧೈರ್ಯ ಅಪರೂಪದ್ದೆಂದೇ ಹೇಳಬೇಕಾಗುತ್ತದೆ. ಉತ್ತಮ ಭಾಷಣ

ಕಾರರಾಗಿ, ಪ್ರಾಧ್ಯಾಪಕರಾಗಿ, ಹಿರಿಯ ಸಾಹಿತಿಯಾಗಿ, ಡಾ. ಹಂಪನಾ ಅವರು ಹೆಸರು ಮಾಡಿರುವಂತೆ ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾಗಿಯೂ ಅವರು ಸಲ್ಲಿಸಿರುವ ಸೇವೆ ಅಪಾರವಾದುದು ; ಅಮೋಘವಾದುದು. ಕನ್ನಡ ಭಾಷೆ ಮತ್ತು ಸಾಹಿತ್ಯ ಗರಿಗಟ್ಟಿ ನಿಲ್ಲುವಂತೆ ಶಕ್ತಿಮೀರಿ ಶ್ರಮಿಸುತ್ತ ಬಂದಿರುವ ಡಾ. ಹಂಪನಾ ಅವರ ಸೇವೆಯನ್ನು ಗುರುತಿಸಿ ಕನ್ನಡನಾಡಿನ ಜನತೆ ಸುವರ್ಣ ಪದಕ ನೀಡಿದ್ದಾರೆ. ಜೋಡಿ ಶಾಲು ಹೊದಿಸಿ ಗೌರವಿಸಿದ್ದಾರೆ. ಇವರ ದ್ರಾವಿಡ ಭಾಷಾವಿಜ್ಞಾನ ಕೃತಿಗೆ ರಾಜ್ಯ ಸಾಹಿತ್ಯ ಅಕಾದೆಮಿ ಬಹುಮಾನ ಸಿಕ್ಕಿದೆ. ಆತ್ಮತೃಪ್ತಿಗಾಗಿ ಕನ್ನಡ ನಾಡಿನ ಜನತೆಗೆ ಸೇವೆ ಸಲ್ಲಿಸಿದ ಕೆಲವು ಮಹನೀಯರಂತೆ ವೇತನವಿಲ್ಲದೆ ಸುಮಾರು ೧೪ ವರ್ಷ ಕಾಲ ಪರಿಷತ್ತಿಗೆ ಸೇವೆ ಸಲ್ಲಿಸಿದ್ದಾರೆ. ಬೆಂಗಳೂರಿಗೆ ಸೀಮಿತವಾಗಿದ್ದ ಪರಿಷತ್ತನ್ನು ಗ್ರಾಮೀಣ ಪರಸರಕ್ಕೆ ಕೊಂಡೊಯ್ದರು. ಪಟ್ಟಭದ್ರ ಹಿತಾಸಕ್ತಿಗಳ ವಶದಲ್ಲಿದ್ದ ಸಂಸ್ಥೆಯನ್ನು ಜನಸಾಮಾನ್ಯರಿಗೆ ಹಾಗೂ ಕೆಳಸ್ತರದವರಿಗೆ ಎಟುಕುವಂತೆ ಮಾಡಿದರು. ವೈವಿಧ್ಯಮಯವಾದ ಕಾರ್ಯಕ್ರಮಗಳನ್ನು ನಡೆಸಿದರು. ನಾಡಿನ ಮೂಲೆ ಮೂಲೆಯಲ್ಲಿರುವ ಬರಹಗಾರರನ್ನು ಗುರುತಿಸಿ ಅವಕಾಶ ನೀಡಿದರು. ಭಾರತೀಯ ಭಾಷೆಗಳಲ್ಲಿಯೇ ಚಾರಿತ್ರಿಕ ದಾಖಲೆಯನ್ನು ನಿರ್ಮಿಸುವಂಥ ಯೋಜನೆಗಳನ್ನು ಹಮ್ಮಿಕೊಂಡು ಕಾರ್ಯಗತಗೊಳಿಸಿದರು. ಪ್ರಸ್ತುತ ಜಗತ್ತಿನಲ್ಲಿ ಯುವಕರನ್ನು ಅದರಲ್ಲೂ ಕೆಳವರ್ಗದವರನ್ನು ಪ್ರೀತಿಯಿಂದ ಕಾಣುವ, ಅವರ ಉತ್ತಮ ಕಾರ್ಯಗಳನ್ನು ಪ್ರತಿಭೆಯನ್ನು ವಸ್ತುನಿಷ್ಠವಾಗಿ ಮೆಚ್ಚಿ ಪ್ರಶಂಸಿಸುವ, ನ್ಯೂನತೆಗಳನ್ನು ಆತ್ಮೀಯತೆಯಿಂದ ತಿದ್ದುವ ಹಿರಿಯರ ಸಂಖ್ಯೆ ಕಡಿಮೆಯಾಗುತ್ತಿದೆ. ಆದರೆ ಡಾ. ಹಂಪನಾ ಇದಕ್ಕೆ ಅಪವಾದವಾಗಿದ್ದಾರೆ. ಯುವಕರನ್ನು, ದಲಿತರನ್ನು ಅಪಾರವಾಗಿ ಪ್ರೀತಿಸುವುದು ಇವರ ದೊಡ್ಡಗುಣವಾಗಿದೆ. ಕನ್ನಡ ಸಾಹಿತ್ಯ ಪರಿಷತ್ತಿಗೆ ಕಳೆದ ಏಳುವರ್ಷಗಳಲ್ಲಿ ಅಂದರೆ ೧೯೭೮ ರಿಂದ ೧೯೮೬ರ ವರೆಗೆ ಹಲವಾರು ಕಾರ್ಯಕ್ರಮಗಳನ್ನೂ ನಡೆಸಿದೆ. ಈ ಪ್ರತಿಯೊಂದು ಮಹತ್ವದ ಕಾರ್ಯಕ್ರಮದ ಹಿಂದೆಯೂ ಹಂಪನಾ ಅವರ ಅಪಾರವಾದ ಶ್ರಮ, ದೂರದೃಷ್ಟಿ ಮತ್ತು ಜನಪರ ಹಿತಾಸಕ್ತಿ ಕ್ರಿಯಾಶೀಲವಾಗಿತ್ತು ಎಂಬುದು ಬಹುಜನರಿಗೆ ತಿಳಿದ ಸಂಗತಿಯೇ ಆಗಿದೆ. ಡಾ. ಹಂಪನಾ ಅವರು ವೈಯುಕ್ತಿಕವಾದ ಸಾಹಿತ್ಯ ಸೇವೆ ಒಂದು ಮುಖವಾದರೆ ಪರಿಷತ್ತಿನ ಅಧ್ಯಕ್ಷರಾಗಿ ಲೇಖಕರನ್ನು ಬೆಳೆಸಿದ್ದು, ಕಾರ್ಯಕ್ರಮಗಳನ್ನು ನಡೆಸಿದ್ದು, ಇನ್ನೊಂದು ಮುಖ. ಆದ್ದರಿಂದ ಗುರುತರವಾದ ಚಾರಿತ್ರಿಕ ದಾಖಲೆ ನಿರ್ಮಿಸುವ ಅವರ ಸಾಹಿತ್ಯಕ್ಕೆ ಹಾಗೂ ಕನ್ನಡದ ಸೇವಾ ಕಾರ್ಯಗಳನ್ನು ಗುರುತಿಸುವಾಗ 'ಗುಲಾಬಿಯನ್ನು ನೋಡಬೇಕೇ ಹೊರತು ಅದರ ಮುಳ್ಳುಗಳನ್ನಲ್ಲ. ಅವರ ಸಾಧನೆಗಳನ್ನು ಮೆಚ್ಚಿ ಬೆಂಬಲಿಸುವ ಸಹೃದಯ ಮನಸ್ಸು ಇವತ್ತಿನ ಸಂದರ್ಭದಲ್ಲಿ ಅವಶ್ಯಕವಾಗಿದೆ.

ಜನಾನುರಾಗಿ ಹಂಪನಾ ಅವರಿಗೆ ಅಭಿಮಾನಿ ಓದುಗ ಬಳಗದ ಪರವಾಗಿ ಸಂಭಾವನಾ ರೂಪದ ಗ್ರಂಥವೊಂದನ್ನು ಸಮರ್ಪಿಸಬೇಕೆಂಬ ಅಪೇಕ್ಷೆ ಸುಮಾರು ನಾಲ್ಕೈದು ವರ್ಷಗಳಿಂದ ನಾಡಿನ ಅಭಿಮಾನಿಗಳಲ್ಲಿ ಸುಳಿದಾಡುತ್ತಿತ್ತು. ಅದಕ್ಕೊಂದು ಖಚಿತ ರೂಪ ಬಂದದ್ದು—೧೯೮೫ರ ಆರಂಭದಲ್ಲಿ. ಡಾ. ಹಂಪನಾ ಅವರಿಗೆ ಐವತ್ತು ವರ್ಷ ತುಂಬುತ್ತಿರುವುದನ್ನು ನೆಪ ಮಾಡಿಕೊಂಡು ನಮ್ಮ ಸಂತೋಷವನ್ನು ಪ್ರಕಟಿಸ ತೊಡಗಿದವು. ಈ ಪ್ರಯತ್ನ ಸಫಲವಾದದ್ದು ಹಲವರ ಸಹಾಯ ಮತ್ತು ಸಹ ಕಾರಗಳಿಂದ. ಮೊದಲನೆಯ ಫಸಲು 'ಪಚ್ಚೆತೆನೆ'. ಕೇವಲ ಮೂರುವಾರಗಳ ಪರಿ ಮಿತಿಯಲ್ಲಿ ಈ ಪುಟ್ಟ ಗೌರವ ಗ್ರಂಥವನ್ನು ಉ. ಕ. ಜಿಲ್ಲಾ ಸಾಹಿತ್ಯ ಪರಿಷತ್ತಿನ ಜಿಲ್ಲಾ ಸಮಿತಿಯವರು ಸಿದ್ಧಪಡಿಸಿ ಹೊರತಂದರು. ಸಾಹಿತ್ಯ ಸಮ್ಮೇಳನ ಘಟಕಳ ದಲ್ಲಿ ನಡೆದ ಸಂದರ್ಭದಲ್ಲಿ, ಡಾ. ಹಂಪನಾ ದಂಪತಿಗಳಿಗೆ ಏರ್ಪಡಿಸಿದ್ದ ಭವ್ಯ ಸಮಾರಂಭದಲ್ಲಿ 'ಪಚ್ಚೆತೆನೆ' ಕೃತಿಯನ್ನು ಬಿಡುಗಡೆಗೊಳಿಸಿ ಅರ್ಪಿಸಲಾಯಿತು. ಇದೀಗ ಬೃಹತ್ ಪ್ರಮಾಣದ 'ಸಂಕೃತಿ' ಯನ್ನು ಹೊರತರಲಾಗುತ್ತಿದೆ. ಡಾ. ಹಂಪನಾ ಅವರು ಬೇರೆಬೇರೆ ಸಂದರ್ಭದಲ್ಲಿ ಬರೆದು ಪ್ರಕಟಿಸಿದ್ದ ಕೃತಿಗಳನ್ನು ಕುರಿತ ವಸ್ತುನಿಷ್ಠ. ವಿಮರ್ಶಾ ಲೇಖನಗಳನ್ನು ಇಲ್ಲಿ ಸಂಕಲಿಸಲಾಗಿದೆ. ಮಹಾವೀರ ನಾಡೋಜಪಂಪ, ಮಹಾಕವಿ ರನ್ನ, ದೇವರಾಯನದುರ್ಗ-ಮೊದಲಾದ ಕೃತಿಗಳು ಲಭ್ಯವಿಲ್ಲದ್ದರಿಂದ ಅವುಗಳ ವಿಮರ್ಶಾ ಲೇಖನಗಳನ್ನು ಇಲ್ಲಿ ಒದಗಿಸಲಾಗಿಲ್ಲ.

ಡಾ. ಹಂಪನಾ ಅವರ ಅಭಿಮಾನಿಗಳ ಬಳಗ ಬಹು ದೊಡ್ಡದು. ಅವರು ಒಂದು ರೀತಿಯ ವಸುಧೈವ ಕುಟುಂಬ ಪಡೆದ ಪುಣ್ಯಶಾಲಿ. ಹಿರಿಯ ಸಾಹಿತಿಗಳು, ಸಹೋದ್ಯೋಗಿಗಳು ಹಾಗೂ ಸಮವಯಸ್ಕರಾದ ಸಾಹಿತಿಗಳೇ ಅಲ್ಲದೆ ಹಲವಾರು ಜನ ಕಿರಿಯ ಬರಹಗಾರರು ಅವರ ಪರವಾಗಿ, ವಿಚಾರವಾಗಿ ಗೌರವ ತಳೆದವರಿದ್ದಾರೆ. ಲೇಖನ ಕೇಳಲು ಹೋದ ಕಡೆಗಳಲ್ಲೆಲ್ಲ ನಮಗೆ ಅಪಾರ ಬೆಂಬಲ ಅಮಿತ ಪ್ರೋತ್ಸಾಹ ದೊರಕಿತು. ನಮಗೆ ಮುನ್ನುಗ್ಗುವ ಉತ್ಸಾಹಕ್ಕೆ ತಣ್ಣೀರು ಎರಚುವ ಪ್ರಸಂಗ ಎಲ್ಲೂ ಎದುರಾಗಲಿಲ್ಲ. ಲೇಖನ ಸಂಗ್ರಹಕ್ಕೆ ಹೊರಟಾಗ ಇನ್ನೊಂದು ಬಗೆಯ ಪ್ರೋತ್ಸಾಹದ ಆಶ್ಚರ್ಯ ಕಾದಿತ್ತು. ಇಂತಹದೊಂದು ಪ್ರಯತ್ನ ನಡೆಯುತ್ತಿದೆಯೆಂದು ತಿಳಿದೊಡನೆಯೇ ಹಂಪನಾರ ಬದುಕನ್ನು ಬರವಣಿಗೆಯನ್ನು ಕನ್ನಡಕ್ಕಾಗಿ ಮಾಡಿರುವ ಕೆಲಸವನ್ನು ಕುರಿತು ನಾನು ತಾನು ಎಂದು ಸ್ವಪ್ರೇರಣೆಯಿಂದ ಲೇಖನ ಬರೆದು ಕಳಿಸ ತೊಡಗಿದರು. ಕನ್ನಡನಾಡಿನ ನಾನಾ ಭಾಗಗಳ ಲೇಖಕರು ತೋರಿಸುವ ಮುತುವರ್ಜಿ ಯಿಂದ ನಾವು ಮೂಕರಾಗಿದ್ದೇವೆ. ಡಾ. ಹಂಪನಾ ಅದೆಷ್ಟು ಜನರ ಪ್ರೀತ್ಯಾದರ ಗಳಿಂದ ಧನ್ಯರಾಗಿದ್ದಾರೆಂಬುದರ ಪರಿಚಯದಿಂದ ಖುಷಿಗೊಂಡಿದ್ದೇವೆ. ಡಾ. ಹಂಪ ನಾಗರಾಜಯ್ಯರವರನ್ನು ಹೀಗೆ ಗೌರವಿಸುವುದಕ್ಕೆ ಖಚಿತವಾದ ಕಾರಣಗಳಿವೆ. ಸಾಹಿ

ತ್ಯವೇ ಅಲ್ಲದೆ ಸಾಮಾಜಿಕ, ಸಾಂಸ್ಕೃತಿಕ ಕಾರಣಗಳಿಗಾಗಿಯೂ ಅವರನ್ನು ಕನ್ನಡಿಗರು ಪುರಸ್ಕರಿಸಬೇಕಾಗುತ್ತದೆ. ಇದಕ್ಕೊಂದು ಐತಿಹಾಸಿಕ ಮಹತ್ವವಿದೆ.

ಕಮಲಾ ಹಂಪನಾ ಅವರಿಗೆ ಎರಡು ವರ್ಷಗಳ ಹಿಂದೆ ಕಮಲಾಭಿನಂದನ, ಕಮಲಾಕೃತಿ–ವಿಮರ್ಶೆ, ಕಮಲಾಹಂಪನಾಬದುಕು ಬರಹ ಎಂಬ ಮೂರು ಸಂಭಾವನ ಗ್ರಂಥಗಳನ್ನು ಏಕಕಾಲದಲ್ಲಿ ಹೊರತಂದದ್ದು ಒಂದು ಹೊಸ ದಾಖಲೆಯಾಗಿತ್ತು. ಹೆಂಡತಿಗಿಂತ ಒಂದು ವರ್ಷ ಚಿಕ್ಕವರಾದ ಗಂಡನಿಗೆ ಈ ವರ್ಷ ಈ ಅಭಿನಂದನ ಗ್ರಂಥವನ್ನು ಅರ್ಪಿಸಲಾಗುತ್ತಿದೆ. ಹಂಪನಾ ದಂಪತಿಗಳು ಭಾಗ್ಯಶಾಲಿಗಳು. ಸತಿ–ಪತಿಗಳೊಂದಾಗಿ ಕನ್ನಡದ ಸೇವೆಗೆ ಬದುಕನ್ನು ಮುಡಿಪಾಗಿರಿಸಿ ೨೫ವರ್ಷ ದಾಂಪತ್ಯ ಹಾಗೂ ಸಾಹಿತ್ಯ ಜೀವನವನ್ನು ಯಶಸ್ವಿಯಾಗಿ ನಡೆಸಿದ್ದಾರೆ. ಆದರ್ಶದಾಂಪತ್ಯಕ್ಕೂ ಉತ್ಕೃಷ್ಟ ಮಾದರಿಯಾಗಿದ್ದಾರೆ. ಅವರ ವೈವಾಹಿಕ ಜೀವನದ ಬೆಳ್ಳಿಹಬ್ಬದ ಆಚರಣೆಯ ಆಯತ ವೇಳೆಗೆ ನಾವು ಈ ಗ್ರಂಥಮಟ್ಟದ ಮೂಲಕ ನಮ್ಮ ಪ್ರೀತಿ, ಸಂತೋಷ ಕೃತಜ್ಞತೆ ಸೂಚಿಸಿ ಹಂಪನಾ ದಂಪತಿಗಳು ಇನ್ನಷ್ಟು ಹರ್ಷದ ದಿನಗಳನ್ನು ಕಾಣುವಂತಾಗಲೆಂದು ಹಾರೈಸುತ್ತೇವೆ.

ಜುಲೈ ೧೯೮೮

**ಎಚ್. ಜೆ. ಲಕ್ಕಪ್ಪಗೌಡ**
**ಸುಕನ್ಯಾ ಮಾರುತಿ**

# ಪರಿವಿಡಿ

## ಭಾಷಾವಿಜ್ಞಾನ


೧. ಭಾಷೆ

—ಡಾ. ಸಂಗಮೇಶ ಸವದತ್ತಿಮಠ .... ೩

೨. ದ್ರಾವಿಡ ಭಾಷಾವಿಜ್ಞಾನ

—ಡಾ. ದೇ. ಜವರೇಗೌಡ .... ೮

೩. ಭಾಷಾವಿಜ್ಞಾನಿಗಳು

—ಡಾ. ಸೋಮಶೇಖರಗೌಡ .... ೧೪

೪. ದ್ರಾವಿಡ ಸಂಖ್ಯಾವಾಚಕಗಳು

—ಡಾ. ಸಿ. ಎಸ್. ಶಿವಕುಮಾರಸ್ವಾಮಿ .... ೨೦

೫. ಭಾರತದ ಭಾಷಾಸಮಸ್ಯೆ

—ಡಾ. ಆರ್. ರಾಜಪ್ಪ .... ೨೮

೬. ಭಾಷಾವಿಜ್ಞಾನಿಯಾಗಿ

—ಡಾ. ಹೆಚ್. ಎಂ. ಮಹೇಶ್ವರಯ್ಯ .... ೩೩


## ಗ್ರಂಥ ಸಂಪಾದನೆ


೭. ಜಯನೃಪ ಕಾವ್ಯ ಸಂಗ್ರಹ

—ಚಂದ್ರಗೌಡ ಕುಲಕರ್ಣಿ .... ೩೯

೮. ಭರತೇಶ ವೈಭವ

—ಎಚ್. ಎಸ್. ಹರಿಶಂಕರ್ .... ೪೪

೯. ಸಾಳ್ವ ಭಾರತ

—ಡಾ. ಜಿ. ಎಂ. ಹೆಗಡೆ .... ೮೪

೧೦. ಧನ್ಯಕುಮಾರ ಚರಿತೆ

—ಸರಸ್ವತಿ ವಿಜಯಕುಮಾರ್ .... ೫೬

೧೧. ಧನ್ಯಕುಮಾರ ಚರಿತೆ

—ಡಾ. ಬಿ. ಆರ್. ಹಿರೇಮಠ .... ೬೫

೧೨. ನಾಗಕುಮಾರ ಷಟ್ಪದಿ

—ಟಿ. ಕೇಶವಭಟ್ಟ .... ೬೮

೧೩. ರತ್ನಾಕರನ ಹಾಡುಗಳು

—ಬಾಲಣ್ಣ ಶೀಗೀಹಳ್ಳಿ .... ೭೫

೧೪. ನೇಮಿನಾಥ ಪುರಾಣ

— ಡಾ. ಬಸವರಾಜ ಮಲಶೆಟ್ಟಿ .... ೮೨

೧೫. ಪೊನ್ನನ ಶಾಂತಿಪುರಾಣದ ಸುದೀರ್ಘ ಪೀಠಿಕೆ

— ಡಾ. ಎಂ. ಎ. ಜಯಚಂದ್ರ .... ೮೫

೧೬. ಚಂದ್ರಸಾಗರ ವರ್ಣಿಯ ಕೃತಿಗಳು

— ಡಾ. ಬಿ. ಸಿ. ಜವಳಿ .... ೯೦

೧೭. ಸಾಹಿತ್ಯ ಸಮ್ಮೇಳನ ಸಂಪುಟಗಳ ಸಂಪಾದಕರಾಗಿ

— ಡಾ. ನಂ. ತಪಸ್ವೀಕುಮಾರ್ .... ೯೫


## ಜೀವನಚರಿತ್ರೆ


೧೮. ಶಂಭವಸಾಗರ ಮಹಾರಾಜರ ಜೀವನಚರಿತ್ರೆ

—ಡಾ. ಎಸ್. ಪಿ. ಪಾಟೀಲ .... ೧೦೭

೧೯. ಗೋವಿಂದ ಪೈ ಬದುಕು ಬರಹ

- ಪಾರ್ಶ್ವನಾಥ ಜಿ. ಕೆಂಪಣ್ಣವರ .... ೧೧೨

೨೦. ಸಮ್ಮೇಳನಾಧ್ಯಕ್ಷರು

ಡಾ. ಮ. ಗು. ಬಿರಾದಾರ .... ೧೧೮

೨೧. ಗಡಿನಾಡ ಗಾಂಧೀ

— ಬಿ. ಜಯದೇವಪ್ಪ .... ೧೨೪

೨೨. ಜೀವನಚರಿತ್ರೆಕಾರರಾಗಿ

— ಸಿ. ಹನುಮಂತರಾಯಪ್ಪ .... ೧೨೭

೨೩. ಸಂಪಾದಿತ ಕೃತಿಗಳು

— ಡಾ. ಎಸ್. ಎಸ್. ಕೋತಿನ .... ೧೩೨

೨೪. ಸದಾಶಿವರ ಹನ್ನೆರಡು ಕಥೆಗಳು

—ಕೆ. ಎಂ. ಮುನಿಕೃಷ್ಣಪ್ಪ .... ೧೫೦

೨೫. ಸವ್ಯಸಾಚಿ ಪಂಪ

— ಡಾ. ಸುಶೀಲಾ ನೆಲ್ಲಿಸರ .... ೧೫೫

**ಪ್ರಬಂಧ**


೨೬. ಹೆಸರಿನ ಸೊಗಸು
—ರಂಗಾರೆಡ್ಡಿ ಕೋಡಿರಾಂಪುರ .... ೧೬೭


**ವಿಮರ್ಶೆ**


೨೭. ಪೈಯವರ ಮೂರು ನಾಟಕಗಳು
—ಸೀಲಮ್ಮ ಕತ್ನಹಳ್ಳಿ .... ೧೭೩
೨೮. ವಿ. ಕೃ. ಗೋಕಾಕ್
—ಎಚ್. ವಿ. ನಾಗೇಶ್ .... ೧೭೮


**ಸಂಶೋಧನೆ**


೨೯. ಯಕ್ಷ ಯಕ್ಷಿಯರು
—ಎಚ್. ಶ್ರೀಶೈಲ ಆರಾಧ್ಯ .... ೧೮೭
೩೦. ಕೆಲವು ನೋಂಪಿಯ ಕಥೆಗಳು
—ಡಾ. ಕೆ. ಆರ್ ಸಂಧ್ಯಾರೆಡ್ಡಿ .... ೧೯೫


**ಜಾನಪದ**


೩೧. ಕರ್ನಾಟಕದ ಜಾತ್ರೆಗಳು
– ಡಾ. ಮಲ್ಲಿಕಾರ್ಜುನ ಲಠ್ಠೆ .... ೨೦೩
೩೨. ಆಕಾಶ ಜಾನಪದ
—ನೀಲಗಿರಿ ತಳವಾರ .... ೨೧೨
೩೩. ಜಾನಪದ ಅಧ್ಯಯನ ವಿಚಾರ ಸಂಕಿರಣ
—ಪ್ರೊ. ಎಸ್.ಎಸ್. ಭೂಸರೆಡ್ಡಿ .... ೨೧೫
೩೪. ಜಾನಪದ ತಜ್ಞರಾಗಿ
—ಡಾ. ಶ್ರೀಕಂಠ ಕೂಡಿಗೆ .... ೨೨೦


**ಪ್ರಜಾರೋಪನ್ಯಾಸ**


೩೫. ವಡ್ಡಾರಾಧನೆ
– ಟಿ. ಎಸ್. ನಾಗರಾಜಶೆಟ್ಟಿ .... ೨೨೭
೩೬. ಮೂರನೆಯ ಮಂಗರಸ ಕವಿ
—ಸಿ. ನಾಗರಾಜು .... ೨೩೩

**ಅನುವಾದ**


೩೭. ಆತ್ಮತತ್ವ ವಿಚಾರ
—ಪ್ರೊ. ಜಿ. ಬ್ರಹ್ಮಪ್ಪ .... ೨೩೯

೩೮. ಕೃಷ್ಣಪಾಂಡವರು
—ಡಾ. ಪದ್ಮಾಶೇಖರ್ .... ೨೩೪

೩೯. ಭೀಮಭಕ್ತಿ ಪರೀಕ್ಷೆ
—ಪ್ರೊ. ಸಿ. ವಿ. ಕೆರಿಮನಿ .... ೨೪೯

೪೦. ಅನುವಾದಕರಾಗಿ
—ಪ್ರೊ. ಟಿ. ಎನ್. ಪ್ರಭಾಕರ್ .... ೨೫೭


**ಶಿಶುಸಾಹಿತ್ಯ**


೪೧. ಬಸವಪ್ಪ ಶಾಸ್ತ್ರಿ
—ನಾ. ವುಜಿರೆ .... ೨೬೭

೪೨. ಕರ್ನಾಟಕ ಮತ್ತು ಜೈನಧರ್ಮ
—ವಿ. ಗೋಪಾಲಕೃಷ್ಣ .... ೨೭೨

೪೩. ಸಾಹಿತ್ಯ ಚರಿತ್ರೆಕಾರರಾಗಿ
—ಹೀ. ಚಿ. ಶಾಂತವೀರಯ್ಯ .... ೨೭೬


**ಅನುಬಂಧ**


೪೪. ಗೊಮ್ಮಟ ಬಾಹುಬಲಿ
—ಎಂ. ಜಿ. ನಾಗರಾಜ್ .... ೨೮೨

೪೫. ಜಯನೃಪ ಕಾವ್ಯ ಸಂಗ್ರಹ
—ಸರಿತಾ ಜ್ಞಾನಾನಂದ .... ೨೯೪

೪೬. ವಿಖ್ಯಾತ ವಿಜ್ಞಾನಿ ರಾಮನ್
—ಎಚ್. ದಂಡಪ್ಪ .... ೨೯೯

೪೭. ಯಕ್ಷ ಯಕ್ಷಿಯರು
—ಡಾ. ಚಂದ್ರಶೇಖರ ಕಂಬಾರ .... ೩೦೧

೪೮. ನಾಗಶ್ರೀ
—ಚಿಕ್ಕಣ್ಣ ಯಣ್ಣೆಕಟ್ಟೆ .... ೩೦೩

○ ಲೇಖಕರ ವಿಳಾಸ .... ೩೧೧

ಡಾ॥ ಸಂಗಮೇಶ ಸವದತ್ತಿಮಠ

# ಭಾಷೆ

ಮನುಷ್ಯ ಸಮಾಜಜೀವಿಯಾಗತೊಡಗಿದಂದಿನಿಂದ 'ಭಾಷೆ'
ಅವನ ಬದುಕಿನ ಅನಿವಾರ್ಯ ಅಂಗವಾಗಿ ಪರಿಣಮಿಸಿತು.
ಅವನು ಭಾಷೆಯನ್ನು ತನ್ನ ವಿಕಸನದ ಪ್ರಮುಖ ಮಾಧ್ಯಮ
ವನ್ನಾಗಿಸಿಕೊಂಡುದರಿಂದಲೆ ಸೃಷ್ಟಿಯಲ್ಲಿ ತನ್ನ ಪಾರಮ್ಯವನ್ನು
ಪಡೆದುಕೊಂಡನು. ಅನುವಂಶಿಕವಲ್ಲದ, ಸಹಜವಲ್ಲದ, ಭಾಷೆ
ಯನ್ನು ಕಲಿಕೆ ಪ್ರಯತ್ನದ ಮೂಲಕ ರೂಢಿಸಿಕೊಳ್ಳುತ್ತ ಸಹ
ಸ್ರಾರು ವರ್ಷಗಳಾದ ಮೇಲೆ ಭಾಷೆಯ ಹುಟ್ಟು ಬೆಳವಣಿಗೆಯ
ಬಗೆಗೆ ಅವನಿಗೆ ಜಿಜ್ಞಾಸೆ ಬೆಳೆಯಲಾರಂಭಿಸಿತು. ಈ ಜಿಜ್ಞಾಸೆ
ಯನ್ನು ಜ್ಞಾನಾರ್ಜನೆಯನ್ನಾಗಿಸುವ ಭಾಷಾಶಾಸ್ತ್ರ ಚಿಕಿತ್ಸ
ಕರು ಹುಟ್ಟಿಕೊಂಡರು. ವೈಯಾಕರಣಿಗಳು, ಭಾಷಾವಿಜ್ಞಾನಿ
ಗಳು ಭಾಷಾವಿಶ್ಲೇಷಣ ರೀತಿಗಳನ್ನು ಪರಿಧಿಯನ್ನು ನಿರ್ಮಿಸಿ,
ವಿಸ್ತರಿಸಿ ಬೆಳೆಸಿದರು. ವಿಶಿಷ್ಟ ಸಂಪ್ರದಾಯಗಳ, ಶಾಖೋಪ
ಶಾಖೆಗಳು ಹುಟ್ಟಿಕೊಂಡು ಕಾಲಕಾಲಕ್ಕೆ ನವೀನತಮ ಶೋಧನೆ
ಗಳ ಮೂಲಕ ಹೊಸ ಹೊಸ ಸಿದ್ಧಾಂತಗಳು ಭಾಷಾ ವಿಶ್ಲೇಷಣೆಗೆ
ಸಂಬಂಧಿಸಿದಂತೆ ಹೊರಬರತೊಡಗಿದವು. ಗ್ರೀಕ್ ಲ್ಯಾಟಿನ್
ಮಾದರಿಯನ್ನನುಸರಿಸಿ ಇಂಗ್ಲಿಷ್ ವ್ಯಾಕರಣ ಸಂಪ್ರದಾಯ,
ಸಂಸ್ಕೃತ ಮಾದರಿಯನ್ನನುಸರಿಸಿ ಭಾರತೀಯ ಭಾಷೆಗಳಲ್ಲಿ
ವ್ಯಾಕರಣ ಪರಂಪರೆಗಳು ಬೆಳೆದುಬಂದವು. ಮಾನವ ಭಾಷೆ
ಎಂದರೇನು ? ಅದರ ಮೂಲವಾವುದು ? ಅದರ ವಿಶ್ಲೇಷಣೆಯ
ವಿಧಾನಗಳಾವುವು ಎಂಬುದನ್ನು ವಿವರಿಸಲು ಹೊರಟದ್ದೇ
ವ್ಯಾಕರಣಕ್ಕೆ ನಾಂದಿಯಾಯಿತು. ಪಾಶ್ಚಾತ್ಯ ದೇಶಗಳಲ್ಲಿ ಗ್ರೀಕ್,
ಹಿಬ್ರು, ಲ್ಯಾಟಿನ್, ಇಂಗ್ಲಿಷ್ ಭಾಷೆಗಳಲ್ಲಿ ಪ್ರಮುಖ ವ್ಯಾಕರಣ
ಪರಂಪರೆ ಬೆಳೆದು ಬಂದ ಅನಂತರ ೧೮ನೆಯ ಶತಮಾನದ
ಉತ್ತರಾರ್ಧದ ವೇಳೆಗೆ ಆಧುನಿಕ ಭಾಷಾವಿಜ್ಞಾನದ ಕಲ್ಪನೆ
ಮೂಡಿತು. ಸರ್ ವಿಲ್ಯಂ ಜೋನ್ಸ್ (೧೭೮೬), ಎಫ್. ಡಿ.

ಸಸ್ಸೂರ (೧೮೫೭), ಎಡ್ವರ್ಡ್‌ಸಪೀರ (೧೮೮೪), ಫ್ರಾಂಜ ಬೋಸ್ (೧೮೫೮), ಲಿಯೋನಾರ್ಡ್ ಫ್ಲೂಮ್‌ಫೀಲ್ಡ್ (೧೮೮೭), ಕೆ. ಎಲ್. ಪೈಕ್, ಬ್ಲಾಕ್ ಮತ್ತು ಟ್ರೇಗರ್, ಗ್ಲೀಸನ್, ರಾಬರ್ಟ್ ಹಾಲ್, ಸಿ.ಎಫ್. ಹಾಕೆಟ್, ನಿಯೊಮ್ ಚೊಮಸ್ಕಿ ಮುಂತಾದ ಮಹನೀಯರು ಭಾಷಾ ವಿಜ್ಞಾನಕ್ಕೆ ಆಧುನಿಕ ಆಯಾಮಗಳನ್ನು ಒದಗಿಸಿ ಅದರ ವಿಶ್ಲೇಷಣಾ ತತ್ವಗಳನ್ನು ರೂಪಿಸಿ ಭಾಷಾ ರಚನೆಯ ಆಂತರಿಕ ತಿರುಳನ್ನು ಎಳೆ ಎಳೆಯಾಗಿ ಬಿಡಿಸಿ ತೋರಿಸುವ ಮಾರ್ಗಗಳನ್ನು ಕಂಡುಕೊಂಡರು. ಭಾರತಕ್ಕೆ ಆಧುನಿಕ ಭಾಷಾವಿಜ್ಞಾನದ ಸಿದ್ಧಾಂತಗಳ ಪರಿಚಯವಾಗತೊಡಗಿದ್ದು ೧೯ನೆಯ ಶತಮಾನದ ಕೊನೆ ಕೊನೆಗೆ ಅವುಗಳನ್ನು ಭಾರತೀಯ ಭಾಷೆಗಳಿಗೆ ಅನ್ವಯಿಸುವುದು ಇನ್ನೂ ಸ್ವಲ್ಪ ತಡವಾಯಿತು.

ಪರಂಪರಾಗತ ಭಾರತೀಯ ವ್ಯಾಕರಣ ಸಿದ್ಧಾಂತಗಳಿಂದ ಭಿನ್ನವಾದ ಪಾಶ್ಚಾತ್ಯ ಭಾಷಾ ವೈಜ್ಞಾನಿಕ ಸಿದ್ಧಾಂತಗಳು ಹೆಚ್ಚು ಖಚಿತವೆನಿಸಿದವು. ಆದರೂ ಭಾರತದಲ್ಲಿ ಪರಂಪರಾಗತ ಹಾಗೂ ಆಧುನಿಕ ಎರಡೂ ಬಗೆಯ ಭಾಷಾ ವಿವೇಚನೆ ಬೆಳೆದು ಬರ ತೊಡಗಿತು. ೨೦ನೆಯ ಶತಮಾನದಿಂದೀಚೆ ಆಧುನಿಕ ವ್ಯಾಕರಣಗಳ ರಚನೆ ಹೆಚ್ಚು ತೀವ್ರಗೊಂಡಿತು. ಕನ್ನಡದ ಮಟ್ಟಿಗೆ ಆಧುನಿಕ ಭಾಷಾವಿಜ್ಞಾನದ ತತ್ವ ಸಿದ್ಧಾಂತ ಗಳನ್ನು ಅಳವಡಿಸಿಕೊಂಡು ಭಾಷೆಯನ್ನು ಸಾಮಾನ್ಯವಾಗಿಯೂ ಕನ್ನಡಕ್ಕೆ ಅನ್ವಯಿಕ ವಾಗಿಯೂ ವಿವರಿಸುವ ನಿಟ್ಟಿನಲ್ಲಿ ಕೃಷಿ ಮಾಡಿದ ಪ್ರಮುಖ ಕನ್ನಡಿಗರೆಂದರೆ ಡಾ॥ ಆರ್. ಸಿ. ಹಿರೇಮಠ, ಡಾ॥ ಹಾ. ಮಾ. ನಾಯಕ, ಡಾ॥ ಕೆ. ಕುಶಾಲಪ್ಪಗೌಡ, ಡಾ॥ ಡಿ.ಎನ್. ಶಂಕರಭಟ್, ಡಾ॥ ಬಿ.ಬಿ. ರಾಜಪುರೋಹಿತ, ಡಾ॥ ಜೆ.ಎಸ್. ಕುಳ್ಳಿ, ಡಾ॥ ಯು. ಪಿ. ಉಪಾಧ್ಯಾಯ, ಡಾ॥ ಎಂ. ಚಿದಾನಂದಮೂರ್ತಿ, ಡಾ॥ ಹಂಪ. ನಾಗರಾಜಯ್ಯ, ಡಾ॥ ಬಿ. ರಾಮಚಂದ್ರರಾವ್, ಡಾ॥ ಎಚ್. ಎಸ್, ಬಿಳಿಗಿರಿ, ಡಾ॥. ಕೆ. ಕೆಂಪೇಗೌಡ, ಡಾ॥ ವಿಲ್ಯಂ ಮಾಡ್ತಾ, ಡಾ॥ ಸಂಗಮೇಶ ಸವದತ್ತಿಮಠ ಮುಂತಾದವರು.

ಡಾ॥ ಹಂಪ. ನಾಗರಾಜಯ್ಯ ಅವರು ಕಳೆದ ಇಪ್ಪತ್ತೈದು ವರ್ಷಗಳಷ್ಟು ಹಿಂದೆಯೇ ಆಧುನಿಕ ಭಾಷಾ ವಿಜ್ಞಾನದೆಡೆಗಿದ್ದ ತಮ್ಮ ಒಲವು ತೋರಿದರು. ಕ್ರಿ.ಶ. ೧೯೬೮ರಲ್ಲಿ ಅವರ 'ಭಾಷಾವಿಜ್ಞಾನ' ಆಧುನಿಕ ಭಾಷಾ ವಿಜ್ಞಾನವನ್ನು ಪರಿಚಯಿಸಿ ಕೊಡುವ ಗಮನಾರ್ಹ ಗ್ರಂಥವಾಗಿ ಮೂಡಿಬಂದಿತು. ಅದಕ್ಕೂ ಎರಡು ವರ್ಷ ಮೊದಲು ಅವರ 'ದ್ರಾವಿಡ ಭಾಷಾವಿಜ್ಞಾನ' ಪ್ರಕಟಗೊಂಡಿತ್ತು. ಇವೆರಡೂ ಬೃಹತ್ಕೃತಿಗಳು ಅವರೊಬ್ಬ ಉತ್ತಮ ಭಾಷಾವಿಜ್ಞಾನಿ ಎಂಬುದನ್ನು ಸೂಚಿಸಿದವು. ಭಾಷಾವಿಜ್ಞಾನಕ್ಕೆ ಸಂಬಂಧಿಸಿದಂತೆ ೧೯೭೨ರ ನಂತರ ಅವರ ಬರವಣಿಗೆ ಅದೇಕೋ ಮುಂದುವರಿಯಲಿಲ್ಲ. ಅಷ್ಟರೊಳಗೆ 'ಭಾಷೆ', 'ದ್ರಾವಿಡ ಸಂಖ್ಯಾವಾಚಕಗಳು'

ಮುಂತಾದ ೩–೪ ಕಿರುಪುಸ್ತಿಕೆಗಳು ಮಾತ್ರ ಹೊರಬಂದವು. ಅನಂತರ ಅಲ್ಲಲ್ಲಿ ಕೆಲ ಬಿಡಿ ಲೇಖನಗಳನ್ನು ಬಿಟ್ಟರೆ ಗ್ರಂಥಗಳು ಬರಲಿಲ್ಲ. ಪ್ರಾಯಶಃ ಸಾಹಿತ್ಯದ ಇತರ ಕ್ಷೇತ್ರಗಳೆಡೆಗೆ ಅವರ ಗಮನ ಹರಿದದ್ದರಿಂದ ಕನ್ನಡ ಭಾಷಾವಿಜ್ಞಾನ ಕ್ಷೇತ್ರಕ್ಕೆ ಅತ್ಯುತ್ತಮ ಕಾಣಿಕೆಗಳನ್ನು ಕೊಡಬಹುದಾಗಿದ್ದ ಅವರ ಮೌನ ಈ ನಿಟ್ಟಿನಲ್ಲಿ ಒಂದು ಕೊರತೆಯೇ ಆಯಿತೆನ್ನಬಹುದು.

'ಭಾಷೆ' ಹಂಪನಾ ಅವರ 54 ಪುಟಗಳ ಒಂದು ಪುಸ್ತಿಕೆ. ಕಮಲಾ ಹಂಪನಾ ಅವರಿಗೆ ಉಡುಗೊರೆಯಾಗಿ ನೀಡಿದ ಈ ಪುಟ್ಟ ಪುಸ್ತಕ ೧೯೭೩ರಲ್ಲಿ ಪ್ರಕಟಗೊಂಡಿದೆ. 'ಭಾಷಾವಿಜ್ಞಾನ' ಕೃತಿಯನ್ನು ಬರೆಯುವಾಗ ಹಾಗೂ ಅನಂತರ ಅವರು ಅಧ್ಯಯನಕ್ಕೆ ಅಳವಡಿಸಿಕೊಂಡ 'ಭಾಷೆಯೆಂದರೇನು' ಎಂಬುದರ ಕುರಿತು ಆಧುನಿಕ ವಿಚಾರಗಳನ್ನು ತಮ್ಮದೇ ಆದ ವಿಶಿಷ್ಟ ಶೈಲಿಯಲ್ಲಿ ಎರಕ ಹೊಯ್ದಿಟ್ಟಿರುವುದೇ ಈ ಪುಸ್ತಿಕೆಯ ವಿಷಯ. ಭಾಷೆಯೆಂದರೇನು ? ಎಂಬುದರ ವಿವರಣೆಯನ್ನೊಳಗೊಂಡ ಈ ಕೃತಿಯಲ್ಲಿ ಇಂಗ್ಲಿಷ್ ಗ್ರಂಥಗಳನ್ನು ಧಾರಾಳವಾಗಿ ಉಪಯೋಗಿಸಿಕೊಂಡ ಬಗ್ಗೆ ಹಂಪನಾ ಸ್ಪಷ್ಟವಾಗಿ ಹೇಳಿದ್ದಾರೆ. ಅಂತೆಯೇ 'ಭಾಷೆ'ಯ ವ್ಯಾಖ್ಯೆಯನ್ನು ಅದರ ಸಾಮಾನ್ಯ ತತ್ತ್ವಗಳ ಆಳಗಲಗಳನ್ನು ಸ್ಥೂಲವಾಗಿ ಪರಿಚಯಿಸಿಕೊಡುವಲ್ಲೆಲ್ಲ ಇಂಗ್ಲಿಷ್‌ನಲ್ಲಿ ಈ ಕುರಿತಾಗಿ ಬಂದ ಆಧುನಿಕ ವಿಚಾರಗಳನ್ನು ಸುಲಲಿತ ಕನ್ನಡದಲ್ಲಿ ಸಾರವತ್ತಾಗಿ ಸೋಸಿ ನಿರೂಪಿಸುತ್ತ ಸಾಗಿದ್ದಾರೆ. ಇಲ್ಲಿನ ಒಂದು ನೂರು ಪ್ಯಾರಾಗಳನ್ನೂ ಒಂದರಿಂದ ನೂರರವರೆಗೆ ಅನುಕ್ರಮವಾಗಿ ಹೊಂದಿಸಿ ಸೂಚಿಸಲಾಗಿದೆ. ಈ ಕ್ರಮ ಸೂಚನೆ ಒಂದು ಹೊಸ ಬಗೆಯೆಂದು ಲೇಖಕರು ಹೇಳಿರುವರಾದರೂ ಅವುಗಳನ್ನು ಮುಖ್ಯ ವಿಚಾರಗಳಿಗೆ ಮುಖ್ಯ ಅನುಕ್ರಮ ಸಂಖ್ಯೆ ಕೊಟ್ಟು ಅಲ್ಲಿ ಹಾಗೆ ಇರುವ ಮುಖ್ಯ ವಿಚಾರಗಳಲ್ಲಿ ಒಳಗೊಳ್ಳುವ ಪೂರಕ ವಿಚಾರಗಳನ್ನು ಮುಖ್ಯ ಸಂಖ್ಯೆಯ ಮುಂದೆ ಅನುಕ್ರಮವಾಗಿ ನೀಡುವ ರೀತಿಯನ್ನು ಅನುಸರಿಸಿದ್ದರೆ ಚೆನ್ನಾಗಿತ್ತು. ಈ ಬಗೆ ಸ್ವಲ್ಪ ಕಷ್ಟ ಸಾಧ್ಯವೂ ಹೌದು. ಅಲ್ಲದೆ ಇಂಥ ಪುಟ್ಟ ಪುಸ್ತಕಕ್ಕೆ ಅಷ್ಟಾಗಿ ಸೂಕ್ತವೂ ಎನಿಸಲಿಕ್ಕಿಲ್ಲ. ಇಲ್ಲಿ ಅನುಕ್ರಮ ಸಂಖ್ಯೆಗಳನ್ನು ದಶಮಾಂಶ ರೀತಿಯಲ್ಲಿ ಬರೆಯುವ ಅಗತ್ಯವಿರಲಿಲ್ಲವೆನಿಸುತ್ತದೆ (ಉದಾ : ೦.೪.೦ ೦.೬.೩ ಇತ್ಯಾದಿ).

ಭಾಷೆ ಎಂದರೇನು ? ಭಾಷೆಯು ಏನೇನನ್ನು ಒಳಗೊಂಡಿರುತ್ತದೆ. ಭಾಷಾ ವ್ಯಾಪಾರ ನಡೆಯುವ ಬಗೆ ಎಂತಹುದು ? ಭಾಷೆಯ ಸ್ವರೂಪವೇನು ? ಭಾಷಾ ವಿಜ್ಞಾನಿಯೆಂದರೆ ಯಾರು ? ಭಾಷಾ ವಿಜ್ಞಾನದ ಪ್ರಕಾರಗಳು ಯಾವುವು ? ಮಾನವ ಭಾಷಾವೈಲಕ್ಷಣ್ಯಗಳಾವುವು ? ಭಾಷಾ ವಿಜ್ಞಾನದಲ್ಲಿ ಭಾಷಾ ವಿಶ್ಲೇಷಣೆಗಳು ಅನುಸರಿಸುವ ವಿಧಾನಗಳಾವುವು ? ವ್ಯಕ್ತಿಭಾಷೆ, ಶಿಷ್ಟಭಾಷೆ, ಉಪಭಾಷೆ

ಗಳೆಂದರೇನು ? ಭಾಷೆಯಲ್ಲಿ ಲಿಪಿಯ ಸ್ಥಾನವೇನು ? ಇಷ್ಟು ವಿಷಯಗಳು ಈ ಚಿಕ್ಕ ಹೊತ್ತಿಗೆಯಲ್ಲಿ ಅಡಕವಾಗಿವೆ. ಈ ಎಲ್ಲ ವಿಷಯಗಳೂ ಸಾಕಷ್ಟು ಗಂಭೀರವೂ ವಿಶಾಲ ವಿವರಣೆಗೆ ಅಳವಡುವಂತಹವೂ ಆಗಿವೆ. ಅವುಗಳನ್ನು ಕರಿಯನ್ನು ಕೈಗನ್ನಡಿಯಲ್ಲಿ ಹಿಡಿದು ಪಂಪನಾ ಅವರು ನಮ್ಮ ಕೈಗಿತ್ತಿದ್ದಾರೆ. ಇಷ್ಟೊಂದು ವಿಷಯಗಳನ್ನು ಹೀಗೆ ತೀರ ಸಂಕ್ಷೇಪದಲ್ಲಿ ಹೇಳಬೇಕಾದಾಗ ಒಂದು ಅಂಶ ನಾವು ಗಮನಿಸಬೇಕಾದದ್ದೆಂದರೆ–ಎಲ್ಲಿಯೂ ವಿಷಯ ವಿವೇಚನೆಯ ಪುನರಾವೃತ್ತಿಯಾಗ ಕೂಡದು. ಹೇಳಬೇಕಾದುದನ್ನು ಒಂದೇ ಎಡೆಗೆ ಹೇಳಿದರೆ ಓದುಗನಿಗೆ ಅನುಕೂಲ ಆದರೆ 'ಭಾಷೆ'ಯಲ್ಲಿ ಕೆಲವೆಡೆ ಈ ಅಂಶ ಒಡೆದು ಕಾಣುತ್ತದೆ. ಉದಾಹರಣೆಗೆ ೦.೩.೦ ದಲ್ಲಿ ವರ್ಣನಾತ್ಮಕ ವ್ಯಾಕರಣಕ್ಕೆ ಸಂಬಂಧಿಸಿದ ವಿಷಯ ಬರುತ್ತದೆ. 'ಈ ಅಂಶಕ್ಕೆ ಸಂಬಂಧಿಸಿದ ವಿವರ ಹಿಂದಿನ ಪ್ಯಾರಾಗಳಲ್ಲಿ ಬಂದಿದೆ. ಮತ್ತೆ ಮುಂದೆ ಬರುತ್ತದೆ' ಎಂದು ಲೇಖಕರೇ ಹೇಳಿಕೊಡುವರಲ್ಲದೆ ಅದು ಹಾಗಾಗಿರುವುದೂ ಸತ್ಯ ವಾಗಿದೆ. ಸಂದರ್ಭ ಬಂದಾಗಲೆಲ್ಲ ಅಲ್ಲಲ್ಲಿ ಆ ವಿಷಯ ಮತ್ತೆ ಹೇಳುವ ರೀತಿಯನ್ನು ಇಲ್ಲಿ ಅನುಸರಿಸಿದೆ. ಪುಸ್ತಿಕೆಯಲ್ಲಿನ ಭಾಷಾಶೈಲಿಯ ಬಗೆಗೆ ಒಂದು ಮಾತು—ಭಾಷೆ ತೀರ ಆತ್ಮೀಯ ಹಾಗೂ ಲವಲವಿಕೆಯಿಂದ ಕೂಡಿದೆ. ನೇರವೂ ಆಗಿದೆ. ಆದರೆ ಕೆಲವೆಡೆ ಏಕ್‌ದಂ ಪ್ರೌಢವಾಗಿಬಿಡುತ್ತದೆ. ಉದಾ ಹರಣೆಗೆ —

'ಭಾಷಾ ವಿಜ್ಞಾನಿಗಳ ಅನೇಕ ನಿಯಮಗಳು ಈಗೀಗ ಪ್ರಾಕ್ತನಾಸಕ್ತಿಯ ವಿಷಯಗಳಾಗತೊಡಗಿವೆ' (೦.೦.೬). '....ಪ್ರಚ್ಛಕವಾಗಿ ಕ್ಷೇತ್ರಕಾರ್ಯಕ್ಕೆ ತೊಡಗಿ ಪ್ರತಿವಕ್ತನಿಂದ ಭಾಷಾಸಾಮಗ್ರಿ ಸಂಗ್ರಹಿಸಿ ಕೇಳುವಾಗ ಪ್ರತಿವಕ್ತನ ಭಾಷೆಯಷ್ಟೂ ಕನ್ನಡವೇ (೦.೨.೭). "ದತ್ತ : ಭಾಷೆ ರಕ್ತಗತ, ರಕ್ತಜನ್ಯ ಎಂಬ ಹೇಳಿಕೆಗಳ ಅಸತ್ಯತೆ ; 'ನನ್ನ ರಕ್ತದಲ್ಲಿ ಕನ್ನಡ ಹರಿಯುತ್ತಿದೆ' ಎಂಬಂಥ ಮಾತುಗಳ ಹುಸಿತನ" (೦.೪.೫). ಇಂಗ್ಲಿಷ್ ಮೂಲದ ಅನೇಕ ವ್ಯಾಖ್ಯೆಗಳು ಪಾರಿಭಾಷಿಕ ಪದಗಳು ಬರುತ್ತವೆ. ಅವುಗಳನ್ನು ಕನ್ನಡಕ್ಕೆ ಭಾಷಾಂತರಿಸುವಲ್ಲಿ ಕೆಲವೆಡೆ ಭಾಷಾಂತರ ಇನ್ನೂ ಚೆನ್ನಾಗಿ ಆಗಬೇಕೆನಿಸುತ್ತದೆ. ಉದಾ : (ಇಂಗ್ಲಿಷ್ ರೂಪ ಇಲ್ಲಿ ಕೊಟ್ಟಿಲ್ಲ.) ಇದನ್ನು ಒಂದು ಸಾಮಾಜಿಕ ಸಮೂಹ ಯಾವುದರ ಸಹಾಯದಿಂದ ಸಹಕರಿಸುವದೋ ಆ ಯಾದೃಚ್ಛಿಕ ಉಚ್ಚಾರ ಸಂಕೇತಗಳ ವ್ಯವಸ್ಥೆಯ ಭಾಷೆ (ಬ್ಲಾಕ್ ಮತ್ತು ಟ್ರೇಗರ್) (೦.೦.೪) ಎಂದು ಭಾಷಾಂತರಿಸ ಲಾಗಿದೆ. ಇದನ್ನೇ 'ಯಾದೃಚ್ಛಿಕ ವಾಚಿಕ ಧ್ವನಿಸಂಕೇತಗಳ ವ್ಯವಸ್ಥೆಯಿಂದ ಕೂಡಿ ಸಾಮಾಜಿಕ ಸಮೂಹದ ಸಹಕಾರಕ್ಕೆ ಕಾರಣವಾಗುವುದೇ ಭಾಷೆ' ಎಂದು ಭಾಷಾಂತರಿ ಸುವುದು ಒಳಿತು. Specialization ಇದನ್ನು ಪ್ರಾವೀಣ್ಯತ್ವ (೦.೮.೭) ಎಂದು

ಭಾಷಾಂತರಿಸಲಾಗಿದೆ. ಇದನ್ನು 'ಪ್ರಾವೀಣ್ಯ ಅಥವಾ ಪ್ರವೀಣತೆ' ಎಂದು ಭಾಷಾಂತರಿಸುವುದು ಸೂಕ್ತ. ಈ ಬಗೆಯ ಸಣ್ಣ ದೋಷಗಳೆಲ್ಲವುಗಳು ಹಂಪನಾ ಅವರ ಗಮನಕ್ಕೆ ಈಗಾಗಲೇ ಬಂದಿರಲೂ ಸಾಕು.

ಹೀಗೆ ಅಲ್ಲಲ್ಲಿ ಕೆಲವು ಚಿಕ್ಕಪುಟ್ಟ ದೋಷಗಳನ್ನು ಬಿಟ್ಟರೆ ಭಾಷೆಯನ್ನು ಸಮಗ್ರವಾಗಿ ಆಧುನಿಕ ತತ್ತ್ವಗಳ ಹಿನ್ನೆಲೆಯಲ್ಲಿ ತುಂಬ ಚೆನ್ನಾಗಿ ಪರಿಚಯಿಸಿಕೊಡಬಲ್ಲ ಕೃತಿ 'ಭಾಷೆ'. ಪುಟ್ಟದಾದ ಈ ಪುಸ್ತಕ ಖಂಡಿತವಾಗಿಯೂ ಉಪಯುಕ್ತ ಕೈಪಿಡಿಯಾಗಿದೆ. ಹಂಪನಾ ಅವರ ಶಾಸ್ತ್ರೀಯ ಬೆಳವಣಿಗೆಗೆ ಉತ್ತಮ ಸಾಕ್ಷಿಯಾಗಿದೆ.

ಡಾ॥ ದೇ. ಜವರೇಗೌಡ

# ದ್ರಾವಿಡ ಭಾಷಾವಿಜ್ಞಾನ

ಇಂಡಿಯಾದಲ್ಲಿ ಭಾಷಾವಿಜ್ಞಾನದ ಅಧ್ಯಯನ ಅದೇತಾನೆ ಕಣ್ಣು ಬಿಡುತ್ತಿದ್ದ ಕಾಲದಲ್ಲಿ, ಅಂದರೆ ಇಪ್ಪತ್ತು ವರ್ಷಗಳ ಹಿಂದೆಯೇ (೧೯೬೬) ಹಂಪನಾ ಅವರ ದ್ರಾವಿಡ ಭಾಷಾವಿಜ್ಞಾನ ಬೆಳಕು ಕಂಡಿತೆಂಬುದನ್ನು ನೆನೆದಾಗ, ಅದು ಕನ್ನಡದಲ್ಲಿ ಮೊಟ್ಟ ಮೊದಲಿಗೆ ಪ್ರಕಟಗೊಂಡ ದೊಡ್ಡ ಪ್ರಮಾಣದ ಗ್ರಂಥವೆಂಬುದನ್ನು ಗಮನಿಸಿದಾಗ, ಅದರ ಅತಿಶಯತೆಯ ಬಗ್ಗೆ ಹೆಚ್ಚೇನೂ ಹೇಳಬೇಕಾಗಿಲ್ಲ. ಕಳೆದ ಶತಮಾನಾವಧಿಯಲ್ಲಿ ಫ್ರಾನ್ಸಿಸ್ ವೈಟ್ ಎಲ್ಲಿಸ್, ರ್ಯಾಸ್ಮಸ್ ರಾಸ್ಕ್, ರಾಬರ್ಟ್ ಕಾಲ್ಡ್ ವೆಲ್, ಸರ್ ಜಾರ್ಜ್ ಏಬ್ರಹಾಮ್ ಗ್ರಿಯರ್ಸನ್, ಬ್ಲಾಕ್, ಸ್ಟೆನ್ ಕೋನೊ, ರಾ. ನರಸಿಂಹಾಚಾರ್ ಮುಂತಾದ ವಿದ್ವಾಂಸರು ದ್ರಾವಿಡ ಭಾಷೆಗಳು ಇಂಡೊ–ಆರ್ಯನ್ ಭಾಷಾ ವರ್ಗಕ್ಕೆ ಸೇರದೆ, ಪ್ರತ್ಯೇಕ ವರ್ಗವಾಗಿ ನಿಲ್ಲುತ್ತವೆಂದು ಸಾಧಾರವಾಗಿ ಪ್ರತಿಪಾದಿಸುತ್ತಾರೆ. ಅವು ಸಿಥಿಯನ್ ಭಾಷಾವರ್ಗಕ್ಕೆ ಸೇರುತ್ತವೆಂಬ ಕಾಲ್ಡ್ ವೆಲ್‌ನ ಊಹೆ ಇನ್ನೂ ಪ್ರಶ್ನಾರ್ಥಕವಾಗಿಯೇ ಉಳಿದಿದೆ. ಕಾಲ್ಡ್ ವೆಲ್ಲನಿಗಿಂತ ಹಿಂದೆಯೇ ಶ್ರೀರಂಗಪಟ್ಟಣದ ಕೃಷ್ಣಮಾಚಾರ್ಯ ಎಂಬ ವಿದ್ವಾಂಸ ತನ್ನ 'ಹೊಸಗನ್ನಡ ನುಡಿಗನ್ನಡ ಎಂಬ ಹೊಸಗನ್ನಡ ವ್ಯಾಕರಣವು' ಎಂಬ ಗ್ರಂಥದಲ್ಲಿ (೧೮೩೮) ಸಂಸ್ಕೃತ ಮತ್ತು ದ್ರಾವಿಡ ಭಾಷೆಗಳು ಭಿನ್ನ ಭಿನ್ನ ಭಾಷಾಕುಟುಂಬಗಳಿಗೆ ಸೇರಿದವೆಂದು ಸ್ಪಷ್ಟಪಡಿಸುವುದರ ಜತೆಗೆ ಆಡುನುಡಿಯನ್ನು ಆಧಾರವಾಗಿಟ್ಟುಕೊಂಡು ವ್ಯಾಕರಣವನ್ನು ರಚಿಸಿದ್ದು ಆ ಕಾಲಕ್ಕೆ ಕ್ರಾಂತಿಕಾರಕವಾದ ಪ್ರಯತ್ನವೆಂದೇ ಹೇಳಬಹುದು. ಕನ್ನಡಕ್ಕೊಂದು ಮಹತ್ವಪೂರ್ಣವೂ ಅಪೂರ್ವವೂ ಆದ ಕೋಶವನ್ನು ಕೊಟ್ಟ ಕಿಟ್ಟೆಲ್ ದ್ರಾವಿಡ ಭಾಷೆಗಳ ಪ್ರತ್ಯೇಕತೆಯನ್ನು ಘೋಷಿಸಿದ್ದಲ್ಲದೆ, ದ್ರಾವಿಡ ಮತ್ತು ಸಂಸ್ಕೃತ ಭಾಷೆಗಳ ನಡುವಣ ಕೊಳುಕೊಡೆ

ಯನ್ನು ಪ್ರಸ್ತಾಪಿಸಿದ್ದಾನೆ. ಕಾಲ್ಡ್‌ವೆಲ್‌ನ ದ್ರಾವಿಡ ಭಾಷೆಗಳ ತೌಲನಿಕ ವ್ಯಾಕರಣ ಇಂದಿಗೂ ಭಾಷಾವಿಜ್ಞಾನಿಗಳ ಬೈಬಲ್ಲಾಗುಳಿದಿದೆ. ಟಿ. ಬರೊ, ಎಂ. ಬಿ. ಎಮಿನೊ ಮೊದಲಾದವರಿಂದ ಪ್ರಾರಂಭವಾದ ದ್ರಾವಿಡ ಭಾಷಾವಿಜ್ಞಾನದ ಅಧ್ಯಯನ ನಾನಾ ವಿಶ್ವವಿದ್ಯಾನಿಲಯಗಳಲ್ಲಿ ವಿಶೇಷ ಪ್ರಮಾಣದಲ್ಲಿ ನಡೆದು ನೂತನ ದಾಖಲೆಯನ್ನು ಸ್ಥಾಪಿಸಿರುವ ವಿಚಾರ ಸರ್ವವೇದ್ಯ. ೧೯೭೩ ರಲ್ಲಿ ಎಸ್. ಅಗಸ್ತ್ಯಲಿಂಗಮ್ ಮತ್ತು ಎಸ್. ಶಕ್ತಿವೇಲ್ ಅವರು ಪ್ರಕಟಿಸಿರುವ ದ್ರಾವಿಡ ಭಾಷಾವಿಜ್ಞಾನಕ್ಕೆ ಸಂಬಂಧಿಸಿದ ಗ್ರಂಥಸೂಚಿಯ ಕಡೆಗೆ ಕಣ್ಣು ಹೊರಳಿಸಿದಾಗ ಆ ದಿಶೆಯಲ್ಲಿ ನಡೆದಿರುವ ಸಂಶೋಧನಾಧ್ಯಯನಗಳ ಗುಣಗಾತ್ರಗಳು ಮನವರಿಕೆಯಾಗುತ್ತವೆ.

'ದ್ರಾವಿಡ ಭಾಷಾವಿಜ್ಞಾನ'ಕ್ಕೆ ಮುಂಚೆಯೇ ಆರ್. ವೈ. ಧಾರವಾಡಕರ್ ಅವರ 'ಕನ್ನಡ ಭಾಷಾಶಾಸ್ತ್ರ' (೧೯೫೦) ಪ್ರಕಟವಾಗಿತ್ತೆಂಬುದು ನಿಜ. ಆದರೆ ಪೂರ್ಣಪ್ರಮಾಣದ, ತುಲನಾತ್ಮಕವಾದ ದ್ರಾವಿಡ ಭಾಷಾವಿಜ್ಞಾನ ಇಂದಿಗೂ ಕನ್ನಡದಲ್ಲಿ ಆದೊಂದೇ ! ಹಂಪನಾ ಅವರು ತಮ್ಮ ಗುರುಗಳಿಂದ ಕೇಳಿದ, ಆ ಹೊತ್ತಿಗೆ ಇಂಗ್ಲಿಷಿನಲ್ಲಿ ಪ್ರಕಟವಾಗಿದ್ದ ಎಲ್ಲ ಗ್ರಂಥಲೇಖನಗಳನ್ನು ವ್ಯಾಸಂಗಿಸಿದ, ಮೇಲಾಗಿ ತಾನೇ ಸ್ವತಃ ನಡೆಸಿದ ಆಲೋಚನೆಯ ಪರಿಣಾಮವಾಗಿ ಆ ಕೃತಿ ಮೈದುಂಬಿಕೊಂಡು ಹೊರಬಂದಿದೆ. 'ಈ ಹೊತ್ತಗೆಯಲ್ಲಿ ಇದುವರೆಗೆ ತಿಳಿದು ಬಂದಿರುವ ಎಲ್ಲ ದ್ರಾವಿಡಭಾಷೆಗಳ ಸಮಗ್ರ ಇತಿಹಾಸವನ್ನು ಕೊಡಲೆತ್ನಿಸಿದ್ದೇನೆ. ಗ್ರಂಥ ವಿಸ್ತಾರದ ಭೀತಿಯಿಂದ ಹಲವು ಭಾಗಗಳಲ್ಲಿ ವಿವರಣೆ ಸಂಕ್ಷಿಪ್ತವಾಗಿದೆ. ಬೇಕೆಂದೇ ಮೊಟಕು ಮಾಡಿದೆ... ಭಾಷಾವಿಜ್ಞಾನದ ವಿಚಾರದಲ್ಲಿ ಕೆಲವು ಸಾಮಾನ್ಯ ರೂಪ ರೇಷೆಗಳನ್ನು ಮಾತ್ರ ಬಿಡಿಸಲು ಇಲ್ಲಿ ಯತ್ನಿಸಲಾಗಿದೆ. ಅಂದ ಮಾತ್ರಕ್ಕೆ ಇದೊಂದು ಸಮಗ್ರಕೃತಿಯೆಂಬ ಧಾರ್ಷ್ಟ್ಯ ಲೇಖಕನಿಗೆ ಎಳ್ಳನಿತೂ ಇಲ್ಲ' ; 'ತೀ.ನಂ.ಶ್ರೀ.ಯವರ ಜ್ಞಾನದ ತೇರಿನಲ್ಲಿ ಕುಳಿತು ಭಾಷಾ ಪ್ರಪಂಚದಲ್ಲಿ ಸಂಚರಿಸಿ, ಆ ರಸಯಾತ್ರೆಯ ಬಹುಮಟ್ಟಿನ ಪರಿಣಾಮ ಈ ಪುಸ್ತಕದ ಪುಟಗಳಲ್ಲಿ ಪ್ರತಿಬಿಂಬಿಸಿದೆ'[1] ಎಂಬುದಾಗಿ ಲೇಖಕರು ವಿನೀತ ಭಾವವನ್ನು ವ್ಯಕ್ತಪಡಿಸಿದ್ದರೂ ಇದೊಂದು ವಿದ್ವತ್‌ಪೂರ್ಣವಾದ ಶಾಸ್ತ್ರಗ್ರಂಥವೆಂಬುದರಲ್ಲಿ ಸಂದೇಹವಿಲ್ಲ.

ದ್ರಾವಿಡ ಭಾಷೆಗಳ ವರ್ಗೀಕರಣ, ಅವುಗಳ ಪ್ರಾಕ್ ರೂಪ ಮತ್ತು ಶಾಖೀಕರಣ, ಅವುಗಳ ತೌಲನಿಕ ಇತಿಹಾಸ ಬೆಳೆದ ಬಗೆ-ಇವೇ ಮೊದಲಾದ ವಿಷಯಗಳನ್ನು ವಿದ್ವಾಂಸರ ಅಭಿಪ್ರಾಯಗಳೊಡನೆ ಸಂಕ್ಷೇಪವಾಗಿ 'ಹಿನ್ನೆಲೆ' ಎಂಬ ಮೊದಲನೆಯ ಪ್ರಕರಣದಲ್ಲಿ ವಿವೇಚಿಸಲಾಗಿದೆ. ದ್ರಾವಿಡ ಭಾಷೆಗಳು ಸಂಸ್ಕೃತ ಜನ್ಯವಲ್ಲ, ಸ್ವತಂತ್ರ

---

1. ಲೇಖಕರ ಮೊದಲ ಮಾತುಗಳಿಂದ ಉದ್ಧೃತ.

ವೆಂಬ ವಿಚಾರವನ್ನು ಗಟ್ಟಿ ನೆಲದ ಮೇಲೆ ಸಂಸ್ಥಾಪಿಸಿದ್ದಾರೆ. ದ್ರಾವಿಡ ಭಾಷೆಯೇ ಸಮಸ್ತ ಜಾತಿಯ ಭಾಷೆಗಳಿಗೆಲ್ಲಾ ಮೂಲ ಭಾಷೆಯೆಂದು ಉದ್ಘೋಷಿಸಿದ ಸಿಲೋನಿನ ವಿದ್ವಾಂಸ ಫಾದರ್ ಕ್ಲೊಸೆಟ್‌ನ ವಾದವನ್ನು ತಿರಸ್ಕರಿಸಿ, ಹರಪ್ಪ ಮೊಹೆಂಜೊದಾರೊ ನಾಗರಿಕತೆಯನ್ನು ಕಟ್ಟಿದ ಜನ ದ್ರಾವಿಡರೇ ಇರಬೇಕೆಂಬ ತಜ್ಞರ ಅಭಿಪ್ರಾಯಗಳನ್ನು ಎತ್ತಿಹಿಡಿಯುತ್ತಾರೆ. ಅವರು ಹೊರಗಿನಿಂದ ಬಂದವರೆಂದು ಸಮರ್ಥಿಸುವ ವಿದ್ವಾಂಸರ ಅಭಿಪ್ರಾಯಗಳು ಶಿಥಿಲವಾಗಿದ್ದರೂ ಲೇಖಕರು ಅವನ್ನು ಸ್ವೀಕರಿಸಿಕೊಂಡಿರುವಂತೆ ತೋರುತ್ತದೆ. ಲಿಮೂರಿಯಾ ಕಲ್ಪಿತ ಮಹಾದ್ವೀಪವೆಂಬ, ನೀಗ್ರಿಟೋ ಜನ ಆಸ್ಟ್ರೇಲಿಯಾದವರೆಂಬ ವಾದವೂ ಸಮರ್ಥನೀಯವಲ್ಲ. ದ್ರಾವಿಡರು ಮೆಡಿಟರೇನಿಯನ್ ಸಮುದ್ರದ ಸುತ್ತಮುತ್ತಣ ಪ್ರದೇಶದಿಂದ ಬಂದವರೆಂದು ಹೇಳುವ ಬದಲು ಸಾಗರಯಾನ ಸಾಹಸಿಗಳಾದ ಅವರು ಆ ಪ್ರದೇಶದೊಡನೆ ವ್ಯಾಪಾರ ಸಂಬಂಧವನ್ನಿಟ್ಟುಕೊಂಡಿದ್ದರೆಂದು ಹೇಳುವುದೆ ಹೆಚ್ಚು ಸೂಕ್ತವೆಂದು ತೋರುತ್ತದೆ. ದ್ರಾವಿಡ ಭಾಷೆಗಳನ್ನು ಸಿಥಿಯನ್ ಭಾಷಾವರ್ಗಕ್ಕೆ ಜಮಾಯಿಸುವ ಕಾಲ್ಡ್‌ವೆಲ್‌ನಲ್ಲಿ ಆ ಬಗ್ಗೆ ಆತ್ಮವಿಶ್ವಾಸವಿಲ್ಲವೆಂಬುದನ್ನು ಮರೆಯುವಂತಿಲ್ಲ.[2] ಸಿಥಿಯನ್ ಭಾಷೆ ಮಾತ್ರವಲ್ಲ, ಚೀನೀ, ಜಪಾನಿ, ಮಂಗೋಲಿಯ, ಹಂಗೇರಿಯನ್, ಸೆಮಿಟಿಕ್ ಭಾಷೆಗಳಲ್ಲಿಯೂ ದ್ರಾವಿಡಭಾಷೆಯ ಸಂಬಂಧ ಸಾದೃಶ್ಯಗಳನ್ನು ಗುರುತಿಸಲು ಅವನು ನಡೆಸುವ ಪ್ರಯತ್ನಗಳನ್ನು ಲಕ್ಷಿಸಿದಾಗ ಕ್ಲೊಸೆಟ್‌ನ ಮಾತು ನೆನಪಿಗೆ ಬರುತ್ತದೆ. 'ಅತೃಪ್ತಿಕರ ಹೆಸರನ್ನು ಹೊತ್ತ ಸಿಥಿಯನ್ ವರ್ಗಕ್ಕೆ ದ್ರಾವಿಡ ವರ್ಗವನ್ನು ಪ್ರತ್ಯೇಕವೆಂದೇ ಪರಿಗಣಿಸುವುದು ಒಳಿತು' ಎಂಬ ಸರ್ ಜಾರ್ಜ್ ಏಬ್ರಹಾಮ್ ಗ್ರಿಯರ್‌ಸನ್‌ನ ಅಭಿಪ್ರಾಯ ಹೆಚ್ಚು ವಿಶ್ವಸನೀಯವಾಗಿ ತೋರುತ್ತದೆ. ಆದರೆ ಹಂಪನಾ ಕಾಲ್ಡ್‌ವೆಲ್‌ನ ಅಭಿಪ್ರಾಯಕ್ಕೆ ಮನ್ನಣೆ ನೀಡುವಂತೆ ತೋರುತ್ತದೆ.

ನಾಲ್ಕನೆಯ ಪ್ರಕರಣದಲ್ಲಿ ದ್ರಾವಿಡಭಾಷೆಯ ಲಿಪಿಯ ವಿಕಾಸವನ್ನು ಕುರಿತಂತೆ ಅನೇಕ ವಿದ್ವಾಂಸರ ಅಭಿಪ್ರಾಯಗಳನ್ನು ಕ್ರೋಢೀಕರಿಸಲಾಗಿದೆ. ಚಾಕ್ಷುಷ ದ್ರಾವಿಡ ಭಾಷೆಗಳ ಲಿಪಿಯು ಮೂಲ ಮೊಹೆಂಜೊದಾರೊ ಮತ್ತು ಹರಪ್ಪ ಲಿಪಿಯಲ್ಲಿ ಅಡಗಿದ್ದು ಅದು ಬ್ರಾಹ್ಮಿಲಿಪಿಯ ಮೂಲಕ ವಿಕಾಸಗೊಂಡು ಇಂದಿನ ಆಕಾರವನ್ನು ತಳೆದಿದೆಯೆಂದು ದೊರೆತಿರುವ ಆಧಾರಗಳಿಂದ ಭಾವಿಸಬಹುದು ಎನ್ನುವ ಅವರ ಅಭಿಪ್ರಾಯದಲ್ಲಿ ಸಾಹಸಗುಣವಿದೆ.

ಮುಂದಿನ ಎಂಟು ಅಧ್ಯಾಯಗಳಲ್ಲಿ ಪ್ರತಿಯೊಂದು ದ್ರಾವಿಡ ಭಾಷೆಯ ಉಗಮ ವಿಕಾಸಗಳನ್ನು, ಹೆಸರಿನ ಔಚಿತ್ಯವನ್ನು, ವರ್ಣಮಾಲೆಯ ವಿವರಗಳನ್ನು,

---

2. I do so with considerable diffidence ಎಂದು ಕಾಲ್ಡ್‌ವೆಲ್ ಸ್ಪಷ್ಟಪಡಿಸುತ್ತಾನೆ : p 39

ತೌಲನಿಕವಾಗಿ ಚರ್ಚಿಸಲಾಗಿದೆ. ಗ್ರೀಕ್ ಪ್ರಹಸನದ ಭಾಷೆ ಕನ್ನಡವೆಂದು ಹೇಳುವ ಧೈರ್ಯ ಲೇಖಕರಿಗಿಲ್ಲ. ಆ ಭಾಷೆ ತುಳುವಾಗಿರಬೇಕೆಂದು ಇತ್ತೀಚೆಗೆ ಪ್ರಕಟವಾದ ಲೇಖನವನ್ನು ಸಹ ಈ ಸಂದರ್ಭದಲ್ಲಿ ಗಮನಿಸಬಹುದು. ಕರುನಾಡು>ಕರ್ನಾಡು> ಕನ್ನಡ–ಇದು ಸದ್ಯಕ್ಕೆ ಸರಿ ಎಂಬ ಅವರ ಎಣಿಕೆ ಸಾಧುವಾದದ್ದೇ. ಆದರೆ ಕಪ್ಪು ಎಂಬ ಅರ್ಥದಲ್ಲಿ–ಉತ್ತರ ಎಂಬ ಅರ್ಥದಲ್ಲಿ–ಅದನ್ನು ಗ್ರಹಿಸುವುದು ಸರಿಯೆ ಎಂದು ಯೋಚಿಸಬೇಕಾಗಿದೆ. 'ಎಲ್ಲ ವೇಳೆಗಳಲ್ಲೂ ತಮಿಳು ಭಾಷೆಯೇ ಪ್ರಾಚೀನ ರೂಪಗಳನ್ನು ಉಳಿಸಿಕೊಂಡಿದೆಯೆಂದೂ ಅದೊಂದೇ ದ್ರಾವಿಡ ಕುಟುಂಬದ ಏಕೈಕ ಪ್ರತಿನಿಧಿಯೆಂದೂ ಹೇಳುವುದು ಸರಿಯಲ್ಲ. ಕೆಲವು ಸಂದರ್ಭಗಳಲ್ಲಿ ಕನ್ನಡ ನುಡಿಯೇ ಮೂಲದ್ರಾವಿಡದ ಸ್ವರೂಪವನ್ನು ಉಳಿಸಿಕೊಂಡಿರುವುದು ಕಾಣುತ್ತದೆ' (ಪು. ೧೧೨) ಎಂಬ ಅವರ ಸಮರ್ಥನೆ ಸರಿಯಾಗಿದೆ. ಅಲಿಖಿತ ಭಾಷೆಗಳ ಪರಿಚಯ ತೀರ ತೆಳ್ಳಿಯಾಗಿದೆ. ಏಕೆಂದರೆ ಅವುಗಳ ಅಧ್ಯಯನ ಇತ್ತೀಚೆಗೆ ತಾನೆ ಪ್ರಾರಂಭವಾಗಿದೆ. ಗೋಂಡಿ ಭಾಷೆಯನ್ನು ಬಳಸುವ ಗೋಂಡರಿಗೂ ಕರ್ನಾಟಕದ ಗೌಡರಿಗೂ ಏನಾದರೂ ಸಂಬಂಧವಿರಬಹುದೆ ಎಂಬುದನ್ನು ವಿದ್ವಾಂಸರು ಪರಾಮರ್ಶಿಸಬೇಕಾಗಿದೆ. ಬಡಗರ ಭಾಷೆ ಕನ್ನಡಕ್ಕೆ ತೀರ ಹತ್ತಿರ ವಾಗಿದೆಯೆಂಬುದರಲ್ಲಿ ಸಂಶಯವಿಲ್ಲ. ಪ್ರಾಯಶಃ ಅವರು ನಾಗಮಂಗಲದ ಕಡೆಯ ವರಿದ್ದಿರಬೇಕು. ಅವರ ಚರ್ಯೆಚಾಳಿಗಳು, ಹೆಸರುಗಳು ನಾಗಮಂಗಲದ ಕಡೆಯ ಸಂಪ್ರದಾಯಗಳನ್ನು ಹೋಲುತ್ತವೆಂಬುದು ಗಮನಿಸಬೇಕಾದ ಸಂಗತಿ.

ವಿಭಕ್ತಿ ಪ್ರತ್ಯಯಗಳನ್ನು ಕುರಿತು ವಿವೇಚಿಸುವಾಗ ಕನ್ನಡದಲ್ಲಿ ಬಹುವಾಗಿ ಚಾಲ್ತಿಯಲ್ಲಿರುವ ವಿಭಕ್ತಿ ಪಲ್ಲಟಗಳ ಹಿಂದಿರುವ ತಾತ್ತಿಕಾಂಶಗಳನ್ನು ಕುರಿತು ಚರ್ಚಿಸಬಹುದಿತ್ತೆಂದು ತೋರುತ್ತದೆ. ಭಾಷಾವಿಜ್ಞಾನಿಗಳ ಗಮನ ಇನ್ನೂ ಈ ಕಡೆಗೆ ಹರಿದಂತಿಲ್ಲ. ಕನ್ನಡದಲ್ಲಿ ವಿಭಕ್ತಿ ಪ್ರತ್ಯಯಗಳು ಅನಿಯತ, ವಾಕ್ಯದಲ್ಲಿಯ ಸ್ಥಾನದಿಂದಲೇ ವಿಭಕ್ತಿಯನ್ನು, ಅಂದರೆ ಪದಗಳ ಸಂಬಂಧವನ್ನು ಗುರುತಿಸಬಹು ದಿತ್ತೆಂದೂ ಪ್ರತ್ಯಯಗಳು ಈಚೆಗೆ ಸೇರಿಕೊಂಡಿರಬೇಕೆಂದೂ ಪಲ್ಲಟದ ಆಧಾರದಿಂದ ಊಹಿಸಬಹುದಾಗಿದೆ. ಪುರುಷವಾಚಕ ಸರ್ವನಾಮಗಳೇ ರೂಪಾಂತರಗೊಂಡು ಆಖ್ಯಾತ ಪ್ರತ್ಯಯಗಳಾಗುತ್ತವೆಂಬ, ಅವು ಗುಣವಾಚಕ, ನಾಮಪದ ಮತ್ತು ಸಂಖ್ಯಾ ವಾಚಕಗಳ ಮೇಲೂ ನೇರವಾಗಿ ಹತ್ತುತ್ತವೆಂಬ ವಿಷಯದಲ್ಲಿ ಈಗಂತೂ ಸಂದೇಹವುಳಿ ದಿಲ್ಲ, ದ್ರಾವಿಡಭಾಷೆಗಳಲ್ಲಿ ವಚನ ಗುಣವಾಚಕ ಲಿಂಗವ್ಯವಸ್ಥೆ ನಿಷೇಧಾರ್ಥಕ ಪ್ರತ್ಯಯಗಳು ಕರ್ಮಣಿ ಪ್ರಯೋಗಗಳನ್ನು ಕುರಿತ ವಿಲೋಕನವೂ ವಿಶದವಾಗಿ ಬಂದಿದೆ. ಒಂದು ಅಧ್ಯಾಯದಲ್ಲಿ ಪೂರ್ವದ್ರಾವಿಡ ಭಾಷೆಯ ಧ್ವನಿವ್ಯವಸ್ಥೆಯನ್ನು ಕುರಿತ ಚರ್ಚೆಯಿದೆ. ಟಿ, ಜಿ. ಪಕಾರಗಳ ಚರಿತ್ರೆಯನ್ನು ತೌಲನಿಕವಾಗಿ ವಿವರಿಸ ಲಾಗಿದೆ. ಕನ್ನಡದ ಕಕಾರ ತಮಿಳು, ತೆಲುಗು, ಮಲೆಯಾಳಗಳಲ್ಲಿ ಹೇಗೆ ಕೆಲವು

ಪರಿಸರಗಳಲ್ಲಿ ಚಕಾರ ಸಕಾರವಾಗುತ್ತದೆನ್ನುವುದನ್ನು ನಿದರ್ಶನಗಳೊಡನೆ ಸ್ಪಷ್ಟಪಡಿಸಲಾಗಿದೆ. ಅಂತೆಯೇ ಪೂರ್ವದ್ರಾವಿಡದ ಚಕಾರ ಸಹ ತಕಾರವಾಗಿ ಪರಿಣಮಿಸಿರುವುದನ್ನು ಕಾಣಬಹುದು. ತಕಾರ ಬಕಾರಗಳ ಸಂಬಂಧದ ಬಗೆಗೂ ಲೇಖಕರು ಕ್ಷಕಿರಣ ಹಾಯಿಸಿದ್ದಾರೆ.

ನಾನಾ ಕಾರಣಗಳಿಂದಾಗಿ ಉಪಭಾಷೆಗಳ ಅಸ್ತಿತ್ವವಿಕಾಸಗಳು ಅನಿವಾರ್ಯವೂ ಅಹುದು, ನೈಸರ್ಗಿಕವೂ ಅಹುದು. ಅವು ಭಾಷೆಗೆ ಇಟ್ಟಿಗೆಗಳಿದ್ದಂತೆ, ಜೀವಾತುವಿದ್ದಂತೆ; ವಿಟಮಿನಿದ್ದಂತೆ. ಭಾಷೆಯ ಬೆಳವಣಿಗೆಗೆ ಅವು ಜೀವದ್ರವ್ಯವನ್ನೊದಗಿಸುತ್ತವೆ, ಅಂತೆಯೇ ಭಾಷೆ ಅವುಗಳನ್ನು ಸವಾರನಂತೆ ನಿಯಂತ್ರಿಸುತ್ತದೆ. ಆದ್ದರಿಂದ ಭಾಷಾವಿಜ್ಞಾನದ ಅಧ್ಯಯನದಲ್ಲಿ ಉಪಭಾಷೆಗಳ ಪರಿವೀಕ್ಷಣೆಗೆ ಪ್ರಶಸ್ತವಾದ ಸ್ಥಾನ ಸಲ್ಲಬೇಕಾಗಿದೆ. ಹಂಪನಾ ಅವರು ಹೇಳುವಂತೆ, ಉಪಭಾಷೆಯಲ್ಲಿ ಪ್ರಾದೇಶಿಕ ಮತ್ತು ಸಾಮಾಜಿಕವೆಂಬ ಎರಡು ಪ್ರಮುಖ ಭೇದಗಳಿವೆ. 'ಪ್ರತಿಯೊಂದು ಉಪಭಾಷೆಗೂ ತನ್ನದೇ ಆದ ಒಂದು ಧ್ವನಿವ್ಯವಸ್ಥೆ, ಕೆಲವು ವಿಶಿಷ್ಟ ಪದಗಳು; ಸ್ವಲ್ಪಮಟ್ಟಿಗೆ ಒಂದು ಬಗೆಯ ಪ್ರತ್ಯೇಕ ವ್ಯಾಕರಣನಿಯಮ–ಇವುಗಳನ್ನು ಪಡೆದಿರುತ್ತದೆ.' ಈ ಉಪಭಾಷೆಗಳನ್ನು ಕುರಿತು ಆಗಬೇಕಾದ ಕೆಲಸ ಅಗಾಧವಾಗಿದೆ, ಅದೆಂದೂ ಮುಗಿಯದ ಕತೆಯೂ ಅಹುದು. ಈಗ ಆ ನಿಟ್ಟಿನಲ್ಲಿ ನಡೆದಿರುವ ಕೆಲಸ ಅತ್ಯಲ್ಪವೆಂದೇ ಹೇಳಬೇಕು. ಲೇಖಕರು ದಿಗ್ದರ್ಶನಾರ್ಥಕವಾಗಿ ಕನ್ನಡದ ಉಪಭಾಷೆಗಳನ್ನು ಹೆಸರಿಸಿ, ಅವುಗಳ ಲಕ್ಷಣಗಳನ್ನು ಲಕ್ಷ್ಯಗಳೊಡನೆ ವಿವರಿಸಿ, ಅವುಗಳ ಅಧ್ಯಯನದ ಅಗತ್ಯವನ್ನೂ ಸಾಧ್ಯತೆಗಳನ್ನೂ ಒತ್ತಿ ಹೇಳಿದ್ದಾರೆ. ಈ ಒಂದು ಅಧ್ಯಾಯದಲ್ಲಿ ಅವರು ಸಂಗ್ರಹಿಸಿರುವ ಮಾಹಿತಿಗಳು, ನಡೆಸಿರುವ ವಿಶ್ಲೇಷಣೆ, ರೂಪಿಸಿರುವ ತೀರ್ಮಾನಗಳು ಅವರ ಪಾಂಡಿತ್ಯಕ್ಕೆ ನಿದರ್ಶನಗಳಾಗಿರುವುದಲ್ಲದೆ, ಈ ಕ್ಷೇತ್ರದಲ್ಲಿ ಕೆಲಸ ಮಾಡುವವರಿಗೆ ಮಾರ್ಗದರ್ಶಕವಾಗಿವೆ.

ಈ ಗ್ರಂಥದ ಕೊನೆಯ ಅಧ್ಯಾಯದಲ್ಲಿ ಸಂಸ್ಕೃತ ಹಾಗೂ ದ್ರಾವಿಡ ಭಾಷೆಗಳ ಪರಸ್ಪರ ಸಾದೃಶ್ಯ ವೈದೃಶ್ಯಗಳ ವಿವೇಚನೆಯಿದೆ. ದ್ರಾವಿಡಭಾಷೆಯ ಸಾಕಷ್ಟು ಪದಸಾಮಗ್ರಿ ಸಂಸ್ಕೃತಕೋಶವನ್ನು ಪ್ರವೇಶಿಸಿದೆಯೆಂದು ೧೯೪೬ರ ಹೊತ್ತಿಗೆ ಟಿ. ಬರೋ ಅವರು ಸ್ಪಷ್ಟಪಡಿಸಿದ್ದರು. ಆ ಮೊದಲೇ ಗುಂಡರ್ಟ್, ಕಿಟ್ಟೆಲ್ ಮೊದಲಾದವರು ಆ ದಿಕ್ಕಿನಲ್ಲಿ ಸಂಪ್ರದಾಯವಾದಿಗಳ ಜಾಯಿಕಟ್ಟುವಂತೆ ಬಹು ಮುಖ್ಯವಾದ ವಿಚಾರಗಳನ್ನು ಹೊರಗೆಡಹಿದ್ದರು. ದ್ರಾವಿಡ ಭಾಷೆಗಳು ಮತ್ತು ಜನರು ಸಂಸ್ಕೃತದ ಮೇಲೆ ಬೀರಿರುವ ಪ್ರಭಾವವನ್ನು ಅನೇಕ ವಿದ್ವಾಂಸರು ಈಗಾಗಲೇ ನಿದರ್ಶನಗಳೊಡನೆ ಉಲ್ಲೇಖಿಸಿದ್ದಾರೆ. ಸಂಸ್ಕೃತ ಮತ್ತು ಸಂಸ್ಕೃತ ಪೂರ್ವಭಾಷೆಗಳ ಬೆರಕೆಯ ಪರಿಣಾಮವಾಗಿ ಪಾಳಿ ಪ್ರಾಕೃತಗಳು ಉಗಮಗೊಂಡವೆನ್ನುವ ಅಭಿಪ್ರಾಯ ಸತ್ಯದೂರವಲ್ಲ. ಪದಕೋಶವೊಂದೆಯಲ್ಲ, ವರ್ಣಮಾಲೆ ವ್ಯಾಕರಣ ಪ್ರಕ್ರಿಯೆಗಳ

ಮೇಲೆಯೂ ದ್ರಾವಿಡ ಭಾಷೆಗಳ ಪ್ರಭಾವಮುದ್ರೆಯನ್ನು ಸಂಸ್ಕೃತದಲ್ಲಿ ಕಾಣಬಹು
ದೆಂಬ ಲೇಖಕರ ಅಭಿಪ್ರಾಯವನ್ನು ಮೆಚ್ಚಬಹುದಾಗಿದೆ. ಸನಿಹದಲ್ಲಿರುವ ಭಾಷೆಗಳ
ನಡುವೆ ಇಂಥ ಕೊಳುಕೊಡೆ ತೀರ ಸಹಜವೆಂಬುದನ್ನು ಉದ್ದಕ್ಕೂ ಕಾಣಬಹುದು.

ಇಂದಿಗೂ ಭಾಷಾಭ್ಯಾಸಿಗಳಿಗೆ ಇದೊಂದು ಅತ್ಯುತ್ತಮವಾದ ಕೈಪಿಡಿಯೆನ್ನು
ವುದರಲ್ಲಿ ಏನೇನೂ ಅಡ್ಡಿಯಿರಲಾರದು. ಭಾಷಾವಿಜ್ಞಾನಕ್ಕೆ ಸಂಬಂಧಿಸಿದ ಗ್ರಂಥ
ಗಳಾಗಲಿ, ಲೇಖನಗಳಾಗಲಿ ತೀರ ವಿರಳವಾಗಿದ್ದ ಕಾಲದಲ್ಲಿ, ಇಂಥದೊಂದು
ಉದ್ಗ್ರಂಥದ ರಚನೆಗೆ ಬೇಕಾದ ಭಾಷೆಯನ್ನು ಯಶಸ್ವಿಯಾಗಿ ರೂಪಿಸಿಕೊಂಡ ಕೀರ್ತಿ
ಹಂಪನಾ ಅವರಿಗೆ ಸಲ್ಲಬೇಕಾಗಿದೆ. ತನ್ನ ನೆಲದ ಮೊದಲುಳುಮೆ ಕಷ್ಟ ; ಅನಂತರ
ಉಳುಮೆಗಳು ಸರಾಗ. ಬರೆಯಲು ಪ್ರಾಮಾಣಿಕವಾಗಿ ಪ್ರಯತ್ನಿಸಿದರೆ ಬರವಗಾರ
ರಲ್ಲಿ ಶಕ್ತಿಯಿದ್ದರೆ, ಕನ್ನಡ ಎಂಥ ಕ್ಲಿಷ್ಟ ತಾಂತ್ರಿಕ ವಿಷಯಗಳ ನಿರೂಪಣೆಗೂ
ಸಮರ್ಥ ಮಾಧ್ಯಮವಾಗಬಲ್ಲುದೆಂಬುದಕ್ಕೆ ಈ ಗ್ರಂಥ ಸಾಕ್ಷಿಯಾಗಿದೆ. ಭಾಷಾ
ವಿಜ್ಞಾನ ಕ್ಷೇತ್ರಕ್ಕೆ ಹಂಪನಾ ಆಗಂತುಕರಾದರೂ ಈ ಕೃತಿಯ ಮೂಲಕ ತಮ್ಮ
ಪ್ರಾವೀಣ್ಯವನ್ನು ಮೆರೆದಿದ್ದಾರೆ. ಈ ಕ್ಷೇತ್ರದಲ್ಲಿ ಇದರಂಥ ಅಥವಾ ಇದಕ್ಕಿಂತಲೂ
ಉತ್ತಮವಾದ ಗ್ರಂಥ ಬರುವತನಕ ಇದು ಕನ್ನಡದಲ್ಲಿ ಪ್ರಮಾಣಗ್ರಂಥವಾಗಿ
ಉಳಿಯುವುದರಲ್ಲಿ ಸಂದೇಹವಿಲ್ಲ.

ಡಾ॥ ಸೋಮಶೇಖರ ಗೌಡ

# ಭಾಷಾ ವಿಜ್ಞಾನಿಗಳು

ಕನ್ನಡದ ಭಾಷಾವಿಜ್ಞಾನ ಕ್ಷೇತ್ರ ತನ್ನ ಶೈಶವಾವಸ್ಥೆಯಲ್ಲಿದ್ದಾಗಲೇ 'ದ್ರಾವಿಡ ಭಾಷಾವಿಜ್ಞಾನ'ದಂಥ ಬೃಹತ್ ಗ್ರಂಥವೊಂದನ್ನು ರಚಿಸಿ ಅರವತ್ತರ ದಶಕದಲ್ಲಿಯೇ ಹೆಸರು ಮಾಡಿದವರು ಹಂಪನಾ. ಅಲ್ಲಿಂದ ಮುಂದೆಯೂ ಈ ದಿಕ್ಕಿನಲ್ಲಿ ವಿಶೇಷ ಕೃಷಿ ಮಾಡಿ ಹುಲುಸಾದ ಬೆಳೆ ತೆಗೆದಿದ್ದಾರೆ. 'ಭಾಷಾ ವಿಜ್ಞಾನ' (೧೯೬೮), 'ಭಾರತ ಭಾಷಾ ಸಮಸ್ಯೆ' (೧೯೬೮), 'ದ್ರಾವಿಡ ಸಂಖ್ಯಾವಾಚಕಗಳು' (೧೯೭೩), ಹಾಗೂ 'ಭಾಷೆ' (೧೯೭೪) ಅವರ ಭಾಷಾಶಾಸ್ತ್ರಕ್ಕೆ ಸಂಬಂಧಿಸಿದ ಇತರ ಕೃತಿಗಳು. ಈ ಪಟ್ಟಿಗೆ ಇತ್ತೀಚಿನ ಸೇರ್ಪಡೆ 'ಭಾಷಾ ವಿಜ್ಞಾನಿಗಳು' (೧೯೮೦).

ಇದೊಂದು ಶ್ಲಾಘನೀಯ ಪ್ರಯತ್ನ. ಈ ಬಗೆಯ ಕೆಲಸ ಯಾವುದೇ ಭಾರತೀಯ ಭಾಷೆಯಲ್ಲಿ ಈ ಪ್ರಮಾಣದಲ್ಲಿ ಕಾಣಿಸಿಕೊಂಡಿರುವುದು ನನ್ನ ಗಮನಕ್ಕೆ ಬಂದಿಲ್ಲ. ಪ್ರಚಾರದಲ್ಲಿರುವ ಒಂದು ವಿಷಯದ ಬಗೆಗೆ ಸಾಮಗ್ರಿ ಸಂಗ್ರಹಿಸಿ ವಿಶ್ಲೇಷಿಸುವುದು ಸುಲಭ. ಆದರೆ ನಮ್ಮಿಂದ ಬಹುದೂರದಲ್ಲಿರುವ ವಿಭಿನ್ನ ವ್ಯಕ್ತಿಗಳ ಬಗೆಗೆ ಮಾಹಿತಿ ಸಂಗ್ರಹಿಸುವುದು ತೀರಾ ಕಷ್ಟಕರವಾದ ಕೆಲಸ. ಈ ಬಗೆಯ ಕೆಲಸವೊಂದನ್ನು ಕೈಗೆತ್ತಿಕೊಂಡು ಡಾ॥ ಹಂಪ. ನಾಗರಾಜಯ್ಯನವರು ಸಾಹಸ ಮಾಡಿದ್ದಾರೆ; ಯಶಸ್ವಿಯಾಗಿದ್ದಾರೆ.

'ಭಾಷಾ ವಿಜ್ಞಾನಿಗಳು'–ಗ್ರಂಥದಲ್ಲಿ ಒಟ್ಟು ಅರವತ್ತೇಳು ಜನ ಪ್ರಸಿದ್ಧ ಭಾಷಾ ವಿಜ್ಞಾನಿಗಳ ಬಗೆಗೆ ಹಂಪನಾ ವಿಷಯ ಕಲೆ ಹಾಕಿದ್ದಾರೆ. ಎಡ್ವರ್ಡ್ ಸಪೀರ್, ಲಿಯೋನಾರ್ಡ್ ಬ್ಲೂಮ್‌ಫೀಲ್ಡ್ ಹಾಗೂ ಫ್ರಾನ್ಜ್ ಬಾಪ್ ಈ ಮಹಾಶಯರ ಬಗೆಗೆ ಮಾತ್ರ ಎರಡೆರಡು ಲೇಖನಗಳನ್ನು ಬರೆದಿದ್ದಾರೆ. ಈ

ಪುಸ್ತಕದಲ್ಲಿ ಪರಿಚಯಿಸಲ್ಪಟ್ಟಿರುವ ಪ್ರತಿಯೊಂದು ಹೆಸರೂ ಭಾಷಾ ಶಾಸ್ತ್ರದಲ್ಲಿ ಶಿಖರಪ್ರಾಯವಾದವು. ಇವರೆಲ್ಲ ಭಾಷಾಶಾಸ್ತ್ರಕ್ಕಾಗಿ ದುಡಿದ ಹಲವು ದೇಶದವರು ; ಹಲವು ಭಾಷೆಯವರು. ಭಾರತ, ಅಮೆರಿಕ, ಇಂಗ್ಲೆಂಡ್, ಜರ್ಮನಿ, ಫ್ರಾನ್ಸ್, ಸ್ವೀಡನ್, ಇಟಲಿ, ಸ್ವಿಟ್ಜರ್‌ಲೆಂಡ್, ಡೇನಿಷ್ ಇತ್ಯಾದಿ ರಾಷ್ಟ್ರಗಳ ಪ್ರಖ್ಯಾತ ಭಾಷಾ ತಜ್ಞರನ್ನು ಇಲ್ಲಿ ಆಯ್ದುಕೊಳ್ಳಲಾಗಿದೆ. ಸಾಮಾನ್ಯ ಭಾಷಾವಿಜ್ಞಾನ, ತೌಲನಿಕ ಭಾಷಾವಿಜ್ಞಾನ, ದ್ರಾವಿಡ ಭಾಷಾವಿಜ್ಞಾನ, ವ್ಯಾಕರಣ, ನಿಘಂಟು, ಧ್ವನಿವಿಜ್ಞಾನ ಮುಂತಾದ ವಿಭಾಗಗಳಿಗೆ ಇವರಿಂದ ಸಂದ ಅಪೂರ್ವ ಸೇವೆಯನ್ನು ಸ್ಮರಿಸಲಾಗಿದೆ. "ಕಳೆದ ಹದಿನೆಂಟು ವರ್ಷಗಳಲ್ಲಿ ನಾನಾ ಕನ್ನಡ ಪತ್ರಿಕೆಗಳಲ್ಲಿ ಪ್ರಕಟಿಸಿದ ಭಾಷಾ ವಿಜ್ಞಾನಿಗಳ ಕುರಿತ ನನ್ನ ಲೇಖನಗಳ ಸಂಕಲನ ಈ ಗ್ರಂಥ" – ಎಂಬ ಕೃತಿಕಾರರ ಹೇಳಿಕೆ ಇಲ್ಲಿ ಗಮನಿಸುವಂಥದು. ಹೀಗಾಗಿ ಈ ಗ್ರಂಥಕ್ಕೆಂದೇನೂ ಉದ್ದೇಶಪೂರ್ವಕ ವಾಗಿ ರಚಿಸಿದ ಲೇಖನಗಳಲ್ಲ ಇವು.

ಇಲ್ಲಿ ಪರಿಚಯಿಸಲಾಗಿರುವ ಅರವತ್ತೇಳು ಜನ ಭಾಷಾವಿಜ್ಞಾನಿಗಳಲ್ಲಿ ಸಾಮಾನ್ಯ ಭಾಷಾವಿಜ್ಞಾನ (General Linguistics)ಕ್ಕಾಗಿ ದುಡಿದವರದೇ ಸಂಖ್ಯೆ ಯಲ್ಲಿ ಮೇಲುಗೈ, ಸಸೂರ್, ಸಪೀರ್, ಬ್ಲೂಮ್‌ಫೀಲ್ಡ್, ಮ್ಯಾಕ್ಸ್‌ಮೂಲರ್, ನೈಡಾ, ಹೆಲ್ಮ್‌ಸ್ಲೆಲ್, ಯಾಕೊಬ್‌ಸನ್, ಪರ್ಥ್, ಹಾಲ್, ಬ್ಲಾಕ್, ಸ್ಟುರ್ಟೆವಾಂಟ್, ತಾರಾಪೊರವಾಲ ಹಾಗೂ ತೀನಂಶ್ರೀ ಅವರಂಥ ದಿಗ್ಗಜಗಳ ಸಾಲು ಸಾಲೇ ಇಲ್ಲಿ ನೆರೆದಿದೆ. ಮನೋಜ್ಞವಾಗಿ ಇವರನ್ನೆಲ್ಲ ಪರಿಚಯಿಸಲಾಗಿದೆ.

ಸಾಮಾನ್ಯ ಭಾಷಾವಿಜ್ಞಾನ, ಭಾಷಾ ಶಾಸ್ತ್ರದ ಮೂಲತತ್ವಗಳನ್ನು ಪರಿಚಯಿಸು ವಂಥದು. ಪ್ರಪಂಚದ ಯಾವುದೇ ಭಾಷೆಯನ್ನು ಈ ತತ್ವಗಳ ಆಧಾರದಿಂದ ವಿವರಿಸಿ, ವಿಶ್ಲೇಷಿಸುವುದು ಸಾಧ್ಯ. ಈ ತತ್ತ್ವಗಳು ಐತಿಹಾಸಿಕ ಭಾಷಾವಿಜ್ಞಾನಕ್ಕೆ ಸಂಬಂಧಿಸಿ ದವುಗಳಾಗಬಹುದು, ತೌಲನಿಕ ಭಾಷಾ ವಿಜ್ಞಾನಕ್ಕೆ ಸೇರಿದವುಗಳಾಗಬಹುದು ಇಲ್ಲವೆ ವಿವರಣಾತ್ಮಕ ಭಾಷಾವಿಜ್ಞಾನಕ್ಕೆ ಸಿಲುಕುವಂಥವಿರಬಹುದು. ಒಟ್ಟಿನಲ್ಲಿ ಇವೆಲ್ಲಾ ಸಾಮಾನ್ಯ ಭಾಷಾವಿಜ್ಞಾನದ ಪರಿಧಿಯಲ್ಲಿಯೇ ಬರುವಂಥವು. ಸೈದ್ಧಾಂತಿಕ ತಿರುಳನ್ನೇ ಹೆಚ್ಚಾಗಿ ಮೈಯೂಂತಿರುವ ಈ ವಿಭಾಗಕ್ಕೆ ಮೇಲೆ ಹೆಸರಿಸಲಾದ ಭಾಷಾ ವಿಜ್ಞಾನಿಗಳ ಕೊಡುಗೆಯಿಂದಾಗಿ ಭಾಷಾವಿಜ್ಞಾನ ವೃಕ್ಷ ಅತ್ಯಂತ ಆಳಕ್ಕೆ ಬೇರುಬಿಟ್ಟು ಇಂದು ಹೊಸ ಚಿಗುರಿನಿಂದ ಕಂಗೊಳಿಸುವಂತಾಗಿದೆ. ಸಾಮಾನ್ಯ ಭಾಷಾವಿಜ್ಞಾನ ತತ್ತ್ವಗಳನ್ನು ಸರಳ ಸುಂದರವಾಗಿ ನಿರೂಪಿಸಿ, ಬೋಧಿಸಿ, ಪ್ರಚಾರ ಮಾಡಿ ಪ್ರಪಂಚ ದಾದ್ಯಂತ ಭಾಷಾಶಾಸ್ತ್ರ ವ್ಯಾಪಿಸುವಲ್ಲಿ, ಅಧ್ಯಾಪಕರನ್ನು, ವಿದ್ಯಾರ್ಥಿಗಳನ್ನು, ಭಾಷಾಕೋವಿದರನ್ನು ಮುಟ್ಟುವಲ್ಲಿ ಇವರು ಪಟ್ಟ ಶ್ರಮ ಸದಾ ಸ್ಮರಣೀಯ ವಾದುದು. ಇವರ ಸಾಧನೆ, ಸಿದ್ಧಿಗಳನ್ನು ಒಂದೆರಡು ಮಾತುಗಳಲ್ಲಿ ಹೇಳಲು ಬರು

ವುದಿಲ್ಲ. ಇವರೆಲ್ಲ ಪ್ರಚಾಂಡ ಭಾಷಾತಜ್ಞರು. ಹಲವಾರು ಭಾಷೆಗಳಲ್ಲಿ ಬಲ್ಲಿದರು, ತಲಸ್ಪರ್ಶಿಯಾಗಿ ತಾವು ಹಿಡಿದ ಭಾಷೆಗಳ ಬಗೆಗೆ ಸಂಶೋಧನೆ ನಡೆಸಿದವರು. ದೊರೆತ ಫಲಿತವನ್ನು ತಮ್ಮ ಅದ್ವಿತೀಯ ಬರವಣಿಗೆಯಿಂದ ಪ್ರಚುರಪಡಿಸಿದವರು. ಅದರಲ್ಲೂ ಸಸೂರ್, ಬ್ಲೂಮ್‌ಫೀಲ್ಡ್, ಫರ್ಥ್ ಮುಂತಾದವರು ಭಾಷಾವಿಜ್ಞಾನದ ಒಂದೊಂದು ಪಂಥಕ್ಕೆ ನೇತಾರರಾಗಿ ಪ್ರಾಚಾರ್ಯರೆನಿಸಿದವರು.

ಹದಿನೆಂಟನೇ ಶತಮಾನದ ಅಂತ್ಯಭಾಗ ಹಾಗೂ ಹತ್ತೊಂಬತ್ತನೇ ಶತಮಾನದ ಆದಿಭಾಗವನ್ನು ಐತಿಹಾಸಿಕ-ತೌಲನಿಕ ಭಾಷಾಶಾಸ್ತ್ರದ ಸುವರ್ಣಯುಗ ಎಂದು ಕರೆಯಲಾಗಿದೆ. ಈ ಕಾಲದಲ್ಲಿ ತೌಲನಿಕ ವಿಧಾನ ಹಾಗೂ ಸಿದ್ಧಾಂತವನ್ನು ವೈಜ್ಞಾನಿಕವಾಗಿ ರೂಪಿಸಲಾಯಿತು. ಇದರಿಂದಾಗಿ ಅನೇಕ ಹೊಸ ಭಾಷೆಗಳು ಗುರುತಿಸಲ್ಪಟ್ಟವು. ಸಂಸ್ಕೃತ, ಗ್ರೀಕ್, ಲ್ಯಾಟಿನ್ ಇತ್ಯಾದಿ ಭಾಷೆಗಳ ನಡುವಣ ಸಂಬಂಧ ಖಚಿತಗೊಂಡಿತು. ಹೀಬ್ರೂ ಭಾಷೆಯ ಸ್ಥಾನ ನಿರ್ದೇಶಿಸಲಾಯಿತು. ಭಾಷಾಮೂಲ, ಭಾಷಾವರ್ಗೀಕರಣ, ಉಪಭಾಷಾ ಅಧ್ಯಯನಗಳಿಗೆ ಇಂಬು ಕೊಡಲಾಯಿತು. ಈ ನಿಟ್ಟಿನಲ್ಲಿ ದುಡಿದ ಉಜ್ವಲ ತಾರೆಗಳೆಂದರೆ : ಸರ್ ವಿಲಿಯಂ ಜೋನ್ಸ್, ಯಾಕೂಲ್ ಗ್ರಿಮ್, ಫ್ರಾಜ್ ಬಾಪ್, ರಾಸ್‌ಮಸ್ ರಾಸ್ಕ್, ಆಗಷ್ಟ್ ಷ್ಲೀಷರ್, ಕಾರ್ಲ್ ವರ್ನರ್, ಓಸ್ತಾಫ್, ಬ್ರುಗ್‌ಮನ್ ಮುಂತಾದವರು. ಇವರಲ್ಲಿ ಜೋನ್ಸ್, ಬಾಪ್, ರಾಸ್ಕ್, ಷ್ಲಿಷರ್ ಪರಿಚಯವನ್ನು ಹಂಪನಾ ಸಮರ್ಪಕವಾಗಿ ಮಾಡಿಕೊಟ್ಟಿದ್ದಾರೆ, ಜೊತೆಗೆ ಇದೇ ಕ್ಷೇತ್ರದ ಮಾಲೆಟ್, ನೊರೀನ್, ಎಡ್ಗರ್‌ಟನ್, ಟರ್ನರ್, ವ್ಹಿಟ್ನಿ, ಬೆಕ್ ಇತ್ಯಾದಿಗಳ ಬಗೆಗೂ ಚರ್ಚಿಸಿದ್ದಾರೆ.

ಜ್ಞಾತಿ ಭಾಷೆಗಳನ್ನು ಗುರುತಿಸಿ ಭಾಷಾಪರಿವಾರಗಳನ್ನು ರಚಿಸಿದ ಮೇಲೆ ಬಹುತೇಕ ಪಾಶ್ಚಿಮಾತ್ಯ ವಿದ್ವಾಂಸರ ಅಭಿರುಚಿ ದ್ರಾವಿಡ ಭಾಷೆಗಳ ಕಡೆಗೂ ಹರಿಯುವುದು ಸಾಧ್ಯವಾಯಿತು. ಕಾಲ್ಡ್‌ವೆಲ್, ಎಮಿನೊ, ಬರೊ ಈ ಕ್ಷೇತ್ರದ ಸೀಮಾ ಪುರುಷರು. ಜೊತೆಗೆ ಕಮಲ್‌ಜ್ವಲೆಬಿಲ್, ಫ್ರಾನ್ಸಿಸ್ ವೈಟ್ ಎಲ್ಲಿಸ್, ಆಂಡ್ರೊನೂವ್, ಎಡ್ವಿನ್. ಎಚ್. ಟಿಬಲ್ ಹಾಗೂ ರಾಮಸ್ವಾಮಿ ಅಯ್ಯರ್ ಈ ನಿಟ್ಟಿನ ಆದ್ಯ ಪ್ರವರ್ತಕರಲ್ಲಿ ಸ್ಮರಣಾರ್ಹರು. ಪ್ರಸಿದ್ಧ ಪಂಚ ದ್ರಾವಿಡ ಭಾಷೆಗಳಾದ ಕನ್ನಡ, ತಮಿಳು, ಮಲೆಯಾಳಂ, ತುಳು ದಕ್ಷಿಣ ಭಾರತದ ಭಾಷೆಗಳ ಬಗೆಗೆ ಇವರು ಕೊಟ್ಟ ವಿವರಣೆ, ವಿಶ್ಲೇಷಣೆ ಇಂದಿನ ಅಧ್ಯಯನಕ್ಕೆ ನಾಂದಿ ಸ್ವರೂಪದ್ದಾಗಿದೆ. ಇವರ ಕೊಡುಗೆ ಎಷ್ಟು ಅನಿವಾರ್ಯವಾಗಿತ್ತು ಎಂಬುದನ್ನು ಹಂಪನಾ ತುಂಬಾ ಪ್ರಬುದ್ಧವಾಗಿ ಪ್ರತಿಪಾದಿಸಿದ್ದಾರೆ. ಹಾಗೆಯೇ ಈ ಆಧಾರ ಸ್ತಂಭಗಳನ್ನು ಸೊಗಸಾಗಿ ಕಡೆದಿದ್ದಾರೆ ತಮ್ಮ ನುಡಿ ಚಾಣದಿಂದ.

ಭಾಷಾವಿಜ್ಞಾನದ ವೈಜ್ಞಾನಿಕ ಬೇರು ವಾಸ್ತವವಾಗಿ ಮೊದಲು ತಳ ಊರಿದ್ದು ಭಾರತದಲ್ಲಿಯೇ. ಅದೂ ಸಂಸ್ಕೃತವ್ಯಾಕರಣಕಾರ ಪಾಣಿನಿಯಿಂದ ಎಂಬುದು ಸುಳ್ಳಲ್ಲ.

ಪಾಣಿನಿ, ಪತಂಜಲಿ, ಆಪಿಶಲಿ, ಯಾಸ್ಕ, ಗಾರ್ಗ್ಯ ಮುಂತಾದ ಋಷಿತುಲ್ಯ ವ್ಯಾಕರಣ ಕಾರರ ಭಾಷಾ ಪ್ರಜ್ಞೆ, ವಿಶ್ಲೇಷಣೆ, ವಿವರಣೆಗಳು ಪಾಶ್ಚಾತ್ಯರ ಸಂಶೋಧನೆಗಳಿಗೆ ಕೈಮರವಾಗಿದ್ದವು ಎಂಬುದರಲ್ಲಿ ಯಾವ ಸಂಶಯಕ್ಕೂ ಎಡೆಯಿಲ್ಲ. ಈ ಕ್ಷೇತ್ರದ ಪ್ರಖಾಂಡ ಪಂಡಿತ ಪಾಣಿನಿಯ ಚಿತ್ರಣ ಹಂಪನಾ ಕಡೆದಿರುವ ನುಡಿಚಿತ್ರಗಳಲ್ಲಿ ಅತ್ಯಂತ ಗಣ್ಯವಾದುದು.

ಪಾಣಿನಿಯಿಂದಲೇ ಶಾಸ್ತ್ರೀಯ ತಳಹದಿ ಪಡೆದು ರೂಪಗೊಂಡ ಧ್ವನಿಗಳ ಅಧ್ಯಯನ ಮುಂದೆ ಭಾಷಾ ವಿಜ್ಞಾನಿಗಳ ಅಧ್ಯಯನದ ಕೇಂದ್ರಸ್ಥಾನವಾಯ್ತು. ಹದಿನೆಂಟು, ಹತ್ತೊಂಬತ್ತನೇ ಶತಮಾನದಲ್ಲಿ ಕೂಡ ಈ ವಿಭಾಗಕ್ಕೆ ವಿಶೇಷ ಆದ್ಯತೆ ಕೊಡಲಾಗಿತ್ತು. ಇಪ್ಪತ್ತನೇ ಶತಮಾನದಲ್ಲಂತೂ ಇದು ಭಾಷಾ ವಿಜ್ಞಾನದ ಒಂದು ಪ್ರತಿಷ್ಠಿತ ಶಾಖೆಯಾಗಿ ಮೈದಾಳಿತು. ಉಚ್ಚಾರಣಾತ್ಮಕ, ತರಂಗಾತ್ಮಕ, ಶ್ರವ್ಯಾತ್ಮಕ ಧ್ವನಿವಿಜ್ಞಾನದ ಬೀಳಲುಗಳನ್ನು ಬಿಟ್ಟು ಬೇರೂರಿತು. ಈ ಕ್ಷೇತ್ರಕ್ಕಾಗಿ ದುಡಿದ ಆಧುನಿಕ ಪ್ರವರ್ತಕರೆಂದರೆ ಕೆನ್ನೆತ್ ಲೀ ಪೈಕ್. ಹೆನ್ರಿ ಸ್ವೀಟ್, ಡೇನಿಯಲ್ ಜೋನ್ಸ್ ಮುಂತಾದವರು. ಇವರ ವ್ಯಾಪಕ ಪರಿಚಯ ಕೂಡ 'ಭಾಷಾ ವಿಜ್ಞಾನಿ ಗಳು' ಪುಸ್ತಕದಲ್ಲಿದೆ. ಇಟಲಿಯ ಬಾರ್ತೋಲಿ ಹಾಗೂ ಹಂಗೇರಿಯ ಸಿಸ್ಟಿಯನ್ ರಿಗೂ ಇಲ್ಲಿ ಸ್ಥಾನ ಕಲ್ಪಿಸಲಾಗಿದೆ.

ವ್ಯಾಕರಣಕಾರರು, ಧ್ವನಿ ವಿಜ್ಞಾನಿಗಳಂತೆ ನಿಘಂಟುಕಾರರಾಗಿ ಹೆಸರಾಂತಿರುವ ಆಗಸ್ಟ್ ಫಿಕ್, ಡಾರ್ಲಿಂಗ್ ಬಕ್, ಟರ್ನರ್, ವ್ಹಿಟ್ನಿ, ಪ್ರಬೋಧ ಚಂದ್ರ ಭಾಗ್ಚಿ ಮುಂತಾದವರನ್ನು ಕೂಡ ಈ ಗ್ರಂಥದಲ್ಲಿ ಸ್ಮರಿಸಲಾಗಿದೆ. ಒಂದು ಭಾಷೆಯ ಅಧ್ಯಯನಕ್ಕೆ ನಿಘಂಟಿನ ಪಾತ್ರ ಎಷ್ಟು ಮಹತ್ವದ್ದು, ದ್ವಿಭಾಷಾ, ಬಹುಭಾಷಾ ನಿಘಂಟುಗಳು, ಸೀಮಾರೇಖೆಗಳು, ಉಪಭಾಷಾ ಭೂಪಟಗಳು ಅನ್ಯ ಭಾಷೆಯನ್ನು ಕಲಿಯುವಲ್ಲಿ, ಉಪಭಾಷೆಯನ್ನು ಗುರುತಿಸುವಲ್ಲಿ ಎಷ್ಟು ಅನಿವಾರ್ಯ ಎಂಬುದನ್ನು ಇವರ ಕೊಡುಗೆಯಿಂದ ನಾವು ಮನಗಾಣಬಹುದು.

ಮೇಲೆ ಹೆಸರಿಸಿದ ಗುಂಪುಗಳಿಗಿಂತ ಬೇರೆಯಾಗಿ ದುಡಿದು ಯಶಸ್ ಪಡೆದವರಿ ಗಳಾಗಿರುವವರ ಪರಿಚಯದ ಪಟ್ಟಿಯೂ ದೊಡ್ಡದೇ ಇದೆ. ರೊಮಾನ್ಸ್ ಭಾಷೆಗಳ ತಜ್ಞ ಸ್ವಿಜ್ಜರ್ಲೆಂಡಿನ ಕಾರ್ಲ್‌ಜ್ಯಾಬರ್ಗ್. ಬಂಟುಭಾಷಾಪಂಡಿತ ಕಾರ್ಲ್ ಮೇನ್ ಹೋಫ್, ಇಂಡೋ ಯೂರೋಪಿಯನ್ ಭಾಷಾ ಪರಿವಾರತಜ್ಞ ಜಾನ್‌ಬೀಮ್ಸ್, ಕರ್ನಾಟಕದಲ್ಲಿ ಜಾನಪದ, ಶಾಸನಶಾಸ್ತ್ರ, ನಿಘಂಟು ಇತ್ಯಾದಿ ಕ್ಷೇತ್ರಗಳಿಗಾಗಿ ದುಡಿದ ಜಾನ್ ಎಫ್. ಫ್ಲೀಟ್, ತಮಿಳು ಭಾಷೆಗಾಗಿ ಶ್ರಮಿಸಿದ ಜಾನ್ ಪ್ರೋಪ್ ಮತ್ತು ಹಲವಾರು ವಿಭಾಗಗಳಲ್ಲಿ ನಿಷ್ಣಾತರಾದ ವ್ಯಾಗ್ನರ್, ಜಾರ್ಜ್ ಮೂಲರ್,

ಶುಕ್ಹಾರ್ಡ್, ಕ್ಲಾಫ್ಲಿನ್ (ಮಹಿಳೆ) ಇತ್ಯಾದಿಗಳ ಬಗೆಗೂ ಹಂಪನಾ ವಿಷಯ ಸಂಗ್ರಹಣೆ ಮಾಡುವಲ್ಲಿ ಯಶಸ್ಸು ಕಂಡಿದ್ದಾರೆ,

ಈ ಗ್ರಂಥದ ಆಮೂಲಾಗ್ರ ಪರಿಶೀಲನೆಯ ನಂತರ ಇದರ ಉತ್ಕೃಷ್ಟತೆಗಾಗಿ ಹಂಪ. ನಾಗರಾಜಯ್ಯನವರು ಇನ್ನೂ ಹೆಚ್ಚಿನ ಎಚ್ಚರ ವಹಿಸುವುದು ಅಗತ್ಯವಿತ್ತೆಂದು ತೋರುತ್ತದೆ. ಪ್ರತಿಯೊಬ್ಬ ಭಾಷಾ ವಿಜ್ಞಾನಿಯ ಬಗೆಗೂ ಅನುಕ್ರಮವಾಗಿ ಅವರ ಹುಟ್ಟು ಪಡೆದ ಸ್ಥಳ, ದೇಶ, ವರ್ಷ, ತಂದೆತಾಯಿಗಳು ಮುಂತಾದ ಇತಿವೃತ್ತದ ಜೊತೆಗೆ ಅವರು ಗಳಿಸಿದ ವಿದ್ಯೆ. ಪಟ್ಟ ಪಾಡು. ಪಡೆದ ಹುದ್ದೆ, ಮಾಡಿದ ಸಾಧನೆ, ಹೊಂದಿದ ಸಿದ್ಧಿ, ಕೊಟ್ಟ ಕೊಡುಗೆಗಳನ್ನು ಚಿತ್ರಿಸಬೇಕಿತ್ತು. ಈ ಕ್ರಮವನ್ನು ಅವರು ಅನುಸರಿಸಿಯೇ ಇಲ್ಲ ಎಂದಲ್ಲ. ನಿಯತತೆ ಎಲ್ಲರ ಬಗೆಗೂ ಸಾಧ್ಯವಾಗಿಲ್ಲ ಎಂಬುದು ಇಲ್ಲಿ ಗಮನಾರ್ಹ. ಹಾಗೆಯೇ ಈ ನುಡಿಚಿತ್ರಗಳನ್ನೆಲ್ಲ ದೇಶಾವಾರು ಇಲ್ಲವೆ ವಿಷಯವಾರು ವರ್ಗೀಕರಿಸಬಹುದಿತ್ತು. ಆಗ ಯಾವ್ಯಾವ ದೇಶದಿಂದ ಎಷ್ಟೆಷ್ಟು ಜನಗಳನ್ನು ಆಯ್ಕೆ ಮಾಡಲಾಗಿದೆ, ಇವರು ದುಡಿದ ಕ್ಷೇತ್ರ ಯಾವುದು ಎಂಬುದು ವಿಹಂಗಮ ನೋಟಕ್ಕೇ ದೊರಕುತ್ತಿತ್ತು. ಈಗ ಕೊಟ್ಟಿರುವ ಅಕಾರಾದಿಯಿಂದ ಪ್ರಯೋಜನವಾದಂತೆ ಕಂಡುಬರುತ್ತಿಲ್ಲ. ಇಲ್ಲೂ ಮೂಲ ಹೆಸರನ್ನು ಮೊದಲು ತರುವ ಅಗತ್ಯವಿತ್ತು. ಉದಾ. ಲಿಯೋನಾರ್ಡ್ ಬ್ಲೂಮ್‌ಫೀಲ್ಡ್ ಎನ್ನುವುದರ ಬದಲು ಬ್ಲೂಮ್‌ಫೀಲ್ಡ್ ಎಲ್. ಎಡ್ವರ್ಡ್ ಸಪೀರ್ ಬದಲಾಗಿ ಸಪೀರ್ ಎಡ್ವರ್ಡ್ ಎಂದು ವಿಂಗಡಿಸಿಕೊಂಡಿದ್ದರೆ ಭಾಷಾ ವಿಜ್ಞಾನಿಗಳ ಹೆಸರನ್ನು ಬೇಗ ಗುರುತಿಸುವುದು. ಬೇಕಾದವರ ಬಗೆಗೆ ಕಣ್ಣು ಹಾಯಿಸುವುದು ಇನ್ನೂ ಸುಲಭವಾಗುತ್ತಿತ್ತು. ಭಾಷಾವಿಜ್ಞಾನದ ಬೈಬಲ್ ಎಂಬ ಪ್ರಶಂಸೆಗೆ ಪಾತ್ರವಾಗಿರುವ A Course in Modern Linguistic ಮೇರು ಕೃತಿಯ ಕರ್ತೃ ಹಾಕೆಟ್ ಹಾಗೆಯೇ ಅಷ್ಟೇ ಪ್ರಖ್ಯಾತನಾಗಿರುವ An Introduction to Descriptive Linguistics ನ ಗ್ಲೀಸನ್ ಇವರನ್ನು ಈ ಪಟ್ಟಿಯಲ್ಲಿ ಕಾಣದೇ ಹೋಗುವುದು ಒಂದು ದೊಡ್ಡ ಕೊರತೆ ಎನಿಸದಿರದು.

ಇದೊಂದು ಅವಸರದ ಪ್ರಸವ ಎಂಬುದು ಮುನ್ನುಡಿ ಓದಿದ ಯಾರಿಗೂ ಅರಿವಿಗೆ ಬರುವ ವಿಷಯ. ಲೇಖಕರೇ ಅರಿಕೆ ಮಾಡಿಕೊಂಡಿರುವಂತೆ ಇಲ್ಲಿನ ಲೇಖನಗಳ ವಿಷಯ ನಿರೂಪಣೆಯಲ್ಲಿನ ಧ್ವನಿ-ಧಾಟಿ-ಭಾಷೆ-ಶೈಲಿಗಳಲ್ಲಿ ಏಕತಾನತೆ ಇಲ್ಲ. ಈ ಹಿಂದಿನ ಕೃತಿಗಳಲ್ಲಿ ಹಂಪನಾ ಸಾಧಿಸಿರುವ ಅಚ್ಚುಕಟ್ಟು, ಶೈಲಿ, ನಿರೂಪಣೆಯ ಸೊಗಸು ಅಷ್ಟೇ ಪ್ರಮಾಣದಲ್ಲಿ ಪ್ರಸ್ತುತ ಕೃತಿಯಲ್ಲಿ ಕಂಡುಬರುವುದಿಲ್ಲ ಎನ್ನುವುದು ಸತ್ಯಕ್ಕೆ ಸಮೀಪವಾದ ಮಾತು. ಮುದ್ರಣ ದೋಷಗಳಂತೂ ಕಣ್ಣು ಕುಕ್ಕುತ್ತವೆ. "ಮೂರು ವರ್ಷಗಳಲ್ಲಿ ಮುದ್ರಣವಾಗಿ ಪ್ರಕಟವಾದ ಈ ಗ್ರಂಥದಲ್ಲಿ ಅಲ್ಲಲ್ಲಿ ಲೋಪದೋಷಗಳು ಉಳಿದಿವೆ. ಆದರೆ ಅವು ಯಾವುವೂ ವಸ್ತು ವಿಷಯಗಳ ದೃಷ್ಟಿಯಿಂದ

ಪ್ರಮಾದಕರವಾಗಿಲ್ಲ" ಎಂಬ ಲೇಖಕರ ಮಾತಿನ ವಾಸ್ತವತೆಯನ್ನು ಕೆಣಕುವಷ್ಟರ ಮಟ್ಟಿನ ತಪ್ಪುಗಳು ದಾಖಲಾಗಿವೆ. ಮುದ್ರಣ ದೋಷಗಳೇ ಅಲ್ಲದೆ, ಇಂಗ್ಲಿಷ್ ಪಾರಿಭಾಷಿಕ ಪದಗಳಿಗೆ ಸಂವಾದಿಯಾದ ಕನ್ನಡ ಪದಗಳನ್ನು ಬಳಸುವಾಗ. ಜರ್ಮನ್ ಭಾಷಾ ವಿಜ್ಞಾನಿಗಳ ಹೆಸರಿನ ಉಚ್ಚಾರಣೆಯನ್ನು ಅಕಾರಾದಿಗೆ ಅಳವಡಿಸಿಕೊಳ್ಳುವಾಗ, ಒಬ್ಬರ ವಿಷಯ ಪ್ರಸ್ತಾವನೆ ನಡೆಯುತ್ತಿರುವ ಸಂದರ್ಭದಲ್ಲಿ ಇನ್ನೊಬ್ಬ ಭಾಷಾ ವಿಜ್ಞಾನಿಯ ಹೆಸರು ಹಾಗೂ ಅವನ ವಿಚಾರದ ಪುಟಗಳು ಮಧ್ಯೆ ಬಂದು ಗೊಂದಲ ಉಂಟಾಗುವಂಥ ತೊಡಕುಗಳನ್ನು ಕೃತಿಯೊಡಲಲ್ಲಿ ಹೆಕ್ಕಬಹುದು. ಇವೆಲ್ಲ ಸುಲಭವಾಗಿ ತೊಡೆದುಹಾಕಬಲ್ಲಂಥ ನ್ಯೂನತೆಗಳು.

ಸಮಗ್ರ ಪರಿಶೀಲನೆಯ ನಂತರ ಮುಂದಿನ ಮುದ್ರಣದಲ್ಲಿ ಈ ತಪ್ಪುಗಳನ್ನೆಲ್ಲ ತೊಡೆದುಹಾಕಿ ಅಚ್ಚುಕಟ್ಟಾದ ವಿಸ್ತೃತ ಗ್ರಂಥವನ್ನು ತರಬೇಕೆಂಬ ಯೋಜನೆ ಇರುವುದಾಗಿ ಹೇಳಿಕೊಂಡಿರುವ ಕೃತಿಕಾರರು ಆ ಕೆಲಸವನ್ನು ಖಂಡಿತ ಮಾಡುವ ಅಗತ್ಯವಿದೆ. ಏನೇ ಇರಲಿ ಭಾಷಾವಿಜ್ಞಾನ ಲೋಕವನ್ನು ಜನಪ್ರಿಯಗೊಳಿಸಬೇಕೆಂಬ ಅವರ ಉದ್ದೇಶ ಇಲ್ಲಿ ಅವರ ನಿರೀಕ್ಷೆಗೂ ಮೀರಿ ಫಲಕಾರಿಯಾಗಿದೆ ಎನ್ನಲು ಯಾವ ಅಡ್ಡಿಯೂ ಇಲ್ಲ.

ಇಲ್ಲಿ ಸಂಕಲಿಸಲಾಗಿರುವ ಭಾಷಾ ವಿಜ್ಞಾನಿಗಳ ಅರವತ್ತೇಳು ನುಡಿ ಚಿತ್ರಗಳಲ್ಲಿ ಕೆಲವು ಅದ್ಭುತವಾಗಿಯೂ ಕೆಲವು ಕ್ವಚಿತ್ತಾಗಿಯೂ ರೂಪು ತಳೆದಿವೆ. ಈ ದಿವ್ಯ ಚೇತನಗಳೆಲ್ಲ ಬೆಳಗಾಗೆದ್ದು ಪ್ರಸಿದ್ಧಿಗೆ ಬಂದವಲ್ಲ. ಈ ಕ್ಷೇತ್ರದಲ್ಲಿ ಇವರೆಲ್ಲ ಪಟ್ಟ ಶ್ರಮ, ತುಳಿದ ಹಾದಿ, ಅನುಭವಿಸಿದ ನೋವು-ನಲಿವುಗಳನ್ನು ಹಂಪನಾ ಅವರು ಅಮೋಘವಾದ ರೀತಿಯಲ್ಲಿ ನಮ್ಮ ಮನದುಂಬುತ್ತಾರೆ. ಭಾಷಾಶಾಸ್ತ್ರದ ಬರೀ ಶುಷ್ಕ ವಿಷಯಕ್ಕಷ್ಟೇ ಗಮನ ಕೊಡದೆ, ವಿಷಯದ ಗಹನತೆಯನ್ನು ಮನಗಾಣಿಸುವುದರ ಜೊತೆಜೊತೆಗೇ ಅದಕ್ಕೆ ಸಂಬಂಧಿಸಿದ ಭಾಷಾವಿಜ್ಞಾನಿಯ ಬದುಕನ್ನು ನಮಗೆ ಹತ್ತಿರವಾಗಿಸುವಲ್ಲಿಯೂ ಅವರ ಲೇಖನಿ ಸಫಲಗೊಂಡಿದೆ. ಎಷ್ಟೋವೇಳೆ ಈ ಪ್ರಖ್ಯಾತ ವ್ಯಕ್ತಿಗಳ ಬರ್ಭರ ಜೀವನ ಸಂಕಷ್ಟಗಳನ್ನು ನಾವು ನಮ್ಮವೆಂದು ಹಲುಬುವಷ್ಟು ನೋವು ಕೊಡುವ, ಹಾಗೆಯೇ ಅವರ ನಿರ್ಲಿಪ್ತತೆ. ಅಚಲ ಶ್ರದ್ಧೆ. ಕಾರ್ಯನಿಷ್ಠೆ, ದಕ್ಷತೆಗಳಿಗೆ ಬೆರಗುಗೊಳ್ಳುವಷ್ಟರಮಟ್ಟಿಗೆ ಲೇಖಕರು ನಮ್ಮ ಹೃದಯ ತಟ್ಟುತ್ತಾರೆ ತಮ್ಮ ಈ ಕೃತಿಯಿಂದ. ಈ ಗುಣ ವ್ಯಕ್ತಿ ಚಿತ್ರಣಕ್ಕೆ ಕೀಲಿಕೈ ಎಂದರೆ ತಪ್ಪಲ್ಲ. ಅದನ್ನು ಹಂಪನಾ ಅಸದೃಶವಾಗಿ ಮೆರೆದಿದ್ದಾರೆ ತಮ್ಮ ಈ 'ಭಾಷಾ ವಿಜ್ಞಾನಿಗಳು' ಕೃತಿಯೊಡಲಲ್ಲಿ.

ಸಿ. ಎಸ್. ಶಿವಕುಮಾರಸ್ವಾಮಿ

# ದ್ರಾವಿಡ ಸಂಖ್ಯಾ ವಾಚಕಗಳು

ಎಣಿಸುವ ಕ್ರಮವು, ಆದಿಮಾನವ ತನ್ನ ಕೈ ಬೆರಳುಗಳ ಲೆಕ್ಕ ಹಾಕುವುದನ್ನು ಕಲಿತಂದಿನಿಂದ ಮೊದಲುಗೊಂಡಿತು. ಅನಂತರ ಕಲ್ಲು, ಕಡ್ಡಿ ಮುಂತಾದ ವಸ್ತುಗಳನ್ನು ಬಳಸಿ ಎಣಿಕೆ ಮಾಡುವ ವಿಧಾನಗಳನ್ನು ಕಂಡುಕೊಂಡನು. ಹಾಗೆಯೇ ಹಗ್ಗವನ್ನು ಗಂಟು ಹಾಕುವುದು : ಬಂಡೆಗಳ ಮೇಲೆ ಗೆರೆ ಮತ್ತು ಚುಕ್ಕೆಗಳಿಂದ ಗುರುತಿಸುವುದು : ಮರದಲ್ಲಿ ಕಚ್ಚುಗೊಳಿಸುವುದು ಇತ್ಯಾದಿ ಹಲವು ಬಗೆಯಲ್ಲಿ ಗಣಿತ ಪದ್ಧತಿ ಬೆಳೆದು ಬಂದಿತು.

ಭಾಷಾವಿಜ್ಞಾನ ಕ್ಷೇತ್ರದಲ್ಲಿ ಸಂಖ್ಯಾ ವಾಚಕಗಳಿಗೆ (numerals) ಮಹತ್ತ್ವದ ಸ್ಥಾನವಿದೆ. ಇವುಗಳನ್ನು ಸೂಚಿಸುವ ವಿಧಾನ ಭಾಷೆಯಿಂದ ಭಾಷೆಗೆ ಬೇರೆಯಾಗಿದ್ದು, ಆಯಾಯ ಭಾಷೆಗಳು ತಮ್ಮದೇ ಆದ ಕೆಲವು ಸಂಖ್ಯಾವಾಚಕಗಳನ್ನು ಹೊಂದಿರುತ್ತವೆ. ಅಸ್ಸಾಮಿನ ಬೋಡೋ ಭಾಷೆಯಲ್ಲಿರುವ ಕೇವಲ ನಾಲ್ಕು ಸಂಖ್ಯಾವಾಚಕ ಶಬ್ದಗಳ ನೆರವಿನಿಂದ ಉಳಿದ ಹೆಚ್ಚಿನ ಮೊತ್ತವನ್ನು ಕಂಡುಕೊಳ್ಳಲಾಗುವುದು. ಅಲ್ಲಿ 'ಹತ್ತು' ಎಂಬ ಸಂಖ್ಯೆಯನ್ನು ನಾಲ್ಕು + ನಾಲ್ಕು + ಎರಡು ಎಂದು ಸೂಚಿಸುವರು. ಆಸ್ಟ್ರೇಲಿಯಾದ ಕೆಲವು ಭಾಷೆಗಳಲ್ಲಿ ಮೂರರ ಅನಂತರ ಸಂಖ್ಯಾವಾಚಕಗಳಿಲ್ಲ. 'ನಾಲ್ಕು' ಎಂಬುದನ್ನು 'ಜೋಡಿ ಜೋಡಿ' ಎಂದೂ, 'ಅಯ್ದು' ಎಂಬುದನ್ನು 'ಜೋಡಿ ಜೋಡಿ ಒಂದು' ಎಂದೂ ಪರಿಗಣಿಸುವರು.[1] ಹೀಗೆ ಪ್ರತಿಯೊಂದು ಭಾಷೆಯಲ್ಲೂ ಸಂಖ್ಯಾವಾಚಕಗಳನ್ನು ಬಳಸುವ ಕ್ರಮದಲ್ಲಿ ಭಿನ್ನ ಬಗೆಗಳನ್ನು ಗುರುತಿಸಬಹುದು. ಭಾಷೆಯೊಂದರ ಯಾವ ಅಂಶವೂ ಅನ್ಯ ಭಾಷೆಗಳ ಪ್ರಭಾವಕ್ಕೆ ಒಳ

---

1. ವಿವರಗಳಿಗೆ ನೋಡಿ : ನಾಗರಾಜಯ್ಯ ಹಂಪ, 'ದ್ರಾವಿಡ ಸಂಖ್ಯಾ ವಾಚಕಗಳು'. ಬೆಂ. ವಿ.ವಿ. ಪು : ೨, ೧೯೭೨

ಗಾಗದೆ ಸಂಪೂರ್ಣ ಪ್ರತ್ಯೇಕತೆಯನ್ನು ಕಾಯ್ದುಕೊಳ್ಳಲು ಸಾಧ್ಯವಿಲ್ಲ. ಆದರೆ, ಸಂಖ್ಯಾ ವಾಚಕಗಳು ಅನ್ಯಭಾಷಾ ಸಂಸರ್ಗದಿಂದ ಹೆಚ್ಚು ವ್ಯತ್ಯಾಸಗೊಳ್ಳುವುದಿಲ್ಲ. ಕೆಲವು ಸಂಖ್ಯಾವಾಚಕಗಳನ್ನು ಒಂದು ಭಾಷೆ ಮತ್ತೊಂದು ಭಾಷೆಯಿಂದ ಸ್ವೀಕರಿಸುವುದಾದರೂ ಎಲ್ಲವನ್ನೂ ಪೂರ್ಣ ಪ್ರಮಾಣದಲ್ಲಿ ಆ ಭಾಷೆ ಪಡೆಯಲಾಗುವುದಿಲ್ಲ. ಆದುದರಿಂದ ಸಂಖ್ಯಾವಾಚಕಗಳು ಒಂದು ಭಾಷೆಯ ಸ್ಥಿರ ಅಂಶಗಳಾಗಿ ಉಳಿದಿರುತ್ತವೆ. ಜೊತೆಗೆ, ಭಾಷೆಗಳ ನಡುವಿನ ಸಾಮ್ಯತೆಯನ್ನು ನಿರ್ಧರಿಸುವಲ್ಲಿ ಇವು ನಿರ್ದಿಷ್ಟ ಪುರಾವೆಗಳನ್ನು ನೀಡಬಲ್ಲವು. ಕನ್ನಡ ಭಾಷೆಯ ಸಂಖ್ಯಾವಾಚಕ ಶಬ್ದಗಳನ್ನು ಇತರ ದ್ರಾವಿಡ ಭಾಷೆಗಳೊಡನೆ ಹೋಲಿಸಿದಾಗ ಸಮಾನ ರೂಪಗಳನ್ನು ಕಾಣಬಹುದು. ಆಗ ಅವುಗಳನ್ನು ಒಂದೇ ಮೂಲದ ಭಾಷೆಗಳೆಂದು ನಿರ್ಧರಿಸುವುದು ಸುಲಭ.

ದ್ರಾವಿಡ ಭಾಷೆಗಳು ತಮ್ಮದೇ ಆದ ಕೆಲವು ಸಂಖ್ಯಾವಾಚಕಗಳನ್ನು ಹೊಂದಿವೆ. ಅವುಗಳನ್ನು ಅರ್ಥ ಮತ್ತು ರಚನೆಗೆ ಅನುಗುಣವಾಗಿ ಬೇರೆ ಬೇರೆ ವರ್ಗ ಮತ್ತು ಉಪವರ್ಗಗಳನ್ನಾಗಿ ವರ್ಗೀಕರಿಸಿಕೊಳ್ಳಲಾಗಿದೆ. ಕೆಲವು ಸಂಖ್ಯಾವಾಚಕಗಳು, ಸ್ವತಂತ್ರ ಹಾಗೂ ನಿರ್ದಿಷ್ಟ ಸಂಖ್ಯೆಯನ್ನು ಸೂಚಿಸುತ್ತವೆ. ಅಂಥವುಗಳನ್ನು 'ಮೂಲ ಸಂಖ್ಯಾವಾಚಕಗಳು' (Cardinal Numerals) ಎಂದು ಕರೆಯಲಾಗುವುದು. ಉದಾ : ಒಂದು, ಎರಡು, ಮೂರು, ನಾಲ್ಕು, ಅಯ್ದು, ಆರು, ಏಳು, ಎಂಟು, ಒಂಬತ್ತು, ಹತ್ತು, ನೂರು, ಸಾವಿರ, ಲಕ್ಷ, ಕೋಟಿ ಇತ್ಯಾದಿ. ಈ ಸಂಖ್ಯಾವಾಚಕಗಳಿಗೆ ಲಿಂಗ, ವಚನ, ವಿಶೇಷಣ ಪ್ರತ್ಯಯಗಳನ್ನು ಆರೋಪಿಸಿದಾಗ 'ಸಾಧಿತ ಸಂಖ್ಯಾವಾಚಕಗಳು' (Derived Numerals) ರೂಪುಗೊಳ್ಳುತ್ತವೆ. ಉದಾ : ಒಬ್ಬನು, ಒಬ್ಬಳು, ಒಮ್ಮೆ, ಇಮ್ಮಡಿ, ಮುಮ್ಮಡಿ ಇತ್ಯಾದಿ. ದ್ರಾವಿಡ ಭಾಷೆಗಳಲ್ಲಿನ ಸಾಧಿತ ಸಂಖ್ಯಾವಾಚಕಗಳನ್ನು ಎರಡು ಉಪವರ್ಗಗಳನ್ನಾಗಿ ವಿಂಗಡಿಸಿಕೊಳ್ಳಬಹುದು. ಮೂಲ ಸಂಖ್ಯಾವಾಚಕಗಳಿಗೆ ಲಿಂಗ, ವಚನ, ಪ್ರತ್ಯಯಗಳನ್ನು ಹಚ್ಚಿದಾಗ, ಅವುಗಳ ಮೂಲದಲ್ಲಿ ಸಿದ್ಧಿಸುವ ನಾಮ ಪ್ರಕೃತಿಗಳಿಗೆ ಅನುಗುಣವಾಗಿ 'ಸಂಖ್ಯಾ ನಾಮಪದಗಳು' (Numeral Nouns) ಎನ್ನುವರು. ಉದಾ : ಒಬ್ಬನು (ಪುಂ), ಒಬ್ಬಳು (ಸ್ತ್ರೀ), ಒಬ್ಬರು, ಇಬ್ಬರು, ಮೂವರು ಇತ್ಯಾದಿ. ಹೀಗೆಯೇ ಕೆಲವು ಮೂಲಸಂಖ್ಯಾವಾಚಕಗಳಿಗೆ ಬೇರೆ ಬೇರೆ ವಿಶೇಷಣ ಸೂಚಕ ಪ್ರತ್ಯಯಗಳನ್ನು ಸೇರಿಸಿದಾಗ ರೂಪುಗೊಳ್ಳುವ ಸಂಖ್ಯಾವಾಚಕಗಳಿಗೆ 'ಸಂಖ್ಯಾ ವಿಶೇಷಣಗಳು' (Numeral Adjectives) ಎನ್ನಲಾಗುವುದು. ಉದಾ : ಇಮ್ಮಡಿ, ನಾಲ್ವಡಿ, ಒಂದನೇ, ಹತ್ತನೇ ಇತ್ಯಾದಿ. ಅಷ್ಟೇ ಅಲ್ಲದೆ, ಮೂಲ ಸಂಖ್ಯಾವಾಚಕಗಳು ದ್ರಾವಿಡ ಭಾಷೆಗಳಲ್ಲಿ ಸ್ವತಂತ್ರವಾಗಿ ಬಳಕೆಯಾದರೂ ಸಾಮಾನ್ಯವಾಗಿ ಸಮಾಸ ಪದಗಳಲ್ಲಿ ಬರುತ್ತವೆ ಎಂಬುದು ರಾಬರ್ಟ್ ಕಾಲ್ಡ್‌ವೆಲ್ ಅವರ ಅಭಿಪ್ರಾಯವಾಗಿದೆ. ಕೆಲವು

ಕಡೆ ಮೂಲ ಸಂಖ್ಯಾವಾಚಕಗಳು ವಿಶೇಷ್ಯ ರೂಪದಲ್ಲಿ ಕಾಣಿಸಿಕೊಳ್ಳುವುದುಂಟು. ಉದಾ : ಒಂದು ಊರು, ಎರಡು ಗಿಡ, ಇಬ್ಬರು ಹೆಂಗಸರು ಇತ್ಯಾದಿ.

ದ್ರಾವಿಡ ಸಂಖ್ಯಾವಾಚಕಗಳನ್ನು ಅವುಗಳ ಅರ್ಥ ಮತ್ತು ರಚನೆಗಳಿಗೆ ಅನುಗುಣವಾಗಿ ಅನೇಕ ರೀತಿಯಲ್ಲಿ ಆಧುನಿಕ ಭಾಷಾವಿಜ್ಞಾನಿಗಳು ವಿವರಿಸಿದ್ದಾರೆ. ದ್ರಾವಿಡ ಭಾಷೆಗಳಲ್ಲಿ 'ಭಿನ್ನಾಂಶ ಸಂಖ್ಯಾವಾಚಕ'ಗಳು (Fractional Numerals) ಕೆಲವಿವೆ. ಇವುಗಳು ಸ್ವತಂತ್ರವಾಗಿ ಬಳಸಲ್ಪಡುತ್ತವೆ. ಉದಾ : ಅರ್ಧ, ಕಾಲು, ಮುಕ್ಕಾಲು ಇತ್ಯಾದಿ. ಮತ್ತೆ 'ಕೆಲವು', 'ಸ್ವಲ್ಪ', 'ಕೊಂಚ', 'ದಪ', 'ಇಷ್ಟು', 'ಅಷ್ಟು'. ಮೊದಲಾದುವು ಅನಿಶ್ಚಿತ ಅರ್ಥವನ್ನು ಸೂಚಿಸುವ ಶಬ್ದಗಳಾಗಿ ಕಂಡುಬರುತ್ತವೆ. ಆದ್ದರಿಂದ ಇವುಗಳನ್ನು 'ಅನಿಶ್ಚಿತ ಸಂಖ್ಯಾವಾಚಕ'ಗಳೆಂದು (Indefininte Numerals) ಪರಿಗಣಿಸಲಾಗಿದೆ. ಒಟ್ಟಾರೆ, ಎಲ್ಲ ದ್ರಾವಿಡ ಭಾಷೆಗಳನ್ನು ಗಮನದಲ್ಲಿರಿಸಿಕೊಂಡು ಅಭ್ಯಸಿಸಿದಾಗ ಅವುಗಳಲ್ಲಿ ಸಾಧಾರಣ ಸಾಮ್ಯತೆಯಿರುವುದನ್ನು ಕಾಣುತ್ತೇವೆ. ಹೀಗಾಗಿ, ಅವುಗಳ ಮೂಲ ರೂಪಗಳನ್ನು ಪುನರ್ರಚಿಸುವುದು ಸುಲಭಸಾಧ್ಯ. ಈ ನಿಟ್ಟಿನಲ್ಲಿ ವಿದ್ವಾಂಸರು ಸಂಖ್ಯಾವಾಚಕಗಳನ್ನು ಎರಡು, ಮೂರು ಮತ್ತು ಐದು ವರ್ಗಗಳನ್ನಾಗಿ ವಿಂಗಡಿಸಿಕೊಂಡು ಪರಿಶೀಲನೆಗೆ ತೊಡಗಿಸಿಕೊಂಡಿರುವ ನಿದರ್ಶನಗಳಿವೆ.

೧) ನಿಶ್ಚಿತ ಮತ್ತು ಅನಿಶ್ಚಿತ ಸಂಖ್ಯಾವಾಚಕಗಳು.
(Definite and Indefinite Numerals)

೨) ಸರಳ ಸಂಖ್ಯಾವಾಚಕಗಳು (simple numerals)
ಸಾಧಿತ ಸಂಖ್ಯಾವಾಚಕಗಳು (Derived numerals)
ಭಿನ್ನಾಂಶ ಸಂಖ್ಯಾವಾಚಕಗಳು (Fractional numerals)

೩) ಮೂಲ ಸಂಖ್ಯಾವಾಚಕಗಳು (Cardinal numerals)
ಕ್ರಮಾಂಕ ಸಂಖ್ಯಾವಾಚಕಗಳು (Ordinal numerals)
ಸಂಖ್ಯಾ ವಿಶೇಷಣಗಳು (Numeral Adjectives)
ಸಂಖ್ಯಾ ನಾಮಪದಗಳು (Numeral Nouns)
ಭಿನ್ನಾಂಶ ಸಂಖ್ಯಾವಾಚಕಗಳು (Fractional numerals)

ದ್ರಾವಿಡ ಭಾಷೆಗಳಲ್ಲಿ ಖಚಿತ ಅರ್ಥವನ್ನು ಸೂಚಿಸುವ 'ನಿಶ್ಚಿತ ಸಂಖ್ಯಾವಾಚಕಗಳು' ಮತ್ತು ನಿಖರ ಅರ್ಥವನ್ನು ಸೂಚಿಸದ 'ಅನಿಶ್ಚಿತ ಸಂಖ್ಯಾವಾಚಕ'ಗಳನ್ನು ಬಿಟ್ಟರೆ, ಉಳಿದ ಸಂಖ್ಯಾವಾಚಕಗಳು ಮೂಲಾಂಕಗಳ ಸಹಾಯದಿಂದ ರೂಪು ಪಡೆದಿವೆ. ಉದಾ : ಇಪ್ಪತ್ತೊಂದು, ನಲವತ್ತು, ಎಂಬತ್ತನಾಲ್ಕು, ನೂರಾಮೂರು ಇತ್ಯಾದಿ. ಈ ಸಂಖ್ಯಾವಾಚಕಗಳು ಒಂದೇ ರಚನಾವಿಧಾನಕ್ಕೆ ಒಳಪಡುವುದಿಲ್ಲ. ಉದಾ :

೧) ಕೂಡುವ ವಿಧಾನದಿಂದ ರಚನೆಗೊಳ್ಳುವ ಸಂಖ್ಯಾವಾಚಕಗಳು :
ಹತ್ತು + ಎರಡು = ಹನ್ನೆರಡು
ಹತ್ತು + ಐದು = ಹದಿನೈದು
ಹತ್ತು + ಒಂಬತ್ತು = ಹತ್ತೊಂಬತ್ತು

೨) ಗುಣಿಸುವಿಕೆಯಿಂದ ರಚನೆಗೊಂಡ ಸಂಖ್ಯಾವಾಚಕಗಳು.
ಹತ್ತು × ಮೂರು = ಮೂವತ್ತು.
ಹತ್ತು × ಆರು = ಅರವತ್ತು
ನೂರು × ಎಂಟು = ಎಂಟುನೂರು

೩) ಗುಣಿಸುವ ಮತ್ತು ಕೂಡುವ ವಿಧಾನದಿಂದ ರಚನೆಗೊಂಡ ಸಂಖ್ಯಾ ವಾಚಕಗಳು.
ಹತ್ತು × ಮೂರು + ನಾಲ್ಕು = ಮೂವತ್ತನಾಲ್ಕು
ನೂರ × ಎರಡು + ಆರು = ಇನ್ನೂರ ಆರು
ನೂರ × ನಾಲ್ಕು + ಐದು = ನಾನೂರಐದು

ಇಂತಹ ಸಂಖ್ಯಾವಾಚಕಗಳ ರಚನೆ ದ್ರಾವಿಡ ಭಾಷೆಗಳಲ್ಲಿ ವಿಪುಲವಾಗಿ ಹಾಗೂ ಸ್ಪಷ್ಟವಾಗಿ ಕಂಡುಬರುತ್ತದೆ. ಅಲ್ಲದೆ, ಇವುಗಳನ್ನೂ ವಿಶಿಷ್ಟರೀತಿಯಲ್ಲಿ ಪ್ರಯೋಗಿಸುವುದುಂಟು ('ಕೊಲಾಮಿ' ಭಾಷೆಯಲ್ಲಿ ಮೂರು ಲಿಂಗಗಳನ್ನು ಪ್ರತ್ಯೇಕ ಸೂಚಿಸುವ ಸಂಖ್ಯಾವಾಚಕಗಳಿವೆ. ಉದಾ : 'ಇದ್ದರ್' (ಇಬ್ಬರು ಗಂಡಸರು), 'ಈರಲ್' (ಇಬ್ಬರು ಹೆಂಗಸರು), 'ಇಂಗಿಜ್' (ಎರಡು ವಸ್ತುಗಳು), ಇದೇ ರೀತಿ ಗೋಂಡಿ, ಕೊಂಡ ಮುಂತಾದ ಭಾಷೆಗಳಲ್ಲಿ ಪುಲ್ಲಿಂಗ ಮತ್ತು ಪುಲ್ಲಿಂಗೇತರ ಭೇದ ಗಳನ್ನು ನಿರ್ದೇಶಿಸುವ ಸಂಖ್ಯಾವಾಚಕಗಳು ಬಳಕೆಯಲ್ಲಿರುವುದು ಗೋಚರಿಸುತ್ತದೆ.) ಇವುಗಳ ಸ್ವರೂಪ, ಭಿನ್ನತೆ ಹಾಗೂ ವ್ಯಾಪ್ತಿಯನ್ನು ಕುರಿತು ಅನೇಕ ವಿದ್ವಾಂಸರು ಚರ್ಚಿಸಿದ್ದಾರೆ.[2]

೨

ದ್ರಾವಿಡ ಭಾಷೆಗಳನ್ನು ಕುರಿತ ಕ್ರಮಬದ್ಧವಾದ ಅಧ್ಯಯನ ಸರ್ ಫ್ರಾನ್ಸಿಸ್ ವೈಟ್ ಎಲ್ಲಿಸ್, ರ್‍ಯಾಸ್‌ಮಸ್‌ರಾಸ್ಕ್, ಶ್ರೀರಂಗಪಟ್ಟಣದ ಕೃಷ್ಣಮಾಚಾರಿ ಮೊದ

---

2. ಹೆಚ್ಚಿನ ವಿವರಗಳಿಗೆ ನೋಡಿ : ಕೆಂಪೇಗೌಡ, ಕೆ. 'ಮಾನವಿಕ ಕರ್ಣಾಟಕ', ಸಂಪುಟ-೧೬, ಸಂಚಿಕೆ-೧, ೧೯೮೫, ಪುಟ ೪೧-೪೨,

ಲಾದವರಿಂದ ಆರಂಭಗೊಂಡು ಇಂದಿಗೂ ಮುಂದುವರೆದಿದೆ. ರಾಬರ್ಟ್ ಕಾಲ್ಡ್ ವೆಲ್‌ನ 'ದ್ರಾವಿಡ ಭಾಷೆಗಳ ತೌಲನಿಕ ವ್ಯಾಕರಣ' ಎಂಬ ಕೃತಿಯಂತೂ ಈ ದೃಷ್ಟಿಯಿಂದ ಐತಿಹಾಸಿಕ ಮಹತ್ತ್ವವುಳ್ಳ ಮೇರುಕೃತಿಯಾಗಿದೆ. ಇದು ದ್ರಾವಿಡ ಭಾಷೆಗಳ ಅಸ್ತಿತ್ವವನ್ನು ಕುರಿತು ಚರ್ಚಿಸಿದ ಅಧಿಕೃತ ಭಾಷಾ ವಿಜ್ಞಾನ ಗ್ರಂಥ. ಇದರ ತರುವಾಯ ಈ ಬಗೆಯ ಪ್ರೌಢಕೃತಿಗಳು ಬರಲಿಲ್ಲವೆಂಬ ಕೊರತೆಯನ್ನು ಟಿ. ಬರೋ, ಎಮಿನೊ, ಜೂಲ್ಸ್‌ಬ್ಲಾಕ್ ಮೊದಲಾದ ವಿದ್ವಾಂಸರು ತುಂಬಿಕೊಟ್ಟಿದ್ದಾರೆ. ಇವರಲ್ಲದೆ ಗ್ರಿಯರ್‌ಸನ್, ಬ್ರೈಟ್, ಆಂಡ್ರೋನೋವ್, ಆರ್. ನರಸಿಂಹಾಚಾರ್, ತೀನಂಶ್ರೀ, ಡಿ. ಎಲ್. ನರಸಿಂಹಾಚಾರ್, ಹಂಪನಾ ಮುಂತಾದ ವಿದ್ವಾಂಸರು ಈ ಕ್ಷೇತ್ರದಲ್ಲಿ ದುಡಿದಿದ್ದಾರೆ. ಭಾಷಾ ವಿಜ್ಞಾನಕ್ಕೆ ಸಂಬಂಧಿಸಿದಂತೆ ಪತ್ರಿಕೆಗಳಲ್ಲಿ ಅನೇಕ ಲೇಖನಗಳು ಪ್ರಕಟಗೊಳ್ಳುತ್ತಿವೆಯೇ ಹೊರತು, ಯಾವುದೇ ಬೃಹತ್‌ಗ್ರಂಥ ಹೊರಬಂದಿಲ್ಲ ಎಂಬ ಅಪವಾದವನ್ನು ತಳ್ಳಿಹಾಕಿದ್ದು ಹಂಪ. ನಾಗರಾಜಯ್ಯ ಅವರ 'ದ್ರಾವಿಡ ಭಾಷಾ ವಿಜ್ಞಾನ' (೧೯೬೬). "ಅತ್ಯಾಧುನಿಕ ವಿಚಾರಧಾರೆಯನ್ನೊಳಗೊಂಡು ಸಕಲ ದ್ರಾವಿಡ ಭಾಷೆಗಳ ಸಮಗ್ರ ಚಿತ್ರವನ್ನು ಪರಿಚಯ ಮಾಡಿಕೊಡುವ ಗ್ರಂಥ ಸದ್ಯಕ್ಕೆ ಇದೊಂದೇ ಎಂದು ಧಾರಾಳವಾಗಿ ಹೇಳಬಹುದು. ಇಲ್ಲಿಯವರೆಗೆ ಉಪಲಬ್ಧವಾಗಿರುವ ಗ್ರಂಥ ಮತ್ತು ಲೇಖನ ಸಂಪತ್ತನ್ನು ಸೂರೆಗೊಂಡಿರುವ ವಿಷಯ ವೈಪುಲ್ಯ ಈ ಗ್ರಂಥದ ಮೇಲ್ಮೆಗೆ ಕಾರಣವಾಗಿದೆ"[3] ಎಂಬ ಮಾತು ಉತ್ಪ್ರೇಕ್ಷೆಯೇನೂ ಅಲ್ಲ. ಈ ಕೃತಿಯಲ್ಲಿ ಒಂದು ಚಿಕ್ಕ ಅಧ್ಯಾಯವಾಗಿ ಸೇರ್ಪಡೆಯಾಗಿದ್ದ 'ಸಂಖ್ಯಾವಾಚಕ'ಗಳನ್ನು ಕುರಿತು 'ದ್ರಾವಿಡ ಸಂಖ್ಯಾವಾಚಕಗಳು' ಪುಸ್ತಕದಲ್ಲಿ ವಿಸ್ತಾರವಾಗಿ ಚರ್ಚೆ ಮಾಡಲಾಗಿದೆ. ಇದು ೧೯೭೨ ರಲ್ಲಿ ಬೆಂಗಳೂರು ವಿಶ್ವವಿದ್ಯಾನಿಲಯದ ಪ್ರಚಾರೋಪನ್ಯಾಸಮಾಲೆಯಲ್ಲಿ ಪ್ರಕಟವಾದ ಕಿರುಹೊತ್ತಗೆ. ಇಲ್ಲಿ ಸಂಖ್ಯಾವಾಚಕಗಳು ಮಾನವನ ಬದುಕಿಗೆ ಅಗತ್ಯವಾಗಿ ಬೇಕೆಂಬುದನ್ನು ಪರಿಚಯಿಸಲಾಗಿದೆ. ಬಹಳ ಹಿಂದೆಯೇ ಇವುಗಳನ್ನು ಪ್ರಾಚೀನ ಕಾವ್ಯಗಳಲ್ಲಿ, ಶಾಸನಗಳಲ್ಲಿ ಬಳಸಿರುವುದನ್ನು ನಿದರ್ಶನಪೂರ್ವಕವಾಗಿ ಸೂಚಿಸಿದ್ದಾರೆ. ಭಾಷಾವಿಜ್ಞಾನ ಕ್ಷೇತ್ರದಲ್ಲಿ ಸರ್ವನಾಮಗಳಂತೆ ಸಂಖ್ಯಾವಾಚಕಗಳಿಗೂ ವಿಶಿಷ್ಟ ಸ್ಥಾನವಿದೆ. ಇವುಗಳ ಸಹಾಯದಿಂದ ಭಾಷೆಗಳ ನಡುವೆ ಇರುವ ಸಮಾನ ಅಂಶಗಳನ್ನು ಗುರುತಿಸಲು ಸಾಧ್ಯ ಎಂಬುದನ್ನು ಸಮರ್ಥಿಸಲು ಸಂಸ್ಕೃತ, ಇಂಗ್ಲಿಷ್ ಮತ್ತು ಕನ್ನಡ ಭಾಷೆಗಳಲ್ಲಿನ ಮೂಲಾಂಕಗಳು ಹಾಗೂ ಕ್ರಮಾಂಕಗಳ ಪಟ್ಟಿಯನ್ನು ನೀಡಿ ವಿವರಿಸಿದ್ದಾರೆ. "ಹೀಗೆಂದ ಮಾತ್ರಕ್ಕೆ ಭಾಷೆಗಳ ನಡುವಿನ ನಂಟನ್ನು ನಿರ್ಧರಿಸಲು ಈ ಸಂಖ್ಯಾವಾಚಕಗಳು ಅತ್ಯುತ್ತಮ ಆಧಾರವೆಂದಾಗಲಿ, ಸಂಖ್ಯಾವಾಚಕಗಳು ಭಾಷೆಯ ಅಚಲಾಂಶಗಳು ಹಾಗೂ ಪ್ರಭಾವಕ್ಕೆ ಹೊರತಾದವು ಎಂದಾಗಲಿ ಅರ್ಥವಲ್ಲ.

---

3. ಡಾ. ದೇಜಗೌ, ಮುನ್ನುಡಿ, 'ದ್ರಾವಿಡ ಭಾಷಾ ವಿಜ್ಞಾನ', ೧೯೭೨,

ಭಾಷೆಯ ಯಾವ ಅಂಶವೂ ಅನ್ಯಭಾಷೆಗಳ ಪ್ರಭಾವದಿಂದ ಸಂಪೂರ್ಣ ಹೊರತಾಗದು. ಹಾಗೆ ನೋಡುವುದಾದರೆ ಸರ್ವನಾಮಗಳಲ್ಲಿ ಇರುವ ಸ್ಥಿರತೆ ಸಂಖ್ಯಾವಾಚಕಗಳಲ್ಲಿಲ್ಲ".[4] ಆದ್ದರಿಂದ ಸಂಖ್ಯಾವಾಚಕಗಳು ಹೊರಗಿನ ಪ್ರಭಾವಕ್ಕೆ ಒಳಗಾದರೂ ಕೆಲವು ಸಂದರ್ಭಗಳಲ್ಲಿ ಅವು ಸ್ಥಿರ ಅಂಶಗಳಾಗಿ ಉಳಿಯಬಲ್ಲವು. ಒಂದು ಭಾಷೆ ಮತ್ತೊಂದು ಭಾಷೆಯಿಂದ ಇವುಗಳನ್ನು ಸ್ವೀಕರಿಸುವಾಗ ಸಾಧ್ಯವಾದಷ್ಟು ಎಚ್ಚರವಹಿಸಬೇಕಾಗುತ್ತದೆ. ಏಕೆಂದರೆ ಸಂಖ್ಯಾವಾಚಕ ಆಕೃತಿಮಾಗಳನ್ನು ಸಾಂಸ್ಕೃತಿಕ ಅಂಶಗಳೆಂದೇ ಭಾವಿಸಲಾಗುತ್ತದೆ. ತೌಲನಿಕ ಅಧ್ಯಯನ ಕ್ರಮದಲ್ಲಿ ಈ ವಿಷಯವನ್ನು ಸೂಕ್ಷ್ಮವಾಗಿ ವಿವೇಚಿಸುವುದು ಅಗತ್ಯ. ಉದಾ : ಕನ್ನಡದಲ್ಲಿ 'ಒಬ್ಬನು' ಎಂಬ ಆಕೃತಿಮಾ ರೂಪ ತಮಿಳಿನಲ್ಲಿ 'ಒರುವನ್' (ಪುಂ.ಏ) ಆಗುತ್ತದೆ. ಹಾಗೆಯೇ–

ಕ : ಒಬ್ಬ ಮಗಳು (ಸ್ತ್ರೀ. ಏಕ)
ತ : ಒರುಮಗಳ್ ( " )

ಕ : ಒಂದು ದಿನ (ನಪುಂ. ಏಕ)
ತ : ಒರುನಾಳ್ ( " )

ಕ : ಒಂದು.
ತು : ಒಂಜಿ.

ಕ : ಒಬ್ಬನು (ಪುಂ. ಏಕ)
ತು : ಒರಿ ( " )

ಕ : ಒಬ್ಬಳು (ಸ್ತ್ರೀ. ಏಕ)
ತೆ : ಒಕಟಿ ( " ) = ನಪುಂಸಕ ಏಕವಚನವಾಗಿಯೂ ಒಕಟಿ ಪದ ಬಳಕೆಯಾಗುತ್ತದೆ.

ಈ ಬಗೆಯ ವ್ಯತ್ಯಾಸಗಳನ್ನು ತಿಳಿಯಲು ಸಾಧ್ಯವಾಗುವಂತೆ ಸಂಖ್ಯಾವಾಚಕಗಳಿಗೆ ಬೇರೆ ಬೇರೆ ದ್ರಾವಿಡ ಭಾಷೆಗಳಲ್ಲಿರುವ ಶಬ್ದಗಳನ್ನು (ಒಂದರಿಂದ ಹತ್ತರವರೆಗೆ) ಹಂಪನಾ ಅವರು ಪಟ್ಟಿಮಾಡಿದ್ದಾರೆ. ದ್ರಾವಿಡ ಸಂಖ್ಯಾವಾಚಕಗಳ ಮೂಲರೂಪಗಳನ್ನು ಗುರುತಿಸುವಲ್ಲಿ ಇನ್ನೂ ಸ್ಪಷ್ಟತೆಗೆ ಆಸ್ಪದವಿತ್ತು. ಕನ್ನಡದಲ್ಲಿ 'ಒಂದು' ಎಂಬುದರ ಮೂಲರೂಪ 'ಒರ್' ಆದರೂ ತಮಿಳಿನಲ್ಲಿ 'ಒನ್ದು, ಒನ್ನ, ಒಣ್ಣು' ಇದೆ. ಆದುದರಿಂದ ತಮಿಳು, ಮಲೆಯಾಳಿ ಭಾಷೆಯಲ್ಲಿ 'ಒನ್' ಎಂಬುದೇ ಮೂಲ ರೂಪವಿರಬೇಕು. ಎಲ್ಲಾ ದ್ರಾವಿಡ ಭಾಷೆಗಳ ಸಂದರ್ಭದಲ್ಲಿ (ತಮಿಳು ಮತ್ತು ಮಲೆಯಾಳಿ ಹೊರತುಪಡಿಸಿ) 'ಒಂದು' ಎಂಬುದರ ಮೂಲರೂಪ 'ಒರ್' ಎಂದೇ ಇದೆ. ಉತ್ತರ ಮತ್ತು ಮಧ್ಯದ್ರಾವಿಡ ಭಾಷೆಗಳಲ್ಲಿ

4. ನಾಗರಾಜಯ್ಯ, ಹಂಪ. 'ದ್ರಾವಿಡ ಸಂಖ್ಯಾವಾಚಕಗಳು' ಬೆಂ. ವಿ. ವಿ. ೧೯೭೨, ಪುಟ. ೪

ಒಂದರ ಮತ್ತು ಎರಡರ ಸಂಖ್ಯೆ ಹೇಳುವ ಶಬ್ದಗಳು ದ್ರಾವಿಡ ರೂಪದ್ದೇ ಆದರೂ ಅಲ್ಲಿಂದ ಮುಂದಿನ ಸಂಖ್ಯಾಶಬ್ದಗಳ ಬಳಕೆಯಲ್ಲಿ ವ್ಯತ್ಯಾಸವಿದೆ. ಮಲ್ತೊ, ಕುವಿ ಮತ್ತು ಕುಈ ಭಾಷೆಗಳಲ್ಲಿ ಮೂರು ಮತ್ತು ಅನಂತರದ ಸಂಖ್ಯಾವಾಚಕಗಳು ದ್ರಾವಿಡೇತರವಾದುವು. ಬ್ರಾಹೂಈ ಭಾಷೆಯಲ್ಲಿ ನಾಲ್ಕರ ಅನಂತರ ಹೀಗಾಗು ತ್ತದೆ. ಕುರುಖ್‌ನಲ್ಲಿ ಅಯ್ದು ಮತ್ತು ಅನಂತರ ಸಂಖ್ಯಾವಾಚಕಗಳೆಲ್ಲಾ ಸ್ವೀಕರಣ ಶಬ್ದಗಳು. ಕೊಲಾಮಿ ತೆಲುಗಿನಿಂದ ಸ್ವೀಕರಿಸಿರುವುದು ಹೆಚ್ಚು. ಉದಾ: 'ನಲುಗುರು' (ತೆ), 'ನಲ್ಗುರ್' (ಕೊ).

ಹೀಗೆ, ದ್ರಾವಿಡ ಭಾಷೆಗಳಲ್ಲಿ ವೈವಿಧ್ಯಪೂರ್ಣವಾಗಿ ಬಳಕೆಗೊಳ್ಳುವ ಪ್ರತಿ ಯೊಂದು ಸಂಖ್ಯಾವಾಚಕಗಳನ್ನು ಪ್ರತ್ಯೇಕವಾಗಿ 'ದ್ರಾವಿಡ ಸಂಖ್ಯಾವಾಚಕಗಳು'. ಕೃತಿಯಲ್ಲಿ ವಿಶ್ಲೇಷಿಸಲಾಗಿದೆ. ಅವುಗಳ ಮೂಲ. ರೂಪವ್ಯತ್ಯಾಸ ಮತ್ತು ಸಮಾನ ಅಂಶಗಳನ್ನು ಉದಾಹರಣೆ ಸಹಿತ ನೀಡಲಾಗಿದೆ. ನಿದರ್ಶನಕ್ಕಾಗಿ 'ಒಂದು' ಎಂಬುದನ್ನು ಗಮನಿಸಬಹುದು — 'ಎಲ್ಲ ದ್ರಾವಿಡ ಭಾಷೆಗಳಲ್ಲಿ 'ಒರು,' ತೆಲುಗು ಭಾಷೆಯಲ್ಲಿ ಮಾತ್ರ 'ಒಕ' ಒರ್ ಎಂಬುದು ಮೂಲ. ಒರ್ ರೂಪಕ್ಕೆ—ಉ ಎಂಬುದು ಸೇರುವುದು ಬಹುಶಃ ಉಚ್ಚಾರ ಸೌಲಭ್ಯಕ್ಕಾಗಿ' ಸಮಾಸದಲ್ಲಿ—ಉ ಬಿದ್ದು ಹೋಗುತ್ತದೆ. ಆದರೆ ತಮಿಳಿನಲ್ಲಿ ಸಮಾಸದಲ್ಲೂ ಉ ಇದೆ: ಒರುವನ್, ಒರುವಳ್. ವಿಶೇಷಣರೂಪ ಒರ್ ಎಂದಿಟ್ಟುಕೊಳ್ಳ ಬಹುದು. ತಮಿಳಿನಲ್ಲಂತೂ ಒರ್ ಎಂಬುದೇ ವಿಶೇಷಣ ರೂಪ, ಒರಿ= ಒಬ್ಬನು, ಒರ=ಒಮ್ಮೆ. ಸ್ವರಗಳು ಮುಂದೆ ಬಂದರೆ ಆಗ ಒರ್ <ಓರ್ ಆಗುತ್ತದೆ; ಆದಿ ಹ್ರಸ್ವಸ್ವರ ದೀರ್ಘ ಸ್ವರವಾಗುತ್ತದೆ. ಒರು+ಉಡಲ್= ಓರುಡಲ್ (ತ), ಒರ್+ಒಡಲ್=ಓರೊಡಲ್ (ಕ). ಆದರೆ ತಮಿಳಿನಲ್ಲಿ ವ್ಯಂಜನ ಗಳು ಪರವಾದಾಗಲೂ ದೀರ್ಘತೆಯುಂಟು : ಕನ್ನಡದಲ್ಲಿಲ್ಲ". [5] ದಕ್ಷಿಣ ದ್ರಾವಿಡ ಭಾಷೆಗಳಲ್ಲಿ ಒಂದರಿಂದ ಎಂಟರತನಕ ಮತ್ತು ಹತ್ತು. ನೂರು—ಈ ಸಂಖ್ಯೆ ಗಳಿಗೆ ಮೂಲಾಂಕದ ಸ್ಥಾನವನ್ನು ನೀಡಲಾಗಿದೆ. ಇದರಲ್ಲಿ 'ಒಂಬತ್ತು' ಎಂಬುದು ಹತ್ತರಲ್ಲಿ ಕಳೆಯುವಿಕೆಯಿಂದ ರೂಪುಗೊಂಡಿದೆ. 'ಸಾವಿರ' ಎಂಬ ಸಂಖ್ಯೆಯ ಮೂಲ ಆಕೃತಿಮಾವನ್ನು 'ಸಾಸಿರ' (ಸಂ) ದ ತದ್ಭವ ರೂಪವಾಗಿ ಸ್ವೀಕರಿಸ ಲಾಗಿದೆ. ಲಕ್ಷ, ಕೋಟಿ ಎಂಬ ರೂಪಗಳು ಆರ್ಯಭಾಷೆಯಿಂದ ಸ್ವೀಕೃತವಾದವು. ಕೊಂಚ. ಅರೆ, ಕಡಿಮೆ ಇತ್ಯಾದಿ ಶಬ್ದಗಳನ್ನು ಅನಿಶ್ಚಿತ ಸಂಖ್ಯಾವಾಚಕಗಳೆಂದು ನಿರ್ಧರಿಸಲಾಗಿದೆ. "ಇವು, ದೇಹಾಂಗಗಳ ಶಬ್ದಗಳಾಗಿದ್ದು, ಅರ್ಥವಿಕಾಸ

---

5. ನಾಗರಾಜಯ್ಯ, ಹಂಪ, 'ದ್ರಾವಿಡ ಸಂಖ್ಯಾವಾಚಕಗಳು' ಬೆಂ. ವಿ. ವಿ, ೧೯೭೨, ಪುಟ. ೪೧.

ಹೊಂದಿವೆ. 'ಅರೆ' ಎಂಬರ್ಥದಲ್ಲಿ ಸಂಸ್ಕೃತದ 'ಅರ್ಧ' ಶಬ್ದವೇ ಹೆಚ್ಚಾಗಿ ಬಳಕೆಯಲ್ಲಿದೆ 6" ಎಂಬ ಹಂಪನಾ ಅವರ ಅಭಿಪ್ರಾಯ ಸರಿಯಾಗಿದೆ.

ಒಟ್ಟಿನಲ್ಲಿ ದ್ರಾವಿಡ ಸಂಖ್ಯಾವಾಚಕಗಳನ್ನು ಕುರಿತು ಚರ್ಚಿಸುವಲ್ಲಿ ಈ ವಿದ್ವಾಂಸರು ತಮ್ಮ ಅಧ್ಯಯದಲ್ಲಿನ ಕ್ರಮಬದ್ಧತೆಯನ್ನು ಪ್ರಕಟಿಸಿದ್ದಾರೆ. ವಿಷಯವನ್ನು ಸಂಗ್ರಹಿಸುವಲ್ಲಿ, ವಿಂಗಡಿಸಿಕೊಳ್ಳುವಲ್ಲಿ ಪ್ರತಿಭೆ ಮತ್ತು ಪಾಂಡಿತ್ಯಗಳೆರಡೂ ಸಮಪ್ರಮಾಣದಲ್ಲಿ ಬೆರೆತಿವೆ. ಹೀಗಾಗಿ, ಈ ಕಿರುಹೊತ್ತಗೆ ಅಭ್ಯಾಸಾರ್ಹವೆನ್ನಬಹುದು.

---

6. ಅದೇ, ಪುಟ. ೩೭.

ಆರ್. ರಾಚಪ್ಪ

# ಭಾರತದ ಭಾಷಾಸಮಸ್ಯೆ

ಯಾವುದೇ ರಾಷ್ಟ್ರದ ಅಸ್ತಿತ್ವಕ್ಕೆ ಇರುವ ಅಗತ್ಯಗಳಲ್ಲಿ ಭಾಷೆಯೂ ಒಂದು. ಯಾವುದೇ ರಾಷ್ಟ್ರ ಅಸ್ತಿತ್ವದಲ್ಲಿದೆ ಎಂದರೆ, ಭೌಗೋಳಿಕ ವ್ಯಾಪ್ತಿ, ಆ ಭೌಗೋಳಿಕ ವ್ಯಾಪ್ತಿಯಲ್ಲಿ ಬದುಕಲಿಚ್ಛಿಸುವ ಜನಪದ ಮತ್ತು ಆ ಜನಪದ ವ್ಯವಹಾರಕ್ಕೆ ಆವಶ್ಯಕವಾದ ಭಾಷೆ ಅಲ್ಲಿದೆ ಎಂದು ಅರ್ಥ.

ಜನಾಂಗಗಳನ್ನು ಒತ್ತಟ್ಟಿಗೆ ತರುವಲ್ಲಿ ಭಾಷೆ ವಹಿಸುವ ಪಾತ್ರ ಬಹುದೊಡ್ಡದು. ಮನುಷ್ಯ ವಿಚಾರಪರ. ಜ್ಞಾನಿ, ಸಾರ ಸಾರ ವಿವೇಚನಾ ಶಕ್ತಿ ಇರುವವನು. ಹೀಗಾಗಿ ತನ್ನ ವಿಚಾರ, ಜ್ಞಾನ, ವಿವೇಚನೆಗಳನ್ನು ಸಹಚರರೊಂದಿಗೆ ಹಂಚಿಕೊಳ್ಳಲು ಹವಣಿಸುವುದು ನಿಸರ್ಗ ಸಹಜಗುಣ. ಹಾಗಾಗಿ ತನ್ನ ಅನುಭವ, ಅನಿಸಿಕೆಗಳನ್ನು ತನ್ನ ನೆರೆಹೊರೆಯವರೊಂದಿಗೆ ಹೇಳಿಕೊಳ್ಳಲು ಕಾತರಗೊಳ್ಳುವನು. ಅದಕ್ಕೆ ಆದಿಮಾನವನು ಸಂಜ್ಞೆಗಳನ್ನು ಬಳಸುತ್ತಿದ್ದ ಎಂಬುದು ಭಾಷಾ ವಿದ್ವಾಂಸರ ಅಭಿಪ್ರಾಯ. ನಾಗರಿಕತೆ ಬೆಳೆದಂತೆ ಮನುಷ್ಯ ಮಾತಿಗಾರಂಭಿಸಿದ. ಸಂಜ್ಞೆಗಳನ್ನು ಬಿಟ್ಟು ಮಾತುಗಳಲ್ಲಿ ಹೇಳಲಾರಂಭಿಸಿದ. ಈಗ ಭಾಷೆ ಮನುಷ್ಯ ಜೀವನದ ಅವಿಭಾಜ್ಯ ಅಂಗವಾಗಿ ಬೆಳೆದಿದೆ.

ಬಹುಶಃ ಜನತೆಯನ್ನು ಒಂದು ಕಟ್ಟಿನಲ್ಲಿ ತರಲು ಭಾಷೆ ಒಂದು ಪ್ರಬಲಸಾಧನ. ಭಾಷೆಯ ಬಾಂಧವ್ಯ ಬಹುಪ್ರಮುಖವಾದುದು. ಇದಕ್ಕೆ ಒಂದು ನನ್ನ ಇತ್ತೀಚಿನ ಅನುಭವವನ್ನು ಉದಾಹರಿಸುತ್ತೇನೆ :

ಇತ್ತೀಚೆಗೆ ನಾನು ನನ್ನ ಕುಟುಂಬದೊಂದಿಗೆ ಶ್ರೀನಗರ ಪ್ರವಾಸ ಹೋಗಿದ್ದೆ. ಶ್ರೀನಗರದಲ್ಲಿ ನಾನು ಭಾಗವಹಿಸಬೇಕಾಗಿದ್ದ ಗೋಷ್ಠಿಯ ಕಾರ್ಯಕಲಾಪಗಳು ಮುಗಿದ ಮೇಲೆ

ನಾವು ಜಮ್ಮುವಿಗೆ ಬಂದು ಅಲ್ಲಿಂದ ಶಾಲಿಮಾರ್ ರೈಲನ್ನು ಹಿಡಿದು ದೆಹಲಿ ತಲುಪ ಬೇಕಿತ್ತು. ನಾವು ಶ್ರೀನಗರದಿಂದ ಬಸ್ಸಿನಲ್ಲಿ ಪ್ರಯಾಣ ಬೆಳೆಸಿದೆವು. ನಮ್ಮ ದುರದೃಷ್ಟದಿಂದಾಗಿ ನಾವು ಜಮ್ಮು ತಲುಪುವ ಹೊತ್ತಿಗೆ ಶಾಲಿಮಾರ್ ರೈಲು ಜಮ್ಮುವಿನಿಂದ ದೆಹಲಿ ಕಡೆಗೆ ಬಹುದೂರ ಹೋಗಿತ್ತು. ಹಾಗಾಗಿ ನಾವು ಬೇರೆ ಟಿಕೆಟ್ ತೆಗೆದುಕೊಂಡು ಹಿಮಸಾಗರ ಎಕ್ಸ್‌ಪ್ರೆಸ್ ರೈಲಿನಲ್ಲಿ ಪ್ರಯಾಣಿಸಬೇಕಾಗಿ ಬಂದಿತು. ನಾವು ಇದ್ದವರು ಹದಿನೆಂಟು ಜನ (ಮಕ್ಕಳೂ ಸೇರಿ) ಟಿಕೆಟ್ ತೆಗೆದು ಕೊಂಡು ರೈಲಿನ ಬಳಿ ಬಂದರೆ ನಮಗೆ ಒಳಗೆ ಕಾಲಿಡಲು ಅವಕಾಶವಿಲ್ಲ. ಆಗ ನಾವು ತಲೆ ಮೇಲೆ ಕೈ ಹೊತ್ತುಕೊಂಡು ಮುಂದೇನು ಎಂದು ನಮ್ಮ ನಮ್ಮಲ್ಲಿ ಮಾತನಾಡಿಕೊಳ್ಳುತ್ತಿದ್ದೆವು. ಆಗ ಅಲ್ಲಿಗೆ ಒಬ್ಬ ಕನ್ನಡಿಗ ಅಧಿಕಾರಿ ಬಂದರು. ಅವರ ಹೆಸರು ಇಲ್ಲಿ ಹೇಳುವುದು ಬೇಡ. ನಾವು ಕನ್ನಡ ಮಾತನಾಡುತ್ತಿದ್ದುದನ್ನು ಕೇಳಿಸಿಕೊಂಡು, 'ತಮ್ಮದು ಯಾವೂರು ಸಾರ್ ?' ಎಂದರು. ನನ್ನ ಕಿವಿಗಳು ನಿಮಿರಿನಿಂತವು. ನಾನು ಆ ಕಡೆ ತಿರುಗಿದೆ. 'ನಾನು ಕನ್ನಡಿಗ ಸಾರ್ ತಮ್ಮ ಮಾತು ಕೇಳಿ ತಮ್ಮನ್ನು ಮಾತನಾಡಿಸಲು ಬಂದೆ' ಎಂದರು. ನಮಗೆ ಅತ್ಯಂತ ಸಂತೋಷವಾಯಿತು. ನಮ್ಮ ವಿವರ—ನಮ್ಮ ಅವ್ಯವಸ್ಥೆ ಎಲ್ಲಾ ವಿವರಿಸಿದೆ. ಆಗ ಅವರು ಬನ್ನಿ ಎಂದು ತಮ್ಮ ಕೈಕೆಳಗಿನವರನ್ನು ನಮ್ಮ ಲಗ್ಗೇಜು ತೆಗೆದು ಕೊಳ್ಳಲು ಹೇಳಿ ಒಂದು ಡಬ್ಬಿಗೆ ತುರುಕಿದರು, ಹಾಗಾಗಿ ನಾವು ದೆಹಲಿ ತಲುಪಲು ಅನುಕೂಲವಾಯಿತು. ಈ ಸಂಗತಿ ಇಲ್ಲಿ ನಾನು ಪ್ರಸ್ತಾಪಿಸಿದ್ದೇಕೆ ಎಂದರೆ ವ್ಯಕ್ತಿ ವ್ಯಕ್ತಿಗಳನ್ನು ಗುರುತಿಸುವಲ್ಲಿ ಭಾಷೆ ಎಂತಹ ಪಾತ್ರ ವಹಿಸುತ್ತದೆ ಎಂಬುದನ್ನು ತಿಳಿಸಲು ಬಹುಶಃ ಈ ಭಾಷಾ ಬಾಂಧವ್ಯವೇ ಭಾರತದಲ್ಲಿ 'ಅನಂತತೆಯಲ್ಲಿ ಏಕತೆ' ಯನ್ನು ಸಾಧಿಸಲು ಇರುವ ಪ್ರಮುಖ ಅಂಶ ಎಂದೆನಿಸುತ್ತದೆ.

ಈ ಬಾಂಧವ್ಯ ಈಗ ಕಲುಷಿತವಾಗಿ ಭಾಷೆ ಒಂದು ಸಮಸ್ಯೆಯಾಗಿ ಮಾರ್ಪಟ್ಟಿದೆ. ಭಾರತದ ಮಟ್ಟಿಗೆ ಇದು ಬರಿಯ ಸಮಸ್ಯೆಯಷ್ಟೆ ಅಲ್ಲ, ಒಂದು ಶಾಪವೂ ಕೂಡ. ಹತ್ತು ಅವತಾರವೆತ್ತಿದ ಭಗವಂತ, ತನ್ನ ಅವತಾರಗಳಿಗೆ ಆರಿಸಿ ಕೊಂಡ ದೇಶ ಅಮೆರಿಕಾ ಅಲ್ಲ, ಯೂರೋಪ್ ಅಲ್ಲ, ರಷ್ಯಾ ಅಲ್ಲ, ಆಫ್ರಿಕಾ ಅಲ್ಲ, ಆಸ್ಟ್ರೇಲಿಯಾ ಅಲ್ಲ, ಅವನು ಆರಿಸಿಕೊಂಡದ್ದು ಭರತವರ್ಷವನ್ನೇ. ಆ ಪುಣ್ಯಾತ್ಮ ಹತ್ತು ಅವತಾರವೆತ್ತಿ ಹತ್ತು ಭಾಷೆಗಳನ್ನು ತರುವ ಬದಲು ನೂರಾರು ಭಾಷೆಗಳನ್ನು ತಂದುಬಿಟ್ಟ. ಭಾರತದ ೮೪೫ ಭಾಷೆಗಳಲ್ಲಿ ಸುಮಾರು ೭೨೦ ಭಾಷೆಗಳು ಒಂದು ಲಕ್ಷಕ್ಕೂ ಕಡಿಮೆ ಜನರು ಮಾತನಾಡುವ ಉಪಭಾಷೆಗಳು, ಉಳಿದ ನೂರಾಇಪ್ಪತ್ತು ಭಾಷೆಗಳಲ್ಲಿ ಭಾರತ ಸ್ವತಂತ್ರವಾದ ಮೇಲೆ ರಾಜ್ಯಾಂಗದಲ್ಲಿ, ಹಿಂದಿ, ಉರ್ದು, ಪಂಜಾಬಿ, ಬೆಂಗಾಲಿ, ತೆಲುಗು, ಕನ್ನಡ, ತಮಿಳು, ಮರಾಠಿ, ಗುಜರಾತಿ,

ಮಲೆಯಾಳಂ, ಒರಿಯಾ, ಅಸ್ಸಾಮಿ, ಕಾಶ್ಮೀರ, ಸಂಸ್ಕೃತ ಭಾಷೆಗಳನ್ನು ಪ್ರಾಂತ್ಯ ಭಾಷೆಗಳೆಂದು ಪರಿಗಣಿಸಲಾಯಿತು.

ಈ ಹದಿನಾಲ್ಕು ಭಾಷೆಗಳು ರಾಜ್ಯಾಂಗದಲ್ಲಿ ಸ್ಥಾನ ಪಡೆದರೂ ಇದು ಸಮಸ್ಯೆಯಾಗಿಯೇ ಉಳಿಯಿತು. ಅಖಂಡ ಭಾರತವನ್ನು ಕತ್ತರಿಸಿ ಪಾಕಿಸ್ತಾನ, ಹಿಂದೂಸ್ತಾನ ಮಾಡಿದಂತೆ, ಉಳಿದ ಭಾರತವನ್ನು ಪ್ರಾಂತ್ಯಗಳನ್ನಾಗಿ ವಿಂಗಡಿಸಲಾಯಿತು. ಹೀಗಾಗಿ ಇಡೀ ಭಾರತಕ್ಕೆ ಒಂದು ಭಾಷೆ ಬೇಕು. ಅದು ರಾಷ್ಟ್ರಭಾಷೆ ಆಗಬೇಕು ಎಂಬುದನ್ನು ಮನಗಂಡ ಗಾಂಧೀಜಿಯವರು ಲೋಕಮಾನ್ಯರೊಡನೆ ಸಮಾಲೋಚಿಸಿದರು. ಇದು ೧೯೨೫ರಲ್ಲಿ ಕಾಂಗ್ರೆಸ್ ಸಂಸ್ಥೆ ಹಿಂದಿಯನ್ನು ರಾಷ್ಟ್ರಭಾಷೆಯಾಗಿಸಲು ತೀರ್ಮಾನಿಸಲು ಸಾಧ್ಯವಾಯಿತು. ಆದರೆ ಆಗಲೂ ಇದಕ್ಕೆ ವಿರೋಧವಿತ್ತು. ಭಾರತ ಸ್ವತಂತ್ರವಾದ ಮೇಲೆ ೧೯೪೯ರಲ್ಲಿ ಹಿಂದಿಯನ್ನು ರಾಷ್ಟ್ರಭಾಷೆಯೆಂದು ಕಾಂಗ್ರೆಸ್ ಕಾರ್ಯಕಾರಿ ಸಮಿತಿಯು ತೀರ್ಮಾನಿಸಿತು. ಆಗ ಇದನ್ನು ಅನುಮೋದಿಸಿದವರು ಇದ್ದಂತೆ ಇದನ್ನು ಭಾಷಾ ದಬ್ಬಾಳಿಕೆ (Language Imperialism) ಎಂದು ಕರೆದವರೂ ಉಂಟು.

ಆದರೂ ಭಾರತ ರಾಜ್ಯಾಂಗದತ್ತವಾಗಿ ಹಿಂದಿ ರಾಷ್ಟ್ರಭಾಷೆ ಎಂದು ೧೯೬೫ರಲ್ಲಿ ಸರ್ಕಾರ ಸಾರಿತು. ಆಗ ದಕ್ಷಿಣದಲ್ಲಿ ಇದಕ್ಕೆ ವಿರೋಧ ವ್ಯಕ್ತವಾಯಿತು. ಬಾಂಧವ್ಯವನ್ನು ಕುದುರಿಸುವ ಭಾಷೆ ಹಿಂಸಾಚಾರಕ್ಕೆ ನಾಂದಿಹಾಡುವಂತಾಯಿತು. ಅನೇಕರು ಗುಂಡಿಗೆ ಬಲಿಯಾದರು. ಹಿಂದಿಯನ್ನು ವಿರೋಧಿಸಿ ಅನೇಕರು ಬೆಂಕಿ ಹಚ್ಚಿಕೊಂಡರು. ಕೋಟ್ಯಾನುಕೋಟಿ ರೂಪಾಯಿಗಳು ಸರ್ಕಾರಕ್ಕೆ ನಷ್ಟವಾದವು. ಭಾಷೆಯ ಹೆಸರಿನಲ್ಲಿ ಹಿಂಸೆ, ಕ್ರೌರ್ಯ, ದಬ್ಬಾಳಿಕೆ ನಡೆದು ಸೋದರರು ಯಾದವೀ ಕಲಹಕ್ಕೆ ಇಳಿಯುವಂತಾಯಿತು. ಈಗಲೂ ಈ ಕಿಡಿ ಇನ್ನೂ ಆರಿಲ್ಲ.

ಈ ಭಾಷಾ ಸಮಸ್ಯೆಯನ್ನು ಕುರಿತು ೧೯೬೮ರಷ್ಟು ಹಿಂದೆಯೇ ಹಂಪನಾ ವಿವೇಚಿಸಿದ್ದಾರೆ. ಈ ವಿವೇಚನೆಯನ್ನು ಹಿಂದೆ ಯುವಕ ವಿದ್ಯಾರ್ಥಿ ಸಮ್ಮೇಲನದವರು ಪುಸ್ತಕ ರೂಪದಲ್ಲಿ ಪ್ರಕಟಿಸಿದ್ದಾರೆ. ನಿಜಕ್ಕೂ ಇದು ಉಪಯುಕ್ತ ಕಾರ್ಯ ಎಂಬುದರಲ್ಲಿ ಸಂಶಯವಿಲ್ಲ.

'ಭಾರತದ ಭಾಷಾ ಸಮಸ್ಯೆ'ಯನ್ನು ಹಂಪನಾ ಅವರು (೧) ರಾಷ್ಟ್ರಭಾಷೆಯ ಹಿನ್ನೆಲೆ, (೨) ರಾಷ್ಟ್ರಭಾಷೆಯ ಇತಿಹಾಸ, (೩) ವಿರೋಧ ಹೊಸದಲ್ಲ, (೪) ಭಾಷಾವಾರು ಪ್ರಾಂತ್ಯ ರಚನೆ, (೫) ಕಿಡಿಹಾರಿತು, (೬) ಹಿಂದಿ ಏಕೆ ರಾಜಭಾಷೆಯಾಗಬೇಕು, (೭) ಹಿಂದಿ ಭಾಷೆಗೆ ಇರುವ ಅನುಕೂಲ, (೮) ಇಂಗ್ಲಿಷಿನ ಮೋಡಿ (೯) ಕನ್ನಡ ಏಕೆ ರಾಜಭಾಷೆಯಾಗಬಾರದು ಎಂಬುದಾಗಿ ವಿವೇಚಿಸಿದ್ದಾರೆ.

ಈ ವಿವೇಚನೆಯಲ್ಲಿ ಎರಡು ಅಂಶಗಳು ಸ್ಪಷ್ಟವಾಗಿವೆ. ಒಂದನೆಯದು : ಒಂದು ರಾಷ್ಟ್ರಕ್ಕೆ ತನ್ನದೇ ಆದ ಭಾಷೆ ಇರಬೇಕು. ಭಾರತದಂತಹ ರಾಷ್ಟ್ರಕ್ಕೆ ಆ ರಾಷ್ಟ್ರದ ಬಹುಜನರಾಡುವ ಭಾಷೆಯಾದ ಹಿಂದಿ ರಾಷ್ಟ್ರಭಾಷೆಯಾಗಬೇಕೆಂಬುದು. ಎರಡನೆಯದು : ಅನೇಕ ರಾಜ್ಯಗಳನ್ನು ಹೊಂದಿರುವ ಈ ರಾಷ್ಟ್ರದಲ್ಲಿ ಆಯಾ ರಾಜ್ಯ ಭಾಷೆಗೆ ಪ್ರಾಧಾನ್ಯತೆ ಇರಬೇಕೆಂಬುದು. ಹಿಂದಿಯೇ ರಾಷ್ಟ್ರ ಭಾಷೆ ಏಕಾಗಬೇಕೆಂಬು ದಕ್ಕೆ ಹಂಪನಾ ಅವರು ಅಂಕಿ ಅಂಶಗಳಿಂದ ಸ್ಪಷ್ಟಪಡಿಸಿದ್ದಾರೆ. ಭಾರತದ ಜನ ಸಂಖ್ಯೆಯಲ್ಲಿ ಸುಮಾರು ಶೇಕಡ ೬೦ರಷ್ಟು ಜನ ಹಿಂದಿಮಾತನಾಡುವವರಿದ್ದಾರೆ. ಅಲ್ಲದೆ ಪಂಜಾಬಿ, ಹಿಂದೂಸ್ಥಾನಿ. ಉರ್ದು ಇತ್ಯಾದಿ ಭಾಷೆಗಳೂ ಹಿಂದಿಯ ಸಂಪರ್ಕ ಹೊಂದಿವೆ, ಹೀಗಾಗಿ ಹಿಂದಿ ರಾಷ್ಟ್ರಭಾಷೆಯಾಗಲು ಸಾಧುವಾಗಿದೆ ಎಂಬ ಅಭಿ ಪ್ರಾಯವನ್ನು ಲೇಖಕರು ತಳೆದಿದ್ದಾರೆ. ಭಾರತದಂತಹ ರಾಷ್ಟ್ರಕ್ಕೆ ಹಿಂದಿ ರಾಷ್ಟ್ರ ಭಾಷೆಯಾಗುವುದು ಸೂಕ್ತವಾಗಿದೆ. ಆದರೆ ಹಿಂದಿ ಮಾತನಾಡುವ ಜನತೆ ಹಿಂದಿ ಮಾತನಾಡಲು ಬಾರದ ಜನರೊಂದಿಗೆ ಸಹನೆಯಿಂದಿದ್ದು ಕಲಿಸಿ ರಾಷ್ಟ್ರಕೊಂದು ಭಾಷೆಯನ್ನು ರೂಢಿಗೆ ತರುವಲ್ಲಿ ಶ್ರಮಿಸುವುದು ಯೋಗ್ಯ. ಅಲ್ಲದೆ ರಾಜ್ಯಭಾಷೆ ಗಳನ್ನು ಕಡೆಗಣಿಸದಿರುವುದೂ ಅಷ್ಟೇ ಅವಶ್ಯಕ. ಪ್ರತಿ ಪ್ರಾಂತ್ಯದಲ್ಲಿ ಆಯಾ ಪ್ರಾಂತೀಯ ಭಾಷೆಯಲ್ಲಿ ವ್ಯವಹಾರ ನಡೆಯುವುದು ಸೂಕ್ತ. ಸಂಪರ್ಕ ಭಾಷೆಯಾಗಿ ಇಂಗ್ಲಿಷ್ ರಾಷ್ಟ್ರಭಾಷೆಯಾಗಿ ಹಿಂದಿಯನ್ನು ರೂಢಿಸುವುದು ಸೂಕ್ತ ಎಂಬುದನ್ನು ನಿರೂಪಿಸಿದ್ದಾರೆ.

ಕನ್ನಡಿಗರಾದ ಹಂಪನಾ ಅವರು ತಮ್ಮ ತಾಯ್ನುಡಿಯ ಬಗೆಗೆ ವ್ಯಕ್ತಪಡಿಸಿರುವ ಕಾಳಜಿ ಸಹಜ. ಹಾಗಾಗಿ ಕನ್ನಡ ಆಡಳಿತ ಭಾಷೆಯಾಗಬೇಕು, ಬಡ ಜೋರೇ ಗೌಡರೇ ತುಂಬಿರುವ ಕನ್ನಡ ನಾಡಿನಲ್ಲಿ ಅವರ ಭಾಷೆಯಲ್ಲಿಯೇ ವ್ಯವಹಾರ ನಡೆಯ ಬೇಕೆಂದು ಸಕಾರಣವಾಗಿ ನಿರೂಪಿಸಿದ್ದಾರೆ.

"ರಾಜನುಡಿಯೆಂದೊಂದು ರಾಷ್ಟ್ರನುಡಿಯೆಂದೊಂದು
ದೇವನುಡಿಯೆಂದೊಂದು ಹತ್ತಿ ಜಗ್ಗಿ
ನಿರಿಸಿಟಲು ನಿಟಿಲೆಂದು ಮುದಿ ಮೂಳೆಮುರಿಯುತಿದೆ
ಕನ್ನಡಮ್ಮನ ಬೆನ್ನು ಬಳುಕಿ ಬಗ್ಗಿ."

ಎಂಬ ಕವಿ ವಾಣಿಯ ಹಿನ್ನೆಲೆಯಲ್ಲಿ ಕನ್ನಡದ ಮಕ್ಕಳು ಕಣ್ದೆರೆದು ಗರ್ಜಿಸಬೇಕೆಂಬು ದನ್ನು ಸೂಚಿಸಿದ್ದಾರೆ. ಅದಕ್ಕಾಗಿ ಕನ್ನಡಿಗರು ಹೋರಾಡಬೇಕೆಂಬ ಸೂಚನೆಯೂ ಇದೆ. ಕನ್ನಡಿಗ ಎಲ್ಲಿಯೇ ಇರಲಿ ಹೇಗೆಯೇ ಇರಲಿ ಅವನು ಕನ್ನಡಿಗನಾಗಿರಲಿ ಎಂಬ ಕವಿಯ ಹಾರೈಕೆ ಎಲ್ಲ ಕನ್ನಡಿಗರ ಹಾರೈಕೆ ಎಂಬುದನ್ನು ಸೂಚಿಸಿದ್ದಾರೆ.

ನಮ್ಮ ಭಾಷೆ, ನಮ್ಮ ದೇಶ. ನಮ್ಮ ನಾಗರಿಕತೆ ಬಗೆಗೆ ನಮಗೆ ತಿಳಿಯದಂತೆ ಕೀಳರಿಮೆ ನಮ್ಮನ್ನು ಕಾಡುತ್ತಿದೆ. ಅದನ್ನು ತೊರೆದು ಇದು ನನ್ನ ರಾಷ್ಟ್ರ, ಇದು ನನ್ನ ರಾಷ್ಟ್ರಭಾಷೆ, ಇದು ನನ್ನ ನೆಲ, ಇದು ನನ್ನ ನಾಗರಿಕತೆ ಎಂಬ ಅಭಿಮಾನದಿಂದ ಬೀಗಿ ಮೆರೆಯುವುದನ್ನು ಭಾರತೀಯರು ಕಲಿಯಬೇಕಾಗಿದೆ.

ಪರಭಾಷೆಯಾದ ಇಂಗ್ಲಿಷ್ ಭಾಷೆಯನ್ನು ತೆಗೆದು ಸಮರ್ಥವಾಗಿ ನಮ್ಮ ವ್ಯವಹಾರವನ್ನು ಹಿಂದಿ ಹಾಗೂ ರಾಜ್ಯ ಭಾಷೆಗಳಲ್ಲಿ ನಡೆಸುವ ವಾತಾವರಣವನ್ನು ರೂಪಿಸಬೇಕಾದುದು ನಮ್ಮೆಲ್ಲರ ಹೊಣೆಯಾಗಿದೆ. ಒಂದೇ ತಾಯಿ ಮಕ್ಕಳಾದ ಭಾರತೀಯರು ಭಾಷೆಯ ಬಗ್ಗೆ ಬಂಡಾಯವೆದ್ದು ದುರಭಿಮಾನದಿಂದ ಮೆರೆಯುವುದನ್ನು ಬಿಟ್ಟು, ಸೋದರ ಭಾಷೆಗಳೊಂದಿಗೆ ಬದುಕಿ ರಾಷ್ಟ್ರದ ಭಾಷೆಯನ್ನು ರೂಪಿಸಬೇಕಾದುದು ಅತ್ಯವಶ್ಯಕ.

ಡಾ॥ ಹೆಚ್. ಎಂ. ಮಹೇಶ್ವರಯ್ಯ

## ಭಾಷಾವಿಜ್ಞಾನಿಯಾಗಿ

ಕನ್ನಡದಲ್ಲಿ ಭಾಷಾವಿಜ್ಞಾನವನ್ನು ಪರಿಚಯಿಸಿ ಬೆಳೆಸಿದ ವ್ಯಕ್ತಿಗಳನ್ನು ಎರಡು ಪಂಗಡಗಳಾಗಿ ವರ್ಗೀಕರಿಸಬಹುದು. ಮೊದಲನೆಯ ಪಂಗಡದವರು ಕನ್ನಡವನ್ನು ಬೋಧನೆ ಹಾಗೂ ಸಂಶೋಧನೆಯ ವೃತ್ತಿಯನ್ನಾಗಿಟ್ಟುಕೊಂಡು ಭಾಷಾವಿಜ್ಞಾನದ ಕೆಲಸ ಮಾಡಿದರೆ, ಎರಡನೆಯ ಪಂಗಡ ಭಾಷಾವಿಜ್ಞಾನವನ್ನೇ ಬೋಧನೆ ಹಾಗೂ ಸಂಶೋಧನೆಯ ವೃತ್ತಿಯನ್ನಾಗಿಟ್ಟುಕೊಂಡು ಭಾಷಾವಿಜ್ಞಾನದ ಕೆಲಸ ಮಾಡಿದ್ದಾರೆ. ತೀನಂಶ್ರೀ, ಪ್ರೊ. ಮರಿಯಪ್ಪಭಟ್ಟ, ಆರ್. ಸಿ. ಹಿರೇಮಠ. ಎಂ. ಚಿದಾನಂದ ಮೂರ್ತಿ, ಬಿ. ರಾಮಚಂದ್ರರಾವ್, ಸಿ. ಓಂಕಾರಪ್ಪ, ಕೆ. ಜಿ. ಶಾಸ್ತ್ರಿ, ರಾ. ಯ. ಧಾರವಾಡಕರ್, ಸಂಗಮೇಶ ಸವದತ್ತಿಮಠ ಅವರ ಜೊತೆಗೆ ಹಂಪನಾ ಅವರೂ ಕನ್ನಡ ಅಧ್ಯಾಪಕರಾಗಿ ಭಾಷಾವಿಜ್ಞಾನದ ಕೆಲಸ ಮಾಡಿದ್ದಾರೆ. ಇವರೆಲ್ಲರೂ ಮೊದಲನೇ ಪಂಗಡಕ್ಕೆ ಸೇರಿದವರಾದರೆ, ಎರಡನೇ ಪಂಗಡಕ್ಕೆ ಸೇರಿದ, ಭಾಷಾವಿಜ್ಞಾನವನ್ನೇ ವೃತ್ತಿಯಾಗಿಟ್ಟುಕೊಂಡು ಕನ್ನಡದ ಕೆಲಸ ಮಾಡಿದ ವ್ಯಕ್ತಿಗಳಲ್ಲಿ ಕೆ. ಕುಶಾಲಪ್ಪಗೌಡ. ಹೆಚ್. ಎಸ್. ಬಿಳಿಗಿರಿ, ಜಯವಂತಕುಳ್ಳಿ, ಡಿ. ಎನ್. ಶಂಕರಭಟ್ಟ, ಬಿ. ಬಿ. ರಾಜಪುರೋಹಿತ, ಯು. ಪಿ. ಉಪಾಧ್ಯಾಯ, ಎ. ಎಸ್. ಆಚಾರ್ಯ. ಹಾ. ಮಾ. ನಾಯಕ, ವಿಲ್ಯಂ ಮಾಡ್ತಾ ಹಾಗೂ ಅನೇಕ ಜನ ಯುವಕರಿದ್ದಾರೆ.

ತೀನಂಶ್ರೀಯವರು ಕನ್ನಡದಲ್ಲಿ ಭಾಷಾವಿಜ್ಞಾನದ ಬೆಳವಣಿಗೆಗೆ ಕಾರಣರಾಗಿದ್ದಾರೆ ಎಂದರೆ ತಪ್ಪಾಗಲಾರದು. ಅನೇಕ ಶಿಷ್ಯರಿಗೆ ಭಾಷಾವಿಜ್ಞಾನದ ಪರಿಚಯ ಮಾಡಿಸಿ. ಕೆಲಸ ಮಾಡಲು ಪ್ರೇರಣೆ ನೀಡಿದ್ದಾರೆ. ಹಂಪನಾ ಅವರೂ ಕೂಡ ತೀನಂಶ್ರೀಯವರಿಂದಲೇ ಪ್ರೇರಣೆಗೊಂಡು ಭಾಷಾವಿಜ್ಞಾನದಲ್ಲಿ

ಆಸಕ್ತಿ ಬೆಳೆಸಿಕೊಂಡವರು. ಆರ್. ವಿ. ಜಹಗೀರದಾರರ 'ಶಾರದೆಯ ಸಂಸಾರ' ರಾ. ಯ. ಧಾರವಾಡಕರರ 'ಕನ್ನಡ ಭಾಷಾಶಾಸ್ತ್ರ' ಗ್ರಂಥಗಳು ಪ್ರಕಟಗೊಂಡು ಭಾಷೆಯ ಅಧ್ಯಯನದ ಬಗೆಗೆ ಕನ್ನಡಿಗರ ಗಮನ ಸೆಳೆದಿದ್ದವು. ಹಂಪನಾ ಅವರ 'ದ್ರಾವಿಡ ಭಾಷಾವಿಜ್ಞಾನ', ಎಂ. ಚಿದಾನಂದಮೂರ್ತಿಯವರ 'ಭಾಷಾವಿಜ್ಞಾನದ ಮೂಲತತ್ವಗಳು' ಎಂಬ ಗ್ರಂಥಗಳು ೧೯೬೬ ರಲ್ಲಿ ಪ್ರಕಟಗೊಂಡು ಕನ್ನಡಿಗರಿಗೆ ಭಾಷಾವಿಜ್ಞಾನದ ಹೊಸ ಜಗತ್ತನ್ನು ಪರಿಚಯಿಸುವುದರ ಜೊತೆಗೆ ಇದೊಂದು ವಿಜ್ಞಾನವಾಗಿ ಹೇಗೆ ಬೆಳೆದಿದೆ ಎಂಬುದನ್ನು ತೋರಿಸಿಕೊಟ್ಟವು. ಹಂಪನಾ ಅವರು 'ದ್ರಾವಿಡ ಭಾಷಾವಿಜ್ಞಾನ' ಎಂಬ ಗ್ರಂಥವನ್ನು ಪ್ರಕಟಿಸುವುದರ ಮೂಲಕ ಕನ್ನಡದಲ್ಲಿ ಭಾಷಾವಿಜ್ಞಾನದ ಬೆಳವಣಿಗೆಗೆ ಕಾರಣರಾದ ವ್ಯಕ್ತಿಗಳಲ್ಲಿ ಬಹಳ ಮುಖ್ಯವಾದ ವ್ಯಕ್ತಿಯಾಗಿದ್ದಾರೆ.

ಭಾರತದಲ್ಲಿ ೧೯೫೦ ರಿಂದ ೧೯೬೫ ರವರೆಗೆ ಅಮೇರಿಕೆಯ ಫೋರ್ಡ್ ಪ್ರತಿಷ್ಠಾನ ಹಾಗೂ ವಿಶ್ವವಿದ್ಯಾಲಯದ ಧನಸಹಾಯ ಆಯೋಗ ಭಾಷಾವಿಜ್ಞಾನದ ಅನೇಕ ಬೇಸಿಗೆ ಶಿಬಿರಗಳನ್ನು ನಡೆಸುವಲ್ಲಿ ಧಾರಾಳ ಆರ್ಥಿಕ ಸಹಾಯ ಮಾಡಿದವು. ಭಾರತದ ಅನೇಕ ಭಾಷಾ ಅಧ್ಯಾಪಕರು ಈ ಅವಕಾಶವನ್ನು ಉಪಯೋಗಿಸಿಕೊಂಡು ಭಾಷಾವಿಜ್ಞಾನದ ಜ್ಞಾನ ಸಂಪಾದಿಸಿಕೊಂಡರು. ಅನೇಕರು ಫೋರ್ಡ್ ಪ್ರತಿಷ್ಠಾನದ ನೆರವಿನಿಂದ ಅಮೇರಿಕೆಗೆ ಹೋಗಿ ಅಲ್ಲಿಯೂ ಭಾಷಾವಿಜ್ಞಾನದ ಜ್ಞಾನಸಂಪಾದಿಸಿಕೊಂಡು ಬಂದರು. ಹಂಪನಾ ಅವರೂ ಭಾರತದಲ್ಲಿ ನಡೆದ ಒಂದೆರಡು ಭಾಷಾವಿಜ್ಞಾನದ ಬೇಸಿಗೆ ಶಿಬಿರಗಳಲ್ಲಿ ಭಾಗವಹಿಸಿ ಭಾಷಾವಿಜ್ಞಾನದ ಜ್ಞಾನವನ್ನು ಸಂಪಾದಿಸಿಕೊಂಡರು. ಸುನೀತಕುಮಾರ ಚಟರ್ಜಿ, ಎಸ್. ಎಮ್. ಕತ್ರೆ, ಎಚ್. ಎ. ಗ್ಲೀಸನ್, ಭ. ಕೃಷ್ಣಮೂರ್ತಿಯಂತಹ ವಿದ್ವಾಂಸರ ಪಾಠಪ್ರವಚನ ಕೇಳುವ ಅವಕಾಶ ಅವರಿಗೆ ದೊರೆಯಿತು. ಹೀಗಾಗಿ ಭಾಷಾವಿಜ್ಞಾನದ ಬಗ್ಗೆ ಹೆಚ್ಚು ತಿಳಿದುಕೊಳ್ಳಲು ಹಾಗೂ ಆಳವಾಗಿ ಅಧ್ಯಯನ ಮಾಡಲು ಸಹಾಯಕವಾಯಿತು. ಹಂಪನಾ ಅವರ ಎಲ್ಲ ಗ್ರಂಥಗಳಲ್ಲೂ ಅವರ ಆಳವಾದ ಅಧ್ಯಯನ ವ್ಯಕ್ತವಾಗಿದೆ.

ಹಂಪನಾ ಅವರು ೧೯೬೬ ರಲ್ಲಿ ಪ್ರಕಟಿಸಿದ 'ದ್ರಾವಿಡ ಭಾಷಾವಿಜ್ಞಾನ' ಎಂಬ ಗ್ರಂಥದಲ್ಲಿ ದ್ರಾವಿಡ ಭಾಷೆಗಳಿಗೆ ಸಂಬಂಧಿಸಿದಂತೆ ನಡೆದ ಅಧ್ಯಯನ ಶೋಧನೆಗಳನ್ನೆಲ್ಲ ಒಂದು ಕಡೆ ಕ್ರೋಢೀಕರಿಸಿ ಅಚ್ಚುಕಟ್ಟಾಗಿ ನಿರೂಪಿಸಿದ್ದಾರೆ. ನಲವತ್ತೆಂಟು ಅಧ್ಯಾಯಗಳಲ್ಲಿ ದ್ರಾವಿಡ ಜನಾಂಗ, ದ್ರಾವಿಡ ಭಾಷೆಗಳ ಪರಿಚಯ, ಲಿಪಿಗಳ ವಿಕಾಸ, ವಿಭಕ್ತಿ ಪ್ರತ್ಯಯ, ಸರ್ವನಾಮ, ಲಿಂಗ, ವಚನ, ಗುಣವಾಚಕ ಮುಂತಾದ ವಿವರಗಳನ್ನಲ್ಲದೆ, ಪೂರ್ವದ್ರಾವಿಡ ಧ್ವನಿ ವ್ಯವಸ್ಥೆ ಹಾಗೂ ಪ್, ತ್, ಟ್, ರ್, ಱ್, ಕ್, ಚ್, ಳ್, ವ್, ಬ್ ಧ್ವನಿಗಳ ಚರಿತ್ರೆಯನ್ನು ಸಂಕ್ಷಿಪ್ತವಾಗಿ ಚರ್ಚಿಸಿದ್ದಾರೆ. ಈ ಗ್ರಂಥದಲ್ಲಿ ಅವರ ಆಳವಾದ ಅಧ್ಯಯನ, ವಿಷಯ ಸಂಗ್ರಹದಲ್ಲಿ

ತೋರಿದ ಜಾಣ್ಮೆ, ನಿರೂಪಿಸುವಲ್ಲಿ ಅವರ ಬರಹ ಸಾಮರ್ಥ್ಯ ಪರಿಚಯವಾಗುತ್ತದೆ. ಇಂಥ ಒಂದು ಗ್ರಂಥವನ್ನು ರಚಿಸಿ ಕನ್ನಡಿಗರಿಗೆ, ದ್ರಾವಿಡ ಕ್ಷೇತ್ರದಲ್ಲಿ ನಡೆದ ಸಮಗ್ರ ಅಧ್ಯಯನದ ಪರಿಚಯ ಮಾಡಿಸಿದಂತಾಗಿದೆ. ದೇಜಗೌ ಮುನ್ನುಡಿಯಲ್ಲಿ ಬರೆದಂತೆ ವಿದ್ಯೆಕಲಿಸಿದ ಗುರು ತೀನಂಶ್ರೀಯವರಿಗೆ ಅರ್ಪಿಸುವ ಮೂಲಕ ಹಂಪನಾ ಭಾಷಾ ಋಣ ಹಾಗೂ ಗುರು ಋಣವನ್ನು ತೀರಿಸಿದ್ದಾರೆ. ಈ ಕೃತಿಗೆ ರಾಜ್ಯ ಸಾಹಿತ್ಯ ಅಕಾದೆಮಿ ಪ್ರಶಸ್ತಿ ದೊರೆತು, ಅವರ ಕೆಲಸವನ್ನು ಕನ್ನಡಿಗರು ಗುರುತಿಸಿದಂತಾಗಿದೆ. ಈಗಲೂ ಈ ಗ್ರಂಥ ಕನ್ನಡ ಎಂ. ಎ. ಓದುವ ರಾಜ್ಯದ ಎಲ್ಲ ವಿಶ್ವವಿದ್ಯಾಲಯಗಳ ವಿದ್ಯಾರ್ಥಿಗಳಿಗೆ ಪಠ್ಯ ಗ್ರಂಥವಾಗಿದೆ.

'ದ್ರಾವಿಡ ಭಾಷಾವಿಜ್ಞಾನ' ಪ್ರಕಟವಾಗಿ ಈಗ ೨೦ ವರ್ಷಗಳಾಗಿವೆ. ಈಗ ನಿಂತು ಈ ಗ್ರಂಥವನ್ನು ನೋಡಿದರೆ ಅನೇಕ ಕುಂದು ಕೊರತೆಗಳು ಕಾಣುತ್ತವೆ. ಹಾಗೆ ನೋಡಿದರೆ ಯಾವುದೇ ಗ್ರಂಥ ಪರಿಪೂರ್ಣವಿಲ್ಲ. ಅನೇಕ ಅರೆ ಕೊರೆಗಳು ಇದ್ದೇ ಇರುತ್ತವೆ. ಈಗ ದ್ರಾವಿಡಕ್ಕೆ ಸಂಬಂಧಿಸಿದಂತೆ ಅನೇಕ ಶೋಧಗಳಾಗಿವೆ, ಕುಡುಂಬ, ಇರುಳ ಮುಂತಾದ ಪ್ರಭೇದಗಳನ್ನು ದ್ರಾವಿಡ ಭಾಷೆಗಳಾಗಿ ಗುರುತಿಸಲಾಗಿದೆ. ದ್ರಾವಿಡ ಭಾಷೆಗಳ ಅಧ್ಯಯನಕ್ಕೆ ಸಂಬಂಧಿಸಿದಂತೆ ಅನೇಕ ಗ್ರಂಥಗಳು ಪ್ರಕಟವಾಗಿವೆ. ಈಗ ಇನ್ನೊಂದು ಹೊಸ ಗ್ರಂಥವನ್ನು ರಚಿಸುವ ಅವಶ್ಯಕತೆ ಇದೆ. ದಕ್ಷಿಣರಾಜ್ಯದ ಅನೇಕ ವಿಶ್ವವಿದ್ಯಾಲಯಗಳು ಈ ನಿಟ್ಟಿನಲ್ಲಿ ಮಹತ್ತರ ಕಾರ್ಯ ಮಾಡಿವೆ.

ಹಂಪನಾ ೧೯೬೮ರಲ್ಲಿ 'ಭಾಷಾವಿಜ್ಞಾನ' ಎಂಬ ಮತ್ತೊಂದು ಗ್ರಂಥವನ್ನು ಪ್ರಕಟಿಸಿದ್ದಾರೆ. ಇದರಲ್ಲಿ ೨೩ ಅಧ್ಯಾಯಗಳಿವೆ. ಇದು ಭಾಷಾವಿಜ್ಞಾನವನ್ನು ಕನ್ನಡಿಗರಿಗೆ ಪರಿಚಯಿಸಲು ಬರೆದಿರುವಂತಹ ಗ್ರಂಥ. ಭಾಷಾವಿಜ್ಞಾನದ ಶಾಖೆಗಳು. ಭಾಷೆ, ಸನ್ನೆ, ಸಂಕೇತ, ಭಾಷಾಮೂಲದ ಸಿದ್ಧಾಂತ, ಭಾಷೆಯ ಬೆಳವಣಿಗೆ, ಭಾಷಾಸ್ವೀಕರಣ, ಕೃತಕಭಾಷೆ ಹೀಗೆ ಹಲವಾರು ಅಧ್ಯಾಯಗಳಿವೆ. ಈ ಗ್ರಂಥ ಹಂಪನಾ ಅವರ 'ದ್ರಾವಿಡ ಭಾಷಾ ವಿಜ್ಞಾನ' ಗ್ರಂಥದಷ್ಟು ಪ್ರಸಿದ್ಧಿಯನ್ನು ಪಡೆಯಲಿಲ್ಲ. ಇದು ಭಾಷಾವಿಜ್ಞಾನದ ಶಾಖೆಗಳಾದ ವರ್ಣನಾತ್ಮಕ, ಐತಿಹಾಸಿಕ, ತೌಲನಿಕ ಭಾಷಾವಿಜ್ಞಾನದ ಶಾಖೆಗಳನ್ನು ಪರಿಚಯ ಮಾಡಲು ಪ್ರಯತ್ನಿಸಿದಂತಹ ಗ್ರಂಥವಾದರೂ ವರ್ಣನಾತ್ಮಕ ಭಾಷಾವಿಜ್ಞಾನದ ಮೂಲಭೂತ ಶಾಖೆಗಳಾದ ಧ್ವನಿವಿಜ್ಞಾನ, ಧ್ವನಿಮಾವಿಜ್ಞಾನ, ಆಕೃತಿಮಾವಿಜ್ಞಾನ, ವಾಕ್ಯವಿಜ್ಞಾನದ ಬಗ್ಗೆ ಸ್ಪಷ್ಟ ಮಾಹಿತಿಯನ್ನು ನೀಡುವುದಿಲ್ಲ. ಹಾಗಾಗಿಯೇ ಇದು ಅಷ್ಟು ಜನಪ್ರಿಯತೆಯನ್ನು ಪಡೆಯಲಿಲ್ಲವೆನಿಸುತ್ತದೆ.

ಹಂಪನಾ ಅವರು 'ಭಾಷೆ' ಎಂಬ ಗ್ರಂಥವನ್ನು ೧೯೭೩ರಲ್ಲಿ ಪ್ರಕಟಿಸಿದರು. ಭಾಷೆಯನ್ನು ಕುರಿತು ನೂರು ವಿಚಾರಗಳನ್ನು ಆ ಗ್ರಂಥದಲ್ಲಿ ಚೊಕ್ಕಟವಾಗಿ ಬರೆದಿದ್ದಾರೆ. ಇದರಲ್ಲಿ ಭಾಷೆಯ ಬಗೆಗಿನ ಅವರ ಆಳವಾದ ಅಧ್ಯಯನ ವ್ಯಕ್ತವಾಗಿದೆ.

ಒಂದೇ ವಿಷಯವನ್ನು ಕುರಿತು ಬೇರೆ ಬೇರೆ ಮೂಲದಿಂದ ವಿಷಯ ಸಂಗ್ರಹಿಸಿ ಅದನ್ನು ಸುಲಭವಾಗಿ ಓದುಗರಿಗೆ ಅರ್ಥವಾಗುವಂತೆ ಬರೆದಿರುವುದು ನಿಜಕ್ಕೂ ದೊಡ್ಡ ಸಾಹಸ. ಹಂಪನಾ ಅವರ ಯಾವುದೇ ಬರಹವಿರಲಿ ಸ್ಪಷ್ಟವಾಗಿ, ಸರಳವಾಗಿ, ಸ್ಫುಟವಾಗಿ ಬರೆಯುತ್ತಾರೆ. ಅವರ 'ದ್ರಾವಿಡ ಸಂಖ್ಯಾವಾಚಕಗಳು' ಎಂಬ ಪುಟ್ಟ ಗ್ರಂಥ ಕೂಡ ಅವರ ಸ್ಪಷ್ಟ ಬರಹಕ್ಕೆ ಹಿಡಿದ ಕನ್ನಡಿಯಾಗಿದೆ.

೧೯೮೦ರಲ್ಲಿ ಪ್ರಕಟಿಸಿದ 'ಭಾಷಾವಿಜ್ಞಾನಿಗಳು' ಎಂಬ ಗ್ರಂಥದಲ್ಲಿ ಪ್ರಪಂಚದ ಹೆಸರಾಂತ ಭಾಷಾವಿಜ್ಞಾನಿಗಳನ್ನು ಕನ್ನಡ ಲೋಕಕ್ಕೆ ಪರಿಚಯಿಸಿದ್ದಾರೆ. ಈ ಗ್ರಂಥದಲ್ಲಿ ಭಾಷಾವಿಜ್ಞಾನಿಗಳ ಜೀವನ ವಿವರವನ್ನಷ್ಟೇ ಕೊಡದೆ ಅವರ ಕಾರ್ಯ ಸಾಧನೆಗಳು, ಲೇಖನ, ಕೃತಿಗಳ ಸಮೀಕ್ಷೆಯನ್ನೂ ಮಾಡಿದ್ದಾರೆ. ಇಂಗ್ಲಿಷಿನಲ್ಲಿ ದೊರೆಯುವ ವಿಪುಲ ಸಾಮಗ್ರಿಯನ್ನು ಅಚ್ಚುಕಟ್ಟಾಗಿ ಬಳಸಿಕೊಂಡಿದ್ದಾರೆ. ೭೦ ಜನ ಭಾಷಾವಿಜ್ಞಾನಿಗಳಲ್ಲಿ ಎಡ್ವರ್ಡ ಸಫೀರ್, ಫರ್ಡಿನಂಡ್ ಡಿ. ಸಸೂರ್, ಥಾಮಸ್ ಬರೋ, ಎಮಿನೋ, ಫ್ರಾಂಝುಬಾಪ್, ರಾಸ್ಕ್, ಬ್ಲೂಮ್‌ಫೀಲ್ಡ್, ಡೇನಿಯಲ್ ಜೋನ್ಸ್ ಅಲ್ಲದೆ ಶೀನಂಶ್ರೀ, ಎಲ್. ವಿ. ರಾಮಸ್ವಾಮಿ ಅಯ್ಯರ್ ಮುಂತಾದವರ ಪರಿಚಯಗಳು ಅತ್ಯಂತ ಆತ್ಮೀಯವಾಗಿವೆ. ಇವು ಅನುವಾದಗಳಲ್ಲ. ಆತ್ಮೀಯ ಬರಹಗಳೆನಿಸುತ್ತವೆ. ಹಂಪನಾ ಅವರ ಬರಹ ಸಾಮರ್ಥ್ಯ ಅನೇಕ ಸಾರಿ ಆಶ್ಚರ್ಯ ತರಿಸುವಷ್ಟು ಸರಳ, ಸುಂದರವಾಗಿರುತ್ತದೆ.

ಹಂಪನಾ ಕನ್ನಡದಲ್ಲಿ ಭಾಷಾವಿಜ್ಞಾನಕ್ಕೆ ಸಂಬಂಧಿಸಿದಂತೆ ಬಹಳ ಕೆಲಸ ಮಾಡಿದ್ದಾರೆ. ಆದರೂ ಹಂಪನಾರವರಿಂದ ಇನ್ನೂ ಹೆಚ್ಚು ಕೆಲಸ ನಿರೀಕ್ಷಿಸಿದವರಿಗೆ ನಿರಾಶೆಯಾಗದೆ ಇರಲಾರದು. ಆಳವಾಗಿ ಅಭ್ಯಾಸಿಸಬಲ್ಲ, ಅದನ್ನು ಅಚ್ಚುಕಟ್ಟಾಗಿ ಬರೆಯಬಲ್ಲ ಹಂಪನಾ ಇನ್ನೂ ಹೆಚ್ಚು ಕೆಲಸ ಮಾಡಬಹುದಿತ್ತು. ಹಂಪನಾ ಅವರಿಗೆ ಸಾಹಿತ್ಯ, ಸಂಸ್ಕೃತಿಗಳ ಅಧ್ಯಯನದ ಜೊತೆಗೆ ಭಾಷಾವಿಜ್ಞಾನ ಕೂಡ ಒಂದು ಹವ್ಯಾಸ. ಯಾವುದೇ ವ್ಯಕ್ತಿ ತನ್ನನ್ನು ಒಂದು ಕ್ಷೇತ್ರಕ್ಕೆ ಸಂಪೂರ್ಣ ಅರ್ಪಿಸಿಕೊಂಡಾಗ ಮಾತ್ರ ಅವನಿಂದ ಹೆಚ್ಚು ಕೊಡುಗೆಗಳನ್ನು ನಿರೀಕ್ಷಿಸಲು ಸಾಧ್ಯ. ದ್ರಾವಿಡ ಕ್ಷೇತ್ರಕ್ಕೆ ಸಂಬಂಧಿಸಿದಂತೆ ಭಾರತದಲ್ಲಿ ಈಗಾಗಲೇ ಸಾಕಷ್ಟು ಕೆಲಸ ನಡೆದಿದೆ. ಭಾರತದ ಭಾಷಾವಿಜ್ಞಾನ ಸಂಸ್ಥೆ ; ಕೇರಳದ ದ್ರಾವಿಡ ಭಾಷಾವಿಜ್ಞಾನ ಸಂಘ ಈಗಾಗಲೇ ಅನೇಕ ಸಮ್ಮೇಳನ, ವಿಚಾರ ಸಂಕಿರಣಗಳನ್ನು ನಡೆಸಿವೆ. ಈ ವಿಚಾರ ಸಂಕಿರಣ, ಸಮ್ಮೇಳನಗಳಲ್ಲಿ ಸಕ್ರಿಯವಾಗಿ ಪಾಲ್ಗೊಂಡು ಭಾಷಾ ಸಂಶೋಧನೆಗಳಲ್ಲಿ ಭಾಗವಹಿಸಿದ್ದರೆ ಕನ್ನಡ ಭಾಷೆಗೆ ಅವರಿಂದ ಅನೇಕ ಅಮೂಲ್ಯ ಕೊಡುಗೆಗಳು ದೊರೆಯುತ್ತಿದ್ದವು.

ಚಂದ್ರಗೌಡ ಕುಲಕರ್ಣಿ

# ಜಯನೃಪ ಕಾವ್ಯ ಸಂಗ್ರಹ

ಗ್ರಂಥ ಸಂಪಾದನೆ ಮಾಡುವುದು ಪ್ರಯಾಸದ ಕೆಲಸ. ಅಂತಹ ಸಂಪಾದಿತ ಕೃತಿಯಲ್ಲಿಯ ಸತ್ವವನ್ನಷ್ಟೇ ಸಾರವತ್ತಾಗಿ ಹಿಡಿದಿಡುವ ಪ್ರಯತ್ನವೇ ಸಂಗ್ರಹ. "ಕಾವ್ಯಗಳನ್ನು ಸಂಗ್ರಹಿಸುವುದರ ಪರಮೋದ್ದೇಶವೆಂದರೆ ಕವಿ ಕೃತಿಗಳ ನಿಜ ಸ್ವರೂಪವನ್ನು ಒಂದು ಪರಿಮಿತವ್ಯಾಪ್ತಿಯಲ್ಲಿ ತೋರಿಸಿಕೊಡುವುದು".* ಸಂಪಾದಿತ ಕೃತಿಗೆ ಸಿಗುವ ಗೌರವ ಈ ಸಂಗ್ರಹಗಳಿಗೆ ಸಿಗುತ್ತಿಲ್ಲವಾದರೂ ಉದ್ದೇಶದ ದೃಷ್ಟಿಯಿಂದ ಈ ಸಂಗ್ರಹಗಳು ಅತ್ಯಗತ್ಯ. ಅನಿವಾರ್ಯ ಆಗಬೇಕಾದ ಕಾರ್ಯಗಳು. ಕವಿ ಮತ್ತು ಕೃತಿಗಳಸೂಕ್ಷ್ಮ ಪರಿಚಯವನ್ನು ಈ ಸಂಗ್ರಹಗಳು ಮಾಡಿಕೊಡುತ್ತವೆ. ಅಂತೆಯೇ ಇಂದು ಮೂಲ ಕೃತಿಗಿಂತಲೂ ಸಂಗ್ರಹಗಳು ಜನಪ್ರಿಯತೆ ಪಡೆದಿವೆ. ಅಂತಹ ಸಂಗ್ರಹಗಳಲ್ಲಿ ಅತ್ಯುತ್ತಮ ಸಂಗ್ರಹವೆಂದು ಹೇಳಲಾಗದಿದ್ದರೂ 'ಜಯನೃಪ ಕಾವ್ಯ ಸಂಗ್ರಹ' ಒಂದು ಒಳ್ಳೆಯ ಮತ್ತು ವೈಶಿಷ್ಟ್ಯಪೂರ್ಣ ಸಂಗ್ರಹ.

ಭರತೇಶ ವೈಭವ. ನೇಮಿನಾಥ ಪುರಾಣ, ಶಾಂತಿ ಪುರಾಣ, ಪಂಪಭಾರತ ಸಂಗ್ರಹ ಮುಂತಾದ ಕೃತಿಗಳನ್ನು ಸ್ವತಂತ್ರವಾಗಿ/ ಇತರರೊಂದಿಗೆ ಸಂಪಾದಿಸಿರುವ/ಸಂಗ್ರಹಿಸಿರುವ ಹಂಪನಾ ಅವರು 'ಜಯನೃಪ ಕಾವ್ಯ ಸಂಗ್ರಹ'ವನ್ನು ಸಮರ್ಥ ರೀತಿಯಲ್ಲಿ ಸಂಗ್ರಾಹ್ಯಗೊಳಿಸಿದ್ದಾರೆ. ೧೬ ಸಂಧಿಗಳ. ಸಾವಿರಕ್ಕೂ ಮಿಕ್ಕಿರುವ—ಪರಿವರ್ಧಿನಿ ಷಟ್ಪದಿ—ಪದ್ಯಗಳ ಮೂಲ ಕೃತಿಯನ್ನು ೨೨೬ ಪದ್ಯಗಳಲ್ಲಿ ಸಂಕ್ಷೇಪಗೊಳಿಸಿದ್ದಾರೆ.

---

* ಸ್ನೇಹಕಾರ್ತೀಕ–ಡಾ|| ಎಂ. ಎಂ. ಕಲಬುರ್ಗಿ, ಪು. ೩೪೩

ಈ ಸಂಗ್ರಹದ ವೈಶಿಷ್ಟ್ಯವೆಂದರೆ ಮಂಗರಸನ ಸಮಗ್ರ ಕೃತಿಗಳ ಅಧ್ಯಯನದ ವ್ಯಾಪ್ತಿಯನ್ನೊಳಗೊಂಡ ಮೌಲಿಕವಾದ "ಕರ್ನಾಟಕ ವಿಶ್ವವಿದ್ಯಾಲಯದ ಪ್ರಾಧ್ಯಾಪಕರಾಗಿದ್ದ ಮಹನೀಯರೊಬ್ಬರು ಅವರು ಹೊರತಲು ಉದ್ದೇಶಿಸಿದ್ದ ಸಾಹಿತ್ಯ ಚರಿತ್ರೆಗೆ ಈ ಕವಿಯ ಕೃತಿಗಳ ವಿಮರ್ಶೆ ಬರೆದು ಕೊಡಲು ನನಗೆ ಒಪ್ಪಿಸಿದ್ದರು. ಆದರೆ ಅಂದು ಅವರ ಆ ಕಾರ್ಯ ಕೈಗೂಡದೆ ತಮ್ಮ ಯೋಜನೆಯನ್ನು ನಡುವೆಯೇ ಕೈಬಿಟ್ಟರು...ಆಗ ಮಾಡಿಟ್ಟ ಆ ವಿಮರ್ಶೆಯ ಬಹುಭಾಗವನ್ನು ಈ ಜಯನೃಪ ಕಾವ್ಯ ಸಂಗ್ರಹದ ಪೀಠಿಕೆಯಲ್ಲಿ ಅಳವಡಿಸಿದ್ದೇನೆ." ಹೀಗೆಂದು ಹಂಪನಾ ಅವರು ಸಂಗ್ರಹದ ಮೊದಲ ಮಾತಿನಲ್ಲಿ ಉಲ್ಲೇಖಿಸಿದ್ದಾರೆ.

ಸುಮಾರು ೭೮ ಪುಟಗಳ ೨೩೬ ಪದ್ಯಗಳ ಈ ಸಂಗ್ರಹಕ್ಕೆ ೫೧ ಪುಟಗಳ ಸುದೀರ್ಘ ವಿಮರ್ಶೆ ಇದೆ. ಇಲ್ಲಿನ ವಿಮರ್ಶೆಯ ವ್ಯಾಪ್ತಿ ಮಂಗರಸನ ಎಲ್ಲ ಕೃತಿಗಳಿಗೆ ಅನ್ವಯವಾಗುವಂತಹದಾದರೂ ಸಂಗ್ರಹಗಳಿಗೆ ಇಂತಹ ಮೌಲಿಕ ವಿಮರ್ಶೆ ಅಗತ್ಯವೆನಿಸುತ್ತದೆ. ಅಂದಾಗ ಮಾತ್ರ ಒಬ್ಬ ಕವಿಯ ಸಮಗ್ರ ಪರಿಚಯ ಸಹೃದಯರಿಗೆ ಸಾಧ್ಯವಾಗುತ್ತದೆ.

'ಪೀಠಿಕೆ'ಯಲ್ಲಿ ಹಿನ್ನೆಲೆ. ಕವಿ-ಕಾಲ-ಕೃತಿಗಳು, ವಿಮರ್ಶೆ ಈ ರೀತಿ ವಿಂಗಡಿಸಿ ವಿಶ್ಲೇಷಿಸಲಾಗಿದೆ. ಮಂಗರಸರ ಕಾಲ-ಕೃತಿಗಳನ್ನು ಹೇಳಿ ಮಂಗರಸನ ಕಾಲ-ಕೃತಿಗಳ ಬಗೆಗೆ ವಿವರಿಸಲಾಗಿದೆ. ಕವಿಯ ಸಂಬಂಧಿಕರು-ಇತ್ಯಾದಿ ಅಂಶಗಳ ಪರಿಶೀಲನೆ ಇದೆ.

'ಪೀಠಿಕೆ'ಯ ಮುಖ್ಯ ಭಾಗ ಸಮಗ್ರ ಕೃತಿಗಳ ಪರಿಶೀಲನೆ. ಕವಿ-ಕಾಲ-ಕೃತಿಗಳ ಸಂಖ್ಯೆ ಈ ವಿಷಯಗಳಲ್ಲಿ ಸಂಶೋಧನೆಗೆ ಆದ್ಯತೆ. ಸಂಗ್ರಹಕಾರನ ಎದುರಾಗಿ ಸಾಮರ್ಥ್ಯ ವ್ಯಕ್ತವಾಗುವುದು, ವ್ಯಕ್ತವಾಗಿರುವುದು ಕೃತಿಗಳ ಪರಿಶೀಲನೆಯಲ್ಲಿ.

ವಾರ್ಧಕಷಟ್ಪದಿಯಲ್ಲಿ ರಚಿತವಾಗಿರುವ ಸೂಪಶಾಸ್ತ್ರದ ಶೈಲಿಯ ನಯವಂತಿಕೆಯನ್ನು ಗುರುತಿಸಿದ್ದಲ್ಲದೆ, ಅಪೂರ್ವ ಪದಪ್ರಯೋಗದ ಸಂಗತಿಯನ್ನು ಉದಾಹರಣೆ ಸಹಿತ ವಿವರಿಸಿದ್ದು ಸೂಕ್ತವಾಗಿದೆ. "ಸೂಪಶಾಸ್ತ್ರವೆಂಬುದು ಪಾಕಶಾಸ್ತ್ರಕ್ಕೆ ಪರ್ಯಾಯ ಪದವಾದರೂ-ಸೂಪವೆಂದರೆ ಪಾಕವೆಂದರ್ಥವಲ್ಲ. ಸೂಪವೆಂದರೆ ವ್ಯಂಜನ ಅಥವಾ ಮೇಲೋಗರದಲ್ಲಿ ಒಂದಾದ ತೋವೆ < ತೋವ್ವೆ ಎಂದರ್ಥ" ಎಂದು ತಿಳಿಸಿ. 'ಭಾವಪ್ರಕಾಶ' ವೈದ್ಯ ಗ್ರಂಥದಲ್ಲಿ ಸೂಪ ಹೇಗೆ ತಯಾರಿಸಲ್ಪಡುತ್ತದೆಂಬುದನ್ನು ಉಲ್ಲೇಖಿಸಿದ್ದು ಗಮನಾರ್ಹ.

ಪ್ರಭಂಜನ ಚರಿತೆ ಅರ್ಧ ಸಿಕ್ಕಿದೆ. ಕೃತಿಯ ಅಪೂರ್ಣತೆಯ ಕುರಿತು ವೈಶಿಷ್ಟ್ಯದ ಕುರಿತು-ಶೃಂಗಾರ ಅಶ್ಲೀಲತೆ ಮಟ್ಟಕ್ಕಿಳಿದ ಬಗೆಗೆ ಅದು ಕವಿ ಉದ್ದೇಶ

ಪೂರಕ ತಂದದ್ದೆಂದಿದ್ದಾರೆ. ಯಶೋಧರ ಚರಿತೆ ಮತ್ತು ಜಿನದತ್ತರಾಯನ ಚರಿತೆಗಳ ಜೊತೆ 'ತಗುಬಿಟ್ಟಿ' ಪ್ರಭಂಜನ ಚರಿತೆಯನ್ನು ವಿಶ್ಲೇಷಿಸಿದ್ದಾರೆ. ಅಮೃತ ಮತಿಯಂತೆ ಪೃಥ್ವಿಮತಿಯೂ ಅಧೋಗಾಮಿ. ಉದ್ಧಾರ ಬಯಸದ ಚೇತನ. ಜಿನದತ್ತರಾಯನ ಚರಿತೆಯಲ್ಲಿ ಸವತಿಯ ಮಗನನ್ನು ಕೊಲ್ಲುವ ಕಥೆ ಇದ್ದರೆ ಇಲ್ಲಿ ಸ್ವಂತ ಮಗನನ್ನೇ ಕೊಲ್ಲುತ್ತಾಳೆ. ಹೀಗೆ ಪಾತ್ರಗಳ ಹೃದಯ ಸ್ಪರ್ಶಿ ಘಟನೆಗಳ ಉಚಿತಾನುಚಿತತೆಯನ್ನು ವಿವೇಚಿಸಿದ್ದಲ್ಲದೆ. ಕಥಾನಿರೂಪಣೆ–ತಂತ್ರದಲ್ಲಿ ಕಥೆ ಯೊಳಗೆ ಉಪಕಥೆಗಳು ಬರುವುದರಿಂದ–ಬಾಣಕವಿಯ ನೆನಪು ಆಗುತ್ತದೆ ಎಂದಿದ್ದಾರೆ. "ಇದು ಸಾಂಗತ್ಯದಲ್ಲಿ ಬರೆದ ಧಾರ್ಮಿಕ ಕಥೆ, ಇದರಲ್ಲಿ ಗುಣವಿಶೇಷ ವೇನೂ ಕಾಣಲಿಲ್ಲ" ಎಂಬ ವಿಮರ್ಶಕರೊಬ್ಬರ ಹೇಳಿಕೆಗೆ "ಈ ಕಾವ್ಯವನ್ನು ಓದಿ ಗುಣವಿಶೇಷವನ್ನು ಕಾಣದೆಯೇ ಪರಿಶೀಲಿಸದೆಯೇ ಹೇಳಿದ ಜಾರುವ ಮಾತು ಎಂದು ಓದುಗರಿಗೇ ಸ್ಪಷ್ಟವಾಗದಿರದು" ಎಂದು ಪರಾಮರ್ಶಿಸಿ ಮೌಲ್ಯ ಕಟ್ಟಿದ್ದಾರೆ.

'ಶ್ರೀಪಾಲಚರಿತೆ'ಯ ಆಕರ 'ಪೂರ್ವಪುರಾಣ' ಮತ್ತು ಪ್ರಾಕೃತ ರತ್ನಶೇಖರ ಸೂರಿಯ ಶ್ರೀಪಾಲಚರಿತೆಯ ತೌಲನಿಕ ವ್ಯಾಸಂಗದ ಅಗತ್ಯವನ್ನು ಎತ್ತಿಹೇಳಿ ನಂತರ ರಚಿತವಾದ ಶ್ರೀಪಾಲಚರಿತೆಗಳನ್ನೂ ಪಟ್ಟಿಮಾಡಿದ್ದಾರೆ. ಈ ಕಾವ್ಯದಲ್ಲಿಯ ದೋಷಗಳನ್ನೂ–ಅಷ್ಟಾದಶವರ್ಣನೆ. ಸಂಪ್ರದಾಯ ಶರಣತೆ, ೮ನೆಯ ಸಂಧಿ ಯಲ್ಲಿಯ ನವರಸಗಳ ಅನಾವಶ್ಯಕ ಪ್ರಸ್ತಾಪ ಇತ್ಯಾದಿಗಳನ್ನು ಬೆರಳಿಟ್ಟು ತೋರಿಸಿ ದ್ದಾರೆ.

'ಯಶೋಧರ ಚರಿತೆ', 'ಜೀವಂಧರ ಚರಿತೆ'ಗಳ ನಾಯಕರಂತೆ ಶ್ರೀಪಾಲನೂ ಪುರಾಣ ಪುರುಷ. ಕನ್ನಡದ ಸಾಂಗತ್ಯ ಕಾವ್ಯಗಳಲ್ಲಿ ಅದ್ಭುತ ಘಟನೆಗಳ ಪರಂಪರೆ ಯಿಂದ ಓದುಗರನ್ನು ಆಕರ್ಷಿಸುತ್ತದೆ ಈ ಶ್ರೀಪಾಲ ಚರಿತೆ ಎಂದು ಸರಿಯಾಗಿ ಗುರುತಿಸಿದ್ದಾರೆ.

ಮಂಗರಸ ಕವಿಯ ಅತಿ ದೊಡ್ಡ ಕಾವ್ಯ ಹರಿವಂಶ ಪುರಾಣ, ಮಂಗರಸನಿ ಗಿಂತ ಮೊದಲು ಮತ್ತು ನಂತರ ಕನ್ನಡ ಮತ್ತು ಬೇರೆ ಭಾಷೆಗಳಲ್ಲಿ ರಚಿತವಾದ 'ಹರಿವಂಶ ಪುರಾಣ'ಗಳನ್ನು ಕಾಲಾನುಕ್ರಮದಲ್ಲಿ ಪಟ್ಟಿಮಾಡಿ ಈ ದಿಶೆಯಲ್ಲಿ ಸಂಶೋ ಧನೆಯಾಗಬೇಕಾದ ಅಗತ್ಯವನ್ನು ಗುರುತಿಸಿದ್ದಾರೆ. ಸಂಸ್ಕೃತ, ಪ್ರಾಕೃತ, ಅಪಭ್ರಂಶ, ಕನ್ನಡ, ಹಿಂದಿ, ಗುಜರಾತಿ ಭಾಷೆಗಳಲ್ಲಿ ರಚಿತವಾದ ೨೨ ಕೃತಿಗಳ ದೊಡ್ಡ ಆಕರ ವನ್ನೇ ಒದಗಿಸಿದ್ದಾರೆ. ಒಂದೇ ವಾಕ್ಯದಲ್ಲಿ 'ಹರಿವಂಶ ಪುರಾಣ'ದ ಕುರಿತು ಹೇಳಿದ ಮಾತು ಹಂಪನಾ ಅವರ ವಿಮರ್ಶಾ ಸಾಮರ್ಥ್ಯವನ್ನು ಸೂಚಿಸುತ್ತದೆ: "ಮಂಗರಸ ಕವಿಯ 'ನೇಮಿಜಿನೇಶ ಸಂಗತಿ'ಯೆಂಬ ಸಾಂಗತ್ಯ ಕಾವ್ಯವು ಅನೇಕ ಕಥೆ–ಉಪಕಥೆ

ಗಳಿಂದಲೂ ಸುಂದರವಾದ ಆಖ್ಯಾನ-ಉಪಾಖ್ಯಾನಗಳಿಂದಲೂ ಓದುಗರ ಅಂತಃ ಕರಣವನ್ನು ಕಲಕುವ ಜನ್ಮ-ಜನ್ಮಾಂತರಗಳ ಜೀವನದ ನಿರೂಪಣೆಗಳಿಂದಲೂ ಕಂಗೊಳಿಸುವ ಬೃಹತ್ ಕಾವ್ಯವೆಂದು ಹೇಳಬಹುದು."

ಹರಿವಂಶ-ಕುರುವಂಶ ಮತ್ತು ತೀರ್ಥಂಕರ ಕಥೆಗಳಿಂದ ಮುಪ್ಪುರಿಗೊಂಡ 'ನೇಮಿಜಿನೇಶ ಸಂಗತಿ'ಯನ್ನು ವ್ಯಾಸ ಭಾರತದೊಡನೆ ಹೋಲಿಸಿ. ಜೈನ ಭಾರತದ ವಿಶೇಷಗಳನ್ನು, ವ್ಯತ್ಯಾಸಗಳನ್ನು ಗುರುತಿಸಿ-ದೊಡ್ಡ ಪಟ್ಟಿಯನ್ನೇ ಮಾಡಿ-ವಿಶ್ಲೇಷಣೆಗೊಳಗುಮಾಡಿದ್ದಾರೆ. ಭವಾವಳಿ ಈ ಕೃತಿಯ ಎಲ್ಲ ಮುಖ್ಯ ಪಾತ್ರಗಳಲ್ಲೂ ಅನ್ವಯವಾಗುವ ಸಂಗತಿ. ಹೀಗಾಗಿ ಓದುಗನಿಗೆ ಕಥೆಯ ಹೊಲಬು ತಪ್ಪುವ ಸಾಧ್ಯತೆ ಒಂದೆರಡು ಕಡೆಗಾದರೂ ಇದೆ ಎಂದು ಉಲ್ಲೇಖಿಸಿ, ಇದೇ ಸಮಯದಲ್ಲಿ ಕವಿಯ ಎಚ್ಚರಿಕೆಗಾಗಿ ಮೆಚ್ಚುಗೆಯನ್ನೂ ಸೂಚಿಸಿದ್ದಾರೆ.

'ಸಮ್ಯಕ್ತ್ವ ಕೌಮುದಿ' ವಾರ್ಧಕ ಉದ್ದಂಡ ಷಟ್ಪದಿಯಲ್ಲಿ ರಚಿತವಾದ ಕಾವ್ಯ. ೧೨ ಆಶ್ವಾಸಗಳ ೭೯೨ ಪದ್ಯಗಳ ಈ ಕೃತಿ ಧಾರ್ಮಿಕ ಭಾವನೆಗಳನ್ನು ಹೃದಯಂಗಮವಾಗಿ ಅರಳಿಸುವುದು ಸಹಜ. ಕಥಾತಂತ್ರ-ಶೈಲಿ ಸೊಗಸಿನಿಂದ ಕೂಡಿವೆ. ಈ ಮಾತುಗಳು ಸರಿ. ಆದರೆ "ವಾಸ್ತವವಾಗಿಯೂ ಸಮ್ಯಕ್ತ್ವ ಕೌಮುದಿ ಕನ್ನಡದ ವಾರ್ಧಕ ಷಟ್ಪದಿ ಕಾವ್ಯಗಳಲ್ಲಿ ಉತ್ಕೃಷ್ಟವಾದ ಕೃತಿಗಳ ಶ್ರೇಣಿಗೆ ಸೇರುತ್ತದೆ" ಎಂಬಲ್ಲಿ ಉತ್ಪ್ರೇಕ್ಷೆಯಿದೆ.

ಮಂಗರಸನು "ಜಯನೃಪ ಚಾರಿತ್ರಮ । ಸೋತುಸಿರ್ದೆಂ ಪರಿವರ್ಧಿನಿಯಿಂ ನೂತನ ರಸವರ್ಧಿನಿಯಿಂ" ಎಂದುದಲ್ಲದೆ ಹಾಲಿನಲ್ಲಿ ಸಕ್ಕರೆ ಬೆರೆಸಿದಂತೆ, ಸಕ್ಕದ ಕನ್ನಡವನ್ನು ಬೆರೆಸಿ ತನ್ನ ಕೃತಿ ರಚಿಸಿದ್ದಾನಂತೆ." ಈ ಕವಿಯ ಸೃಷ್ಟಿಶಕ್ತಿ, ಕಾವ್ಯ ಪ್ರತಿಭೆ ಹಾಗೂ ಪಾಂಡಿತ್ಯ ಸಪ್ರಮಾಣದಲ್ಲಿ ವ್ಯಕ್ತವಾಗಿದೆಯಾದರೂ ಇದು ಅವನ ಶ್ರೇಷ್ಠ ಕೃತಿಯಾಗಿಲ್ಲ. ಜಯಕುಮಾರ ಪ್ರಥಮ ತೀರ್ಥಂಕರರ ಗಣಧರರಲ್ಲಿ ಒಬ್ಬನು. ಜಿನಸೇನಾಚಾರ್ಯರ ಪೂರ್ವಪುರಾಣದಲ್ಲಿ ಅಂತರ್ಗತವಾದ ಈ ಮಹಾ ಪುರುಷನ ಕಥೆಯನ್ನು ಪ್ರತ್ಯೇಕ ಕಾವ್ಯವಾಗಿಯೇ ರಚಿಸಿದ್ದಾನೆ. ಸಂಗ್ರಾಹಕರು ಹೇಳುವಂತೆ "ಜಯನೃಪ ಕಾವ್ಯ ಮಂಗರಸನ ಸಹಜ, ಸರಾಗ, ಸರಸ ಶೈಲಿಯನ್ನು ಪ್ರತಿಫಲಿಸುವ ಒಂದು ಮಧ್ಯಮ ವರ್ಗದ ಕಾವ್ಯ."

ಮಂಗರಸನ ಸಮಗ್ರಕೃತಿಗಳನ್ನು ಪರಿಶೀಲಿಸಿ ಕವಿಯ ಸ್ಥಾನಮಾನಗಳನ್ನು ಸರಿಯಾಗಿ ಗುರುತಿಸಿದ್ದಾರೆ ಎಂಬುದಕ್ಕೆ ಈ ಕೆಲವು ಮಾತುಗಳು ಸಾಕ್ಷಿ: "ಮಂಗರಸ ತನ್ನನ್ನು ಮಹಾಕವಿಯೆಂದು ತಿಳಿದುಕೊಂಡಿಲ್ಲ, ಕರೆದುಕೊಂಡಿಲ್ಲ. ತನ್ನ ಕಾವ್ಯಗಳಲ್ಲಿ ಅಡಗಿರುವ ವೈಶಿಷ್ಟ್ಯಗಳನ್ನು ಗಮನಿಸಿದ್ದಾನೆ. ಗುರುತಿಸಿದ್ದಾನೆ" "ಅವು (ಕೃತಿಗಳು) ಗಾತ್ರದಲ್ಲಿ ಮಾತ್ರ ಮಧ್ಯಮವಾಗಿರದೆ ಕಾವ್ಯದ ಮಹತ್ವದ ದೃಷ್ಟಿಯಿಂದಲೂ ಮಧ್ಯಮವರ್ಗದ ಕಾವ್ಯಗಳೇ

ಆಗಿವೆ." "ಕನ್ನಡ ಕವಿ-ಕಾವ್ಯಗಳ ಹಿರಿಯ ಪರಂಪರೆಯಲ್ಲಿ ಮಂಗರಸನಿಗೂ ಆತನ ಕೃತಿಗಳಿಗೂ ಒಂದು ವಿಶಿಷ್ಟವಾದ ಸ್ಥಾನವಿದೆ." "ಕನ್ನಡ ಸಾಹಿತ್ಯಕ್ಕೆ ಸಂದ ಮಂಗರಸನ ಕಾಣಿಕೆಯನ್ನು ಕಡೆಗಣಿಸುವಂತಿಲ್ಲ" "ಅವನ ಯಾವ ಕಾವ್ಯ ತೆಗೆದುಕೊಂಡರೂ ವೇಶ್ಯಾವಾಟದ ವಿಸ್ತಾರವಾದ ವರ್ಣನೆ ಓದುಗರ ಕಣ್ಣು ಕುಕ್ಕುತ್ತದೆ. ಸೂಳೆಗೇರಿಯ ಬಣ್ಣನೆ ಬಹಳವಾಯಿತೆಂದು ಎಂಥವರಿಗೂ ಅನ್ನಿಸುತ್ತದೆ." "ಜೊತೆಗೆ ಮಂಗರಸ ಆರಿಸಿಕೊಂಡ ಕಥಾವಸ್ತು ತೀರಾ ತೆಳ್ಳಗಿದ್ದು ವೈವಿಧ್ಯಕ್ಕೂ ವಿಲಾಸಕ್ಕೂ ಅವಕಾಶವಿಲ್ಲದಂತಾಗಿದೆ."

ಸಂಗ್ರಹದಲ್ಲಿ ನಿರೀಕ್ಷಿಸಿದ ಪಾಠಶುದ್ಧಿ ಮತ್ತು ಕಾವ್ಯಶಿಲ್ಪ ಕೈಗೂಡಿವೆ. ಸಾವಿರಕ್ಕೂ ಮಿಕ್ಕಿ ಪದ್ಯಗಳಿರುವ ಕಾವ್ಯದ ವ್ಯಾಪ್ತಿಯನ್ನು ಶುಷ್ಕ ವರ್ಣನೆ. ಸುದೀರ್ಘ ಘಟನೆ ಮತ್ತು ಕೆಲವು ಪ್ರಾರ್ಥನಾ ಪದ್ಯಗಳನ್ನು ಕೈಬಿಟ್ಟು ಒಂದು ಸಂಕ್ಷಿಪ್ತ ರೂಪಕ್ಕೆ ಅಳವಡಿಸಲಾಗಿದೆ. ೧೨ ಅಧ್ಯಾಯಗಳನ್ನಾಗಿ ವಿಂಗಡಿಸಿ. ಒಂದೊಂದಕ್ಕೂ ಸೂಕ್ತ ಹೆಸರನ್ನು ಕಾವ್ಯ ಭಾಗದಿಂದಲೇ ಆಯ್ದುಕೊಟ್ಟಿದ್ದಾರೆ. ಈ ಭಾಗಗಳೂ ಸುದೀರ್ಘವಾಗಿಲ್ಲ. ೧೪ ಪದ್ಯಗಳಿಂದ ಹೆಚ್ಚೆಂದರೆ ೨೭ ಪದ್ಯಗಳನ್ನು ಒಳಗೊಂಡಿವೆ. ಜನ್ಮಜನ್ಮಾಂತರಗಳ ಜಟಿಲವಾದ ಕಥೆ-ಉಪಕಥೆಗಳಿಂದ ಇಡಿಕಿರಿದ ಕೃತಿಗಳನ್ನು ಸಂಗ್ರಹಿಸುವುದು ಸಹೃದಯನ ಅಗತ್ಯ ಬೇಡಿಕೆಯೆಂದೇ ಹೇಳಬೇಕು. ಅಂತಹ ಕಾರ್ಯ ಇಲ್ಲಿ ಹಂಪನಾ ಅವರ ಜಯನೃಪ ಕಾವ್ಯ ಸಂಗ್ರಹದಿಂದ ಸಿದ್ಧಿಸಿದೆ. ಕವಿಯ ಉಕ್ತಿಗಳನ್ನೇ ಒಂದೊಂದು ಭಾಗಕ್ಕೂ ಸೂಚಿಸಿರುವುದು ಯುಕ್ತವಾಗಿದೆ. ಕೆಲವು ಅಧ್ಯಾಯಗಳ ಹೆಸರು :

ಹೆಸರು : ೧. ಒಂದಸುವಿಂಗಿರ್ಪೆಯ್ದುವೆದೆಂದದಿಸೊಪ್ಪಿದರು.

೨. ನಂದನರಂ ಪಡೆಯದ ಪೆಣ್ಗಳ ಜನ್ಮವದೇಕೆ ?

೩. ಇದು ವನವನಿತೆ ನಿರೀಕ್ಷಿಪ ಕನ್ನಡಿ

ಸಂಗ್ರಹ ಕೃತಿಯ ಅವಿಭಾಜ್ಯ ಅಂಗವಾದ 'ಅನುಬಂಧ' ಕೃತಿಯ ಅಧ್ಯಯನಕ್ಕೆ ಪೂರಕವಾದ, ಕೃತಿಯಲ್ಲಿ ಉಕ್ತವಾದ ವ್ಯಕ್ತಿ. ಸಂಗತಿ ಮತ್ತು ಕ್ಲಿಷ್ಟಪದಕೋಶವನ್ನು ಒಳಗೊಂಡಿರಬೇಕು. ಈ ಸಂಗ್ರಹಕ್ಕೆ 'ಕ್ಲಿಷ್ಟಪದಕೋಶ', 'ಜೈನಪಾರಿಭಾಷಿಕ ಪದಕೋಶ' ಮತ್ತು 'ವ್ಯಕ್ತಿ ನಾಮಸೂಚಿ'ಗಳನ್ನು ಅನುಬಂಧಿಸಲಾಗಿದೆ. ಸಾಮಾನ್ಯ ಪದಗಳ ಅರ್ಥ ಅಗತ್ಯವಿದ್ದಲ್ಲಿ, ಅಂಥ ಪದಗಳನ್ನು ಕಡಿಮೆಮಾಡಿದ್ದರೆ ಒಳ್ಳೆಯದಾಗುತ್ತಿತ್ತು. ಮತೀಯ ಹಿನ್ನೆಲೆಯುಳ್ಳ ಕೃತಿ ಅಧ್ಯಯನಕ್ಕೆ ಆ ಮತದ ಪಾರಿಭಾಷಿಕ ಪದಗಳ ಜ್ಞಾನ ಅಗತ್ಯ. ಕೇವಲ ಅವಧಿಜ್ಞಾನ...ಇತ್ಯಾದಿಗಳ ವಿವರಣೆ ಪೂರಕ. 'ವ್ಯಕ್ತಿನಾಮ ಸೂಚಿ'ಯು ಅಭ್ಯಾಸಿಗಳಿಗೆ ಸಹಾಯ ಮಾಡುತ್ತದೆ.

ಎಚ್. ಎಸ್. ಹರಿಶಂಕರ್

# ಭರತೇಶ ವೈಭವ

ಕಳೆದ ಆರೇಳು ವರ್ಷಗಳಿಂದಲೂ ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷ ಪದವಿಯನ್ನಲಂಕರಿಸಿ ಅನೇಕ ಯೋಜನೆಗಳನ್ನು ದಕ್ಷತೆಯಿಂದ ಕಾರ್ಯಗೊಳಿಸಿ. ಕನ್ನಡಿಗರ ಆದರಭಿಮಾನಗಳಿಗೆ ಪಾತ್ರರಾದ ಪ್ರೊಫೆಸರ್ ಹಂಪ. ನಾಗರಾಜಯ್ಯ ಅವರು ಇದೇ ೧೯೮೭ ಫೆಬ್ರುವರಿ ತಿಂಗಳಿನ ಅಂತ್ಯದಲ್ಲಿ ಅಧ್ಯಕ್ಷ ಪದವಿಯಿಂದ ನಿವೃತ್ತರಾಗುವ ಸಂದರ್ಭದಲ್ಲಿ ಅವರ ಹಿತೈಷಿಗಳು ಹೊರತರುತ್ತಿರುವ 'ಸಂಭಾವನಾ ಗ್ರಂಥ' ಅತ್ಯಂತ ಸಮಯೋಚಿತವಾಗಿದೆ. ಈ ಸಂದರ್ಭದಲ್ಲಿ ನಾನು ಅವರಿಗೆ ಎಲ್ಲ ಬಗೆಯ ಶುಭಗಳನ್ನೂ ಕೋರುತ್ತಾ ಕನ್ನಡನಾಡು ನುಡಿಗೆ ಮುಂದೆಯೂ ಅವರಿಂದ ಇನ್ನೂ ಹೆಚ್ಚಿನ ಸೇವೆ ಲಭಿಸಲಿ ಎಂದು ಹಾರೈಸುತ್ತೇನೆ.

ಪ್ರೊಫೆಸರ್ ಹಂಪ. ನಾಗರಾಜಯ್ಯನವರು 'ಭರತೇಶ ವೈಭವ' ಮಹಾಕಾವ್ಯದ ಮೂವರು ಸಂಪಾದಕರಲ್ಲಿ ಒಬ್ಬರಾಗಿದ್ದಾರೆ. ಜಿ. ಬ್ರಹ್ಮಪ್ಪ ಮತ್ತು ಸಿ. ಆರ್. ಕಮಲಮ್ಮ ಹಂಪನಾ ಇನ್ನಿಬ್ಬರು ಸಂಪಾದಕರು. ಅತ್ತಿಮಬ್ಬೆ ಪ್ರಕಾಶನದಿಂದ ೧೯೭೭ ರಲ್ಲಿ ಪ್ರಕಟಗೊಂಡ ಈ ಕೃತಿ ಕೆಲವಾರು ವರ್ಷಗಳಲ್ಲೇ ಮಾರಾಟವಾಗಿ ಹೋದದ್ದು ಈ ಕಾವ್ಯದ ಜನಪ್ರಿಯತೆಗೆ ಸಾಕ್ಷಿಯಾಗಿದೆ.

೭೭೫ ಪುಟಗಳ ಈ ಬೃಹದ್ಗ್ರಂಥವನ್ನು ಮೂರು ವಿಭಾಗಗಳಾಗಿ ವಿಂಗಡಿಸಲಾಗಿದೆ : 1) ಭೋಗವಿಜಯ 2) ದಿಗ್ವಿಜಯ ಮತ್ತು 3) ಯೋಗವಿಜಯ. ಭೋಗವಿಜಯ ಒಂದು ರೀತಿಯಲ್ಲಿ ಶೃಂಗಾರರಸದಿಂದ ತುಂಬಿರುವ ದೊಡ್ಡ ಮಹಾಸಾಗರ. ಇಲ್ಲೆಲ್ಲಾ ಕವಿತೆ. ಗಾನ, ನರ್ತನ ಮತ್ತು

ಸರಸಸಲ್ಲಾಪಗಳ ಒಂದು ಸರಣಿಯನ್ನೇ ರತ್ನಾಕರವರ್ಣಿ ಸೃಷ್ಟಿಸಿದ್ದಾನೆ. ಈ ಭಾಗ ರಸಿಕರ ಮನಸ್ಸನ್ನು ಕ್ಷಣಕ್ಷಣಕ್ಕೂ ಉತ್ತೇಜಿಸುತ್ತದೆ. ದಿಗ್ವಿಜಯದಲ್ಲಿ ಯುದ್ಧೋತ್ಸಾಹಗಳನ್ನು ವಿವರಿಸುವುದಕ್ಕಿಂತ ಹೆಚ್ಚಾಗಿ ಭರತೇಶನ ಯಶಸ್ಸನ್ನು ನಾವು ಕಾಣುತ್ತೇವೆ. ನ್ಯಾಯವಾಗಿ ಇಲ್ಲಿ ರಣರಂಗದಲ್ಲಿ ನಡೆಯುವ ಭೀಕರ ಯುದ್ಧ, ಹತ್ಯೆಗಳನ್ನು ಕಾಣಬೇಕಾಗಿತ್ತು. ಆದರೆ ಅದಕ್ಕೆ ಬದಲಿಗೆ ಇಲ್ಲಿ ವಿವಾಹ ವೇದಿಕೆಗಳು, ಬಾಲಲೀಲೆ ಇತ್ಯಾದಿ ಮಧುರ ಪ್ರಸಂಗಗಳು ಬಂದು ರಣಭೈರವನ ತಾಂಡವ ಭೀಕರತೆ ಕೊಂಚಮಟ್ಟಿಗೆ ಕಡಿಮೆಯಾಗಿರುವುದನ್ನು ಕಾಣಬಹುದು. ಭರತೇಶನು ಕಾಲಿಟ್ಟ ಕಡೆಯಲ್ಲೆಲ್ಲಾ ಜಯವಧುವಿನ ಧ್ವನಿ ಗೋಚರಿಸುತ್ತದೆ. ಈ ಭಾಗದ ಕೊನೆಯಲ್ಲಿ ಭರತೇಶನ ವಾತ್ಸಲ್ಯ ಸಾಗರದ ಮುಂದೆ ಕಾಮದೇವನ ಕೋಪವೆಲ್ಲವೂ ಕರಗಿ ಕೊನೆಗೆ ನಿರ್ವೇಗನಾಗಿ ಬಾಹುಬಲಿ ಸನ್ಯಾಸಿಯಾದನೆಂಬ ನಿರೂಪಣೆ ಬಹಳ ಮೋಹಕವಾಗಿ ಬಂದಿದೆ. ಕೊನೆಯ ಭಾಗವಾದ ಯೋಗವಿಜಯದಲ್ಲಿ ಬಾಹುಬಲಿಯ ಅಂತರಾತ್ಮಕ್ಕೆ ಕವಿದಿದ್ದ ಮನಃಕಷಾಯದ ಮುಸುಕನ್ನು ಚಕ್ರೇಶ ಅನಾವರಣ ಮಾಡುತ್ತಾ ಯೋಗವಿಜಯದ ಆರಂಭವನ್ನು ತೋರಿಸಿಕೊಟ್ಟಿದ್ದಾನೆ. ಯೋಗದ ಮೂಲಕವೇ ಮುಕ್ತಿ ಸಾಧ್ಯ ಎಂಬುದು ಇಲ್ಲಿ ಅನೇಕ ಸಾಮತಿಗಳ ಮೂಲಕ ನಿರೂಪಿತವಾಗಿವೆ.

ಗ್ರಂಥ ಪರಿಷ್ಕರಣವನ್ನು ಸಂಪಾದಕರು ಮೂರು ಹಸ್ತಪ್ರತಿಗಳಿಂದ ಮಾಡಿದ್ದಾರೆ. ಇದರ ಜೊತೆಗೆ ಶ್ರೀ ಉಗ್ರಾಣ ಮಂಗೇಶರಾಯರ ಮುದ್ರಿತ ಪ್ರತಿಯನ್ನೂ ಬಳಸಿಕೊಂಡಿರುವುದಾಗಿ ಸಂಪಾದಕರು ತಿಳಿಸಿದ್ದಾರೆ. ಆದರೆ ಕಾವ್ಯಭಾಗದಲ್ಲಿ ಪಾಠಾಂತರ ಸ್ವೀಕಾರದ ಸಂದರ್ಭದಲ್ಲಿ ಯಾವ ಯಾವ ಹಸ್ತಪ್ರತಿಗಳಿಂದ ಪಾಠಾಂತರಗಳನ್ನು ಸ್ವೀಕರಿಸಲಾಗಿದೆ ಎಂಬ ಸಂಗತಿ ತಿಳಿದು ಬರುವುದಿಲ್ಲ. ಈ ಬಗ್ಗೆ ಸಂಪಾದಕರು ಸ್ವಲ್ಪಮಟ್ಟಿನ ಎಚ್ಚರವಹಿಸಬೇಕಾಗಿತ್ತೆಂದು ನಮಗೆ ತೋರುತ್ತದೆ. ಗ್ರಂಥಪರಿಷ್ಕರಣವೆಂಬ ಶೀರ್ಷಿಕೆಯಡಿಯಲ್ಲಿ ಹಸ್ತಪ್ರತಿಗಳ ವಿವರವನ್ನು ಸಂಪಾದಕರು ಕೊಟ್ಟಿದ್ದಂತೆ ಪಾಠಾಂತರವನ್ನು ಸ್ವೀಕರಿಸುವಾಗಲೂ ಅವುಗಳನ್ನು ನಿರ್ದೇಶಿಸಬೇಕಾಗಿತ್ತು. ಇದೊಂದು ಮುಖ್ಯ ಲೋಪವನ್ನು ಬಿಟ್ಟರೆ ಉಳಿದಂತೆ ಸಂಪಾದನಾ ಕಾರ್ಯವನ್ನು ಸಂಪಾದಕರು ಬಹು ಅಚ್ಚುಕಟ್ಟಾಗಿ ನಿರ್ವಹಿಸಿದ್ದಾರೆ.

ಸುಮಾರು ೧೨೦ ಪುಟಗಳಷ್ಟು ಸುದೀರ್ಘವಾದ ಕವಿ ಕಾವ್ಯವಿಮರ್ಶೆಯನ್ನು ಸಂಪಾದಕರು ಈ ಗ್ರಂಥಕ್ಕೆ ಬರೆದಿದ್ದಾರೆ. ರತ್ನಾಕರವರ್ಣಿಯ ವ್ಯಕ್ತಿತ್ವ ಆತನ ಕಾವ್ಯದ ಬಗ್ಗೆ ಸವಿವರವಾದ, ಸಮಗ್ರವಾದ ವಿಮರ್ಶೆಯೆನ್ನಬಹುದು. ರತ್ನಾಕರ ವರ್ಣಿಯ ಕಾಲ ನಿರ್ಣಯದ ಬಗ್ಗೆ ಬಾಹ್ಯ ಮತ್ತು ಆಂತರಿಕ ಪ್ರಮಾಣಗಳನ್ನು ಸಂಗ್ರಹಿಸಿ ಆತನ ಜೀವನ ಕಾಲಮಾನಾವಧಿಯನ್ನು ನಿಗದಿಗೊಳಿಸಿದ್ದಾರೆ.

ರತ್ನಾಕರನ 'ಭರತೇಶ ವೈಭವ'ವನ್ನು ಕುರಿತು ವಿಮರ್ಶೆ ಮಾಡುವಾಗ ಸಂಪಾದಕರು ಆಯ್ಕೆ ಮಾಡಿಕೊಂಡಿರುವ ವಿಷಯ ವಿವರಣೆ ಸುಸಂಗತವಾಗಿದೆ. 'ರತ್ನಾಕರನ ಭರತೇಶ, ರತ್ನಾಕರನ ಬಾಹುಬಲಿ. ರತ್ನಾಕರನ ಸ್ತ್ರೀ ಪಾತ್ರಗಳು. ರತ್ನಾಕರನ ಭೇದವಿಜ್ಞಾನ ಮತ್ತು ಚಿದಂಬರ ರಹಸ್ಯ'ವೆಂದು ಐದು ವಿಭಾಗಗಳಾಗಿ ವಿಂಗಡಿಸಿಕೊಂಡಿದ್ದಾರೆ ಸಂಪಾದಕರು ಬಹು ಅಚ್ಚುಕಟ್ಟಾಗಿ ವಿಷಯ ನಿರ್ವಹಣೆ ಯನ್ನು ಮಾಡಿದ್ದಾರೆ. ಸಮ್ರ ವಿಮರ್ಶೆಯಲ್ಲಿ ಎಲ್ಲೂ ಉದ್ವಿಗ್ನತೆಯನ್ನು ತೋರದೆ, ಭಾವಪರವಶರಾಗದೆ, ವಿಷಯವನ್ನು ವಸ್ತುನಿಷ್ಠವಾಗಿ ಪರಿಶೀಲಿಸಿದ್ದಾರೆ. ವಿಮರ್ಶೆ ಯಲ್ಲಿ ಬಹು ಸಂಯಮವನ್ನು ತೋರಿದ್ದಾರೆ. ಮಾದರಿಗಾಗಿ ಒಂದೆರಡು ಉದಾಹರಣೆ ಗಳನ್ನು ನೀಡಬಹುದು :

೧) "ಸಹಸ್ರ ವರ್ಷದ ಕನ್ನಡ ಸಾಹಿತ್ಯದ ಇತಿಹಾಸದಲ್ಲಿ ರತ್ನಾಕರನ ಭುಜಕ್ಕೆ ಭುಜ ಆನಿಸಿಕೊಂಡು ನಿಲ್ಲಬಲ್ಲ ಕವಿಗಳು ಇಬ್ಬರೊ ಮೂವರೊ ದೊರೆತರೂ ನಾವು ಪುಣ್ಯವಂತರೆ. ವೀರ, ರೌದ್ರ, ಭಯಾನಕ ರಸಗಳನ್ನು ಚಿತ್ರಿಸುವಾಗ ರತ್ನಾಕರ ಸಪ್ಪೆ ಯಾಗಿರುವುದು ನಿಜವಾದರೂ ತನ್ನ ಬೃಹತ್ ಕವಿತಾದೇಗುಲಕ್ಕೆ ಭೇದ ವಿಜ್ಞಾನದ ಬುನಾದಿ ಹಾಕಿ ಹಂಸಕಲೆಯ ಕಲಶವೇರಿಸಿ ಇವನು ಉಳಿದೆಲ್ಲ ಕನ್ನಡ ಕವಿಗಳನ್ನು ಮೀರಿರುವನು...."(ಪುಟ–೨೫)

೨) "ರತ್ನಾಕರನ ಭರತೇಶ ಸಿದ್ಧ ಪದವಿಯ ಮೇಲೆ ಕಣ್ಣಿಟ್ಟಿರುವ ಸಾಧಕ. ಪಂಪನ ಭರತೇಶನಾದರೋ ಸಾಧಕನೂ ಅಲ್ಲ, ಸಿದ್ಧ ಪದವಿಯ ಕಲ್ಪನೆಯೂ ಅವನ ಲ್ಲಿಲ್ಲ." (ಪುಟ ೫೫)

೩) "ಯೋಗವಾಗಲಿ, ಸಿದ್ಧಾಂತವಾಗಲಿ ರತ್ನಾಕರನ ಕೈಸೋಂಕಿದಾಕ್ಷಣ ಕಲೆಯಾಗಿ ವಿಜೃಂಭಿಸದಿರದು" (ಪುಟ ೧೧೧)

೪) "ರತ್ನಾಕರ ಏನೇ ಬರೆಯಲಿ ಸುಲಭವಾಗಿರುತ್ತದೆ ಸರಳವಾಗಿರುತ್ತದೆ, ಮಾತಿನ ಮೋಡಿಯಲ್ಲಿ ಎಂತಹ ಗಹನ ತತ್ತ್ವವನ್ನಾದರೂ ಲೀಲಾಜಾಲವಾಗಿ ಜಾಲಾಡಿಸಿಬಿಡುವನು. ಓದುಗರ ಮನದಲ್ಲಿ ತನ್ನ ಅಭಿಪ್ರಾಯವನ್ನು ನಾಟುವನು." (ಪುಟ ೧೧೧)

೫) "ರತ್ನಾಕರ ಚಿದಂಬರ ರಹಸ್ಯವನ್ನರಿತ ಯೋಗಿ : ಜೈನ ಸಿದ್ಧಾಂತವನ್ನೆಲ್ಲ ಕರತಲ ಮಾಡಿಕೊಂಡಿದ್ದ ಸಿದ್ಧಾಂತ ಚಕ್ರವರ್ತಿ. ಆದರೆ ಕಾವ್ಯದ ನಂದನವನದಲ್ಲಿ ಸಿದ್ಧಾಂತದ ಸ್ಥಾನವೇನೆಂಬುದನ್ನು ನಿರ್ದಿಷ್ಟವಾಗಿ ನಿರ್ದೇಶಿಸಿರುವ ನಿರಂಜನ ಕವಿ ! ಪಾಂಡಿತ್ಯದ ಪೆಡಸಾಗಲಿ, ಸಿದ್ಧಾಂತದ ಕ್ಲಿಷ್ಟತೆಯಾಗಲಿ ಭರತೇಶ ವೈಭವದಲ್ಲಿ

ಕಣ್ಣಲ್ಲಿ ಕಣ್ಣಿಟ್ಟು ಹುಡುಕಾಡಿದರೂ ದೊರೆಯುವುದಿಲ್ಲ. ಇದರಲ್ಲಿ ಏನು ಬರಬೇಕಾದರೂ ಭರತೇಶನಂತೆ ಸರಸಿಯಾಗಿ ಬರಬೇಕು : ರಾಗರಸಿಕವಾಗಿ ಬೆಡಗು ಬಿನ್ನಾಣದಿಂದ ವೈಯಾರವಾಗಿ ಬರಬೇಕು. ಇಲ್ಲಿನ ಭೋಗ, ರಾಗ ರಸಿಕತೆಯಾದರೆ ಇಲ್ಲಿನ ಯೋಗವೋ ವೀತರಾಗರಸಿಕತೆಯಾಗಿದೆ” (ಪುಟ ೧೨೦).

ಒಟ್ಟಿನಲ್ಲಿ ಸಂಪಾದಕರು ಬಹು ಎಚ್ಚರಿಕೆಯಿಂದ, ಶ್ರದ್ಧೆ ಆಸಕ್ತಿಗಳಿಂದ ಈ ಬೃಹತ್ ಕಾವ್ಯವನ್ನು ಸಂಪಾದಿಸಿದ್ದಾರೆ. ಇದರ ಮತ್ತೊಂದು ಮುದ್ರಣ ಬಹುಬೇಗ ಬರಲಿ ಎಂದು ಹಾರೈಸುವುದು ಎಲ್ಲ ಕಾವ್ಯಪ್ರಿಯರ ಕರ್ತವ್ಯವಾಗಿದೆ.

ಡಾ॥ ಜಿ. ಎಂ. ಹೆಗಡೆ

# ಸಾಳ್ವಭಾರತ

ಜೀರ್ಣಂ ಜಿನಗೃಹಂ ಬಿಂಬಂ ಪುಸ್ತಕಂ ಶ್ರಾದ್ಧಮೇವವಾ ।
ಉದ್ಧಾರ್ಯ ಸ್ಥಾಪನಂ ಪೂರ್ವ ಪುಣ್ಯತೋಧಿಕ ಮುಚ್ಯತೇ ॥

ತೈಲಾಕ್ಷೇಜ್ಜಲಾದ್ರಕ್ಷೇತ್ ರಕ್ಷೇಚ್ಛಿಥಿಲ ಬಂಧನಾತ್
ಮೂರ್ಖಹಸ್ತೇನ ದಾತವ್ಯಮೇವಂ ವದತಿ ಪುಸ್ತಕಂ

ಪುಸ್ತಕಂ ವನಿತಾವಿತ್ತಂ ಪರಹಸ್ತ ಗತಂಗತಂ
ಅಥವಾ ಪುನರಾಯಾತಂ ಜೀರ್ಣಂ ಬ್ರಷ್ಟ್ವಾಚ ಖಂಡಶಃ

ಈ ಮೊದಲಾದ ಸೂಕ್ತಿಗಳು ಗ್ರಂಥರಕ್ಷಣೆಯ ಮಹತ್ವವನ್ನು ಸಾರಿಹೇಳುತ್ತ ಬಂದಿದ್ದರೂ ಸಾವಿರ ವರ್ಷಗಳ ಸುದೀರ್ಘ ಇತಿಹಾಸ ಪರಂಪರೆಯುಳ್ಳ ಕನ್ನಡ ಸಾಹಿತ್ಯದ ಅಮೂಲ್ಯ ಕೃತಿಗಳು ಇಂದಿಗೂ ಅನುಪಲಬ್ಧವಾಗಿವೆ. ಶ್ರೇಷ್ಠ ಕವಿಗಳ ಕೃತಿಗಳೂ ತಾಳೆಗರಿಗಳಲ್ಲಿ ಹಸ್ತಪ್ರತಿಗಳಲ್ಲಿ ಉಳಿದು ಹುಳತಿಂದು ಕಣ್ಮರೆಯಾಗಿವೆ. ಪ್ರಾಚೀನ ಕನ್ನಡ ಕೃತಿಗಳನ್ನು ವಿವಿಧ ತಾಳೇಗರಿ ಹಸ್ತಪ್ರತಿಗಳ ಮೂಲಕ ಪರಿಷ್ಕರಿಸಿ, ಶುದ್ಧ ಪಾಠವನ್ನು ನಿರ್ಣಯಿಸಿ, ಸಂಪಾದಿಸಿ ಬೆಳಕಿಗೆ ತರುವ ಕಾರ್ಯ ತ್ವರಿತಗತಿಯಲ್ಲಿ ಸಾಗುತ್ತಲಿದೆ. ಕನ್ನಡದ ವಿದ್ವತ್ ಪ್ರಪಂಚದಲ್ಲಿ ಬಹುದೊಡ್ಡ ಕಾರ್ಯ ಮಾಡಿರುವ ಡಿ. ಎಲ್. ನರಸಿಂಹಾಚಾರ್ಯರು ಆದರ್ಶ ಗ್ರಂಥ ಸಂಪಾದಕರಾಗಿರುವಂತೆಯೇ ಕನ್ನಡಕ್ಕೆ ಗ್ರಂಥಸಂಪಾದನೆಯ ಶಾಸ್ತ್ರ ಗ್ರಂಥವನ್ನು ನಿರ್ಮಿಸಿಕೊಟ್ಟ ಮಹನಿಯರು. ಅವರು ಮತ್ತೆ ಆಚಾರ್ಯ ತೀ.ನಂ.ಶ್ರೀಯವರ ಅಚ್ಚುಮೆಚ್ಚಿನ ಶಿಷ್ಯರಾಗಿ ಕನ್ನಡದ ಪಾಂಡಿತ್ಯ ದೀಕ್ಷೆ ಪಡೆದ ಪ್ರೊ: ಹಂಪ ನಾಗರಾಜಯ್ಯನವರು ತಮ್ಮ ಲೇಖನಗಳ ಮೂಲಕ ವಿದ್ವತ್ ಪ್ರಪಂಚಕ್ಕೆ ಬೆಲೆಯುಳ್ಳ ಕಾಣಿಕೆಗಳನ್ನು ನೀಡಿರುವರು. ಭಾಷಾ ವಿಜ್ಞಾನ, ಗ್ರಂಥ ಸಂಪಾದನೆ, ಜೈನ ವಾಙ್ಮಯ, ಪ್ರಾಚೀನ ಕನ್ನಡ ಸಾಹಿತ್ಯ ಮೊದಲಾದ ಅಧ್ಯಯನ ಕ್ಷೇತ್ರಗಳಲ್ಲಿ ಕೀರ್ತಿಪ್ರಾಯರಾಗಿರುವ ವಿದ್ವಾಂಸರು.

ಹಂಪನಾ ಅವರು ಜ್ಞಾನದ ವಿವಿಧ ಕ್ಷೇತ್ರಗಳಿಗೆ ನೀಡಿರುವ ಕಾಣಿಕೆಗಳಂತೆಯೇ ಗ್ರಂಥ ಸಂಪಾದನೆಯ ಕ್ಷೇತ್ರದಲ್ಲೂ ಮಾಡಿರುವ ಸಾಧನೆ ಮಹತ್ವಪೂರ್ಣವಾಗಿದೆ. ಕನ್ನಡದ ಪ್ರಾಚೀನ ಸಾಹಿತ್ಯ ಶಾಸ್ತ್ರಗಳ ಆಳವಾದ ವ್ಯಾಸಂಗ ಮಾಡಿರುವ ಇವರು ವಿದ್ಯಾರ್ಥಿ ದೆಸೆಯಿಂದಲೂ ಕನ್ನಡ ನಾಡನ್ನೆಲ್ಲ ಸುತ್ತಿ ಕನ್ನಡದ ಪ್ರಾಚೀನ ಹಸ್ತಪ್ರತಿಗಳನ್ನು ಅಪಾರವಾಗಿ ಸಂಗ್ರಹಿಸಿದವರು. ತಾವು ಸಂಗ್ರಹಿಸಿದ ಹಸ್ತಪ್ರತಿಗಳನ್ನು ತಾಳ್ಮೆಯಿಂದ ಓದಿ, ಪರಿಶೀಲಿಸಿ, ಶುದ್ಧಪಾಠವನ್ನು ನಿರ್ಣಯಿಸಿ, ಕವಿ, ಕಾಲ, ಜೀವನ ಪರಿಸರಗಳನ್ನು ಗುರುತಿಸಿ ಇದುವರೆಗೂ ಬೆಳಕಿಗೆ ಬರದ ಕನ್ನಡ ಕೃತಿಗಳನ್ನು ಸಂಪಾದಿಸಿ ಪ್ರಕಟಿಸಿರುವರು. ಗ್ರಂಥ ಸಂಪಾದಕನಿಗಿರಬೇಕಾದ ಪ್ರಾಚೀನ ಗ್ರಂಥಗಳ ಆಳವಾದ ಅಧ್ಯಯನ, ಶಾಸ್ತ್ರ ಪ್ರೀತಿ. ಶ್ರದ್ಧೆಯ ದುಡಿಮೆ, ಶುದ್ಧ ಪಾಠ ನಿರ್ಣಯ ಜ್ಞಾನ, ಇವುಗಳೆಲ್ಲ ಹಂಪನಾ ಅವರ ಗ್ರಂಥ ಸಂಪಾದನೆಯ ಕೃತಿಗಳಲ್ಲಿ ಮನಸೆಳೆಯುವ 'ಸಾಳ್ವ ಭಾರತ'ದ ವಿಸ್ತೃತ ವಿವೇಚನೆಯು ಈ ಪ್ರಬಂಧದ ಉದ್ದೇಶ.

ಬೆಂಗಳೂರು ವಿಶ್ವವಿದ್ಯಾಲಯದ ಪ್ರಸಾರಾಂಗವು ೧೯೭೭ರಲ್ಲಿ ಹಂಪನಾ ಅವರಿಂದ ಸಂಪಾದಿಸಲ್ಪಟ್ಟ 'ಸಾಳ್ವ ಭಾರತ'ದ ಬೃಹತ್‌ಗ್ರಂಥವನ್ನು ಹೊರತಂದಿದೆ. ಅರವತ್ತನೆಯ ದಶಕದ ಆರಂಭದಲ್ಲಿ ತುಮಕೂರು ಜಿಲ್ಲೆಯ ಕೊರಟಗೆರೆಯಲ್ಲಿ ದೊರೆತ ಏಕ ಹಸ್ತಪ್ರತಿಯನ್ನು ಹಂಪನಾ ಪರಿಷ್ಕರಿಸಿ, ಪ್ರಕಟಣೆಗೆ ಅಣಿಗೊಳಿಸಿದ್ದರೂ ವಿವಿಧ ಕಾರಣಗಳಿಂದ ತಡವಾಗಿ ಅಚ್ಚಾಗಿ ಕನ್ನಡಿಗರು ಸಾಳ್ವಕವಿಯ ಅಪೂರ್ವ ಕಾವ್ಯವನ್ನು ಪಡೆದು ಸಂತೋಷಿಸುವಂತಾಗಿದೆ. 'ಸಾಳ್ವ ಭಾರತ'ವು ಮುನ್ನುಡಿ. ಸಂಪಾದಕನ ಅರಿಕೆ. ಪ್ರಸ್ತಾವನೆ (xcvi ಪುಟಗಳು) ಗಳನ್ನು ಹೊರತುಪಡಿಸಿ ೭೪೫ ಪುಟಗಳ ಬೃಹತ್ ವ್ಯಾಪ್ತಿಯನ್ನು ಹೊಂದಿದೆ. ಸಾಳ್ವ ಭಾರತದಲ್ಲಿ ೩೪೩೭ ವಿವಿಧ ಬಗೆಯ ಷಟ್ಪದಿಯ ಪದ್ಯಗಳು ೬೪ ಸಂಧಿಗಳಲ್ಲಿ ಕೋದುಕೊಂಡಿವೆ. ಗ್ರಂಥದ ಕೊನೆಯಲ್ಲಿರುವ ಅನುಬಂಧದಲ್ಲಿ ೫ ಭಾಗಗಳಿವೆ. ಸಾಳ್ವಭಾರತದ ಪದ್ಯಗಳ ಅಕಾರಾದಿ, ಜೈನ ತೀರ್ಥಂಕರರು, ಜೈನಾಚಾರ್ಯರು, ಜೈನ ಪಾರಿಭಾಷಿಕ ಪದಗಳು, ಸಾಳ್ವಭಾರತದ ಸಾಹಿತ್ಯಾಧ್ಯಯನ ಸೂಚಿ ಇರುವುದಲ್ಲದೆ ಕಾವ್ಯ ಪ್ರಾರಂಭಕ್ಕೆ ಮೊದಲು ಸಾಳ್ವಭಾರತದ ಹಸ್ತಪ್ರತಿಯ ಮೇಲಿನ ನೇಮಿನಾಥನ ಚಿತ್ರ ಮತ್ತು ಹಂಪನಾ ಸಂಗ್ರಹಿಸಿದ ಹಸ್ತಪ್ರತಿಯ ತಾಳೆಗರಿಯ ಎರಡೂ ಚಿತ್ರಗಳೂ ಇವೆ. ಇವುಗಳನ್ನೆಲ್ಲ ಸೇರಿಸಿ ಪ್ರಕಟಿಸುವಲ್ಲಿ ಹಂಪನಾ ಅವರ ಅಪಾರ ಪರಿಶ್ರಮ ಮತ್ತು ವಿದ್ವತ್ತು ಗೋಚರಿಸುತ್ತದೆ.

ಸಾಳ್ವಭಾರತವು ಕನ್ನಡದ ಒಂದು ಮಹತ್ವದ ಕಾವ್ಯ. ಇದನ್ನು ರಚಿಸಿದ ಕವಿ ಉತ್ತರ ಕನ್ನಡ ಜಿಲ್ಲೆಯವನಾದ ಸಾಳ್ವಕವಿ. ಅಲಂಕಾರಿಕನೂ ಕವಿಯೂ ಆದ ಸಾಳ್ವನು ಬರೆದ ಈ ಬೃಹತ್ ಕಾವ್ಯದ ಉತ್ತಮವಾದ ಹಸ್ತಪ್ರತಿ ದೊರಕದೆ ಅವನ ಕವಿತ್ವ ಶಕ್ತಿಯ ಬಗ್ಗೆ ಸಾಹಿತ್ಯಚರಿತ್ರೆಯಲ್ಲಿ ಮಹತ್ವದ ಸ್ಥಾನ ಲಭಿಸಿರಲಿಲ್ಲ. ಹಂಪನಾ ಅವರು ಸಾಳ್ವಭಾರತದ ಏಕ ಹಸ್ತಪ್ರತಿಯ ಆಧಾರದಿಂದ ಇದನ್ನು ಸಂಪಾದಿ

ಸಿದ್ದಾರೆ. ಇದರಿಂದ ಕನ್ನಡದ ಸಾಹಿತ್ಯ ಚರಿತ್ರೆಗೂ ಜೈನಸಾಹಿತ್ಯದ ಅಧ್ಯಯನಕ್ಕೂ ಷಟ್ಪದಿ ಕಾವ್ಯಪರಂಪರೆಗೂ ನೂತನ ಕೃತಿ ಲಭಿಸಿದಂತಾಗಿದೆ ಈ ದೃಷ್ಟಿಯಿಂದ ವಂಶಿನಾ ಅವರು ಮಾಡಿರುವ ಕಾರ್ಯ ಅನುಪಮವಾದದ್ದಾಗಿದೆ.

ಸಾಳ್ವಭಾರತವೆಂದು ಪ್ರಸಿದ್ಧವಾದ ಈ ಕಾವ್ಯಕ್ಕೆ 'ನೇಮಿನಾಥ ಚರಿತೆ' ಎಂಬ ಹೆಸರೂ ಇದೆ. ವಾಸ್ತವವಾಗಿ ಈ ಕಾವ್ಯವು ನೇಮಿನಾಥ ತೀರ್ಥಂಕರರನ್ನು ಕುರಿತ ಕಾವ್ಯವನ್ನಾಗಿ ರಚಿಸುವುದು ಕವಿಯ ಉದ್ದೇಶ. ಪಂಪನ ವಿಕ್ರಮಾರ್ಜುನ ವಿಜಯವು 'ಪಂಪಭಾರತ'ವೆಂದು ಖ್ಯಾತವಾದಂತೆ ಸಾಳ್ವನ ನೇಮಿನಾಥನ ಚರಿತೆಯ ಕಾವ್ಯ 'ಸಾಳ್ವಭಾರತ'ವಾಗಿದೆ. ಸಾಳ್ವಭಾರತವನ್ನು ಅಧ್ಯಯನ ಮಾಡುವಾಗ ಮಹಾಭಾರತ ಪರಂಪರೆಯನ್ನೂ ನೇಮಿನಾಥ ಸಾಹಿತ್ಯ ಪರಂಪರೆಯನ್ನೂ ತಿಳಿಯುವುದು ಅವಶ್ಯಕ.

ಕನ್ನಡ ಸಾಹಿತ್ಯದಲ್ಲಿ ಮುಖ್ಯವಾಗಿ ಮಹಾಭಾರತದ ಎರಡು ಪರಂಪರೆಗಳಿವೆ. ಮೊದಲನೆಯದು ವೈದಿಕ ಪರಂಪರೆಯಾದರೆ ಎರಡನೆಯದು ಜೈನ ಪರಂಪರೆಯಾಗಿದೆ. ವೈದಿಕಪರಂಪರೆಗೆ ವ್ಯಾಸಭಾರತವು ಮೂಲವಾಗಿದ್ದರೆ ಜೈನ ಪರಂಪರೆಗೆ ಜಿನಸೇನಾಚಾರ್ಯರ ಹರಿವಂಶ ಪುರಾಣವು ಆಕರಗಳಾಗಿವೆ. ವೈದಿಕ ಕವಿಗಳು ವ್ಯಾಸನನ್ನು ಅನುಸರಿಸಿದರೆ ಜೈನಕವಿಗಳು ವ್ಯಾಸ–ಜಿನಸೇನರಿಬ್ಬರನ್ನೂ ಅನುಸರಿಸಿದ್ದಾರೆ. ಆದರೆ ಪಂಪ-ರನ್ನರ ಕಾವ್ಯಮಾರ್ಗ ಭಿನ್ನವಾದದ್ದಾಗಿದೆ. ಅವರಿಗೆ ಮಹಾಭಾರತವು ಲೌಕಿಕದ ಕಥೆಯಾಗಿದೆ. ಅವರ ಕಾವ್ಯದಲ್ಲಿ ಮಹಾಭಾರತದ ಕಥೆಯ ಜೊತೆಗೆ ಅಂದಿನ ಸಮಾಜ ಜೀವನವು ಮೇಳವಿಸಿದೆ. ಹೀಗೆ ಕನ್ನಡದಲ್ಲಿ ವ್ಯಾಸಭಾರತ ಪರಂಪರೆ ಕುಮಾರವ್ಯಾಸ ಮೊದಲಾದ ಕವಿಗಳ ಮೂಲಕವೂ ಜಿನಭಾರತ ಪರಂಪರೆಯು ಒಂದನೆಯ ಗುಣವರ್ಮನಿಂದ ಹಿಡಿದು ಸಾಳ್ವನವರೆಗೂ ಬೆಳೆದು ಬಂದಿದೆ.

ನೇಮಿನಾಥ ಸಾಹಿತ್ಯವು ಕನ್ನಡದ ಪ್ರಾಚೀನ ಸಾಹಿತ್ಯದಲ್ಲಿ ಬಹುವಾಗಿದೆ. ಕ್ರಿ.ಶ. ೯ನೆಯ ಶತಮಾನದವನೆಂದು ಹೇಳಲಾಗುವ ಒಂದನೆಯ ಗುಣವರ್ಮನ ಹರಿವಂಶ ಪುರಾಣವು ಅನುಪಲಬ್ಧ ಮೊದಲ 'ನೇಮಿನಾಥ ಪುರಾಣ'. ನೇಮಿಚಂದ್ರನ (೧೧೭೦) 'ಅರ್ಧನೇಮಿ ಪುರಾಣ', ಬಂಧುವರ್ಮನ (೧೨೦೦) 'ಹರಿವಂಶಾಭ್ಯುದಯ'. ಮಹಾಬಲ (೧೨೫೪) ಕವಿಯ 'ನೇಮಿನಾಥ ಪುರಾಣ' ಈ ಎಲ್ಲಾ ಕಾವ್ಯಗಳು ಚಂಪೂವಿನಲ್ಲಿರುವ ಅಂದರೆ ಮಾರ್ಗಕಾವ್ಯ ಪದ್ಧತಿಯಲ್ಲಿ ಬಂದ ಜಿನಭಾರತಗಳಾಗಿವೆ. ಈ ನೇಮಿನಾಥ ಪುರಾಣಗಳ ಲೌಕಿಕ ಅಧ್ಯಯನ ಗ್ರಂಥವನ್ನು (ಡಾ॥ ಟಿ. ವಿ. ವಿ. ಶಾಸ್ತ್ರಿ) ಮೈಸೂರು ವಿಶ್ವವಿದ್ಯಾಲಯ ಪ್ರಕಟಿಸಿದೆ. ನೇಮಿನಾಥ ಸಾಹಿತ್ಯವು ಮಾರ್ಗ ಪರಂಪರೆಯಲ್ಲಿ ಚಂಪೂವಿನಲ್ಲಿ ರಚಿತವಾಗಿ ಪಂಡಿತ ಮಾನ್ಯರ ಮನಗೆದ್ದರೆ ದೇಸಿಪರಂಪರೆಯಲ್ಲಿ ಮೊದಲ ಜಿನಭಾರತವಾಗಿ ಜನಪ್ರಿಯ







ವಾಗಿರುವ ಕಾವ್ಯವೇ ಸಾಳ್ವಭಾರತವಾಗಿದೆ. ಇದು ಸಾಳ್ವನ ಕೀರ್ತಿಯಾಗಿರು ವಂತೆಯೇ ಹಂಪನಾ ಅವರು ಕನ್ನಡಲೋಕಕ್ಕೆ ಸಮರ್ಪಕವಾಗಿ ಸಂಪಾದಿಸಿ ಕೊಟ್ಟಿರುವುದೂ ಮಹತ್ವದ್ದಾಗಿದೆ.

'ಸಾಳ್ವಭಾರತ'ದ ಪ್ರಾರಂಭದಲ್ಲಿ ಹಂಪನಾ ಬರೆದ ಪ್ರಸ್ತಾವನೆ ಗಮನಾರ್ಹ ವಾಗಿದೆ. ಇದರಲ್ಲಿ ಅವರು ಕವಿಯ ದೇಶ ಕಾಲ ಜೀವನ ಪರಿಸರ ಮತ್ತು ಕೃತಿಯ ವೈಶಿಷ್ಟ್ಯವನ್ನು ವಿವೇಚಿಸುವಲ್ಲಿ ಹೊಸ ಸಂಶೋಧನಾಂಶಗಳನ್ನು ಪ್ರಕಟಿಸಿ ದ್ದಾರೆ. ಕನ್ನಡ ಸಾಹಿತ್ಯದಲ್ಲಿ ನೇಮಿನಾಥ ತೀರ್ಥಂಕರರನ್ನು ಕುರಿತ ಸಾಹಿತ್ಯದ ಸಮಾಲೋಚನೆ ಮಾಡಿ ಸಾಳ್ವನ ಹಿರಿಮೆಯನ್ನು ವಿವೇಚಿಸಿರುವುದೂ ಮುಖ್ಯ ವಾಗಿದೆ. ಅವರು ಹೇಳಿರುವ ಹಾಗೆ ಕನ್ನಡದಲ್ಲಿ ನೇಮಿನಾಥ ತೀರ್ಥಂಕರರಷ್ಟು ವಿಸ್ತಾರಕ್ಕೆ ಯಾವ ತೀರ್ಥಂಕರರನ್ನೂ ಕುರಿತು ಕಾವ್ಯಗಳು ಬರಲಿಲ್ಲ. ಚಾವುಂಡ ರಾಯ ಪುರಾಣದಲ್ಲಿ ನೇಮಿನಾಥನ ಕಥೆ ಕೇವಲ 16 ಪುಟಗಳಲ್ಲಿ ಮುಗಿದು ಹೋಗುತ್ತದೆ. ಚಾವುಂಡರಾಯ ಶಾಸ್ತ್ರಕಾರ. ಸಾಳ್ವ ಅಲಂಕಾರಿಕನಾಗಿದ್ದರೂ ನೇಮಿನಾಥನ ಕಥೆಯನ್ನು ವಿಸ್ತಾರವಾಗಿ ಹೇಳಿರುವುದು ಅವನ ವೈಶಿಷ್ಟ್ಯವೇ ಸರಿ. ನೇಮಿನಾಥನ ವಸ್ತುಕೃತಿ ಮಾಲೆಯ ವಿವರವಾದ ಪರಿಚಯವನ್ನು ಹಂಪನಾ ಮಾಡಿರುವುದು ಆ ಸಾಹಿತ್ಯದ ವಿಸ್ತಾರವನ್ನು ಗುರುತಿಸಲು ಸಾಧ್ಯವಾಗುತ್ತದೆ. ನೇಮಿನಾಥ ಸಾಹಿತ್ಯ ಕನ್ನಡದಲ್ಲಿ ವಿಶಿಷ್ಟವಾಗಿರುವುದಕ್ಕೆ ಹಂಪನಾ ಹೇಳಿರುವ ಮಾತುಗಳು ಸರ್ವಗ್ರಾಹ್ಯವಾದದ್ದಾಗಿವೆ. ನೇಮಿನಾಥ ಪುರಾಣದಲ್ಲಿ ಕಾವ್ಯಗುಣ ಮತ್ತು ಕಥಾಂಶ, ಶಾಸ್ತ್ರ ವಿವರಣೆ, ಭಾರತ-ಭಾಗವತಗಳ ಮೇಳ ಇವೆಲ್ಲಾ ಕೂಡಿ ಕೊಂಡು ಜನಪ್ರಿಯತೆಯನ್ನು ವಗ್ಗಳಿಸಿವೆ. ಮಹಾಭಾರತ ಕಥೆ ಮತ್ತು ಜೈನ ವೈದಿಕ ಸಿದ್ಧಾಂತ ಸಮನ್ವಯ ಕೋದುಕೊಂಡಿದೆ. ನೇಮಿನಾಥ ಪುರಾಣ ಮಹಾ ಭಾರತವೂ ಜೈನ ಪುರಾಣಕ್ಕೆ ಜೈನ ಪುರಾಣವೂ ಆಗಿರುವದು. ಇದು ಸಾಳ್ವ ಭಾರತಕ್ಕೂ ಅನ್ವಯಿಸುವ ವಿಚಾರವಾಗಿದೆ.

ಪ್ರಾಚೀನ ಕರ್ನಾಟಕದಲ್ಲಿ ಉತ್ತರ ಕನ್ನಡ ಜಿಲ್ಲೆಯ ಘಟಕಳದ ಗೇರು ಸೊಪ್ಪೆಯು ಸಾಳ್ವ ರಾಜರ ರಾಜಧಾನಿಯಾಗಿ ಪ್ರಸಿದ್ಧವಾಗಿತ್ತು. ಇದು ಅಂದು ಸಂಗೀತಪುರವೆಂದೂ ಹಾಡುವಳ್ಳಿಯೆಂದೂ ನಗಿರೆ ರಾಜ್ಯದ ಕೇಂದ್ರಸ್ಥಳವಾಗಿ ವಿಜೃಂಭಿಸಿತ್ತು. ತುಳುನಾಡ ಅರಸರು ೧೪ನೆಯ ಶತಮಾನದಿಂದಲೇ ಇದನ್ನು ಆಳುತ್ತಲಿದ್ದರು. ಕವಿ ಸಾಳ್ವನು 'ಎಸೆವ, ತಾಳವ, ಹೈವ, ಕೊಂಕಣ ದೇಶಾಧಿನಾಥಾ' ಎಂದು ಹೇಳಿರುವದು ಅಂದಿನ ವಿಸ್ತಾರ ರಾಜ್ಯದ ಸಂಕೇತವಾಗಿದೆ. ನಗಿರೆ ದೊರೆ ಗಳಲ್ಲಿ ಸಾಳ್ವ ಎಂಬ ಹೆಸರಿನ ಅನೇಕ ದೊರೆಗಳಿದ್ದಾರೆ. ಕವಿ ಸಾಳ್ವ ಯಾರು, ಹೆಸರು ಭಾಷಿತವಾಗಿ ಹೇಗೆ ಬಂದಿದೆ ಎಂಬುದನ್ನು ಹಂಪನಾ ಅತ್ಯಂತ ಸಮರ್ಪಕವಾಗಿ ಗುರುತಿಸಿದ್ದಾರೆ. ಅದು ಚೆಲುವ→ಸಲ್ವ→ಸಲುವ→ಸಾಳ್ವ ಎಂದಾಗಿದೆ. ಇದು

ದ್ರಾವಿಡ ಭಾಷೆಗಳಲ್ಲಿ ಕಂಡುಬರುವ ಜ ಸ ಪಲ್ಲಟವಾಗಿದೆ. ಸಾಳ್ವ ನಗಿರೆ ರಾಜ್ಯದ ರಾಜಕವಿಯಾಗಿದ್ದ. ಯಾಕೆಂದರೆ ನಗಿರೆ ರಾಜ್ಯದ ದೊರೆಗಳು ಸಾಹಿತ್ಯ, ಸಂಗೀತ ಲಲಿತಕಲೆಗಳಿಗೆ ಉತ್ತೇಜನ ನೀಡಿ ಪ್ರೋತ್ಸಾಹಿಸಿದವರು. ಅಭಿಯಪ್ಪ ಪಾಯಣ, ವಿದ್ಯಾನಂದ, ಸಾಳ್ವ ಕವಿಗಳು ನಗಿರೆ ರಾಜ್ಯದ ಕವಿ ಪುಂಗವರು. ಆ ಕಾಲದ ಸಾಹಿತ್ಯ ಮೃತ್ಯುಂಜಯವಾಗಿ ಉಳಿದು ಬಂದಿದೆ.

ಸಾಳ್ವ ಕವಿಯ ವಿಚಾರದಲ್ಲಿ ಈವರೆಗೆ ನಿರ್ದಿಷ್ಟವಾಗಿ ಸಂಶೋಧಿತವಾಗಿರಲಿಲ್ಲ. ಕವಿಚರಿತೆಕಾರರು ಕ್ರಿ.ಶ.ಸು. ೧೫೫೦ ಎಂದಿರುವುದನ್ನು ಮುಂದಿನ ಸಾಹಿತ್ಯಚರಿತ್ರಕಾರರು ಉಲ್ಲೇಖಿಸುತ್ತ ಬಂದಿದ್ದಾರೆ. ಯಾವುದೇ ಕವಿಯ ಕಾಲನಿರ್ಣಯ ಮಾಡುವಾಗ ಆಂತರಿಕ ಮತ್ತು ಬಾಹ್ಯ ಆಧಾರಗಳನ್ನು ಪರಿಶೀಲಿಸಬೇಕಾಗುತ್ತದೆ. ಹಂಪನಾ ಅವರು ಇವೆರಡನ್ನೂ ಕೂಲಂಕಷವಾಗಿ ಪರಿಶೀಲಿಸಿದವರು. ಅವರು ಜೈನ ಸಂಸ್ಕೃತಿ ಪರಂಪರೆಯನ್ನು ಆಳವಾಗಿ ಅವಲೋಕಿಸಿದವರು. ಸಾಳ್ವಕವಿ ಹೇಳಿದ ವಿಜಯಕೀರ್ತಿ ಮತ್ತು ಶ್ರುತಕೀರ್ತಿಗಳ ಪರಿಶೀಲನೆಯ ಮೂಲಕ ನೂತನವಾದ ಆಧಾರಗಳನ್ನು ಹಂಪನಾ ಒದಗಿಸಿ ಈ ಕವಿಯ ಕಾಲ ಕ್ರಿ.ಶ. ೧೪೮೫ ಎಂದು ಪ್ರಕಟಿಸಿರುವದು ಕನ್ನಡ ಸಾಹಿತ್ಯ ಚರಿತ್ರೆಗೆ ಸಾಳ್ವನಂತಹ ಹಿರಿಯ ಕವಿಯ ಕಾಲದ ವಿಷಯವಾಗಿ ಇರುವ ಸಂದಿಗ್ಧತೆ ದೂರವಾಗಿ ನಿರ್ದಿಷ್ಟತೆ ಪ್ರಾಪ್ತವಾದಂತಾಗಿದೆ. ಸಾಳ್ವಕವಿಗೆ ಆಶ್ರಯ ಕೊಟ್ಟ ನಗಿರೆ ರಾಜ್ಯದ ದೊರೆಗಳೆಂದರೆ ಸಾಳ್ವಮಲ್ಲ ಮತ್ತು ಸಾಳ್ವದೇವರು. ಇವರಿಬ್ಬರನ್ನೂ ಸಾಳ್ವ ಕವಿ ಪ್ರಶಂಸಿಸಿದ್ದಾನೆ.

ಸಾಳ್ವ ಕವಿಯ ಕೃತಿಗಳ ಸಂಖ್ಯೆಯನ್ನೂ ಅವುಗಳ ಮಹತ್ವವನ್ನೂ ಹಂಪನಾ ವಿದಿತಪಡಿಸಿದ್ದಾರೆ. ಸಾಳ್ವ ವೈದ್ಯಶಾಸ್ತ್ರ, ಅಲಂಕಾರ ಶಾಸ್ತ್ರ ಮತ್ತು ಕಾವ್ಯಶಾಸ್ತ್ರ ಕೃತಿಗಳಲ್ಲಿ ತನ್ನ ಪ್ರತಿಭೆ ಪಾಂಡಿತ್ಯವನ್ನು ತೋರಿದ್ದಾನೆ. ಅವನ ದೊರೆತ ಕೃತಿಗಳಲ್ಲಿ ಮುಖ್ಯವಾಗಿ ನಾಲ್ಕು. ಮೊದಲನೆಯದು 'ರಸರತ್ನಾಕರ.' ಇದು ಕನ್ನಡದ ಅಲಂಕಾರ ಗ್ರಂಥಗಳಲ್ಲಿ ಪ್ರಸಿದ್ಧವಾಗಿದೆ. ಕನ್ನಡದಲ್ಲಿ 'ಧ್ವನಿ' ವಿಷಯವನ್ನು ಸಾರುವ ಮೊದಲ ಕೃತಿಯಾಗಿರುವ ಎರಡನೆಯದಾದ 'ಶಾರದಾ ವಿಲಾಸ'ವು ಅಪೂರ್ಣವಾಗಿದೆ. 'ವೈದ್ಯಸಾಂಗತ್ಯ'ವು ಸಾಳ್ವನು ಬರೆದ ವೈದ್ಯಶಾಸ್ತ್ರವನ್ನು ಕುರಿತಾದ ಗ್ರಂಥ. ನಾಲ್ಕನೆಯದಾದ ಸಾಳ್ವ ಭಾರತವು ನೇಮಿನಾಥ ಪುರಾಣ ಕಾವ್ಯವಾಗಿ ಜನಜನಿತವಾಗಿದೆ. 'ರಸ ರತ್ನಾಕರ'ವನ್ನು ಹಳೆಗನ್ನಡದಲ್ಲಿ ಬರೆದ ಕವಿ 'ಸಾಳ್ವ ಭಾರತ'ವನ್ನು ನಡುಗನ್ನಡದಲ್ಲಿ ಬರೆದದ್ದು ಸ್ವಾರಸ್ಯಕರವಾದದ್ದೆಂದು ಹಂಪನಾ ಹೇಳಿದ್ದಾರೆ. ಅವನ ಶಾಸ್ತ್ರ ಕಾವ್ಯಪರಿಣತಿಯನ್ನು ತೋರಿರುವದು ಮಾತ್ರವಲ್ಲ, ಹಳೆಗನ್ನಡ–ನಡುಗನ್ನಡಗಳ ಪ್ರೌಢಿಮೆಯು ಅವನ ಕೃತಿಗಳಲ್ಲಿ ಅಂತಸ್ಥವಾಗಿರುವದನ್ನು ವಿವೇಚಿಸಿದ್ದಾರೆ. ಅವನ ಗಣ್ಯ ಕವಿತ್ವಕ್ಕೆ 'ಸಾಳ್ವಭಾರತ'ವೇ ಸಾಕ್ಷಿ ಎಂದು ಹಂಪನಾ ಹೇಳಿರುವುದಕ್ಕೆ ಎರಡು ಮಾತುಗಳಿಲ್ಲ. ಸಾಮಾನ್ಯವಾಗಿ

ಪ್ರಾಚೀನ ಕಾವ್ಯಗಳ ಗ್ರಂಥ ಸಂಪಾದನೆ ಮಾಡುವಾಗ ಪ್ರಸ್ತಾವನೆಯಲ್ಲಿ ಕಾವ್ಯದ ಕಥಾವಸ್ತುವನ್ನು ವಿಸ್ತಾರವಾಗಿ ಹೇಳುವ ಕ್ರಮವನ್ನು ಹಂಪನಾ ಬಿಟ್ಟು ಬಿಟ್ಟು ಕಾವ್ಯದ ವಸ್ತು ವಿವೇಚನೆ ಮತ್ತು ವಿಮರ್ಶೆಗೆ ಹೆಚ್ಚಿನ ಪ್ರಾಧಾನ್ಯ ನೀಡಿರುವದು ಗಮನಾರ್ಹ ಸಂಗತಿಯಾಗಿದೆ. ಇದು ಗ್ರಂಥ ಸಂಪಾದನೆಯ ಆದರ್ಶವೂ ಆಗಿರುವದು. ಸಾಳ್ವ ಭಾರತವು ೬೪ ಸಂಧಿಗಳ ೧೬ ಪರ್ವಗಳ ಒಂದು ಉದ್ಘ್ರಕೃತಿ. ಇದು ಗಾತ್ರದಲ್ಲಿ ಬೃಹತ್ತಾದುದಾದ್ದರಿಂದ ಕವಿ ಛಂದಸ್ಸಿನಲ್ಲಿ ವೈವಿಧ್ಯತೆ ತರಲು ಯತ್ನಿಸಿರುವನಾದರೂ ಭಾಮಿನಿ ಷಟ್ಪದಿಯೇ ಬಹುಪಾಲು ಪದ್ಯಗಳಲ್ಲಿ ಅಂತಸ್ಥ ವಾಗಿದೆ. ಈ ಕಾವ್ಯದ ವೈಶಿಷ್ಟ್ಯಗಳನ್ನು ಹಂಪನಾ ಅವರು ಸಮರ್ಪಕವಾಗಿ ಗುರುತಿಸಿದ್ದಾರೆ. ಸಾಳ್ವಭಾರತದಲ್ಲಿ ಮಹಾಭಾರತದ ಕಥೆಯೇ ತುಂಬಿಕೊಂಡಿ ದ್ದರೂ ಪಾಂಡವರು ನಾಯಕರಲ್ಲ. ಆದರೆ ೨೨ನೆಯ ತೀರ್ಥಂಕರ ನೇಮಿನಾಥನೇ ನಾಯಕ. ಕುರುವಂಶ, ಯದುವಂಶ ಮತ್ತು ಹರಿವಂಶದ ಕಥೆ ಇದರಲ್ಲಿ ಬೆರೆತು ಕೊಂಡಿದೆ. ವಾಸ್ತವಿಕವಾಗಿ ಈ ಜಿನ ಭಾರತದ ಕಥೆಯೇ ಕಾವ್ಯದ ಕೇಂದ್ರ ಸ್ವರೂಪ ವಾಗಿರಬೇಕಿತ್ತು. ಆದರೆ ಹಾಗಾಗದೇ ಮಹಾಭಾರತದ ಕಥೆ ಮುಂದಾಗಿರುವದು ಎಂದು ಹಂಪನಾ ಸಾಳ್ವ ಭಾರತದಲ್ಲಿ ಕಂಡುಬರುವ ಕೊರತೆಯನ್ನೂ ಹೇಳಿದ್ದಾರೆ. ಅವರು ಹೇಳಿರುವ ಹಾಗೆ ಸಾಳ್ವ ಭಾರತಕ್ಕೂ ನೇಮಿನಾಥನೇ ಮುಖ್ಯ ವ್ಯಕ್ತಿ ಯಾದರೂ ಇಲ್ಲಿ ಅವನ ಕಥೆ ಬರುವದು ಬಹಳ ಕಡಿಮೆ. ೧೦ ಸಂಧಿಗಳಲ್ಲಿ ಅವನ ಕಥೆ ಇದ್ದರೆ ಉಳಿದ ೫೪ರಲ್ಲಿ ಅವನ ಬಂಧುಗಳ ಕಥೆ ಇದೆ. ಇಲ್ಲಿ ನಿಜಕ್ಕೂ ಔಚಿತ್ಯ ಪ್ರಜ್ಞೆ ಪ್ರಶ್ನಾರ್ಹವಾಗುತ್ತದೆ. ಸಾಳ್ವಕವಿ ವಸ್ತುವಿನ ನಿರ್ವಹಣೆಯಲ್ಲಿ ನೇಮಿಚಂದ್ರನ ನೆರಳಿನಲ್ಲಿ ಸಾಗಿದ್ದರೂ ಭಾಮಿನಿಯ ಲಯದಲ್ಲಿ ನಾರಣಪ್ಪನ ಅನುಯಾಯಿಯಾಗಿದ್ದಾನೆ ಎಂದು ಹಂಪನಾ ವಿದಿತ ಪಡಿಸಿದ್ದಾರೆ. ಈ ದೃಷ್ಟಿಯಲ್ಲಿ ಸಾಳ್ವನ ಸಮಕಾಲೀನನಾದ ಮೂರನೆಯ ಮಂಗರಸ ಕವಿ ಸಾಳ್ವನ ಪ್ರಭಾವಕ್ಕೆ ಪಾತ್ರನಾಗಿದ್ದಾನೆ ಎಂದು ಸಾಳ್ವನ ಪ್ರಭಾವ ಮುದ್ರೆಯನ್ನೂ ಹಂಪನಾ ಗುರುತಿಸಿದ್ದಾರೆ.

ಹಂಪನಾ ಅವರು ಕನ್ನಡದ ಶ್ರೇಷ್ಠ ಭಾಷಾ ವಿಜ್ಞಾನಿಗಳಾದುದರಿಂದ ಸಾಳ್ವನ ಶಬ್ದ ಭಂಡಾರದ ವೈಶಿಷ್ಟ್ಯವನ್ನು ವಿವೇಚಿಸುವಲ್ಲಿ ಅವರ ಪಾಂಡಿತ್ಯ ಶ್ರೀಮಂತಿಕೆ ಗೋಚರವಾಗುವದು. ಸಾಳ್ವಭಾರತದ ಕೆಲವು ಅಪೂರ್ವ ಪ್ರಯೋಗಗಳ ವಿಶ್ಲೇಷಣೆಯೂ ಇಲ್ಲಿದೆ. ಬಡಹ, ಕಿಱಿಳೆ, ವಡಪ್ಪ–ಈ ಮೂರು ಪ್ರಯೋಗಗಳು ಶಕಟರೇಫಯುಕ್ತಗಳು. ಯಾಕೆಂದರೆ ಮೂರೂ ಕಡೆ ಅವು ಪ್ರಾಸಸ್ಥಾನದಲ್ಲಿವೆ ಎಂಬ ತೀರ್ಮಾನ ಒಪ್ಪತಕ್ಕದ್ದು. ದ್ರಾವಿಡ ಭಾಷೆಗಳಲ್ಲಿ ಕಂಡುಬರುವ ಇ/ಎ ಪರಿವರ್ತನೆ ಕಿವುಡು>ಕೆವುಡು. ಕೆಪ್ಪ ಪ್ರಯೋಗದಲ್ಲಿ ಕಾಣಸುವದು 'ಅರದ' ಶಬ್ದದಿಂದ 'ಅರಸ' ಶಬ್ದದ ರೂಪವು ಬಂದಿರುವದು ತಮಿಳಿನ ಭಾಷಾ ಸ್ವೀಕರಣದ ಪ್ರತೀಕ ಮುಂತಾದ ವಿಚಾರಗಳು ಭಾಷಾ ವಿವೇಚನೆಯಲ್ಲಿ ಬಂದಿವೆ.

ಸರಸ್ವತಿ ವಿಜಯಕುಮಾರ್

## ಧನ್ಯಕುಮಾರ ಚರಿತೆ

ಪಾಂಡಿತ್ಯದ ನೆಲೆಯಲ್ಲಿ ನಿಂತು ಎಸಗುವ ಸಂಶೋಧನಾತ್ಮಕ ಕಾರ್ಯದ ಜೊತೆ ಜೊತೆಗೇ, ಸಹೃದಯತೆಯಿಂದ ಕವಿಯ ಕಣ್ಣಿಗೆ ಬೆಳಕನ್ನು ಚೆಲ್ಲುವ ಅಪೂರ್ವ ಶಕ್ತಿಯಾಗಿದೆ ಗ್ರಂಥ ಸಂಪಾದನೆಯ ಕೆಲಸ. ಗ್ರಂಥ ಸಂಪಾದನೆಯ ಕಾರ್ಯದಲ್ಲಿ ಮುಖ್ಯವಾಗಿ ಸಾಮಗ್ರಿ ಸಂಕಲನ – ಮೂಲಪಾಠನಿರ್ಣಯ ಉನ್ನತ ವಿಮರ್ಶೆ ಎಂಬ ಪ್ರಮುಖ ಹಂತಗಳಿವೆ. ಮೇಲಿನ ದೃಷ್ಟಿಯಿಂದ ಗ್ರಂಥ ಸಂಪಾದಕನ ಕೆಲಸ ಸ್ವತಂತ್ರ ಕೃತಿಕಾರನಿಗಿಂತ ಹೆಚ್ಚಾಗುತ್ತದೆ.

ಡಾ. ಹಂಪನಾ ಅವರು ಆದಿಯಪ್ಪ ಕವಿಯ ಧನ್ಯಕುಮಾರ ಚರಿತೆಯ ಸಂಪಾದಕರು. ಸಾಹಿತ್ಯ ಪ್ರಪಂಚದಲ್ಲಿ ಎಲೆ ಮರೆಯ ಹೂವಿನಂತೆ ಅರಳಿ ನಿಂತಿರುವ ಕಾವ್ಯಗಳು ಅಪಾರ. ಈ ಕಾವ್ಯ ಭಂಡಾರವನ್ನು ಹೊರತರುವುದೂ ಸಾಹಿತ್ಯರಂಗಕ್ಕೆ ಸಲ್ಲಿಸುವ ಉತ್ತಮ ಸೇವೆಯೇ ಸರಿ. ಜೊತೆಗೆ ಸಾಹಸದ ಕೆಲಸವೂ ಹೌದು. ಇವರು ಕಾವ್ಯ ಸಂಪಾದನೆಯ ಜೊತೆಗೆ ವಿಮರ್ಶಾತ್ಮಕವಾದ ಮುನ್ನುಡಿಯನ್ನೂ ಸರಳ ಗದ್ಯಾನುವಾದದ ಹಿನ್ನುಡಿಯನ್ನೂ ಬರೆದು ಈ ಕಾವ್ಯದ ಪರಿಚಯವನ್ನು ಮಾಡಿಕೊಟ್ಟಿದ್ದಾರೆ.

ಆದಿಯಪ್ಪ ಕವಿಗೆ ಆದಿನಾಥ, ಆದಿದೇವ, ದೇವಪ್ಪ ಎಂಬ ಹೆಸರುಗಳೂ ಇದ್ದವು ಎಂಬುದನ್ನು ಹೇಳಿದ್ದಾರೆ, ಪಟಹಸ್ತನ ಚರಿತೆ, ಧನ್ಯಕುಮಾರ ಚರಿತೆ, ಅನಂತವ್ರತ ಚರಿತೆಗಳನ್ನೂ ಈತನು ಬರೆದಿರುವುದಾಗಿ ಹೇಳಿದ್ದಾರೆ. ಕೆ. ಆರ್. ವಿಜಯಲಕ್ಷ್ಮಿಯವರು 'ಕನ್ನಡ ಸಾಂಗತ್ಯ ಗ್ರಂಥಗಳು' ಎಂಬ ತಮ್ಮ ಪಿಎಚ್.ಡಿ. ಪ್ರಬಂಧದಲ್ಲಿ ಸುಕುಮಾರ ಚರಿತೆಯೂ ಈತನದೇ ಎಂಬುದನ್ನು ಸಾಕಷ್ಟು ಆಧಾರಗಳಿಂದ

ತಿಳಿಸಿದ್ದಾರೆ. ಆದರೆ ಧನ್ಯಕುಮಾರ ಚರಿತೆಯ ಬಗೆಗೆ ಅಧ್ಯಯನವನ್ನು ನಡೆಸಿಲ್ಲ, ಉಲ್ಲೇಖಿಸಿದ್ದಾರೆ ಅಷ್ಟೇ. ಒಟ್ಟಿನಲ್ಲಿ ಈ ಕವಿಯ ಕೃತಿ ಒಟ್ಟು ನಾಲ್ಕಾಗುತ್ತವೆ.

ಹಂಪನಾರವರು ಈ ಕಾವ್ಯದ ಪ್ರಸ್ತಾವನೆಯಲ್ಲಿ ಧನ್ಯಕುಮಾರ ಚರಿತೆಯ ಕಥಾಸಾರವನ್ನೂ ನೀಡಿ ವಿಮರ್ಶೆಯ ಭಾಗದಲ್ಲಿ ಕಾವ್ಯದ ಭಾಷಾ ಗುಣ, ವರ್ಣನೆಯ ವೈಖರಿ, ಕಾವ್ಯದ ಆಶಯ ಮೊದಲಾದವುಗಳನ್ನು ಸಂಕ್ಷೇಪವಾಗಿ ವಿವರಿಸಿದ್ದಾರೆ. "ಧನ್ಯಕುಮಾರ ಚರಿತೆ ಆದಿಯಪ್ಪನಿಗೆ ಕವಿತನವನ್ನು ತಂದು ಕೊಟ್ಟಿರುವ ಗಟ್ಟಿಕಾವ್ಯ. ಇದು ಸಂಗ್ರಹ ಚಂಪೂಕಾವ್ಯದಂತಿದೆ. ಸಾಂಗತ್ಯಕಾವ್ಯವಾದರೂ ಕೆಲವು ಕಡೆ ಗದ್ಯವೂ ಎರಡೂ ರಗಳೆಗಳೂ ವೃತ್ತಕಂದ ಪದ್ಯಗಳೂ ಸೇರಿವೆ. ಸಾಂಗತ್ಯದ ಬಂಧ ಅಡೆತಡೆ ಇಲ್ಲದೆ ಲಲಿತವಾಗಿದೆ" ಎನ್ನುತ್ತಾರೆ. ಆದರೆ ಈ ಮಾತು ಎಷ್ಟರ ಮಟ್ಟಿಗೆ ಗಟ್ಟಿಯಾಗಿ ನಿಲ್ಲುತ್ತದೆ ಎಂಬುದು ಪ್ರಶ್ನಾರ್ಹ. ಇದಕ್ಕೆ ಮುಂದೆ ಕೆಲವು ಕಾರಣ ಗಳನ್ನು ಕೊಡಲಾಗಿದೆ.

ಇವರು ತಮ್ಮ ಸಂಪಾದನಾ ಕಾರ್ಯಕ್ಕೆ ಬಳಸಿಕೊಂಡಿರುವ ಪ್ರತಿಗಳು ನಾಲ್ಕು. ಮೂಡಬಿದ್ರೆಯಲ್ಲಿ ದೊರೆತ ಮೂರು ಪ್ರತಿಗಳ ಆಧಾರದಿಂದ (ಕಪ್ರತಿ–೧೯೪೦ : ಚಪ್ರತಿ (ಇಸವಿ ತಿಳಿದು ಬರುವುದಿಲ್ಲ : ಟಪ್ರತಿ–೧೭೮೬) ಹಾಗೂ ತಮ್ಮ ಸಂಗ್ರಹದ ತಾಳೆಗರಿಯ ಸಹಾಯದಿಂದ ಈ ಗ್ರಂಥವನ್ನು ಸಂಪಾದಿಸಿದ್ದಾರೆ. ಮೈಸೂರು-ಧಾರವಾಡದಲ್ಲಿರುವ ಹಸ್ತಪ್ರತಿಗಳನ್ನು ಬಳಸಿಕೊಂಡಿಲ್ಲವೆಂದು ಹೇಳಿದ್ದಾರೆ. ಅವುಗಳನ್ನೂ ಇನ್ನೂ ಹೆಚ್ಚಿನ ಪರಿಷ್ಕಾರ ಕಾರ್ಯವು ನಡೆಯಲು ಅವಕಾಶ ವಾಗುತ್ತಿತ್ತು.

ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ಅಧ್ಯಯನ ಸಂಸ್ಥೆಯಲ್ಲಿ ಆದಿಯಪ್ಪನ ಧನ್ಯಕುಮಾರ ಚರಿತೆಯ ನಾಲ್ಕು ಹಸ್ತಪ್ರತಿಗಳಿವೆ. ಅದರಲ್ಲಿ ಎರಡು ಕಾಗದದ ಮೇಲಿವೆ, ಮತ್ತೆರಡು ಓಲೆಗರಿಯ ಮೇಲೆ ಇವೆ. ಓಲೆಗರಿ ಸಂ. ೧೪೮೮ ಸಾಕಷ್ಟು ಹಳೆಯದು. ಸಂ. ೧೮೧೮ ರ ಓಲೆಗರಿಯ ಸ್ಥಿತಿ ಚೆನ್ನಾಗಿದೆ. ಓಲೆಗರಿಗಳ ಇಸವಿಯು ತಿಳಿದು ಬರುವುದಿಲ್ಲ. ಕಾಗದದ ಮೇಲೆ ಬರೆದ ಹಸ್ತಪ್ರತಿಯ ಕಾಲ ೧೯೦೯. ಪ್ರತಿಕಾರರು ಬೆ. ರಾಮಸ್ವಾಮಿಶಾಸ್ತ್ರಿ. ಕಾವ್ಯಾರಂಭಕ್ಕಿಂತ ಮುನ್ನ ಪ್ರತಿಕಾರರು ಸಣ್ಣ ಪ್ರಸ್ತಾವನೆಯನ್ನು ನೀಡಿದ್ದಾರೆ. ಧನ್ಯಕುಮಾರನ ಕಥೆಯನ್ನು ಸಂಕ್ಷಿಪ್ತವಾಗಿ ಗದ್ಯರೂಪದಲ್ಲಿ ಹೇಳಿದ್ದಾರೆ. ಈ ಪ್ರತಿಯಲ್ಲಿ ಸಾಲುಗಳ ವಿಂಗಡಣೆ ಮಾಡದೆ ಪದಗಳ ಸಂಖ್ಯೆಯನ್ನು ಮಾತ್ರ ಹಾಕಲಾಗಿದೆ. ಇಲ್ಲಿ ಕೆಲವು ಪದ್ಯಗಳಿಲ್ಲ. ಕಾಗದದ ಮೇಲೆ ಬರೆದ ಮತ್ತೊಂದು ಹಸ್ತಪ್ರತಿಯ ಸ್ಥಿತಿ ಚೆನ್ನಾಗಿದೆ. 'ಮೂಡಬಿದ್ರೆ ಪಡುಬಸ್ತಿ ಪದುಮಯ್ಯ ಉಪಾಧ್ಯಾಯರ ಪುತ್ರ ಪುರೋಹಿತ ಚಂದಪ್ಪೇಂದ್ರನ ಬರಹ ಎಂದಿದೆ.'

ಇದು ಹಂಪನಾ ಅವರಿಗೆ ಮೂಡಬಿದ್ರೆಯಲ್ಲಿ ದೊರೆತ 'ಟ' ಪ್ರತಿಯ ನಕಲು ಎಂದು ನಾನು ಭಾವಿಸಿದ್ದೇನೆ.

ಸಾಂಗತ್ಯದ ರೀತಿಯಲ್ಲಿಯೇ ಬರೆದಿದೆ. ವೃತ್ತ-ಕಂದಗಳೂ ಇವೆ. ಇತರ ಧನ್ಯಕುಮಾರ ಚರಿತ್ರೆಗಳನ್ನು ಕುರಿತು ಇವರು ಕೊಡುವ ಮಾಹಿತಿಗಳು ಹೀಗಿವೆ: ಗುಣಭದ್ರ ೧೨ ನೆಯ ಶತಮಾನ : ಪೂರ್ಣಭದ್ರ ೧೨೨೭, ಧನ್ಯಶಾಲಿಭದ್ರ ಚರಿತ್ರೆ : ಧರ್ಮಕುಮಾರ-೧೨೭೭ ಶಾಲಿಭದ್ರ ಚರಿತ (ಹೇಮಚಂದ್ರನ ಮಹಾವೀರಚರಿತದಿಂದ ಕಥಾನಕ) ಭದ್ರಗುಪ್ತ-೧೬೭೦ : ದಯಾವರ್ಧನ ೧೪೦೫ : ಜಯಕೀರ್ತಿ ಸು. ೧೪೫೦ ಜಯಾನಂದ ೧೪೫೨ - ಇತ್ಯಾದಿ. ಇವರು ಕೊಡುವ ಪಟ್ಟಿಯ ಜೊತೆಗೆ ರಾಮಚಂದ್ರ ಮುಮುಕ್ಷುವಿನ ಕಥಾಕೋಶವನ್ನು ಸೇರಿಸಬಹುದು (ಶ್ರೀಕಾಂತ ಭುಜಬಲಿ ಶಾಸ್ತ್ರಿಯವರು ಸಕಲ ಕೀರ್ತಿಯ ಶ್ರೀ ಧನ್ಯಕುಮಾರ ಚರಿತೆಯನ್ನು ಕನ್ನಡಕ್ಕೆ ತಂದಿದ್ದಾರೆ, ಗದ್ಯದಲ್ಲಿದೆ, ಇದು ೧೯೭೭ ರಲ್ಲಿ ಅಚ್ಚಾಗಿದೆ).

ಕನ್ನಡದ ಆದಿಯಪ್ಪನ ಕಾವ್ಯಕ್ಕೂ ಈ ಸಂಸ್ಕೃತ ಗ್ರಂಥಗಳಿಗೂ ಹೋಲಿಕೆಯ ಕೆಲಸ ನಡೆಯಬೇಕಾಗಿದೆ ಎಂದು ಸೂಚನೆಯನ್ನು ನೀಡಿ, ಮಾರ್ಗದರ್ಶನವೆಂಬಂತೆ ಕೆಲವು ಸ್ಥೂಲ ವ್ಯತ್ಯಾಸಗಳನ್ನು ಸೂಚಿಸಿದ್ದಾರೆ. ಆದಿಯಪ್ಪನ ಧನ್ಯಕುಮಾರ ಚರಿತೆ, ಒಂದು ಸ್ವತಂತ್ರ ಕೃತಿಯಾಗಿ ಕನ್ನಡದಲ್ಲಿ ಮೂಡಿಬಂದಿರುವ ಪ್ರಪ್ರಥಮ ಕಾವ್ಯ. ಈ ಹಿಂದೆ ಬಂಧುವರ್ಮನ ಜೀವಸಂಬೋಧನೆಯಲ್ಲಿ ಹನ್ನೊಂದನೆಯ ಅನುಪ್ರೇಕ್ಷೆಯಾದ ಬೋಧಿದುರ್ಲಭ ಅನುಪ್ರೇಕ್ಷೆಯಲ್ಲಿ ಧನ್ಯಕುಮಾರನ ಕಥೆಯು ಕಂಡು ಬರುತ್ತದೆ. ಈ ಗ್ರಂಥವು ೧೯೫೫ ರಲ್ಲಿಯೇ ಅಚ್ಚಾಗಿದೆ (ಜೀವಸಂಬೋಧನಂ-ಸಂಪಾದಕರು ಪಂಡಿತ ಎಚ್. ಶೇಷ ಅಯ್ಯಂಗಾರ್). ಸಂಪಾದಕರು ಈ ಗ್ರಂಥವನ್ನು ಪರಿಶೀಲಿಸಿಲ್ಲ. ಈ ಕೃತಿಯನ್ನು ಗಮನಿಸಿದ್ದಲ್ಲಿ, ಸಂಪಾದಕರ ಈ ಕಾವ್ಯದ ಬಗೆಗಿನ ಧೋರಣೆಯೇ ಬೇರೆಯಾಗುತ್ತಿತ್ತು ಎಂದು ತೋರುತ್ತದೆ.

ಕನ್ನಡದಲ್ಲಿ ಮೊಟ್ಟಮೊದಲ ಬಾರಿಗೆ ಧನ್ಯಕುಮಾರನ ಕಥೆಯನ್ನು ಹೇಳಿರುವವನು ಬಂಧುವರ್ಮನೇ ಆಗಿರಬೇಕೆಂದು ತೋರುತ್ತದೆ. ಆದರೆ ಇದು ಆ ಕಥೆಯನ್ನೇ ಹೇಳುವುದಕ್ಕಾಗಿ ಮೀಸಲಾದ ಗ್ರಂಥವಲ್ಲ. ಆದರೆ ಆದಿಯಪ್ಪನ ಕೃತಿಯಾದರೋ ಆ ಕಥೆಯನ್ನೇ ಪ್ರತ್ಯೇಕವಾಗಿ ಹೇಳಿರುವ ಕಾವ್ಯ. ಬಂಧುವರ್ಮನ ಕಾಲ ಕ್ರಿ. ಶ. ೧೨೦೦, ಆದಿಯಪ್ಪನ ಕಾಲ ಕ್ರಿ. ಶ. ೧೫ನೆಯ ಶತಮಾನ. ಬಂಧುವರ್ಮನ ಶೈಲಿ ಚಂಪೂ. ಆದಿಯಪ್ಪನದು ಸಾಂಗತ್ಯಶೈಲಿ. ಅಲ್ಲಲ್ಲಿ ಕಂಡು ಬರುವ ವೃತ್ತ-ಕಂದ-ರಗಳೆಗಳು ವಿಮರ್ಶಾರ್ಹವಾಗಿವೆ. ಇವುಗಳ ಬಗೆಗೆ ಮುಂದೆ ಪರಿಶೀಲಿಸಲಾಗಿದೆ. ಆದಿಯಪ್ಪನ ಕಾವ್ಯದ ಗುರಿ-'ದಾನದ ಮಹಿಮೆಯನ್ನೂ' 'ತಪದ ಹಿರಿಮೆಯನ್ನೂ' ಸಾರುವುದು. ಬಂಧುವರ್ಮನ ಗುರಿ ಬೋಧಿ ದುರ್ಲಭ

ಅನುಪ್ರೇಕ್ಷೆಯನ್ನು ಸಾರುವುದು. ಈ ಉದ್ದೇಶಗಳಿಗಾಗಿ ಇಬ್ಬರೂ ಒಂದೇ ಕಥೆಯ ಚೌಕಟ್ಟನ್ನು ತೆಗೆದುಕೊಂಡಿದ್ದಾರೆ.

ಆದಿಯಪ್ಪ ಕವಿ ಬಂಧುವರ್ಮನ ಕಾವ್ಯಭಾಗವನ್ನು ಸಾಂಗತ್ಯಕ್ಕೆ ತರ್ಜುಮೆ ಗೊಳಿಸಿರುವನೆಂದು ಹೇಳುವಷ್ಟರ ಮಟ್ಟಿಗೆ ಆತನ ಪ್ರಭಾವಕ್ಕೆ ಒಳಗಾಗಿರುವುದನ್ನು ಗ್ರಂಥದುದ್ದಕ್ಕೂ ಕಾಣುತ್ತೇವೆ. ಈತನ ಸ್ವೋಪಜ್ಞತೆ ಉಳಿಯುವುದು ಈತ ಬಳಸಿಕೊಂಡಿರುವ ಸಾಂಗತ್ಯದ ಧಾಟಿಯಲ್ಲಿ ಹಾಗೂ ಬಂಧವರ್ಮನು ಹೇಳದೆ ಇರುವ ಕೆಲವು ವರ್ಣನಾಭಾಗಗಳಲ್ಲಿ. ಬಂಧವರ್ಮನಿಗೆ ಇಷ್ಟೆಲ್ಲಾ ಋಣಿಯಾಗಿರುವ ಕವಿ ಆತನನ್ನು ಸ್ಮರಿಸದಿರುವುದು ಆಶ್ಚರ್ಯಕರವಾದ ಸಂಗತಿಯೇ. 'ಕವಿ ಪೊನ್ನ-ರನ್ನ-ಜನ್ನ ಮೊದಲಾದವರ ಭಜಿಸಿ ಪೇಳುವನು' ಎನ್ನುತ್ತಾನೆಯೇ ಹೊರತು ಬಂಧುವರ್ಮನ ಹೆಸರಿಲ್ಲ.

ಮುನ್ನಿನ ಮಹಾಕವಿಗಳು ಪೇಳ್ದ ಕೃತಿಯಿರ
ಲೆನ್ನೇಕೆ ಪೇಳ್ದನೆನ್ನದಿರೀ
ಚೆನ್ನಾಗಿ ಚಂದ್ರ ಬೆಳಗುತಿರೆ ಕಿರಿದಹ
ವಿನ್ನು ತಾರೆಗಳು ಬೆಳಗವೇ"–

ಬಹುಶಃ ಈ ಪದ್ಯವನ್ನು ಹೇಳುವಾಗ ಬಂಧುವರ್ಮನನ್ನೂ ಮನಸ್ಸಿನಲ್ಲಿ ಇಟ್ಟುಕೊಂಡಿರಬೇಕು. ಬಂಧುವರ್ಮನು ಹೇಳಿರುವ ವಿಚಾರಗಳು ಆದಿಯಪ್ಪನಲ್ಲಿ ಹೇಗೆ ಸಾಂಗತ್ಯವಾಗಿ ಮೂಡಿ ಬಂದಿವೆ ಎಂಬುದಕ್ಕೆ ಅಲ್ಲೇ ಕೆಲವು ನಿದರ್ಶನ ಗಳನ್ನೂ ಒದಗಿಸಬಹುದಾಗಿದೆ.

ಬಂಧುವರ್ಮ–ವಚನ–

ಅಣ್ಣಂಗಳ ಎಮ್ಮುಮ್ಮಳ್ಳುದೆಲ್ಲಮಂ ನಿಸ್ಸಂಕಿಱಿಯು ಮಗನ
ಬೇಯಕ್ಕೆ ಕೊಟ್ಟೆಮ್ಮ ಕಿಡಿಸಿದಪ್ಪ ಎಂದಬ್ಬೆಯಂ. ನಿಚ್ಚನಿಚ್ಚಮನಿಪೆಂಗೆಯ್ಯೆ.
(ಪುಟ ೧೯೫–ವಚನ)

ಆದಿಯಪ್ಪ–ಸಾಂಗತ್ಯ
ದುಃಖ ಬಟ್ಟುರೆ ಸಾಪುಗಳಿಸಿದ ಧನವನು । ಚಿಕ್ಕವನೆಂದು ಧನ್ಯನಿಗೆ
(೧೩೬-ಸಂಧಿ ೨)

ಇಕ್ಕ ಕೆಡಿಸುತಿಹೆ ಎಂದು ತಾಯೊಳಗಗ್ರ । ಮಕ್ಕಳೆಲ್ಲರು ನೊಂದು ನುಡಿಯೇ
(೧೩೬–ಸಂಧಿ ೨)

ಬಂಧುವರ್ಮ-ವಚನ

'ಕೆಮ್ಮಗಿರಲಾರದು ಪಿಡಿ ಪರದುಗೆಯ್' ಎಂದು ನೂಱುಗದ್ಯಾಣಂ ಪೊನ್ನಂ ಕೊಟ್ಟೊಡೆ

ಕೊಂಡು ಪರದುಗೆಯ್ವುದೆಂತು ? ಎಂದೊಡೆ ಒಂದಂ ಕೊಟ್ಟೊಂದಂ ಕೊಳ್ವುದು' ಎಂದೊಡೆ 'ಅಂತೆಗೆಯ್ವಂ' ಎಂದಂಗಡಿಯು ಜೀವಿಯುತ್ತಲೆ ಬಂದು–

(ಪುಟ ೧೯೬ ವಚನ)

ಸಾಂಗತ್ಯ–ಆದಿಯಪ್ಪ

ಕರೆದೊಂದು ದಿವಸ ತನ್ನಯ ಧನ್ಯಕುವರಗೆ : ಸರಸಿಜಮುಖಿ ಪೇಳಿದಳಿಂತೂ ಪರದರ ಮಗ ಸುಮ್ಮನಿರಬಾರದೆಂದಾ । ಪುರದೊಳು ಪರದುಗೆಯ್ಯನಲೂ ॥

(ಪದ್ಯ ೧೩೭ ಸಂಧಿ ೨ ಪುಟ ೧೯)

ಯೆಂದಡೆ ವ್ಯವಹಾರದಂಡವೆಂತನೆ ತಾಯಿ । ಕಂದನೊಡನೆ ಪೇಳಿದಳೂ । ವೊಂದುಕೊಟ್ಟೊಂದು ಕೊಂಬುದು ನಮ್ಮ ಪರದರ । ಅಂದವಿಂತೆಂದು ಮಗನಿಗೇ

(ಪದ್ಯ ೧೩೮ ಸಂಧಿ ೨ ಪುಟ ೧೯)

ಕೊಟ್ಟುಕಳುಪೆ ನೂರು ಹೊನ್ನನೂ... (೧೩೯ ಪದ್ಯ)

ಹೀಗೆ ಅಲ್ಲಿಯ ಅನೇಕ ಭಾಗಗಳು ಸಾಂಗತ್ಯವಾಗಿ ಮಾರ್ಪಟ್ಟಿವೆ. ಹೀಗೆಯೇ ಕೆಲವು ವಾಕ್ಯಗಳಲ್ಲಿಯೂ ಸಾಮ್ಯತೆಯನ್ನು ಕಾಣುತ್ತೇವೆ.

ಉದಾ : 'ಮಾರಿವೊಕ್ಕು ಸಾಯೆ ಪಾಟಾದ ಮನಬೇಡ' (ಬಂಧುವರ್ಮ)
'ಮಾರಿಹೊಕ್ಕಲ್ಲಿ ಸಿರವಾಗಬೇಡ' (ಆದಿಯಪ್ಪ)

ಆದಿಯಪ್ಪ ಕವಿಯ ಸಾಂಗತ್ಯ ಗ್ರಂಥದಲ್ಲಿ ಬರುವ ವೃತ್ತ–ಕಂದ ಪದ್ಯಗಳ ಔಚಿತ್ಯವೇನು ? ಇವು ಬಂಧುವರ್ಮನ ಕಾವ್ಯದಲ್ಲಿ ಬರುವ ವೃತ್ತ ಕಂದ ಪದ್ಯಗಳು. ಇವುಗಳನ್ನು ಆದಿಯಪ್ಪ ಯಥಾವತ್ತಾಗಿ ತನ್ನ ಗ್ರಂಥದಲ್ಲಿ ಬಳಸಿಕೊಂಡಿರಲಾರ. ಬಹುಶಃ ಲಿಪಿಕಾರರು ಬಂಧುವರ್ಮನ ಈ ಕೃತಿಯಿಂದ ಇಲ್ಲಿ ಅವುಗಳನ್ನು ಅಳವಡಿಸಿರಬಹುದೆಂದು ತೋರುತ್ತದೆ. ಈ ಗ್ರಂಥದಲ್ಲಿ ಒಟ್ಟು ಏಳು ವೃತ್ತಗಳು ಕಂಡು ಬರುತ್ತವೆ. ಸಂಪಾದಕರು ಆ ವೃತ್ತಗಳನ್ನು ಕೆಲವೆಡೆ ಪರಿಷ್ಕರಿಸದೇ ಹಾಗೆಯೇ ಕೊಟ್ಟುಬಿಟ್ಟಿದ್ದಾರೆ. ವೃತ್ತ ಎಂದು ಸೂಚನೆ ಈ ರೀತಿ ಕೊಡಲಾಗಿದೆ :

ಉದಾ : ಈ ನೆವದಿಂ ಕೊಲಲ್ಕಗೆದನೀತನನೀ ನೃಪನೆಂದಪರ್ಕೆಲರ್ದಾನವನಂ ಗೆಲಲ್ಕರಿಗುಮೀತನ ಪೌರುಷಮೆಂದಪರ್ಕೆಲರ್ಮಾನಿತ ಪುಣ್ಯದೇವತೆಗಳುಳ್ಳೆಡೆ ಗೆಲ್ವುವೆನೆಂದಪರ್ಕೆಲರ್ತಾನರಿಗುಂ ಪುರಾಕೃತ ಮದೇಕೆ ಪಲುಂಬಿವೆರೆಂದಪರ್ಕೆಲರ್ :

ಇದು ಉತ್ಪಲ ಮಾಲಾ ವೃತ್ತದಲ್ಲಿದೆ. ಇದನ್ನು ಹೀಗೆ ಪರಿಷ್ಕರಿಸಿ ಬರೆಯಬಹುದಾಗಿದೆ.

ಈ ನೆವದಿಂ ಕೊಲಲ್ಬಗೆದ ನೀತನನೀ ನೃಪನೆಂದ ಪರ್ಕೆಲ
ರ್ದಾನವನಂ ಗೆಲಲ್ಕರಿಗು ಮೀತನ ಪೌರುಷಮೆಂದ ಪರ್ಕೆಲ

ಮಾರ್ನಸಿತ ಪೂಣ್ಯ ದೇವತೆಗಳುಳ್ಳಡೆ ಗಲುಪ (ಗೆಲ್ದಪ)ನೆಂದ ಪರ್ಕೆಲ
ತಾರ್ನನರಿಗುಂ ಪುರಾಕೃತಮದೇಕೆ ಪಲುಂಬವಿರೆಂಪ ಪರ್ಕೆಲರ್
(ಭ–ರ–ನ–ಭ–ಭ–ರ ಗಣಗಳಲ್ಲಿ ಲಘು ಮತ್ತು ಗುರು)

ಒಟ್ಟು ನಾಲ್ಕು ಉತ್ಪಲಮಾಲಾ ವೃತ್ತಗಳಿವೆ. ಒಂದು ಚಂಪಕಮಾಲಾ ವೃತ್ತವಿದೆ. ಒಂದು ಮತ್ತೇಭವಿಕ್ರೀಡಿತವಿದೆ. ಮತ್ತೊಂದು ತರಳವೃತ್ತವಾಗಿದೆ. ಎರಡು ರಗಳೆಗಳಲ್ಲಿ ಒಂದು ಬಂಧುವರ್ಮನಲ್ಲಿರುವ ರಗಳೆಯೇ ಆಗಿದ್ದರೆ ಮತ್ತೊಂದು ಆದಿಯಪ್ಪನ ಸ್ವತಂತ್ರ ರಚನೆ, ಕಂದ ಪದ್ಯವೂ ಬಂಧುವರ್ಮನಲ್ಲಿಯೇ ಇದೆ. ನೂರ ಐವತ್ತೊಂದನೆಯ ಸಾಂಗತ್ಯವಾದ ನಂತರ ಅದರ ಮುಂದುವರಿಕೆಯನ್ನು ೧೫೩ನೆಯ ಸಾಂಗತ್ಯ ಪದ್ಯದಲ್ಲಿ ಕಾಣುತ್ತೇವೆಯೇ ಹೊರತು ಮಧ್ಯ ಬರುವ ವೃತ್ತದಲ್ಲಲ್ಲ. ಉದಾ : 'ಭರದಿ ಕಂಡನು ಒಂದು ಪಿರಿಯ ರತ್ನವ ಕೂಡಿ । ಬರೆದಿಪ ತಾಮ್ರ ಶಾಸನವಾ ಕರದೊಳು ನೋಡಿದ ಪೂರ್ವದ ಅರಸಿನ ಪತ್ರದಂಡವನೂ ॥ (೧೫೧). ಯಿಂತಪ್ಪ ಕುಲದರಸಿನಮಂಚವಾತನಿ । ಗಿಂತಪ್ಪ ಕುರು ಪಿಲಿಹುದುಘನವೆಂಬಾ । ಗ್ರಂಥವ ನೋಡಿ ಸಂಭ್ರಮದೀ ॥ ಇವರಡರ ಮಧ್ಯೆ ೧೫೨ನೆಯ ವೃತ್ತ ಬಂದರೆ ಆ ಒಂದು ಓಘ ಕಂಡುಬರುವುದಿಲ್ಲ.

ಉದಾ : ಬೆಲೆಯಿಲ್ಲೆಂದೆನಿ ಪಗ್ಗಳಿಕೆಯ ಮಹಾರತ್ನಂಗಳಂ ಕಾಣಲುಂ
ಪಲವುಂ ತೊಟ್ಟನೆ ಕೂಡಿ ಪತ್ರ ಸಹಿತ ಬಂದೊಕ್ಕಮಂ ಕಂಡು ನಿ
ರ್ಮಲ ಚಿತ್ತಂಗೆ ಮಗಂಗೆ ತೋರಿದೊಡಮಂ ಕಂಡೆಂಗುವೊ ಬುದ್ಧಿಯೊ
ಬಲವೋ ಕ್ಲೇಶಮನೂನ ಪುಣ್ಯಮೆಗಡಂ ದ್ರವ್ಯಂಗಳಂ ಮಾಡುಗುಂ.

ನೂರಐವತ್ತೊಂದನೆಯ ಪದ್ಯದಲ್ಲಿ ಬರುವ ಕೊನೆಯ ಅಂಶ ತಾಮ್ರಶಾಸನ ವನ್ನು ಓದಿ ನೋಡುವುದು, ನೂರ ಐವತ್ತ ಮೂರನೆಯ ಪದ್ಯದಲ್ಲಿ ಅದರಲ್ಲೇನಿತ್ತು ಎಂಬ ಅಂಶವಿದೆ. ವೃತ್ತವನ್ನು ಬಿಟ್ಟರೂ ಕುಂದು ಬರುವುದಿಲ್ಲ. ಇಂತಹದೇ ಸ್ಥಿತಿ ಬಹುತೇಕ ವೃತ್ತಗಳಲ್ಲಿ ಕಾಣುತ್ತೇವೆ. ಈ ಕ್ರಿಯೆ ಕವಿಯದೇ ಆಗಿರಲಿ ಅಥವಾ ಲಿಪಿಕಾರನದೇ ಆಗಿರಲಿ ಅವು ಕಥೆಯ ಓಘಕ್ಕೆ ಅನಾವಶ್ಯಕ ಘಟಕಗಳಾಗಿ ಕಂಡುಬರುತ್ತವೆ.

ಬಂಧುವರ್ಮನ ಕಥೆ ನೇರವಾಗಿ ಧನ್ಯಕುಮಾರನ ಕಥೆಯಿಂದ ಪ್ರಾರಂಭ ವಾಗುತ್ತದೆ. ಅನಂತರ ಆತನ ಹಿಂದಿನ ಭವದ ಕಥೆ ಅಕೃತ ಪುಣ್ಯನ ಕಥೆ ಬರುತ್ತದೆ. ಹಾಗೆಯೇ ಶಾಲಿಭದ್ರನ ವೃತ್ತಾಂತವೂ ಬರುತ್ತದೆ. ಆದಿಯಪ್ಪನು ಅಕೃತ ಪುಣ್ಯನ ಕಥೆಯಿಂದ ಪ್ರಾರಂಭಮಾಡಿ ಧನ್ಯಕುಮಾರನ ಕಥೆಯನ್ನು ಮುಂದುವರಿಸಿ ಶಾಲಿಭದ್ರನ ವೃತ್ತಾಂತವನ್ನು ಹೇಳುತ್ತಾನೆ.

ಕಥಾ ಚೌಕಟ್ಟು ಎರಡು ಕಾವ್ಯಗಳಲ್ಲೂ ಸುಮಾರಾಗಿ ಒಂದೇ ಆಗಿದೆ. ಅವಂತೀ ದೇಶದ ರಾಜನ ಮುಖ್ಯಶ್ರೇಷ್ಠ ಕಾಮವೃಷ್ಟಿ. ಆತನ ಮಡದಿ ವಿಕಟದಾಯಿನಿ. ಇವರಿಗೆ

ಅಕೃತ ಪುಣ್ಯನು ಜನಿಸಿದನು. ಇವನು ಹುಟ್ಟಿದಂದಿನಿಂದ ತಂದೆ-ತಾಯಿಗಳ ಐಶ್ವರ್ಯವು ಕರಗುತ್ತಾ ಬಂದು ಅವರು ದಟ್ಟದರಿದ್ರರಾದರು. ಕಾಮವೃಷ್ಟಿ ಸತ್ತನು. ಐಶ್ವರ್ಯದಿಂದ ಮೆರೆಯುತ್ತಿದ್ದ ಅವರು ತಮ್ಮ ಆಳಿಗೇ ಆಳಾಗಿ ಇರಬೇಕಾದ ಪ್ರಸಂಗ ಒದಗಿತು. ಆದ್ದರಿಂದ ಆ ಊರನ್ನೇ ಬಿಟ್ಟು 'ಸಿರುಪಕ' ಎಂಬ ಊರಿಗೆ ಬಂದು ಬಲಭದ್ರಗೌಡನಲ್ಲಿ ಊಳಿಗಕ್ಕೆ ನಿಂತರು. ಕರುಗಳನ್ನು ಕಾಯುತ್ತಿದ್ದುದರಿಂದ ಅಕೃತ ಪುಣ್ಯನು ಕರುಕುಚ್ಚಿಗನಾದನು. ಬಲಭದ್ರನ ಮನೆಯಲ್ಲಿ ತುಯಿಲಿನ ಭೋಜನವನ್ನೂ ನೋಡಿ ಅದನ್ನು ತಿನ್ನಬೇಕೆಂದು ಅವನು ಆಸೆಪಟ್ಟನು. ಬಲಭದ್ರನು ವಸ್ತುಗಳನ್ನು ದಯಪಾಲಿಸಿದುದರಿಂದ ತಾಯಿಯೂ ಅವನಿಗಾಗಿ ತುಯಿಲನ್ನು ತಯಾರಿಸಿದಳು. ಈ ಸಮಯದಲ್ಲಿ ಮುನಿಯೋರ್ವನನ್ನು ಕಂಡು ಅವನು ಬಗೆದು ಅವನನ್ನು ಬಾಲಕ ಅಕೃತ ಪುಣ್ಯನು ತಡೆದು ನಿಲ್ಲಿಸಿದನು. ತಾಯಿ ಮುನಿಗೆ ಆಹಾರ ನೀಡಿದಳು. ಅವರಿಗೆ 'ಅಕ್ಷಯ ಪ್ರಾಪ್ತಿಯ' ಹರಕೆ ದೊರೆಯಿತು. ಹೀಗಿರುವಲ್ಲಿ ಒಮ್ಮೆ ಕರುಗಳನ್ನು ಕಾಯುವ ಸಂದರ್ಭದಲ್ಲಿ ಕರುಕುಚ್ಚಿಗ ಆಯಾಸಗೊಂಡು ಮಲಗಿರಲು ಕರುಗಳು ಮನೆಗೆ ಮರಳಿದವು. ತನ್ನನ್ನು ಹುಡುಕಿಕೊಂಡು ಬರುತ್ತಿದ್ದ ಅವರನ್ನು ನೋಡಿ ಕರುಕುಚ್ಚಿಗ ಭಯಗೊಂಡು ಅಲ್ಲಿಂದ ಓಡಿದನು. ಕಾಡಿನ ಮಧ್ಯೆ ಮುನಿಗಳನ್ನು ಕಂಡನು. ಅಲ್ಪಾಯುಷಿಯಾದ ಅವನಿಗೆ ಮುನಿಗಳು ಪಂಚಾಣುವ್ರತವಿತ್ತು ಪಂಚನಮಸ್ಕಾರಗಳನ್ನು ಹೇಳಿಕೊಟ್ಟರು. ಅವನು ಧ್ಯಾನಾಸಕ್ತನಾಗಿರುವಾಗ ಅಂದಿನ ರಾತ್ರಿಯೇ ಅವನು ಹುಲಿಯ ಪಾಲಾದನು. ದೇವನಾಗಿ ಹುಟ್ಟಿದನು. ಮಗನನ್ನು ಹುಡುಕುತ್ತಾ ಬಂದ ತಾಯಿ ಮಗನ ಹೆಣವನ್ನು ನೋಡಿ ಶೋಕಿಸಿದಳು. ಆಗ ತನ್ನ ದೇವಸ್ವರೂಪವನ್ನು ತೋರಿ ಸಮಾಧಾನ ಪಡಿಸಿದನು. ತಾಯಿಯೂ ದೀಕ್ಷೆಯನ್ನು ಪಡೆದು ದೇವಗತಿಯನ್ನು ಪಡೆದಳು. ಇತ್ತ ಬಲಭದ್ರನ ಮಕ್ಕಳು ಸತ್ತು ನರಕಕ್ಕೆ ಹೋದರು.

ಉಜ್ಜಯಿನಿಯಲ್ಲಿ ಧನಪಾಲನೆಂಬ ವರ್ತಕ. ಆತನ ಹೆಂಡತಿ ಪ್ರಭಾವತಿ. ಇವರಿಗೆ ಬಲಭದ್ರನ ಮಕ್ಕಳು ಹುಟ್ಟಿದರು. ಅಕೃತ ಪುಣ್ಯನೂ ಸಹ ಕೊನೆಯವನೆನಿಸಿ ಧನ್ಯಕುಮಾರನಾಗಿ ಹುಟ್ಟಿದನು. ಕ್ಷೀಣಿಸುತ್ತಿದ್ದ ಅವರ ಐಶ್ವರ್ಯ ವೃದ್ಧಿಯಾಗತೊಡಗಿತು. ಧನ್ಯಕುಮಾರನನ್ನು ಕಂಡರೆ ತಾಯಿಗೆ ಒಲವು ಹೆಚ್ಚು ಮಾಡಿದ ಪುಣ್ಯ ಧನ್ಯಕುಮಾರನನ್ನು ಮೇಲೇರಿಸಿತು. ಒಮ್ಮೆ ವ್ಯಾಪಾರಕ್ಕೆಂದು ಹೋಗಿ ನೂರು ಹೊನ್ನಿನ ನಾಣ್ಯಕ್ಕೆ ಒಂದು ಮರದ ಕಾಲನ್ನು ತಂದಾಗ ಅದರೊಳಗೆ ತಾಮ್ರ ಶಾಸನವೂ ನವರತ್ನಗಳೂ ದೊರೆತವು. ಇದರಿಂದ ಹಿಂದಿನ ದೊರೆಯ ಅರಮನೆ ಐಶ್ವರ್ಯ ಇವೆಲ್ಲವೂ ಇವರದಾಯಿತು. ಕಿರಿಯವನಿಗೆ ಹೆಣ್ಣು ಕೊಡಲು ಅನೇಕ ಕನ್ಯಾಪಿತೃಗಳು ಮುಂದೆ ಬಂದರು. ಅಣ್ಣಂದಿರು ಇವನಲ್ಲಿ ಮತ್ಸರ ತಾಳಿ ಇವನನ್ನು ಬಾವಿಗೆ ನೂಕಿದರು. ಆದರೆ ಧನ್ಯಕುಮಾರನು ತಪ್ಪಿಸಿಕೊಂಡು ಆ ಊರನ್ನೇ

ಬಿಟ್ಟು ನಡೆದನು. ಲಕ್ಷ್ಮಿ ಅಲ್ಲಿಯೂ ಅವನನ್ನು ಬಿಡಲಿಲ್ಲ. ರೈತನ ಪೊಲದಲ್ಲಿ ಕುತೂಹಲಕ್ಕಾಗಿ ಉಳುವಾಗ ನಿಧಿಯು ಕಾಣಿಸಿತು. ಅನ್ನವನ್ನಿಟ್ಟ ರೈತನಿಗೇ ಆ ನಿಧಿಯನ್ನು ದಾನ ಮಾಡಿ ಮುಂದೆ ನಡೆದನು. ಬೇಡರ ಪಡೆಯನ್ನು ಗೆದ್ದು ರಾಜ ಗೃಹಕ್ಕೆ ಬಂದನು. ಒಂದು ನಾಣ್ಯದ ಸಹಾಯದಿಂದ ಮಾಲೆಯನ್ನು ಕಟ್ಟಿ ನೂರು ವರಹವನ್ನು ಸಂಪಾದಿಸಿ ಶಾಲಿಭದ್ರನ ತಂಗಿ ಸುಭದ್ರೆಯನ್ನು ಮದುವೆಯಾದನು. ದುಷ್ಟರಾಕ್ಷಸನ ಗುಹೆ ಹೊಕ್ಕು ಅವನ ಕ್ರೂರ ಭಾವನೆಯನ್ನು ಇಳಿಸಿ ಧೈರ್ಯವನ್ನು ಮೆರೆದು ರಾಜನ ಮಗಳನ್ನು ಮದುವೆಯಾದನು. ಹೀಗೆ ತನ್ನ ಕಲಾ ನೈಪುಣ್ಯ ದಿಂದ ಧೈರ್ಯ ಸಾಹಸಗಳಿಂದ ಒಟ್ಟು ಹದಿನಾರು ಕನ್ಯೆಯರನ್ನು ಮದುವೆಯಾಗಿ ಸುಖದಿಂದಿದ್ದನು.

ಇತ್ತ ಧನ್ಯಕುಮಾರನು ಆ ಮನೆಯಿಂದ ಕಾಲ್ತೆಗೆದ ಮೇಲೆ ಅವನ ತಂದೆ-ತಾಯಿ-ಅಣ್ಣಂದಿರ ಪರಿಸ್ಥಿತಿ ಚಿಂತಾಜನಕವಾಯಿತು. ತಂದೆ ರಾಜಗೃಹದಲ್ಲಿದ್ದ ತನ್ನ ತಂಗಿಯ ಮಗ ಶಾಲಿಭದ್ರನ ಸಹಾಯವನ್ನು ಪಡೆಯಲು ಅಲ್ಲಿಗೆ ಬಂದಾಗ ಧನ್ಯಕುಮಾರನು ತಂದೆಯನ್ನು ಕಂಡನು. ಅಣ್ಣಂದಿರನ್ನೂ ಕರೆಸಿ ಸನ್ಮಾನಿಸಿದನು. ತಂದೆ-ತಾಯಿ-ಪತ್ನಿಯರೊಡನೆ ಸುಖದಿಂದಿದ್ದನು. ಮನೆಯಲ್ಲಿಯೇ ನಿಂತು ತಪಂಬಡುವೆನೆಂದು ನಿಶ್ಚಯಿಸಿದ ಶಾಲಿಭದ್ರನ ವೈರಾಗ್ಯ ಸಮಯದಲ್ಲಿ ಉಪದೇಶ ವನ್ನು ನೀಡಿ-ತಾನೂ ದೀಕ್ಷಿತನಾಗಿ ಕಾಡಿಗೆ ಹೊರಟು ತಪವನ್ನಾಚರಿಸಿ ಸರ್ವಾರ್ಥ ಸಿದ್ಧಿಯನ್ನು ಪಡೆದನು.

ಬಂಧುವರ್ಮನ ಕಥೆಯ ರೀತಿಯೂ ಇದೇ. ಆದಿಯಪ್ಪ ಕೆಲವೆಡೆ ವರ್ಣ ನಾಂಶವನ್ನು ವಿಶೇಷವಾಗಿ ತಂದಿದ್ದಾನೆ. ಕಾವ್ಯದ ಪ್ರಾರಂಭದಲ್ಲಿ ಬಳಸಿರುವ ಸ್ತುತಿ ಪದ್ಯಗಳು, ಕವಿಯ ವಿನಯ ಪ್ರದರ್ಶನದ ಮಾತುಗಳು, ಅವಂತೀ ದೇಶದ ವರ್ಣನೆ-ಇವು ಬಂಧುವರ್ಮನಲ್ಲಿ ಇಲ್ಲ. ಆದಿಯಪ್ಪ ಕವಿಯಲ್ಲಿ ಧನ್ಯಕುಮಾರನ ಹುಟ್ಟಿನ ಹಿನ್ನೆಲೆಯಲ್ಲಿ ಧನಪಾಲ ಪ್ರಭಾವತಿಯರ ರತಿವಿಲಾಸದ ವರ್ಣನೆ ಸ್ವಲ್ಪ ಹೆಚ್ಚಾಗಿಯೇ ಕಂಡುಬರುತ್ತದೆ (ಪದ್ಯ ೧೦೭ ರಿಂದ ೧೧೬). ಗರ್ಭಸಂಜಾತೆಯಾದ ಪ್ರಭಾವತಿಯ ವರ್ಣನೆ ಇದೆ. ದಂಪತಿಗಳು ಜಿನಪೂಜೆಯಲ್ಲಿ ತೊಡಗಿದ ವರ್ಣನೆ, ಜನ್ಮೋತ್ಸವದ ವರ್ಣನೆ ಇದ. ಧನ್ಯಕುಮಾರನ ಜೀವನ ಕ್ರಮದ ವಿವರವನ್ನು ಸಂಕ್ಷೇಪಿಸಿ ನೀಡು ತ್ತಾನೆ. ದೇವ-ಗುರು-ಶಾಸ್ತ್ರಗಳಲ್ಲಿ ಅತೀವ ಶ್ರದ್ಧೆಯಿಟ್ಟ ಧನ್ಯಕುಮಾರನ ವರ್ಣನೆ ಇದೆ. ಬಂಧುವರ್ಮನಲ್ಲಿ ಈ ವರ್ಣನೆಗಳಿಲ್ಲ. ಬೇಡರವರೊಡನೆ ಹೋರಾಡಿ ಆತನನ್ನು ಅಡಿಯಾಳಾಗಿಸಿಕೊಂಡ ಪ್ರಸಂಗವೂ ಸಹ ಬಂಧುವರ್ಮನಲ್ಲಿಲ್ಲ. ರಾಜ ಗೃಹದ ವರ್ಣನೆ ಇದೆ. ಆದಿಯಪ್ಪ ರಾಜಗೃಹದ ಪ್ರಧಾನ ಶ್ರೇಷ್ಠಿ ಶಾಲಿಭದ್ರನ ತಂಗಿ ಸುಭದ್ರೆ ಎಂದು ಹೇಳಿದ್ದರೆ ಬಂಧುವರ್ಮ ಮಗಳೆಂಬುದಾಗಿ ಹೇಳಿದ್ದಾನೆ. ಮುನಿಯಾಗಲು ಹೊರಟಾಗಿನ ಸಂದರ್ಭದ ಹೆಂಡತಿ-ತಾಯಿ-ಬಂಧು ಬಾಂಧವರ

ಕಲಾಪವಿದೆ. ಅವರೂ ದೀಕ್ಷಾಬದ್ಧರಾಗುತ್ತಾರೆ. ಧನ್ಯಕುಮಾರನು ಸತ್ತು ಹೋದನೆಂದು ಬಗೆದು ತಂದೆ-ತಾಯಿಯರು ದುಃಖಿಸುವ ಪ್ರಸಂಗ ರಗಳೆಯಲ್ಲಿದೆ ಮನಮುಟ್ಟುವಂತೆ ಬಂದಿದೆ. ಈ ಭಾಗ ಬಂಧುವರ್ಮನಲ್ಲಿಲ್ಲ.

ಆದಿಯಪ್ಪನ ಶೈಲಿ ಸರಳ–ಸುಂದರವಾದದ್ದು ಎಂಬುದಕ್ಕೆ ಕೆಲವು ಉದಾಹರಣೆಗಳು :

'ಕೊಲ್ಲಲಳವೆ ಆಯುಷ್ಯವುಳ್ಳವರನೆ'
'ಯಮನು ಕೋಪಿಸಿದರೆ ಈಗಳೊ ಆಗಳೊ'
'ಸುಕೃತವೋದಡೆ ಮಾರಿ ಕೊಲ್ಲುವಳು'

'ನಮ್ಮ ಸೊಬಗು ಗಾಳಿಯುಲಿಟ್ಟ ಜ್ಯೋತಿ'–ಇಂತಹ ಗಾದೆಯಂತಹ ಮಾತುಗಳಿಂದಲೂ ದೃಷ್ಟಾಂತ, ಉಪಮೆ-ರೂಪಕಾಲಂಕಾರಕ ಮಾತುಗಳಿಂದಲೂ ಕಾವ್ಯ ಹಿತವೆನಿಸುತ್ತದೆ. ಹಂಪನಾ ಅವರೇ ಹೇಳುವಂತೆ-'ಕಾವ್ಯ ಕಥಾತ್ಮಕವಾಗಿದೆ. 'ಹಿತಮಿತವಾದ ವರ್ಣನೆಗಳಿವೆ' ಮಲೆನಾಡಿನ ಮತ್ತು ಬೇಡರ ಪಡೆಯ ವರ್ಣನೆ ಜೀವಂತವಾಗಿದೆ. ಧನ್ಯಕುಮಾರನ ತಾಯಿ ಪ್ರಭಾವತಿ ಪ್ರಲಾಪಿಸುವ ಪ್ರಸಂಗದಲ್ಲಿನ ರಗಳೆ, ರಾಘವಾಂಕನ ಹರಿಶ್ಚಂದ್ರ ಕಾವ್ಯದಲ್ಲಿನ ಚಂದ್ರಮತಿಯ ಪ್ರಲಾಪದ ಪಡಿನೆರಳಿನಂತಿದೆ. ಇಂತಹ ಒಂದು ಕೃತಿಯನ್ನು ಪ್ರಥಮ ಬಾರಿಗೆ ಗ್ರಂಥ ರೂಪದಲ್ಲಿ ಹೊರತಂದ ಶ್ರೇಯಸ್ಸು ಡಾ. ಹಂಪನಾ ಅವರಿಗೆ ಸಲ್ಲುತ್ತದೆ.

ಬಿ. ಆರ್. ಹಿರೇಮಠ

# ಧನ್ಯಕುಮಾರ ಚರಿತೆ

ಭಾಷಾವಿಜ್ಞಾನ, ಜನಪದ ಸಾಹಿತ್ಯ, ಹಳಗನ್ನಡ ಸಾಹಿತ್ಯ, ಜೈನ ಸಾಹಿತ್ಯ, ಜೈನಧರ್ಮ, ಗ್ರಂಥ ಸಂಪಾದನೆ–ಡಾ॥ ಹಂಪನಾ ಅವರ ಅಧ್ಯಯನದ ಆಸಕ್ತಿಯ ಕ್ಷೇತ್ರಗಳು. ಈ ಎಲ್ಲ ಕ್ಷೇತ್ರಗಳಲ್ಲಿ ಹಂಪನಾ ಅವರು ಮಾಡಿದ ಶೈಕ್ಷಣಿಕ ಸಾಧನೆ ಅತ್ಯಂತ ಗಟ್ಟಿಯಾದುದಾಗಿದೆ. ಚಲನಶೀಲರೂ ಚಿಂತನಶೀಲರೂ ಆದ ಹಂಪನಾ ಅವರದು ಕ್ರಿಯಾಶೀಲ ಪಾಂಡಿತ್ಯ. ಹೀಗೆ ಹಂಪನಾ ಅವರಲ್ಲಿ ಚಲನಶೀಲ ವ್ಯಕ್ತಿತ್ವ, ಕ್ರಿಯಾಶೀಲ ಪಾಂಡಿತ್ಯ ಹಾಗೂ ಶೈಕ್ಷಣಿಕ ಶಿಸ್ತುಗಳ ಸಂಗಮವನ್ನು ಕಾಣುತ್ತೇವೆ.

ಗ್ರಂಥ ಸಂಪಾದನೆ ತೀರ ನೀರಸವಾದ ಕ್ಷೇತ್ರ. ಈ ನೀರಸಕ್ಷೇತ್ರದಲ್ಲಿ ಕಾರ್ಯ ಮಾಡುವವರ ಸಂಖ್ಯೆಯೂ ತೀರ ವಿರಳ. ಈ ವಿರಳ ವ್ಯಕ್ತಿಗಳಲ್ಲಿ ಹಂಪನಾ ಅವರೂ ಒಬ್ಬರು. ಗ್ರಂಥ ಸಂಪಾದನೆ ಎನ್ನುವುದು ಒಬ್ಬ ವ್ಯಕ್ತಿಯ ಪಾಂಡಿತ್ಯ-ಪ್ರತಿಭೆ ಮತ್ತು ವಿಶಾಲ ವ್ಯಾಸಂಗಗಳ ಒರೆಗಲ್ಲಿದ್ದಂತೆ. ಶೈಕ್ಷಣಿಕವಾಗಿ ಗಟ್ಟಿಯಾದ ವ್ಯಕ್ತಿಗಳೇ ಈ ಕ್ಷೇತ್ರದಲ್ಲಿ ಕೆಲಸ ಮಾಡಲು ಸಾಧ್ಯವೆಂಬುದನ್ನು ಬೇರೆ ಹೇಳಬೇಕಿಲ್ಲ. ಇಂಥ ಶೈಕ್ಷಣಿಕ ಗಟ್ಟಿತನ ಹೊಂದಿದ ಹಂಪನಾ ಅವರು ಅನೇಕ ಹಳಗನ್ನಡ ಹಾಗೂ ನಡುಗನ್ನಡ ಗ್ರಂಥಗಳನ್ನು ಶಾಸ್ತ್ರೀಯವಾಗಿ ಸಂಪಾದಿಸಿದ್ದಾರೆ. ಇವರು ಸಂಪಾದಿಸಿದ ಕನ್ನಡ ಗ್ರಂಥಗಳಲ್ಲಿ ಜೈನ ಧರ್ಮ-ಸಾಹಿತ್ಯಕ್ಕೆ ಸಂಬಂಧಿಸಿದವುಗಳೇ ಅಧಿಕವಾಗಿರುತ್ತವೆ. ಹೀಗೆ ಜೈನಧರ್ಮವನ್ನು ನಿರೂಪಿಸುವ ಗ್ರಂಥಗಳಲ್ಲಿ ಆದಿಯಪ್ಪ ಕವಿಯ 'ಧನ್ಯಕುಮಾರ ಚರಿತೆ'ಯೂ ಒಂದು. ನಡುಗನ್ನಡ ಸಾಹಿತ್ಯದ ಈ ಕೃತಿಯನ್ನು ಹಂಪನಾ ಅವರು ಸಂಪಾದಿಸಿ, ಪ್ರಕಟಿಸಿದ್ದಾರೆ. ಹಂಪನಾ ಅವರು ಮಾಡಿದ ಈ ಕೃತಿಯ ಸಂಪಾದನಾ ಕಾರ್ಯವನ್ನು ಕುರಿತು ಹೀಗೆ ವಿವೇಚಿಸಬಹುದಾಗಿದೆ :

ಹಳಗನ್ನಡ ಕೃತಿಗಳ ಸಂಪಾದನಾ ಕಾರ್ಯ ಮಾಡುವುದು ಸುಲಭ. ಆದರೆ ನಡುಗನ್ನಡ ಸಾಹಿತ್ಯ ಕೃತಿಗಳ-ಅದರಲ್ಲೂ ಧಾರ್ಮಿಕ ಹಾಗೂ ಜನಪ್ರಿಯ ಗ್ರಂಥಗಳ-ಸಂಪಾದನಾ ಕಾರ್ಯ ಅತ್ಯಂತ ಕಠಿಣ. ಯಾಕೆಂದರೆ ಹಳಗನ್ನಡ ಕೃತಿಗಳಿಗೆ ಭಿನ್ನಪಾಠ ಹುಟ್ಟಿಕೊಂಡಿರುವುದು ತೀರ ಕಡಿಮೆ. ಆದರೆ ನಡುಗನ್ನಡ ಸಾಹಿತ್ಯದ ಜನಪ್ರಿಯ ಗ್ರಂಥಗಳಿಗೆ ಹೇರಳ ಪಾಠಾಂತರಗಳು ಹುಟ್ಟಿಕೊಂಡು ಗ್ರಂಥಸಂಪಾದಕನನ್ನು ದಿಕ್ಕು ತಪ್ಪಿಸುತ್ತವೆ, ಸಂಪಾದನಾ ಕಾರ್ಯವನ್ನು ಜಟಿಲ ಗೊಳಿಸುತ್ತವೆ. ಇಂಥ ಪಾಠಾಂತರಗಳ ಗೊಂಡಾರಣ್ಯವನ್ನು ಪ್ರವೇಶಿಸಿ. ಸರಿಯಾದ ಮಾರ್ಗವನ್ನು ಕಂಡುಕೊಳ್ಳುವುದಕ್ಕೂ ಸಂಪಾದಕನಿಗೆ ಕೆಲವು ಸಲ ಸಾಧ್ಯವಾಗದೇ ಹೋಗುವ ಸಂಭವವಿದೆ. ಆದ್ದರಿಂದ ನಡುಗನ್ನಡ ಸಾಹಿತ್ಯ ಕೃತಿಗಳ ಸಂಪಾದನೆ ಮಾಡುವ ಸಂಪಾದಕನಿಗೆ ಗುರುತರ ಜವಾಬ್ದಾರಿ ಇರುತ್ತದೆಂಬುದನ್ನು ಮರೆಯಬಾರದು. ಇಲ್ಲಿ 'ಧನ್ಯಕುಮಾರ ಚರಿತೆ' ನಡುಗನ್ನಡ ಸಾಹಿತ್ಯದ ಸಾಂಗತ್ಯ ಛಂದಸ್ಸಿನಲ್ಲಿರುವ ಧಾರ್ಮಿಕ ಗ್ರಂಥ. ಹೀಗಾಗಿ ಈ ಕೃತಿಗೂ ಅಧಿಕ ಸಂಖ್ಯೆಯ ಪಾಠಾಂತರಗಳು ಹುಟ್ಟಿಕೊಂಡಿದ್ದು, ಪಾಠ ನಿರ್ಣಯ ಅತ್ಯಂತ ಕಠಿಣ ಕಾರ್ಯವೆನಿಸುತ್ತದೆ. ಹೀಗಿದ್ದೂ ಹಂಪನಾ ಅವರು 'ಧನ್ಯಕುಮಾರ ಚರಿತೆ'ಯ ಗ್ರಂಥ ಪರಿಷ್ಕರಣ ಕಾರ್ಯವನ್ನು ಸಮರ್ಪಕವಾಗಿಯೇ ನಿರ್ವಹಿಸಿದ್ದು ಗಮನಿಸುವ ಸಂಗತಿಯಾಗಿದೆ.

ಗ್ರಂಥ ಸಂಪಾದನಾ ಕಾರ್ಯದಲ್ಲಿ ಪ್ರಾಥಮಿಕವೂ ಅಷ್ಟೇ ಪ್ರಮುಖವೂ ಆದುದು ಸಾಮಗ್ರಿ ಸಂಕಲನ. ಸಾಮಗ್ರಿ ಸಂಕಲನವೆಂದರೆ ಸಂಪಾದಿಸಲು ಕೈಗೆತ್ತಿಕೊಂಡ ಕೃತಿಯ ಉಪಲಬ್ಧ ಹಸ್ತಪ್ರತಿಗಳ ಸಂಗ್ರಹ ಎಂದರ್ಥ. ಇದು ಅತ್ಯಂತ ಶ್ರಮದಾಯಕವೂ ಸಾಹಸಪೂರ್ಣವೂ ಆದುದಾಗಿದೆ. ಹಂಪನಾ ಅವರು ಈ ಕೃತಿಯ ಸಂಪಾದನಾ ಕಾರ್ಯಕ್ಕಾಗಿ ನಾಲ್ಕು ಹಸ್ತಪ್ರತಿಗಳನ್ನು ಸಂಗ್ರಹಿಸಿದ್ದಾರೆ. ಇವುಗಳಲ್ಲಿ ಒಂದು ಕಾಗದಪ್ರತಿ. ಮೂರು ತಾಳೆಗರಿ ಪ್ರತಿಗಳಿರುತ್ತವೆ. ಇವು ಪ್ರಾದೇಶಿಕವಾಗಿಯೂ ಬೇರೆ ಬೇರೆಯಾಗಿರುತ್ತವೆ. ಈ ನಾಲ್ಕೂ ಹಸ್ತಪ್ರತಿಗಳಲ್ಲಿಯ ಸಂಯೋಜಕ ಸ್ಖಾಲಿತ್ಯ ಹಾಗೂ ವಿಚ್ಛೇದಕ ಸ್ಖಾಲಿತ್ಯಗಳ ಬಲದಿಂದ ವಂಶಾವಳಿಯನ್ನು ರೂಪಿಸಿಕೊಂಡಿದ್ದಾರೆ. ನಂತರ ಇವುಗಳಲ್ಲಿಯೇ ಒಂದನ್ನು ಆಧಾರಪ್ರತಿಯನ್ನಾಗಿಟ್ಟುಕೊಂಡು, ಉಳಿದ ಮೂರರ ಪಾಠಾಂತರಗಳನ್ನು ಹಾಕಿಕೊಂಡಿದ್ದಾರೆ. ಹೀಗೆ ಹಂಪನಾ ಅವರು ಈ ಕೃತಿಯ ಸಾಮಗ್ರಿ ಸಂಕಲನ, ವಂಶಾವಳಿ ನಿರ್ಣಯ ಹಾಗೂ ಭಿನ್ನಪಾಠ ಸಂಗ್ರಹಗಳಲ್ಲಿ ಗ್ರಂಥಸಂಪಾದನೆಯ ಶಾಸ್ತ್ರೀಯ ನಿಯಮಗಳನ್ನು ಅನುಸರಿಸಿದ್ದು ಕಂಡುಬರುತ್ತದೆ. ಹಂಪನಾ ಅವರು ಹಸ್ತಪ್ರತಿ ಸಂಗ್ರಹ ಕಾರ್ಯದಲ್ಲಿ ತೋರಿದ ಆಸಕ್ತಿ, ಭಿನ್ನಪಾಠ ಸಂಗ್ರಹದಲ್ಲಿ ವಹಿಸಿದ ಪರಿಶ್ರಮ-ತಾಳ್ಮೆಗಳು ಮೆಚ್ಚುವಂಥವಾಗಿವೆ. ಕವಿಪಾಠ ಇಲ್ಲವೆ ಕವಿಪಾಠಕ್ಕೆ ಸಮೀಪವಾದ ಪಾಠವನ್ನು ನಿರ್ಣಯಿಸಿ ಕೊಡುವಲ್ಲಿ ಹಂಪನಾ ಅವರು ತಮ್ಮ ವಿಶಾಲ ವ್ಯಾಸಂಗದ ಮೂಲಕ ತೂಕಬದ್ಧವಾಗಿ ನಡೆದುಕೊಂಡಿದ್ದಾರೆ.

ಆದರೆ ಪದ್ಯದ ಅಡಿಯಲ್ಲಿ ಪಾಠಾಂತರಗಳಿಗೆ ಸೂಚಿಸಿದ ಸಂಖ್ಯೆಯ ಕ್ರಮ ಸರಿಯಾಗಿಲ್ಲ. ಯಾಕೆಂದರೆ ಒಂದೇ ಪುಟದಲ್ಲಿ ಬರುವ ಪಾಠಾಂತರಗಳನ್ನು ಸೂಚಿಸಲು ಬಳಸುವ ಅಂಕಿಗಳಲ್ಲಿ ಏಕರೂಪತೆಯಿಲ್ಲ. ಉದಾ : 'ಧನ್ಯಕುಮಾರ ಚರಿತೆ'ಯ ೧೨ ನೆಯ ಪುಟದ ಅಡಿಟಿಪ್ಪಣಿಯಲ್ಲಿಯ ಮೊದಲನೆಯ ಪಾಠಾಂತರ ೪ ರಿಂದ ಆರಂಭವಾಗಿ. ೧೬ ರ ವರೆಗೆ ಮುಂದುವರಿದಿದೆ. ಅಮೇಲೆ ಮತ್ತೆ ೧ ರಿಂದ ೧೧ ರ ವರೆಗೆ ಪಾಠಾಂತರಗಳಿವೆ. ಪುಟ ೧೩ ರಲ್ಲಿಯ ಪಾಠಾಂತರಗಳಿಗೆ ೧೨ ರಿಂದ ೧೫, ೧ ರಿಂದ ೧೨ ಹಾಗೂ ೧ ರಿಂದ ೮ ಎಂದು ಅಂಕಿಗಳನ್ನು ಸೂಚಿಸಲಾಗಿದೆ. ಹೀಗೆ ಪಾಠಾಂತರಗಳಿಗೆ ಕೊಟ್ಟ ಈ ಸಂಖ್ಯಾಕ್ರಮ ಓದುಗರನ್ನು ಗೊಂದಲಕ್ಕೀಡು ಮಾಡುತ್ತವೆ. ಈ ಅಸ್ತವ್ಯಸ್ತತೆ ಗ್ರಂಥದ ತುಂಬೆಲ್ಲ ಒಡೆದು ಕಾಣುತ್ತದೆ. ಇನ್ನು (ಪಾಠಾಂತರ) ಹಸ್ತಪ್ರತಿಗಳಿಗೆ ಕೊಟ್ಟ ಸಂಕೇತ ಹಾಗೂ ಸಂಕ್ಷೇಪಗಳಿಗೆ ಕೆಲವು ಸಲ ದುಂಡಕೌಂಸನ್ನೂ ( ), ಇನ್ನು ಕೆಲವು ಸಲ ಚೌಕಕೌಂಸನ್ನೂ [ ] ಬಳಸಿದುದರ ಔಚಿತ್ಯ ಅರ್ಥವಾಗುವುದಿಲ್ಲ.

ಗ್ರಂಥದ ಆದಿಯಲ್ಲಿ ಪ್ರಸ್ತಾವನೆಯೂ ಅಂತ್ಯದಲ್ಲಿ ಅನುಬಂಧಗಳೂ ಇರಬೇಕಾದುದು ತೀರ ಅವಶ್ಯ. ಇವು ಒಂದು ಗ್ರಂಥದ ಅಂತರಂಗವನ್ನು ತೆರೆದು ತೋರಿಸುವ ಮಾರ್ಗದರ್ಶಿಗಳು. ಈ ಗ್ರಂಥದ ಆದಿಯ ಪ್ರಸ್ತಾವನೆಯಲ್ಲಿ ಬರುವ ಕಥಾಸಾರ, ಕೃತಿಯ ವಿಮರ್ಶೆ, ಸಂಸ್ಕೃತ-ಕನ್ನಡ ಧನ್ಯಕುಮಾರ ಚರಿತೆಗಳ ತೌಲನಿಕ ಅಧ್ಯಯನ, ಗ್ರಂಥ ಪರಿಷ್ಕರಣಕ್ಕೆ ಬಳಸಿದ ಹಸ್ತಪ್ರತಿಗಳ ವಿವರಣೆ ಹಾಗೂ ಪ್ರತಿಗಳ ವಿವರಣೆ ಹಾಗೂ ಅಂತ್ಯದ ಗದ್ಯಾನುವಾದಗಳು ಕೃತಿಯ ಮೌಲ್ಯವನ್ನು ಅಧಿಕಗೊಳಿಸಿವೆ. ಇವುಗಳ ಮೂಲಕ ಓದುಗನು ಕೃತಿಯ ಅಂತರಂಗವನ್ನು ಸುಲಭವಾಗಿ ಪ್ರವೇಶಿಸಬಹುದಾಗಿದೆ. ಆದರೆ ಗ್ರಂಥದ ಒಡಲಲ್ಲಿ ತುಂಬಿರುವ ಅಚ್ಚಿನ ದೋಷಗಳು ಅಪಾರ. 'ಸಂಪಾದನಾ ಕೃತಿ'ಯಲ್ಲಿಯ ಅಚ್ಚಿನ ದೋಷಗಳು ಕೆಲವು ಸಲ ಕವಿಗೆ ಅಪಚಾರವನ್ನುಂಟುಮಾಡುತ್ತವೆ. ಹೀಗಾಗಿ ಈ ಗ್ರಂಥದ ಮುದ್ರಣಕಾರ್ಯ ಅಷ್ಟೊಂದು ಅಚ್ಚುಕಟ್ಟಾಗಿ ನೆರವೇರಿಲ್ಲವೆಂಬುದು ಥಟ್ಟನೆ ಗಮನಕ್ಕೆ ಬರುತ್ತದೆ. ಹಂಪನಾ ಅವರು ಮನಸ್ಸು ಮಾಡಿದ್ದರೆ, ಹೆಚ್ಚು ಕಾಳಜಿ ವಹಿಸಿದ್ದರೆ ಅಚ್ಚಿನ ದೋಷಗಳನ್ನು ಅಳಿಸಿಹಾಕಿ, ಈ ಕೃತಿ ಇನ್ನೂ ಸರ್ವಾಂಗ ಸುಂದರವಾಗುವಂತೆ ಮಾಡಬಹುದಿತ್ತು. ಅಚ್ಚಿನ ಕಾರ್ಯದಲ್ಲಿ ತೋರಿದ ಉದಾಸೀನತೆ ಹಂಪನಾ ಅವರ ಪರಿಶ್ರಮವನ್ನೂ ಗ್ರಂಥಪರಿಷ್ಕರಣ ಕಾರ್ಯವನ್ನೂ ಕುಂದಿಸುವಂತೆ ಮಾಡಿದೆ: ಗ್ರಂಥದ ಮೌಲ್ಯವನ್ನು ಕುಗ್ಗಿಸಿದೆ.

ಹೀಗೆ ಆದಿಯಪ್ಪ ಕವಿಯ 'ಧನ್ಯಕುಮಾರ ಚರಿತೆ'ಯಲ್ಲಿ ಗುಣ-ದೋಷಗಳೆರಡೂ ಸಮಸಮವಾಗಿ ಕಂಡು ಬರುತ್ತವೆ. ಹೀಗಿದ್ದೂ ಹಂಪನಾ ಅವರು ಗ್ರಂಥಸಂಪಾದನಾಕಾರರಾಗಿ ಮಾಡಿದ ಕಾರ್ಯ. ಗ್ರಂಥಸಂಪಾದನಾ ಕ್ಷೇತ್ರಕ್ಕೆ ಸಲ್ಲಿಸಿದ ಸೇವೆ ಮೆಚ್ಚುವಂಥದಾಗಿದೆ.

ಟಿ. ಕೇಶವಭಟ್ಟ

# ನಾಗಕುಮಾರ ಷಟ್ಪದಿ

ಜೈನ ಪರಂಪರೆಗೆ ಅನುಗುಣವಾಗಿ ರಚಿತವಾದ ಕನ್ನಡ ಕಾವ್ಯಗಳಲ್ಲಿ ಬೊಮ್ಮಣ ಕವಿಯ 'ನಾಗಕುಮಾರ ಷಟ್ಪದಿ' ಎಂಬುದೊಂದು. ಇಪ್ಪತ್ತನಾಲ್ಕು ಮಂದಿ ತೀರ್ಥಂಕರರು, ದ್ವಾದಶ ಚಕ್ರವರ್ತಿಗಳು, ನವನಾರಾಯಣರು, ನವ ಬಲಭದ್ರರು, ನವ ಪ್ರತಿನಾರಾಯಣರು–ಹೀಗೆ ಅರವತ್ತಮೂರು ಶಲಾಕಾಪುರುಷರ ಚರಿತ್ರೆ ಜೈನ ಪುರಾಣಗಳಲ್ಲಿ ಮುಖ್ಯ ಕಥಾವಸ್ತು. ಹಾಗೆಯೇ ಇಪ್ಪತ್ತನಾಲ್ಕು ಮಂದಿ ಕಾಮದೇವರ ಚರಿತ್ರೆಯು ಇರುತ್ತದೆ. ಅಂತಹ ಕಾಮದೇವರುಗಳಲ್ಲಿ ಮೊದಲಿಗ ಬಾಹುಬಲಿ. ಇಪ್ಪತ್ತೆರಡನೆಯವನು ನಾಗಕುಮಾರ. ಇವನನ್ನು ಕಥಾನಾಯಕನನ್ನಾಗಿ ಮಾಡಿಕೊಂಡು, ಬೊಮ್ಮಣನಿಗಿಂತ ಹಿಂದೆಯೂ ಮುಂದೆಯೂ ಅನೇಕ ಕವಿಗಳು ಕನ್ನಡದಲ್ಲಿ ಕಾವ್ಯ ರಚನೆ ಮಾಡಿದ್ದಾರೆ. ನಾಗಕುಮಾರನಿಗೆ ಸಂಬಂಧಿಸುವಂತೆ ರಚಿತವಾದ ಅನೇಕ ಶೋಭನಗೀತಗಳೂ ಉಪಲಬ್ಧವಿವೆ. ಇದೇ ಕಥಾವಸ್ತುವನ್ನಿಟ್ಟುಕೊಂಡು ಭಾಮಿನಿಷಟ್ಪದಿಯಲ್ಲಿ ಬೊಮ್ಮಣ ಕವಿ ರಚಿಸಿರುವ ಈ ಕಾವ್ಯದಲ್ಲಿ ಮೂವತ್ತೆರಡು ಸಂಧಿಗಳಿವೆ : ೨೯೮೮ ಪದ್ಯಗಳಿವೆ.

ಕನ್ನಡದಲ್ಲಿ ಒಳ್ಳೆಯ ವಾಕ್ಸಿದ್ಧಿಯುಳ್ಳ ಡಾ|| ಹಂಪ, ನಾಗರಾಜಯ್ಯನವರು ಈ ಕಾವ್ಯವನ್ನು ಸಂಪಾದಿಸಿದ್ದಾರೆ : ಬೆಂಗಳೂರು ವಿಶ್ವವಿದ್ಯಾಲಯದ ಪ್ರಸಾರಾಂಗದ ಮೂಲಕ, ಅಲ್ಲಿಯ ಕನ್ನಡ ಅಧ್ಯಯನ ಕೇಂದ್ರದ ಗ್ರಂಥಮಾಲೆಯಲ್ಲಿ ೨೭ನೆಯ ಕುಸುಮವಾಗಿ ಇದು ೧೯೭೭ರಲ್ಲಿ ಮೊದಲ ಬಾರಿಗೆ ಅರಳಿದೆ. ಮಾನ್ಯ ಸಂಪಾದಕರು ಈ ಕಾವ್ಯವನ್ನು 'ಅ' ಮತ್ತು 'ಆ' ಎಂಬೆರಡು ಓಲೆಗರಿಯ ಹಸ್ತಪ್ರತಿಗಳ ಸಹಾಯದಿಂದ ಸಂಪಾದಿಸಿರುತ್ತಾರೆ. ಅವುಗಳಲ್ಲಿ ಒಂದರ ಪಾಠವನ್ನು ಸ್ವೀಕರಿಸಿ, ಮತ್ತೊಂದರ ಪಾಠಾಂತರವನ್ನು ಅದೇ ಪುಟದಡಿಯಲ್ಲಿ

ಕೊಟ್ಟಿರುತ್ತಾರೆ. ಕವಿಯನ್ನು ಕುರಿತು, ಆತನ ಕಾವ್ಯವನ್ನು ಕುರಿತು. ಓರ್ವ ಸಮರ್ಥ ಗ್ರಂಥ ಸಂಪಾದಕ ವಿವರಿಸಬಹುದಾದಷ್ಟೆಲ್ಲವನ್ನೂ ಇದರಲ್ಲಿ ವ್ಯಕ್ತಪಡಿಸಿದ್ದಾರೆ. ಅವರು ವಿಶದಪಡಿಸಿರುವಂತೆ, ಬೊಮ್ಮಣನು ವೇಣುಪುರದವನು. ಈ ವೇಣುಪುರವು ತುಮಕೂರು ಜಿಲ್ಲೆಯ ಬಿದರೆ ಗ್ರಾಮವೆಂದೂ ಅಲ್ಲಿಯ ಆರಾಧ್ಯದೈವವಾಗಿರುವ ಸುಪಾರ್ಶ್ವನಾಥನ ಭಕ್ತನು ಈತನೆಂದೂ ಇಲ್ಲಿ ವಿಶದಪಡಿಸಲಾಗಿದೆ. ನಾಗೇಂದ್ರನ ಮಗನಾದ ಈ ಕವಿ ಶ್ರೀರಂಗಪಟ್ಟಣದ ಇಮ್ಮಡಿ ಕೃಷ್ಣರಾಜೇಂದ್ರನ ಕಾಲದ–ಅಂದರೆ, ಕ್ರಿ.ಶ. ೧೭೪೦ರ ಕಾಲದಲ್ಲಿದ್ದವನು. ಇವನ ಮಗ ರಾಯಣ್ಣನು ಓರ್ವ ಪ್ರಸಿದ್ಧ ಕವಿ. ಬೊಮ್ಮಣ ಕವಿಯ ಉಪಲಬ್ಧ ಕೃತಿಗಳು ಆದಿಪುರಾಣ ಯಕ್ಷಗಾನ ಕೃತಿ ಮತ್ತು ಈ 'ನಾಗಕುಮಾರ ಷಟ್ಪದಿ' ಎಂಬೆರಡು ಮಾತ್ರ.

ಕಾವ್ಯ ರಚನಾ ದೃಷ್ಟಿಯಿಂದ ಈ ಕಾವ್ಯ ಅಷ್ಟೇನೂ ಹಿರಿಮೆಯ ರಚನೆಯಲ್ಲ. ಆದರೆ ಧರ್ಮ–ನೀತಿಗಳ ಪ್ರತಿಪಾದನೆಯಲ್ಲಿ. ಜಿನಭಕ್ತಿ ಬೋಧನೆಯಲ್ಲಿ, ವರ್ಣನೆಯಲ್ಲಿ, ರಸನಿರೂಪಣೆಯಲ್ಲಿ ಹಿಂದೆ ಬೀಳುವುದಿಲ್ಲ. ಆದುದರಿಂದಲೇ ಇರಬೇಕು–ಇದನ್ನು ಸಂಪಾದಿಸುವ ಮಹತ್ಕಾರ್ಯವನ್ನು ಕೈಗೆತ್ತಿಕೊಂಡುದು : ಇತರ ಕವಿಕೃತ ನಾಗಕುಮಾರ ಚರಿತೆಯ ಕಾವ್ಯಗಳ ನಡುವೆ ಇದಕ್ಕೂ ಒಂದು ಸ್ಥಾನವನ್ನು ಕಂಡುದು. ಸಂಪಾದಕರು ಈ ಕೃತಿಗೆ ತಮ್ಮ ವಿಶೇಷಾಧ್ಯಯನದ ಅನುಭವವನ್ನು ಗ್ರಂಥ ಸಂಪಾದನ ಕೌಶಲವನ್ನು ಕೂಡಿಸಿ, ವಿದ್ವಜ್ಜನರು ಮೆಚ್ಚುವಂತೆ ಇದನ್ನು ಹೊರತಂದಿರುತ್ತಾರೆ. ಈ ಕೃತಿಯು ಕೂಲಂಕಷ ವಿಮರ್ಶೆಯುಳ್ಳ, ಸಂವಾದೀ ಕೃತಿಗಳ ಪರಾಮರ್ಶೆಯೊಡವೆರೆದ ಸುಮಾರು ನೂರೈವತ್ತು ಪುಟಗಳ ಪರಿಮಾಣದ ವಿವರವುಳ್ಳ ಪ್ರಸ್ತಾವನೆಯನ್ನು ಬರೆದು ಈ ಕೃತಿಯನ್ನು ಅಲಂಕರಿಸಿರುತ್ತಾರೆ. ನೂರ ಐವತ್ತಾರು ಪುಟಗಳ ಅನುಬಂಧವನ್ನೂ ಒದಗಿಸಿ. ಈ ಗ್ರಂಥದ ಸರ್ವಂಕಷ ಅಭ್ಯಾಸಕ್ಕೆ ಅನುವು ಮಾಡಿರುವುದನ್ನು ಯಾರೂ ಮೆಚ್ಚಲೇಬೇಕು.

ಹಂಪ. ನಾಗರಾಜಯ್ಯನವರಿಗಿರುವ ಭಾಷೆ–ಸಾಹಿತ್ಯಗಳ ಅಧ್ಯಯನಾನುಭವ ಅಸಾಮಾನ್ಯ ! ಅಂತಹ ಅಧ್ಯಯನದಿಂದ ಅವರಿಗೆ ಒದಗಿ ಬಂದಿರುವ ಅಭಿವ್ಯಕ್ತಿ ನೈಪುಣ್ಯವೂ ಅದ್ವಿತೀಯವೆಂದರೆ ತಪ್ಪಲ್ಲ. ಅವರು ಭಾಷಣ–ಲೇಖನಗಳ ಸವ್ಯಸಾಚಿ. ಲೇಖನಿ ಬದಿಗಿಟ್ಟು ಭಾಷಣಕ್ಕೆ ತೊಡಗಿದರೆಂದರೆ. ಆ ವಾಗ್ವೈಖರಿ ಅವರ ನಾಲಗೆಯಲ್ಲಿ ವಾಗ್ದೇವತೆ ನೆಲಸಿರುವಳೋ ಎನಿಸುತ್ತದೆ. ಹಾಗೆಯೇ ಲೆಕ್ಕಣಿಕೆ ಹಿಡಿದು ಬರೆಯತೊಡಗಿದರೆಂದರೆ. ಅವರ ಮೊನೆಯಲ್ಲಿ ಸರಸ್ವತಿಯೇ ಸರಿತ್ತಾಗಿ ಹರಿದು ಬರುವಳೋ ! ಎಂಬಂತಿರುತ್ತದೆ. ಅವರ ಗದ್ಯರಚನೆ ಗದ್ಯಕಾವ್ಯದಂತಿರುತ್ತದೆ. ಅಲ್ಲಲ್ಲಿಗೊಪ್ಪುವ ಶಬ್ದಗಳು. ಗಾದೆಗಳು. ನುಡಿಗಟ್ಟುಗಳು, ಅನುಪ್ರಾಸ-ಅಂತ್ಯಪ್ರಾಸಗಳು ಹಾಗೂ ಯಮಕಗಳು, ಪ್ರತಿಮೆ-ಉಪಮೆ-ರೂಪಕಗಳು ನಾ ಮುಂದೆ ತಾ ಮುಂದೆ ಎಂದು ಬರುವಂತಿರುತ್ತವೆ. ಈ ನಾಗಕುಮಾರ ಷಟ್ಪದೀ ಗ್ರಂಥದ ಅವರ ವಾಕ್ಯಸ್ವಾವಗಳು ಈ ಹೇಳಿಕೆಗೆ ಹೊರತಲ್ಲ. ಅವರಲ್ಲಿ ಅನುಭವ ಸಂಪತ್ತು

ಅಭಿವ್ಯಕ್ತಿ ಸಾಮರ್ಥ್ಯದೊಡನೆಸೇರಿರುವುದೇ ಇದಕ್ಕೆ ಕಾರಣ. ಇವರ ಹಲವು ತೀರ್ಮಾನಗಳು ಕಾವ್ಯ ಕರ್ತೃವಿಗೆ ಅಪ್ರಿಯವಾದರೂ ಸತ್ಯವಾದುವು. ಕವಿ-ಕಾವ್ಯ ವಿಚಾರದಲ್ಲಿ ತಮ್ಮ ಆಸ್ಥೆಯ ಕಾರಣದಿಂದ ಗುಣವನ್ನು ಮಾತ್ರವೇ ಕಾಣುವ. ಅವಗುಣವನ್ನು ಅಲಕ್ಷಿಸುವ ವಿಮರ್ಶಕರು ಇವರಲ್ಲ. ಕವಿಕೃತಿಯ ದೋಷವನ್ನು ನಿರ್ದಾಕ್ಷಿಣ್ಯವಾಗಿಯೇ ಎತ್ತಿ ತೋರಿಸುತ್ತಾರೆ. ಅಂತಹ ಕೆಲವು ಮಾತುಗಳಿವು :

“ನಾಗಕುಮಾರ ಷಟ್ಪದಿ ಉತ್ತಮ ಕಾವ್ಯವಲ್ಲ. ಸಾಧಾರಣ ಕೃತಿ. ಶಿಷ್ಟೇತರ ಸಮುದಾಯಕ್ಕೆ ಇದು ಉದ್ದೇಶಿಸಿ ಬರೆದ ಕೃತಿ. ಪ್ರಾಚೀನ ಕಾವ್ಯಾಭ್ಯಾಸಗಳಿಂದ ಹದವಾದ ಹೃದಯವನ್ನು ಈತ ತಣಿಸಲಾರ. ಭಾಷೆ ತೀರ ಸರಳ, ಒಮ್ಮೊಮ್ಮೆ ಜಾಳು. ಕಲ್ಪನೆಗಳೂ ಸಾಮಾನ್ಯ. ಈತ ಬಾಹುಬಲಿಯ (ಸಾಂಗತ್ಯದಲ್ಲಿ ನಾಗಕುಮಾರ ಚರಿತೆ ಬರೆದ ಕವಿಯ) ಗುಹಾಧ್ವನಿಯಾಗಿ ಮಾರ್ನುಡಿಯುತ್ತಾನೆ. ಅದನ್ನು ಮೀರಿಸುವುದಂತೂ ಆಗದ ಮಾತು. ಆದರೆ, ಅಲ್ಲಿನ ಎತ್ತರಕ್ಕೆ ಏರುವುದರಲ್ಲೂ ವಿಫಲನಾಗಿದ್ದಾನೆ. ಕತೆ ಪ್ರಾರಂಭವಾಗುವುದಕ್ಕೆ ಮೊದಲು ೭೫ ಪದ್ಯಗಳು, ಅನಂತರ ಲೋಕಾಕೃತಿಯೆಂದು ೪೦ ಪದ್ಯಗಳು-ಹೀಗೆ ಅನಗತ್ಯ ವಿಸ್ತಾರಗಳಿಂದ ಬೇಸರಿಸುತ್ತವೆ. ಮೂಗಿಗಿಂತ ಮೂಗುತಿ ಭಾರ ಎಂಬಂತೆ ಈತನಲ್ಲಿ ಪಾಠ-ಪದ್ಯಕ್ಕಿಂತ ಪೀಠಿಕೆಯೇ ಜೋರು!... ಪ್ರಾಸಕ್ಕಾಗಿ ಹೇಗೋ ಹಾಗೆ ಛಂದಸ್ಸಿಗಾಗಿ ಅನೇಕ ಶಬ್ದಗಳನ್ನು ವಿರೂಪಗೊಳಿಸಿದ್ದಾನೆ...ಅಲ್ಪಪ್ರಾಣ ಮಹಾಪ್ರಾಣ ವ್ಯತ್ಯಾಸಗಳು ಬೊಮ್ಮಣ ಕವಿಯ ಕೈಯಲ್ಲಿ ಅದೃಶ್ಯವಾಗಿವೆ...ಮಕಾರಗಳನ್ನು ಬೆರಸಿ ಸಮಾಸ ಮಾಡುವುದು ಹೆಚ್ಚು (ಬಂದು ಮುಚಿತಾಸನದಿ-ಇತ್ಯಾದಿ.)...ಮುಖ್ಯವಾಗಿ ಬೊಮ್ಮಣ ಕವಿಗೆ ಸಂಸ್ಕೃತ ಜ್ಞಾನ ಕಡಮೆ...ಬೊಮ್ಮಣ ಕವಿಯ ದೋಷ ದೌರ್ಬಲ್ಯಗಳು ಹತ್ತಾರು. ಕವಿ ಸಮಯದ ಕಾಡಿನಲ್ಲಿ ದಣಿವಿಲ್ಲದೆ ಸುತ್ತುತ್ತಾನೆ. ತನ್ನ ವಾಚಾಳಿತನವನ್ನು ನಿಗ್ರಹಿಸಿಕೊಳ್ಳಬೇಕಿತ್ತೆಂದು ಪದೇ ಪದೇ ಓದುಗರಿಗೆ ಅನಿಸುವಂತೆ ಮಾಡುತ್ತಾನೆ. ಸವೆದ ಸಿದ್ಧ ಜಾಡಿನಲ್ಲಿ ಕವಿ ತಡವರಿಸಿಕೊಂಡು ನಡೆದಿರುವುದು ಹೆಜ್ಜೆ ಹೆಜ್ಜೆಗೂ ಕಾಣುತ್ತಿದೆ. ಪರಿಷ್ಕಾರ, ಒಟ್ಟಂದ ಸಾಲದು. ಅತಿ ಯಶಸ್ವಿಯಾದ ಭಾಗಗಳಂತೂ ಇಲ್ಲವೆನ್ನಬಹುದು. ಸೋತ ಅಥವಾ ಸಪ್ಪೆಯಾದ ಸಂದರ್ಭಗಳು ಸಾಕಷ್ಟಿವೆ.”

ಮಾನ್ಯ ಗ್ರಂಥ ಸಂಪಾದಕರು ವ್ಯಕ್ತಮಾಡಿರುವ ದೋಷಗಳಿಗೆ ಸೇರಿಸಬಹುದಾದವು ಇನ್ನೂ ಕೆಲವಿವೆ. ಅಂಥವುಗಳಲ್ಲಿ ಅರಿಸಮಾಸಗಳು (ಇನಿಚೂಕ-ಮುಂತಾದವು). ಸಂಧಿದೋಷಗಳು (ತಮಾಲ ಶೋಕೆ. ಮಣಿಕೂಟಚಲ. ವದನರವಿಂದ-ಇತ್ಯಾದಿ) ಹಲವು. ಸವರ್ಣದೀರ್ಘವಾಗುವೆಡೆ. ಗುಣಸಂಧಿಯಾಗಬೇಕಾದ ಕಡೆ (ಭೋಗುಪಭೋಗ-ಇತ್ಯಾದಿ) ಲೋಪಸಂಧಿಯಾದುದು ಕಂಡು ಬರುತ್ತದೆ. ಹಲವೆಡೆ ಶಿಥಿಲದ್ವಿತ್ವವಾಗದ ಕಡೆ ಶಿಥಿಲದ್ವಿತ್ವದ ಪ್ರಯೋಗವಾಗಿದೆ. ಛಂದೋದೋಷವೂ ಸಾಕಷ್ಟಿದೆ. ಎಷ್ಟೋ ಪದ್ಯಗಳ ಪಾದಗಳ ಮಾತ್ರಾ ಸಂಖ್ಯೆ ಸರಿಯಿಲ್ಲ.

ಮೂರು ಮಾತ್ರೆಯ ಮತ್ತು ನಾಲ್ಕು ಮಾತ್ರೆಯ ಗಣಗಳೇ ಇರಬೇಕಾಗಿರುವ ಅನುಕ್ರಮವೂ ತಪ್ಪಿದೆ. ಮೂರು ನಾಲ್ಕು ಒಟ್ಟಾಗಿ ಏಳು ಮಾತ್ರೆಯಾಗ ಬೇಕಾದುದನ್ನು ೨+೩+೨, ೫+೨, ೪+೩—ಹೀಗೆ ಅಸಹಜವಾಗಿರುವ ಗಣ ಪರಿವೃತ್ತಿಯೂ ಅಲ್ಲಲ್ಲಿ ಕಂಡುಬರುತ್ತದೆ. ಇಂತಹ ತಪ್ಪುಗಳಿಂದ ಜೇಸತ್ತ ಕಾರಣ ದಿಂದಲೇ ಇರಬಹುದು–ಸಂಪಾದಕರು ಕೆಲವೆಡೆಯಾದರೂ ತುಸು ಮಾರ್ಪಾಡಿನಿಂದ ಅವುಗಳನ್ನು ಪರಿಸ್ಕರಿಸಲು ಮನಸ್ಸು ಮಾಡಿಲ್ಲ. ಪ್ರತಿಯಲ್ಲಿದ್ದಂತೆಯೇ ಕೊಟ್ಟಿ ದ್ದಾರೆ. ಎಷ್ಟೋ ಕಡೆ 'ಇ' ಪ್ರತಿಯ ಪಾಠ ಶುದ್ಧವಾಗಿದ್ದರೂ ಅದನ್ನು ಪುಟದಡಿಯಲ್ಲಿ ಕೊಟ್ಟುದುಂಟು. ಇಂತಹ ದೋಷಗಳು ಈ ಕಾವ್ಯದಲ್ಲಿದ್ದರೂ ಅದರ ಕಥಾ ಪ್ರಸಂಗಗಳಿಂದ, ಸಾಹಸ ಚಿತ್ರಣಗಳಿಂದ, ವರ್ಣನೆಗಳಿಂದ, ಜೈನತತ್ವ ಪ್ರತಿಪಾದನೆಯಿಂದ, ನೀತಿಬೋಧೆಗಳಿಂದ–ಇವೆಲ್ಲಕ್ಕಿಂತ ಹೆಚ್ಚಾಗಿ ಗ್ರಂಥಸಂಪಾದಕರ ಸರಿತೂಕದ ಸಮರ್ಥ ಪರಿಶೀಲನೆಗಳಿಂದ ಈ ಕಾವ್ಯ ಆಪ್ಯಮಾನವಾಗುತ್ತದೆ.

ನಾಗಕುಮಾರನನ್ನು ಕುರಿತು ಸಂಸ್ಕೃತ, ಪ್ರಾಕೃತ, ಕನ್ನಡ ಭಾಷೆಗಳಲ್ಲಿ ಆವಾವ ಕೃತಿಗಳು ಬಂದಿವೆಯೆಂಬುದನ್ನು ಸಂಪಾದಕರು ಅವವುಗಳ ರೂಪರೇಖೆಯೊಂದಿಗೆ ಪ್ರಸ್ತಾಪಿಸಿದ್ದಾರೆ. ಅದರಂತೆ, ಇಪ್ಪತ್ತೆರಡನೆಯ ತೀರ್ಥಂಕರನಾದ ನೇಮಿನಾಥ ಸ್ವಾಮಿಯ ಕಾಲದಲ್ಲಿದ್ದ ರೂಪ ಗುಣಸಂಪನ್ನ ಮಹಾನುಭಾವನೀತ. ಇವನ ಚರಿತ್ರೆ ಪಂಚಮೀ ನೋಂಪಿಯ ಮಹತ್ತ್ವವನ್ನು ಸಾರುತ್ತದೆ. ಪೂರ್ವಜನ್ಮದಲ್ಲಿ ಪಂಚಮೀ ನೋಂಪಿಯನ್ನು ಆಚರಿಸಿದ್ದರಿಂದಲೇ ಇವನಿಗೆ ಕಾಮದೇವತ್ವ ಲಭಿಸಿದೆ. ಬೇರೆ ಬೇರೆ ಭಾಷೆಗಳಲ್ಲಿ ಬಂದಿರುವ ನಾಗಕುಮಾರ ಚರಿತೆಯ ಸ್ವರೂಪವನ್ನು ಪ್ರಸ್ತಾಪಿಸಿ, ಸಂಪಾದಕರು ಇದರ ರಚನೆಯ ಪ್ರಾಚೀನತೆಯನ್ನು ವಿಶದಪಡಿಸಿದ್ದಾರೆ. ಕನ್ನಡದಲ್ಲಿ ರಚಿತವಾಗಿರುವ ಏಳು ನಾಗಕುಮಾರ ಚರಿತೆಗಳ ಪರಿಚಯ ಮಾಡಿ ಕೊಟ್ಟಿದ್ದಾರೆ. ಅವುಗಳಲ್ಲಿ ಚಂಪೂ ರಚನೆಯಾಗಲಿ, ಯಕ್ಷಗಾನ ಕೃತಿಯಾಗಲಿ ಇಲ್ಲ; ಸಾಂಗತ್ಯದಲ್ಲಿ ಷಟ್ಪದಿಯಲ್ಲಿ ಅವುಗಳ ರಚನೆಯಾಗಿವೆಯೆಂದು ತಿಳಿಸಿದ್ದಾರೆ.

ಅಜ್ಞಾತ ಕವಿ ಕರ್ತೃಕವಾಗಿರುವ ಪಂಚಮೀ ನೋಂಪಿಯ ಕಥೆ, ಮಲ್ಲಿಷೇಣನ ಪಂಚಮೀ ನೋಂಪಿಯ ಕಥೆ, ಬಂಧುವರ್ಮನ ಜೀವಸಂಬೋಧನ ಕಾವ್ಯದ ನಾಗಕುಮಾರನ ಕಥೆ, ರಾಮಚಂದ್ರ ಮುಮುಕ್ಷುವಿನ ಪುಣ್ಯಾಸ್ರವ ಕಥಾಕೋಶದಲ್ಲಿ ಬಂದಿರುವ ಕಥೆ, ಕಲ್ಯಾಣಕೀರ್ತಿಯ ನಾಗಕುಮಾರ ಚರಿತೆ, ಇವನ್ನೆಲ್ಲ ಪ್ರಾರಂಭ ದಲ್ಲಿಯೇ ಕೊಡಲಾಗಿದೆ. ಮುಂದೆ ಅನುಕ್ರಮವಾಗಿ ಅವುಗಳ ತೌಲನಿಕ ಅಧ್ಯಯನವಿದೆ. ಪೂರ್ವಕವಿಗಳ ಕೃತಿ ಸಮೀಕ್ಷೆಗಳಿವು–ಪ್ರಾಕೃತ ಭಾಷೆಯ ಮಹಾ ಕವಿ ಪುಷ್ಪದಂತನ (ಕಾಲ ಕ್ರಿ.ಶ. ೯೬೫) 'ಣಾಯ ಕುಮಾರ ಚರಿಉ'. ಬಂಧುವರ್ಮನ ನಾಗಕುಮಾರನ ಕಥೆ, ಪುಣ್ಯಾಸ್ರವದ ಸಮೀಕ್ಷೆ, ನಾಗರಾಜಕವಿ ಕನ್ನಡದಲ್ಲಿ ಬರೆದ ಪುಣ್ಯಾಸ್ರವ ಚಂಪೂ ಕಾವ್ಯದ ಸಪ್ತಮಾಧಿಕಾರದಲ್ಲಿ ೩೪ನೆಯ ಕಥೆಯಾಗಿ ಬಂದಿರುವ

ನಾಗಕುಮಾರನ ಕಥೆ. ಕಲ್ಯಾಣ ಕೀರ್ತಿಯ (೧೪೩೯) 'ಫಣಿಕುಮಾರ ಚರಿತೆ' ಎಂಬ ಭಾಮಿನಿಷಟ್ಪದಿಯ ಕಾವ್ಯ. ಬಾಹುಬಲಿಯ (೧೫೬೦) ಸಾಂಗತ್ಯ ರೂಪದ ನಾಗಕುಮಾರ ಚರಿತೆ–ಇವೆಲ್ಲವುಗಳ ಸಮೀಕ್ಷೆಗಳು ಇದರಲ್ಲಿ ಬಂದಿವೆ. ಬಾಹುಬಲಿಯನ್ನು ಬೊಮ್ಮಣನು ಹೇಗೆ ಕಣ್ಮುಚ್ಚಿ ಹಿಂಬಾಲಿಸಿದ್ದಾನೆ. ಅನುಕರಣೆ ಮಾಡಿದ್ದಾನೆ-ಎಂಬುದನ್ನು ಅಂಥಾ ಸಂಧಿಗಳ ಹೆಸರುಗಳ ಉದಾಹರಣೆಯೊಂದಿಗೆ ವಿಶದಪಡಿಸಲಾಗಿದೆ. ಈ ಸಂದರ್ಭದಲ್ಲಿ ಸಂಪಾದಕರ ಉದ್ಗಾರಗಳಿವು :

"ಈ ಅನುಕರಣೆಯಲ್ಲಿ ಆನಂದವೇನೂ ಇಲ್ಲ. ಮೂಲದ ಸೊಗಸು ಸುಮಾರು ಸೋರಿಹೋಗಿದೆ. ಎಲ್ಲಿಯ ಬಾಹುಬಲಿ! ಎಲ್ಲಿಯ ಬೊಮ್ಮಣ! ಬೊಮ್ಮಣ ಬಾಹುಬಲಿಗೆ ತಕ್ಕ ಶಿಷ್ಯನಲ್ಲ. ಶಿಷ್ಯನಲ್ಲಿ ಬಂಡವಾಳವಿಲ್ಲ. ಹೆಚ್ಚು ಸರಕು ಇಲ್ಲದೆ ಕೇವಲ ಕಡತಂದಿಟ್ಟುಕೊಂಡ ಮಾಲನ್ನು ಒಣಗಿಸಿ, ಬಾಡಿಸಿ, ಬಿಕರಿಮಾಡುವ ದೋಸಿಗ(ದೇಸಿಗ ?)ನಂತಿದ್ದಾನೆ. ಪಂಪನಿಂದ ಎರವಲು ಪಡೆದದ್ದನ್ನು ರನ್ನ ಕವಿ ಸ್ವಂತಿಕೆಯ ಎರಕಹಾಕಿ ಹೊಸಮೆರಗು ಕೊಟ್ಟು ಶ್ರೀಮಂತಗೊಳಿಸಿದ್ದಾನೆ : ಬಡ್ಡಿ ಸಹಿತ ಪಂಪನಿಗೆ ಗೌರವ ತಂದಿದ್ದಾನೆ. ಬೊಮ್ಮಣನಾದರೋ ಬಡ್ಡಿ ಹಾಗಿರಲಿ. ಅಸಲಿನಲ್ಲೇ ನಷ್ಟ ಮಾಡಿದ್ದಾನೆ. ದಿವಾಳಿಯಾಗಿದ್ದಾನೆ." ಎಷ್ಟೊಂದು ಖಚಿತ, ಮಾರ್ಮಿಕ, ಮೊನಚು-ಹಂಪನಾ ಅವರು ಬೊಮ್ಮಣನ ಕೃತಿ ಕೌಶಲಕ್ಕೆ ತೆತ್ತ ಬೆಲೆ!

ಅನಂತರ ಬೊಮ್ಮಣ ಕವಿಯ ಕಾವ್ಯಸಮೀಕ್ಷೆಯನ್ನೆತ್ತಿಕೊಂಡು ಉತ್ತಮ ನ್ಯಾಯಾಧೀಶನಂತೆ ತೀರ್ಪುಗೊಟ್ಟಿದ್ದಾರೆ. ಅವನ ಮಗ ರಾಯಣ್ಣನ ಕರ್ತೃತ್ವವನ್ನೂ ನಿರೂಪಿಸಿದ್ದಾರೆ. ನಾಲ್ಕನೆಯ ಮಂಗರಸನೆಂದು ಖ್ಯಾತನಾದ ರಾಯಣ್ಣನು ಮನ್ಮಥಮಣಿದರ್ಪಣ ಎಂಬ ಭಾಮಿನಿಷಟ್ಪದಿಯ ಕಾವ್ಯವನ್ನೂ ಪದ್ಮಾವತಿ ಕೊರವಂಜಿ ಎಂಬ ಯಕ್ಷಗಾನವನ್ನೂ ರಚಿಸಿರುತ್ತಾನೆ. ಇದಲ್ಲದೆ ದೇವಪ್ಪ ಕವಿಯ (೧೫೨೦) ರಾಮವಿಜಯದ ಒಂದು ಪ್ರತಿಯಲ್ಲಿ (ವೇಣುಪುರದ ಬಸದಿಯಲ್ಲಿದ್ದುದು) ಜೀರ್ಣವಾದ ಇಪ್ಪತ್ತನೆಯ ಅಧ್ಯಾಯಕ್ಕೆ ಬದಲಾಗಿ ಇಪ್ಪತ್ತು ಮತ್ತು ಇಪ್ಪತ್ತೊಂದು ಅಧ್ಯಾಯಗಳನ್ನು ಬರೆದಿರುತ್ತಾನೆ. (ನನ್ನಿಂದ ಸಂಪಾದಿತವಾಗಿ ಭಾರತೀಯ ಜ್ಞಾನಪೀಠದಿಂದ ಪ್ರಕಾಶಿತವಾದ ರಾಮವಿಜಯ ಕಾವ್ಯದಲ್ಲಿ ಇದನ್ನು ಕಾಣಬಹುದು.) ಬೊಮ್ಮಣನ ಕಾಲದ ಮೂರು ನಾಲ್ಕು ದಶಕಗಳ ಅನಂತರ ಬಂದ ಚಂದ್ರಸಾಗರವರ್ಣಿ (ಬ್ರಹ್ಮಣಾಂಕ) ನಾಗಕುಮಾರನ ಕಥೆಯನ್ನೆ ವಸ್ತುವಾಗಿಸಿಕೊಂಡು ವಿಕ್ರಮಂಥರನ ಕಾವ್ಯ ಮತ್ತು ಜಿನಮುನಿ ಎಂಬೆರಡು ಷಟ್ಪದೀ ಕಾವ್ಯಗಳನ್ನು ಬರೆದುದಾಗಿ ತಿಳಿಸಿ. ಅವನ್ನು ಸಂಪಾದಕರು ಸಮೀಕ್ಷಿಸಿರುತ್ತಾರೆ. ಜಿನಮುನಿ ಕಾವ್ಯ ೫೦ ಸಂಧಿಗಳಿಂದ ೨೫೫೧ ವಾರ್ಧಕ ಷಟ್ಪದಿ ಪದ್ಯಗಳಿಂದ ಕೂಡಿ ೧೮೮೪ರಲ್ಲಿ ಅಚ್ಚಾಗಿದೆ. ವಿಕ್ರಮಂದರನ ಕಾವ್ಯವಿನ್ನೂ ಅಚ್ಚಾಗಿಲ್ಲ. ಅದರ ಓಲೆಯುಗರಿಯು

ಪ್ರತಿಯನ್ನು ನೋಡಿಕೊಂಡು ಸಮೀಕ್ಷೆಯನ್ನು ಬರೆದಿರುವುದು ಮಾನ್ಯ ಸಂಪಾದಕರ ಮಹಾ ಸಾಹಸವೇ ಸರಿ !

ಸಮರ್ಥ ಕವಿಗಳು ಸ್ತ್ರೀ ವರ್ಣನೆಯಲ್ಲಿ ಚೆಲುವೆಯರನ್ನು ಅಡಿಯಿಂದ ಮುಡಿವರೆಗೆ ವರ್ಣಿಸಿರುವುದುಂಟು. ಅದೂ ಸಾಲದೆಂಬಂತೆ. ಅವರ ಹಾವ. ಭಾವ. ವಿಲಾಸ. ವಿಭ್ರಮ, ನಡೆ–ನುಡಿ. ನೋಟ. ನಿಲುವುಗಳನ್ನು ಬಣ್ಣಿಸಿರುವುದುಂಟು. ಅಂದರೆ, ಸ್ತ್ರೀ ವರ್ಣನೆಗೆ ಆಕರ ಬಹುಮುಖ. ಕಾವ್ಯಸುಂದರಿಯ ರೂಪವಿವರಣೆಗೂ ಹಾಗೆಯೇ ಬಹುಮುಖವಿದೆ. ಪಂಪ. ನಾಗರಾಜಯ್ಯನವರು ಅಂತಹ ಬಹುಮುಖ ಗಳಿಂದ ಕೃತಿ ಸಮೀಕ್ಷೆ ನಡೆಸಿದ್ದಾರೆ. ಮೆಚ್ಚಲಾಗದನ್ನೂ ಹೇಳಿದ್ದಾರೆ, ಮೆಚ್ಚ ಬಹುದಾದುದನ್ನೂ ನಿರೂಪಿಸಿದ್ದಾರೆ. ಯಾವುದು ಏಕೆ ಮೆಚ್ಚತಕ್ಕದು ? ಯಾವುದು ಏಕೆ ಅಲ್ಲ ?–ಎಂಬುದನ್ನು ವಿಶದಪಡಿಸಿದ್ದಾರೆ. ಅವರ ಪರಿಶೀಲನೆಯಲ್ಲಿ ಓದುಗರಿಗೆ ಅವಾಸ್ತವ ತೋರದು. ನಾಗಕುಮಾರನ ಕಥೆಯ ಕಾವ್ಯವನ್ನೋದುವವರಿಗೆ ಒಂದು ಬಗೆಯ ಸಮರ್ಪಕ ಮನೋಭೂಮಿಕೆಯನ್ನು ಪ್ರಸ್ತಾವನೆಯ ಮೂಲಕ ಕೊಡುವುದರಲ್ಲಿ ಸಂಪಾದಕರು ಸಫಲರಾಗಿದ್ದಾರೆ. ಈ ಕಾವ್ಯಕಥೆಯ ರೂಪ ರೇಶೆಯೂ ಇಲ್ಲಿ ಪ್ರಸ್ತಾವನೀಯ—

ಮಗಧ ದೇಶದ ಕಾಂಚನನಗರಿಯ (ಕನಕಪುರದ) ರಾಜ ಜಯಂಧರ. ಅವನ ಮಡದಿ ವಿಶಾಲಲೋಚನೆ ಮಗ ಶ್ರೀಧರ, ಮಂತ್ರಿ ನಯಂಧರ. ರಾಜನು ಒಮ್ಮೆ ಓಲಗದಲ್ಲಿದ್ದಾಗ ವಾಸವನೆಂಬ ವರ್ತಕನು ಉತ್ತಮ ರತ್ನಗಳ ಕಾಣಿಕೆ ಯೊಂದಿಗೆ ಓರ್ವ ಚೆಲ್ವ ಕನ್ನಿಕೆಯ ಚಿತ್ರಪಟವನ್ನಿತ್ತನು. ಆಕೆಯ ಮೇಲೆ ರಾಜನು ಮೋಹಗೊಂಡನು. ಆಕೆ ಸೌರಾಷ್ಟ್ರ ದೇಶದ ಗಿರಿಪುರದ ಶ್ರೀವರ್ಮರಾಜನಿಗೆ ಮಡದಿ ಶ್ರೀಮತಿಯಲ್ಲಿ ಜನಿಸಿದ ಪೃಥ್ವೀದೇವಿ. ಮಂತ್ರಿ ನಯಂಧರನೂ ವಾಸವನೂ ಜಯಂಧರನ ಅಪೇಕ್ಷೆಯಂತೆ ವಿವಾದವನ್ನು ಪ್ರಸ್ತಾಪಮಾಡಿದರು. ಒಪ್ಪಿಗೆಯಾಗಿ ಮದುವೆ ನಡೆಯಿತು. ಹಿರಿಯ ರಾಣಿಗೆ ಆಕೆಯ ಮೇಲೆ ಸವತಿ ಮತ್ಸರವಿದ್ದಿತು. ಜಿನಾಲಯದ ಜನಮುನಿಯ ಆಶೀರ್ವಾದದಿಂದ ಪೃಥ್ವಿದೇವಿ ವಿಕ್ರಮಂಧರನೆಂಬ ಮಗನನ್ನು ಪಡೆದಳು. ಈ ಮಗುವಿನ ಕಾಲು ತಗಲಿದಾಗ ಒಂದು ವಜ್ರಕವಾಟ ತೆರೆಯಿತು ! ಒಮ್ಮೆ ಒಂದು ನಾಗವಾಪಿಯಲ್ಲಿ ಬಿದ್ದರೂ ಹಾವು ಕಚ್ಚದೆ ಸುರಕ್ಷಿತವಾಗಿ ಉಳಿದುದರಿಂದ 'ನಾಗಕುಮಾರ' ಎಂಬ ಹೆಸರು ಪಡೆದನು. ವಿದ್ಯೆ ಕಲಿತು ದೊಡ್ಡವನಾದನು. ಓರ್ವ ಗಣಿಕಾಸ್ತ್ರೀಯ ಇಬ್ಬರು ಕುಮಾರಿಯರನ್ನು ವೀಣಾ ವಿದ್ಯೆಯಲ್ಲಿ ಸೋಲಿಸಲು ಶ್ರೀಧರನಿಂದ ಆಗಲಿಲ್ಲ. ನಾಗಕುಮಾರನು ಅವರನ್ನು ಸೋಲಿಸಿ ಮದುವೆಯಾದನು. ಒಮ್ಮೆ ರಾಜನ ಪಟ್ಟದಾನೆ ಸೊಕ್ಕೇರಿ ಸಿಕ್ಕಿದಲ್ಲಿಗೆ ನುಗ್ಗಿ ಹಾನಿ ಮಾಡುತ್ತಿರಲು. ಅದನ್ನು ಹತೋಟಿಗೆ

ತರಲು ಶ್ರೀಧರನಿಂದ ಆಗಲಿಲ್ಲ. ನಾಗಕುಮಾರನು ಅದರ ಮದವನ್ನಡಗಿಸಿ ವಶೀಕರಿಸಿದನು.

ಮತ್ತೊಮ್ಮೆ ಹಿರಿಯ ರಾಣಿಯ ಚಾಡಿ ಮಾತನ್ನು ಕೇಳಿ, ರಾಜನು ನಾಗಕುಮಾರನನ್ನು ಹೊರಗೆ ಕಳುಹಿಸದಂತೆ ಪೃಥ್ವೀದೇವಿಗೆ ಆಜ್ಞೆಮಾಡಿದನು. ಆಕೆ ಅವನ ಕತ್ತಿ ಕುದುರೆಗಳನ್ನು ಅಡಗಿಸಿಟ್ಟಳು. ಆದರೆ ನಾಗಕುಮಾರನು ಒತ್ತಾಯ ದಿಂದ ನಗರ ಸಂಚಾರಕ್ಕೆ ಹೋದನು. ಇದರಿಂದ ರಾಜನು ಸಿಟ್ಟಾಗಿ, ಪೃಥ್ವೀದೇವಿಯ ಸರ್ವಸ್ವವನ್ನೂ ಅಪಹರಿಸಿದನು. ನಾಗಕುಮಾರನು ತಂದೆಯೊಂದಿಗೆ ಜೂಜಾಡಿ ಅವನನ್ನು ಪೂರ್ಣವಾಗಿ ಸೋಲಿಸಿದನು. ಹೀಗೆಯೇ ಈ ಕೃತಿಯಲ್ಲಿ ನಾಗಕುಮಾರನ ಜೀವನದ ಮಹತ್ತರ ಘಟನೆಗಳು, ಸಾಹಸದ ಕಥೆಗಳು ಒಂದೊಂದಾಗಿ ಸುರುಳಿಬಿಚ್ಚಿ ಕೊಳ್ಳುತ್ತವೆ. ಅವನಿಗೆ ಎಷ್ಟೆಷ್ಟೋ ಮದುವೆಗಳಾಗುತ್ತವೆ. ಅಂತಿಮವಾಗಿ ಕೊಂಕಣದ ರಾಜಕುಮಾರಿ ಲಕ್ಷ್ಮೀಮತಿಯನ್ನು ವರಿಸುತ್ತಾನೆ. ಓರ್ವ ಮುನಿಯಿಂದ ಇವರಿಬ್ಬರಿಗೂ ಪೂರ್ವಭವದ ವೃತ್ತಾಂತ ತಿಳಿಯುತ್ತದೆ. ಪೂರ್ವಜನ್ಮದಲ್ಲಿ ಇವರು ನಾಗದತ್ತ ನಾಗವಸು ಎಂಬುವರಾಗಿದ್ದು ಶ್ರೀಪಂಚಮೀ ನೋಂಪಿಯನ್ನು ಆಚರಿಸಿದ್ದುದು ವೇದ್ಯವಾಗುತ್ತದೆ. ಇದರಿಂದ ಈ ದಂಪತಿಗಳು ಈ ಜನ್ಮದಲ್ಲಿಯೂ ಅದೇ ವ್ರತದಲ್ಲಿ ನಿಷ್ಠರಾಗುತ್ತಾರೆ. ತನ್ನ ತಂದೆ ತಾಯಿಯರ ಕರೆಯಂತೆ, ನಾಗಕುಮಾರನು ಪುಷ್ಪಕ ವಿಮಾನದಲ್ಲಿ ತನ್ನ ಎಲ್ಲ ಮಡದಿರೊಂದಿಗೆ ಕನಕಪುರಕ್ಕೆ ಬರುತ್ತಾನೆ. ಜಯಂಧರ–ಪೃಥ್ವೀದೇವಿಯರು ದೀಕ್ಷೆಗೊಳ್ಳುತ್ತಾರೆ. ನಾಗಕುಮಾರನು ಚಕ್ರಾಧೀಶನಾಗುತ್ತಾನೆ. ಒಮ್ಮೆ ಆಕಾಶದಲ್ಲಿ ಕಂಡ ಮೋಡವನ್ನು ಚಿತ್ರ ಬರೆಯು ತ್ತಿರಲು, ಅದು ಮರೆಯಾಯಿತು. ಇದರಿಂದ ಇವನಲ್ಲಿ ವೈರಾಗ್ಯವುಂಟಾಯಿತು, ಮಗನಿಗೆ ಪಟ್ಟಕಟ್ಟಿ ದೀಕ್ಷೆಗೆ ಹೋದನು. ಅವನೊಡನೆ ಪತ್ನಿಯರು ಮತ್ತು ಇತರರೂ ದೀಕ್ಷೆಗೊಂಡರು. ನಾಗಕುಮಾರನಿಗೆ ಕೇವಲ ಜ್ಞಾನಬೋಧೆಯಾಗಿ ಅವನು ಮೋಕ್ಷ ಪಡೆದನು.

ಹೀಗೆ ಈ ಕಥೆ ಜೈನ ಪುರಾಣ ಕಥಾಸರಣಿಗೆ ಅನುಗುಣವಾಗಿದೆ. ಈ ಕಾವ್ಯವನ್ನು ಹಾಗೂ ಕವಿ ವಿಚಾರವನ್ನು ಸಂಪಾದಕರು 'ಬೊಪ್ಪಣ ಕವಿಯ ಕಾವ್ಯದ ಸಮೀಕ್ಷೆ'ಯಲ್ಲಿ ವಿಮರ್ಶಿಸಿರುತ್ತಾರೆ. ಅದರ ಒಂದು ಸ್ಥೂಲ ಅವಲೋಕನ ಮಾತ್ರ ಇದಾಗಿದೆ. ಈ ಕಾವ್ಯವನ್ನು ರಚಿಸಲು ಊರಿನ ಜನರ ಒತ್ತಾಯವೇ ಕಾರಣವೆಂದು ಕವಿ ಹೇಳಿದ್ದಾನೆ.

ನಾಗಕುಮಾರನ ಚರಿತೆಯನ್ನು ಸ
ರಾಗದಿಂ ಭಾಮಿನಿಯೊಳುಸುರೆನೆ
ನಾಗಪದು ಮುಪಚರಿತೆಯೆನ್ನಯ ಸ್ವಲ್ಪಮತಿಗೆನಲು

ಶ್ರೀಗೆ ನಿಲಯನ ಚಾರು ಚರಣಕೆ
ರಾಗರಸದಿಂ ಬಾಗಿ ಪೇಳಿದೆ
ಶ್ರೀಗುರುವೆ ಗತಿಯೆಂದು ಪೇಳಿದೆ ತಿದ್ದಿ ಬಲ್ಲವರು

ಹೀಗೆ ಕಾವ್ಯವನ್ನು ರಚಿಸಿದ ಕವಿ ಇದನ್ನು ತಿದ್ದಲು ಬಲ್ಲವರಿಗೆ ಅನುಮತಿ ಕೊಟ್ಟಿರುವುದು ನಿಜ. ವಾಸ್ತವವಾಗಿ ಬಲ್ಲವರಿಂದ ಅವನೇ ತಿದ್ದಿಸಿ, ಶುದ್ಧಪ್ರತಿಯನ್ನು ಮಾಡಿಟ್ಟುಕೊಳ್ಳಬಹುದಾಗಿತ್ತು. ಇದರಿಂದ ಈ ಕಾವ್ಯಕ್ಕೆ ಇನ್ನಷ್ಟು ಮೇಲ್ಮೆ ಬರುತ್ತಿತ್ತು. ಅಂತಹ ಕಾರ್ಯ ಮಾತ್ರ ಆಗಿಲ್ಲ.

ನಾಗಕುಮಾರನ ಕತೆಯಲ್ಲಿ ಅಡಕವಾಗಿರುವ ಜನಪದ ಆಶಯಗಳನ್ನು ಸಂಪಾದಕರು ಚೆನ್ನಾಗಿ ನಿರೂಪಿಸಿದ್ದಾರೆ. ಜಾನಪದ ಅಧಿಗಮ ಸಂಬಂಧಿಯಾದ ಎಷ್ಟೋ ನಂಬಿಕೆಗಳು, ಆಶಯಗಳು–ಈ ಕಥೆಯಲ್ಲಿ ಮೊದಲಿಂದ ಕೊನೆತನಕ ಹೆಣೆದಿರುವುದನ್ನು ಸರಿಯಾಗಿ ಲಕ್ಷಿಸಿದ್ದಾರೆ. ಇದು ಜಾನಪದ ಪ್ರಭಾವದಿಂದಲೇ ಬೆಳೆದು ಬಂದ ಕತೆಯೆಂದು ಗುರುತಿಸಿದ್ದಾರೆ. ಸಂಪಾದಕರು ಒಂದು ಬಗೆಯ ತೀರ್ಮಾನದಂತೆ ಆಡಿರುವ ಮಾತುಗಳಿವು :

"ನಾಗಕುಮಾರನ ಕತೆ ಒಂದು ಮಿಶ್ರತಳಿ. ಜಾನಪದ ಕಥೆಗೆ ಜೈನ ಲೇಪ ಬಳಿದು ಶಿಷ್ಟ ಸಂಸ್ಕಾರ ಕೊಡಲಾಗಿದೆ. ಇದರಲ್ಲಿ ಭವಾವಳಿಯಿದೆ – ಹಿಂದಿನ ಭವದ ಸಂಯಮ ಪಾಲನೆಗಾಗಿ, ವ್ರತ–ಉಪವಾಸ ಪಾಲನೆಗಾಗಿ–ಈ ಭವದಲ್ಲಿ ನಾಗಕುಮಾರನಿಗೆ ಎಲ್ಲ ವೈಭವ ಪ್ರಾಪ್ತವಾಗಿದೆಯೆಂದು ಸಾರಲಾಗಿದೆ. ಅದರಿಂದ ಜೈನಧರ್ಮದ ಕರ್ಮ ಸಿದ್ಧಾಂತವನ್ನು ಜಾನಪದ ಕಥೆಗೆ ಚೆನ್ನಾಗಿ ಕಸಿ ಮಾಡಲಾಗಿದೆ. ಇದೇನೇ ಇದ್ದರೂ ಕತೆಯ ಮೊದಲಲ್ಲಿ ಮತ್ತು ಕಡೆಯಲ್ಲಿ ಮಾತ್ರ ಜೈನ ಚೌಕಟ್ಟು ಇದೆ. ಚಿತ್ರ ಮಾತ್ರ ಜಾನಪದಕ್ಕೇ ಸೇರಿದೆ. ನಾಗಕುಮಾರನಲ್ಲಿ ರೂಢಿಯ ಜಾನಪದ ಆಶಯಗಳೆಲ್ಲ ಸಾಕಾರಗೊಂಡು ಕೂಡಿರುತ್ತವೆ. ಯಾರಿಗೂ ಒಲಿಯದ ಸೋಲದ ನಾರಿಯರು ಇವನನ್ನು ಕಂಡೊಡನೆ ಕಾಮಪರವಶರಾಗುತ್ತಾರೆ. ಯಾರಿಗೂ ಮಣಿಯದ ವೀರಾಧಿವೀರರು ಇವನಿಗೆ ಶರಣಾಗುತ್ತಾರೆ. ಇವನು ಹೊರಗೆ ಹೊರಟರೆ ಎದುರಾದ ಹೆಣ್ಣುಗಳು, ಹೆಂಡತಿಯರು, ಗಂಡಸರು ಗುಲಾಮರು. ಇವನು ಚೆಲುವರ ಚೆಲುವ, ವೀರರ ವೀರ, ಆದರ್ಶ ದೇವತಾಪುರುಷ."

ನಾಗಕುಮಾರನ ಕಥೆಯಲ್ಲಿ ಮಹಾಭಾರತದ ಪಡಿನೆಳಲಿದೆ. ರಾಮಾಯಣದ ಪ್ರಭಾವವೂ ಇದೆಯೆಂಬುದನ್ನು ಸಂಪಾದಕರು ತೋರಿಸಿ ಕೊಟ್ಟಿದ್ದಾರೆ. ಈ ಕತೆಯಲ್ಲಿ ಪುಷ್ಪದಂತಾದಿಗಳ ಪ್ರಾಕೃತ ಪರಂಪರೆ, ಜಯದೇವ ಮಲ್ಲಿಷೇಣಾದಿಗಳ ಸಂಸ್ಕೃತ ಪರಂಪರೆ, ಶ್ರುತಪಂಚಮೀ ನೋಂಪಿಯ ಪರಂಪರೆ–ಹೀಗೆ ಎರಡು ಮೂರು ಪರಂಪರೆಯಿರುವುದನ್ನು ಪತ್ತೆಮಾಡಿದ್ದಾರೆ. ಕೆಲಮಟ್ಟಿಗೆ, ನಾಗಕುಮಾರನು ಪವಾಡ ಪುರುಷನಂತೆ ತೋರಿದರೂ ಆತನು ಪೂರ್ಣ ಚಾರಿತ್ರಿಕ ಸ್ವರೂಪನಂತೆ

ಸಾಧಕನೂ ಹೌದು. ಪ್ರಾಣಿ ದಯೆ, ಲೋಕಕಲ್ಯಾಣ, ಪಾರಮಾರ್ಥಿಕ ದೃಷ್ಟಿ, ನಿಷ್ಕಪಟ ವರ್ತನೆ, ನಿಷ್ಕಾಮತೆ, ನೀತಿನಿಷ್ಠೆ, ಶಾಂತಭಾವ, ಸಮಾಜ ಸೇವೆ-ಮುಂತಾದ ಸದ್ಗುಣಗಳುಳ್ಳವನಾಗಿ ಚಿತ್ರಿತವಾಗಿರುವುದನ್ನು ಎತ್ತಿ ತೋರಿಸಲಾಗಿದೆ. ಕೊನೆಗೆ ಆತನು ಯತಿಯಾಗಿ ಮೋಕ್ಷಗಾಮಿಯಾಗುತ್ತಾನೆ-ಎಂದು ತಿಳಿಸುವ ಮೂಲಕ, ಉದಾತ್ತ ಜೀವನದ ಲಕ್ಷ್ಯವನ್ನು ನಾಗಕುಮಾರನ ಜೀವನದಲ್ಲಿ ಕಾಣಬಹುದೆಂಬುದನ್ನು ಸಂಪಾದಕರು ಸೂಕ್ತಪಡಿಸಿದ್ದಾರೆ. ರಾಜನೈತಿಕ ದೃಷ್ಟಿಯಿಂದ ಸಂಪಾದಕರು ಇನ್ನೊಂದು ವಿಷಯವನ್ನು ಸ್ಪಷ್ಟಪಡಿಸಿದ್ದಾರೆ-ರಾಜರ ಕಾಲದಲ್ಲಿ ರಾಜ್ಯದ ಆಳಿಕೆ ನಡೆಯುತ್ತಿದ್ದುದು ರಾಜ, ವರ್ತಕ, ಪುರೋಹಿತ-ಎಂಬೀ ಮೂರು ವರ್ಗದವರ ಸ್ನೇಹ ಒಪ್ಪಂದಗಳಿಂದ-ಎಂಬುದು ಈ ಕಾವ್ಯದಲ್ಲಿ ವಿದಿತವಾಗುತ್ತದೆ. ಕತೆಯುದ್ದಕ್ಕೂ ವಣಿಜರ ಪಾತ್ರ ಯಥೇಚ್ಛವಾಗಿದೆ. 'ನಾಗಕುಮಾರ' ಎಂಬ ಹೆಸರು ಕೂಡ ಜೈನ-ಬೌದ್ಧ-ವೈದಿಕ ಪರಂಪರೆಯಲ್ಲಿ ಮಹತ್ತ್ವದ ಸ್ಥಾನವನ್ನು ಪಡೆದಿದೆಯೆಂಬುವನ್ನು ಸಂಪಾದಕರು ಲಕ್ಷಿಸಿದ್ದಾರೆ.

ಈ ಗ್ರಂಥದ ಸಂಪಾದನೆ ಇನ್ನಷ್ಟು ಯಶಸ್ವಿಯಾಗಿರುವುದು ಅವಶ್ಯಕ ಅನುಬಂಧಗಳಿಂದ. ಈ ಭಾಗದಲ್ಲಿ ತೀರ್ಥಂಕರರು ಕಾಮದೇವರು, ಸ್ಥಳನಾಮ ಸೂಚಿ. ಪಾರಿಭಾಷಿಕ ಶಬ್ದಗಳಿಗೆ ವಿವರಣೆ, ವ್ಯಕ್ತಿನಾಮ ಸೂಚಿ, ವ್ಯಕ್ತಿ ಸ್ಥಳನಾಮ ಕೋಶ, ಪದ್ಯಗಳ ಅಕಾರಾದಿ, ಶಬ್ದಾರ್ಥಕೋಶ, ನಾಗಕುಮಾರ ಕಾವ್ಯಗಳು, ಗ್ರಂಥಋಣ-ಈ ಎಲ್ಲ ಅನುಬಂಧಗಳು ಗ್ರಂಥಾಧ್ಯಯನಕ್ಕೆ ಸಹಾಯಕಗಳಾಗಿವೆ; ಇತರ ಜೈನ ಪುರಾಣಗಳನ್ನು ಓದುವವರಿಗೂ ನೋಡಿಕೊಳ್ಳಬೇಕಾಗಿ ಬರುವ ಅಂಶಗಳಿಂದ ಕೂಡಿವೆ. ನಾಗಕುಮಾರ ಚರಿತೆಯನ್ನೊಳಗೊಂಡ ಕೆಲವು ಹಾಡುಗಳನ್ನು ಗ್ರಂಥಾಂತ್ಯದಲ್ಲಿ ಕೊಡಲಾಗಿದೆ.

ಬೊಮ್ಮಣ ಕವಿಯ ಈ ಕಾವ್ಯವು ವಾಚನಕ್ಕೆ ಅಂದರೆ ಗಮಕಕ್ಕೆ ಅಷ್ಟು ಸೊಗಸಾಗಿ ಕೂಡಿಬರುವುದಿಲ್ಲ: ರಚನೆ ಅಲ್ಲಲ್ಲಿ ಮುಗ್ಗರಿಸಿರುವುದೇ ಇದಕ್ಕೆ ಕಾರಣ. ನಿಶ್ಚಿತ ಮಾತ್ರಾಗಣಗಳ ಸ್ಥಾನದಲ್ಲಿ ಗಣಪರಿವೃತ್ತಿ ಭಾಮಿನಿಯ ನಡೆಗೆ ಒಗ್ಗುವುದಿಲ್ಲ. ಆದರೆ ಸಮರ್ಥವಾದ ಹಾಗೂ ಸರ್ವಲಕ್ಷಣಪೂರ್ಣವಾದ ಸಂಪಾದನೆ ಈ ಕೃತಿಗೆ ಕಳೆತಂದಿದೆ. ಪ್ರಸ್ತಾವನೆಯ ವಿಸ್ತಾರದ ನಂದನದಲ್ಲಿ ಸುಳಿಯುವಾಗ, ಕಾವ್ಯದ ಪ್ರಕೃತಿ ಸೌಂದರ್ಯ ಗ್ರಹಣದೊಂದಿಗೆ ಹತ್ತಾರು ಅನುಭವಗಳ ಸುಮಸುಗಂಧ ಮನಸ್ಸಿಗೆ ಆನಂದವನ್ನೀಯುತ್ತದೆ. ಇದರೊಂದಿಗೆ ಇನ್ನೊಂದು ಪ್ರಶ್ನೆ ಓದುಗನಲ್ಲಿ ಮೂಡಿಬರಬಹುದು-ಇಷ್ಟೊಂದು ಸಮರ್ಥರಾದ ಸಂಪಾದಕರು ಈ ಬೊಮ್ಮಣನ ಕೃತಿಯನ್ನು ಬಿಟ್ಟು ಬೇರೆ ಉತ್ತಮ ಕಾವ್ಯವನ್ನು ಸಂಪಾದಿಸಬಾರದಿತ್ತೆ-ಎಂಬುದು. ಈ ಪ್ರಶ್ನೆ ಪೃಚ್ಛಕನ ಅಜ್ಞಾನದ್ಯೋತಕ. ಏಕೆಂದರೆ, ಡಾ॥ ಹಂಪ. ನಾಗರಾಜಯ್ಯನವರು ಇನ್ನೂ ಅನೇಕ ಅಮೋಘ ಕೃತಿಗಳ ಸಂಪಾದಕರಾಗಿದ್ದಾರೆ. ಅವರು

ಸಂಪಾದಿಸಿರುವ 'ಪೊನ್ನನ ಶಾಂತಿ ಪುರಾಣ'ವನ್ನು ನೋಡಿದರೆ ಸಾಲದೆ? ಅಲ್ಲಿ ಆಯ್ದ ಕಾವ್ಯವೂ ಹಿರಿದು, ಸಂಪಾದನ ಕಾರ್ಯವೂ ಹಿರಿದು! ಪ್ರಾಕೃತ ಈ ಬೊಮ್ಮಣನ ನಾಗಕುಮಾರ ಷಟ್ಪದೀ ಕಾವ್ಯ ದೀರ್ಘಕಾಲದಿಂದ ಸಂಪಾದಿತವಾಗದೆ, ಪ್ರಕಾಶಿತವಾಗದೆ, ಬಹುಶಃ ರಚನಾದೋಷವೆಂಬ ರಾವಣನ ಹೊಡೆತದಿಂದ ಗರಿ ಮುರಿದು ಬಿದ್ದ ಜಟಾಯುವಾಗಿದ್ದಿರಬೇಕು. ಅಂತಹ ಜಟಾಯುವಿಗೆ ಪ್ರಸ್ತಾವನೆ-ಅನುಬಂಧಗಳಿಂದ ಕೂಡಿದ ಈ ಸಮರ್ಥ ಸಂಪಾದನೆ ಗರಿಗಳ ಸಂಪಾದನೆಯಾಗಿ, ಇದೀಗ ಕನ್ನಡನಾಡಿನ ಆಕಾಶದುದ್ದಕ್ಕೂ ಹಾರಾಡುವಂತಾಗಿದೆ. ಈ ಸಂಪಾದನೆಯಿಂದ ಒಂದು ಕೃತಿಗೆ ಹೊಸತಾದ ಜೀವದಾನ ಮಾಡಿದಂತಾಗಿದೆ. ಓರ್ವ ಪುರಾಣ ಪುರುಷನ ಜೀವನ ಕಥೆಗೆ ಹಾಗೂ ಅದೇ ಜೀವನ ಕಥೆಯುಳ್ಳ ಇತರ ಸಾಹಿತ್ಯ ಕೃತಿಗಳಿಗೆ ಕೂಡ ನವಚೇತನವನ್ನು ಮೂಡಿಸಿದಂತಾಗಿದೆ. ಈ ಕೃತಿ ಕ್ಷೇತ್ರದಲ್ಲಿ ವಿಶೇಷಾಧ್ಯಯನಕ್ಕೂ ಸಂಶೋಧನೆಗೂ ಹೊಸ ಬಾಗಿಲು ತೆರೆದಂತಾಗಿದೆ. ಅದಕ್ಕಾಗಿ ಈ ಗ್ರಂಥದ 'ಸಂಪಾದಕ'ರಿಗೆ ನಾವು ಕೃತಜ್ಞತೆ ಸಲ್ಲಿಸಬಹುದಾಗಿದೆ.

ಬಾಳಣ್ಣ ಶೀಗೀಹಳ್ಳಿ

# ರತ್ನಾಕರನ ಹಾಡುಗಳು

ಕವಿ ರತ್ನತ್ರಯರ ಚಂಪೂವಿನ 'ಪಂಪ' ಹಾಗೂ 'ಕಂಪಿ'ನಿಂದ ಜನಸಾಮಾನ್ಯರು ವಂಚಿತರಾದುದನ್ನು ಅನುಲಕ್ಷಿಸಿದ ಕವಿ ರತ್ನಾಕರ ಸಮಕಾಲೀನ ಜನರ ಆಶೋತ್ತರಗಳನ್ನು ಅನುಸರಿಸಿಯೇ ಕಾವ್ಯ ರಚಿಸಿದ್ದು ಅವನ ಸಮಕಾಲೀನ ಪ್ರಜ್ಞೆಯ ದ್ಯೋತಕ. ಸಾಂಗತ್ಯದ ಸೀಮಾಪುರುಷನೆಂದೇ ಕನ್ನಡ ಸಾಹಿತ್ಯದಲ್ಲಿ ಹೆಸರುವಾಸಿಯಾದ ಈತ ತನ್ನ ಪೂರ್ವದ ಜೈನ ಕವಿಗಳ ಕ್ಲಿಷ್ಟ ಎನ್ನಿಸಬಹುದಾದ ಕಾವ್ಯಮಾರ್ಗದಿಂದ ತೀರ ಭಿನ್ನವಾಗಿ 'ಆನೆ ನಡೆದುದೆ ಮಾರ್ಗ' ಎನ್ನುವಂತೆ ತನ್ನದೇ ದಾರಿ ತುಳಿದು ಜನಮುಖಿಯಾದ ಶೈಲಿಯನ್ನು ಪ್ರಚುರಗೊಳಿಸಿ ಕನ್ನಡ ಜೈನ ಸಾಹಿತ್ಯದ ಸರ್ವಜ್ಞನೆನಿಸುವಷ್ಟು ಮನೆಮಾತಾಗಿದ್ದಾನೆ : ಕ್ರಾಂತಿಕಾರಿ ಎನಿಸಿದ್ದಾನೆ. ಆದರೂ ಈ ಕವಿಯ ವೈಯಕ್ತಿಕ ಬದುಕಿಗೆ ಸಂಬಂಧಪಟ್ಟ ಕೆಲವು ಸಂಗತಿಗಳು ವಾದಗರ್ಭದಿಂದ ಹೊರಬಂದು ಬೆಳಕು ಕಾಣಬೇಕಾಗಿರುವುದು ಆಲೋಚನೀಯ ವಿಷಯವಾಗಿದೆ.

ಭರತೇಶ ವೈಭವ ಹಾಗೂ ತನ್ನ ಶತಕ ಸಾಹಿತ್ಯದಿಂದ ಕನ್ನಡ ಸಾರಸ್ವತ ಲೋಕಕ್ಕೆ ಅಗಲೇ ಚಿರಪರಿಚಿತನಾದ ಈ ಕವಿ ಇತ್ತೀಚೆಗೆ ದೊರೆತ 'ಗೀತೆ'ಗಳಿಂದಾಗಿ ಇನ್ನೂ ಹೆಚ್ಚಿನ ಆಸಕ್ತಿಯನ್ನು ಕೆರಳಿಸಿ ಅಭ್ಯಾಸ ಯೋಗ್ಯನೆನಿಸಿದ್ದಾನೆ. ಈ ಕವಿಯ ೯೪ ಗೀತೆಗಳನ್ನು ಭುವನಹಳ್ಳಿಯ ಶ್ರೀ ಡಿ. ಶ್ರೀಪತಿಯವರೂ ಮೂಡಬಿದ್ರೆಯಲ್ಲಿ ದೊರೆತ ೩೭ ಗೀತೆಗಳನ್ನು ಶ್ರೀ ಎಂ. ಜಗತ್ಪಾಲಯ್ಯನವರು ಸಂಗ್ರಹಿಸಿ, ಅಚ್ಚುಹಾಕಿಸಿ ಈ ದಿಸೆಯಲ್ಲಿ ಕಾರ್ಯಪ್ರವೃತ್ತರಾಗುವವರಿಗೆ ಒಂದು ದಿಕ್ಸೂಚಿಯಾದರು. ಈಗ ಇನ್ನೂ ಇತ್ತೀಚೆಗೆ ತುಮಕೂರು ಜಿಲ್ಲೆಯ ಬೆಳ್ಳಾವಿ ಬಳಿಯಿರುವ ಬಿದರೆ ಗ್ರಾಮದ ಪದ್ಮನಂದಿ ಗ್ರಂಥ ಭಂಡಾರದ ರಕ್ಷಾಪುಟಗಳ ಎರಡೂ ಬದಿಗೆ 'ಅಂಜನ ಹಾಡುಗಳು'

'ರತ್ನಾಕರ ಅಂಣನ ಪದಗಳು' ಎಂದು ಬರೆದ ಓಲೆಗರಿ ಕಟ್ಟು ಮತ್ತು ಬೆಂಗಳೂರು ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಕೇಂದ್ರದ ಓಲೆಗರಿ ಸಂಗ್ರಹಾಲಯದ ಒಂದೆರಡು ಹಸ್ತಪ್ರತಿಗಳಿಂದ ಸುಮಾರು ಇನ್ನೂರಾ ನಾಲ್ವತ್ತರಷ್ಟು ಬೃಹತ್ ಪ್ರಮಾಣದ ಹಾಡುಗಳನ್ನು ಸಂಪಾದಿಸಿ 'ರತ್ನಾಕರನ ಹಾಡುಗಳು' ಎಂಬ ಹೆಸರಿನಲ್ಲಿ ೨೦೦ ಪುಟದ ಪುಸ್ತಕವೊಂದನ್ನು ಪ್ರಕಟಿಸಿ ವಾಚಕರ ಕೈಗಿತ್ತ ಡಾ॥ ಹಂಪ. ನಾಗರಾಜಯ್ಯನವರು ಅಭಿನಂದನೀಯರೆನಿಸಿದ್ದಾರೆ.

ಪ್ರಸ್ತುತ ಗ್ರಂಥ ರವಿ ಮುದ್ರಣಾಲಯ-ಬೆಂಗಳೂರಿನಿಂದ ೧೯೭೯ ರಲ್ಲಿ ಅಚ್ಚಾಗಿದ್ದು ; ಸಂಪಾದಕರ ಮೌಲಿಕ ಪ್ರಸ್ತಾವನೆಯನ್ನೊಳಗೊಂಡಿದೆ. ಇಲ್ಲಿನ ಎಲ್ಲ ಪದ್ಯಗಳೂ ಪ್ರತ್ಯೇಕವಾದ ಶಿರೋನಾಮೆಗಳನ್ನು ಪಡೆದಿದ್ದು : ಆ ಶಿರೋನಾಮೆಗಳೇ ಪ್ರತಿ ಪದ್ಯದ ಅಂತರಾರ್ಥವನ್ನು ನಿವೇದಿಸುವಷ್ಟು ಅನ್ವರ್ಥಕವಾಗಿವೆ. "ಹರಿದಾಸರಲ್ಲಿ, ಶಿವಶರಣರಲ್ಲಿ ಬಹಳ ಹಿಂದಿನಿಂದಲೂ ಹಾಡುಗಳು ಬಳಕೆಯಲ್ಲಿವೆ... ಇದೇ ರೀತಿ ಜೈನರಲ್ಲೂ ಹಾಡುಗಳಿದ್ದುವೆ ? ಎಂಬ ಪ್ರಶ್ನೆ ಬಹಳ ಕಾಲದಿಂದ ಇದೆ. ಈ ಪ್ರಶ್ನೆಗೆ ಪ್ರಸ್ತುತ ಗ್ರಂಥ ಉತ್ತರ ರೂಪದಲ್ಲಿದೆ"[1] ಎಂಬ ಸಂಪಾದಕರ ಅಭಿಮಾನದ ಮಾತನ್ನು ಸಾರ್ಥಕಗೊಳಿಸುವಷ್ಟು ಈ ಹಾಡುಗಳು ಸಶಕ್ತವಾಗಿವೆ. ಅಲ್ಲದೆ ರತ್ನಾಕರ ವಿಷಣ್ಣ ಮನಃಸ್ಥಿತಿಯಲ್ಲಿ ವೀರಶೈವ ಧರ್ಮಕ್ಕೆ ಮತಾಂತರ ಹೊಂದಿ ಮನಸ್ಸು ತಿಳಿಯಾದ ಮೇಲೆ ಮತ್ತೆ ಜೈನಧರ್ಮಕ್ಕೆ ಹಿಂದಿರುಗಿದ್ದನ್ನು ಪುಷ್ಟೀಕರಿಸುವ ಕೀರ್ತನೆಗಳೆರಡು ಈ ಕೃತಿಯಲ್ಲಿರುವುದರಿಂದ ಜಿಜ್ಞಾಸುಗಳಿಗೆ ಇದೊಂದು ಮಹತ್ವದ ಕೃತಿಯಾಗಬಲ್ಲುದು. "ವಸ್ತುವಿನ್ಯಾಸದಲ್ಲಿ ರತ್ನಾಕರನ ಜಾಣ್ಮೆ ಅಸಾಧಾರಣವಾದುದು."[2] ಈ ಮಾತು ರತ್ನಾಕರನ ಈ ಹಾಡುಗಳಿಗೆ ಅಕ್ಷರಶಃ ಅನ್ವಯಿಸುತ್ತದೆ. ಯಾಕೆಂದರೆ : ಇಷ್ಟು ದೊಡ್ಡ ಸಂಖ್ಯೆಯ ಹಾಡುಗಳಲ್ಲಿನ ವಸ್ತು ವೈವಿಧ್ಯತೆ-ಆಶ್ಚರ್ಯ ಹುಟ್ಟಿಸುವಂತಹದು.

ಜೀಧವಿಜ್ಞಾನದಲ್ಲಿ ಬಲ್ಲಿದನಾದ ರತ್ನಾಕರ ಜೀವ, ಜೀವಾತ್ಮ, ಪರಮಾತ್ಮ, ಪುಣ್ಯ, ಸ್ವರ್ಗ-ನರಕ, ಆಚಾರ-ವಿಚಾರ. ನ್ಯಾಯ-ನೀತಿ-ಇತ್ಯಾದಿ ಹಲವು ಹದಿನೆಂಟು ವಿಷಯಗಳ ವಿಶ್ಲೇಷಣೆ ಮಾಡಿ, ಧರ್ಮ-ನೀತಿ ಇತ್ಯಾದಿ ಹಲವು ಹದಿನೆಂಟು ವಿಷಯಗಳ ವಿಶ್ಲೇಷಣೆ ಮಾಡಿ, ಧರ್ಮನೀತಿಗಳ ತಿರುಳು ತೋರಿ ನಿತ್ಯಸುಖದ 'ಭಂಡಾರದ ಮುದ್ರೆಯನ್ನೊಡೆದು' ತೋರಿಸಿದ್ದಾರೆ. ಒಟ್ಟಾರೆ ಇಲ್ಲಿನ ಪದ್ಯಗಳು ಸಾಧಕನೊಬ್ಬನ ಮಾನಸ ಸರೋವರದಲ್ಲಿ ಸೂಸಾಡುವ ಭಾವತರಂಗಗಳಂತಿದ್ದು, ಧರ್ಮದಾರಿದ್ರ್ಯದಿಂದ ಬಳಲುವವರಿಗೆ ಬೆರಸಿ ಇಟ್ಟ ಬೆಲ್ಲ-ನೆಲಗಡಲೆಯಂತಿವೆ. ಇವು

---

1. ರತ್ನಾಕರನ ಹಾಡುಗಳು -(ಸಂ.) - ಹಂಪ. ನಾಗರಾಜಯ್ಯ (ಪ್ರಸ್ತಾವನೆ), ಪು. xix
2. ರತ್ನಾಕರ ಮಹಾಕವಿ - (ಪ್ರಚಾರ ಪುಸ್ತಕ ಮಾಲೆ-೧೪೨) ಜಿ. ಬ್ರಹ್ಮಪ್ಪ, ಪು. ೧೯

ಇಷ್ಟರ ಮಟ್ಟಿಗೆ ನೀತಿಬೋಧಕವೂ ಧರ್ಮಬೋಧಕವೂ ಆಗಿರುವುದರಿಂದ ತ್ಯಾಗ-ಭೋಗಗಳೆರಡನ್ನೂ ಸಮಾನ ತಕ್ಕಡಿಯಲ್ಲಿ ತೂಗಿದ ರತ್ನಾಕರನೇ (ಭರತೇಶ ವೈಭವದ ಕರ್ತೃ ರತ್ನಾಕರನೇ) ಬರೀ ಈ ಧರ್ಮ ಪಕ್ಷಪಾತಿಯಾದ ಹಾಡುಗಳನ್ನು ಬರೆದನೇ ಎಂದು ಸಂದೇಹ ಹುಟ್ಟುತ್ತದೆ.

ಕುಶಾಗ್ರಮತಿಯು ರತ್ನಾಕರ ಬಾಲ್ಯದಲ್ಲೇ ಕಾವ್ಯ–ಅಲಂಕಾರ ಲಕ್ಷಣ-ಶಾಸ್ತ್ರ ಗ್ರಂಥಗಳನ್ನೋದಿ, ನಾನಾ ಧರ್ಮಗಳ ಸುಧೆಯನ್ನು ಹೀರಿ: ದೇಶದ ಹಲವು ಮೂಲೆಗಳನ್ನು ಸುತ್ತಿ : ವಿವಿಧ ಜನರೊಡನೆ ಬೆರೆತು, ಜೀವನದ ಏರುಪೇರುಗಳನ್ನು ದಾಟಿ, ಸ್ತುತಿ-ನಿಂದೆಗಳನ್ನು ಅರಗಿಸಿಕೊಂಡು : ಗುರುಕಾರುಣ್ಯಕ್ಕೆ ಒಳಗಾಗಿ ಭೋಗ–ತ್ಯಾಗ–ಯೋಗಗಳ ತ್ರಿವೇಣಿ ಸಂಗಮದಲ್ಲಿ ಈಸಿದವ. ಈ ವರ್ಣಮಯ ಜೀವನ ಇಲ್ಲಿಯ ಹಾಡುಗಳಲ್ಲಿ ಸಾಕಾರಗೊಂಡಿದೆ.

ಜೀವಾತ್ಮ ಜನ್ಮಾಂತರ (ಭವಾವಳಿ) ಚಕ್ರದಲ್ಲಿ ಸುತ್ತುತ್ತ 'ಪುನರಪಿ ಜನನಂ ಪುನರಪಿ ಮರಣಂ ಜನನೀ ಜಠರೇ ಶಯನಂ' ಎಂಬಂತೆ-ಮತ್ತೆ ಮತ್ತೆ ಭವಸಾಗರದಲ್ಲಿ ಮುಳುಗಿ ವ್ಯರ್ಥ ಹಾಳಾಗುವುದನ್ನು ಕಂಡು ಮರುಕಪಟ್ಟು ಈ ಕವಿ ಮಾನವರಿಗೆ ಆತ್ಮೋದ್ಧಾರ ಮಾಡಿಕೊಳ್ಳಲು ಪರಿಪರಿಯಾಗಿ ಹೇಳುತ್ತಾನೆ. ಮಾಯೆ ಕವಿದ ಮನಸ್ಸಿಗೆ ಶಾಂತಿ, ತೃಪ್ತಿಗಳೆರಡೂ ಗಗನಕುಸುಮ. ಇಂಥ ಬದುಕಿನಲ್ಲಿ ಅನುಗಾಲವೂ ದುಃಖವೇ. ಆದರ ಈ ದುಃಖದಿಂದ ಪಾರಾಗುವ ಸುಲಭ ಮಾರ್ಗವೆಂದರೆ ಹಂಸನಾಥನ ಧ್ಯಾನ. ಸುಜ್ಞಾನಿ ಮಾತ್ರ ಇದನ್ನು ಸಾಧಿಸಬಲ್ಲ. (ಬದುಕು ತುಂಬಿದ ದುಃಖ-೩) ಬಹುಪಾಲು ಜನ ಸೋಗೆಯ ತಿಂದು ಒಳಗಿನ ರಸವನ್ನು ತಿಳಿಯದ ಕುರಿಯಂತೆ ಬದುಕನ್ನು ನಿರರ್ಥಕ-ಕಳೆಯುವವರೇ. (ಮರೆವರು ಸಿರಿಯಿರಲು-೧೧) ನೀರ ಬೊಬ್ಬುಳಿಕೆಗೆ ಕಾಮನಬಿಲ್ಲಿಗ, ಮುಗಿಲೊಡ್ಡಿಗ, ಬಯಲತೊರೆಗೆ. ಮಹೇಂದ್ರ ಜಾಲಕ್ಕೆ ಸಟೆಯ ಸಂಭ್ರಮಕೆ-ಮರುಳಾಗಿ ಸಾಯುವವರೇ, (ಬಹು ತೆರ ಸಿರಿಯ ವಿಕಾರ–೧೯) ಇದನ್ನು ಮಟ್ಟಿ ಪಾರಾಗಬೇಕಾದರೆ ಜೀವಾತ್ಮನ ಮನಸ್ಸು ಕಾದ ಕಬ್ಬಿಣಕಿತ್ತ ನೀರಿನಂತೆ, ಮಣ್ಣೊಳಗಣ ಸುವರ್ಣದಂತೆ, ಹುಣ್ಣಿಮೆಯ ಚಂದ್ರನಂತೆ, ನೀರೊಳಗಣ ತಾವರೆಯಂತೆ, ಮೇರುವಿನಂತೆ–ನಿರ್ಮಲವೂ ಅಚಲವೂ ಆಗಿ ತಾನೇ ತಾನಾದ ಸ್ಥಿತಿಯಲ್ಲಿ ನಿಲ್ಲಬೇಕಾಗುತ್ತದೆ. (ಯೋಗಿಯಮನ-೩೬) ಹೀಗಾದಾಗ ಮಾತ್ರ ಆತ್ಮಕ್ಕಂಟಿದ ಪುದ್ಗಲಗಳು (ಕರ್ಮಾದಿಗಳು) ಕಳಚಿ "ಬಿಸಿಲಿಗೆ ಬಾಡದ, ಬೆಂಕಿಗೆ ಸುಡದ...." ದಿವ್ಯಾತ್ಮನನ್ನು ಒಡೆವರೆದು ಒಂದಾಗಲು ಸಾಧ್ಯ ; (ರೂಪವ ನೋಡಿದರೆ ಬೆಳಗುವ ಮಾಣಿಕ್ಯ-೩೦) ಎಂಬುದನ್ನು ಹೆಜ್ಜೆ ಹೆಜ್ಜೆಗೂ ಖಾತ್ರೀ ಮಾಡಿಕೊಡುವ ಇಲ್ಲಿನ ಬಹುತೇಕ ಹಾಡುಗಳು ಸಾಧಕ ಜೀವನದ ತಾರಕ ಮಂತ್ರಗಳಾಗಿವೆ.

* ಕಂಸಿನಲ್ಲಿ ಹಾಡಿನ ಶಿರೋನಾಮೆ ಮತ್ತು ಹಾಡುಗಳ ಕ್ರಮಸಂಖ್ಯೆಯನ್ನು ಸೂಚಿಸಲಾಗಿದೆ.

ಇಷ್ಟೆಲ್ಲ ವಸ್ತುವಿನ ಬಗೆಗಿನ ಮಾತಾದರೆ. ಸಂಪಾದಕರು ಗುರುತಿಸಿದಂತೆ-ಶರಣರ, ದಾಸರ ಪ್ರಭಾವ ಇಲ್ಲಿ ನಿಚ್ಚಳವಾಗಿ ಎದ್ದು ಕಾಣುವಂತಿದ್ದು, ವಚನ ಹಾಗೂ ಕೀರ್ತನೆಗಳೊಂದಿಗೆ ಇಲ್ಲಿಯ ಹಾಡುಗಳು ತುಲನಾತ್ಮಕ ಅಧ್ಯಯನಯೋಗ್ಯವಾಗಿವೆ. ಹಾಗೆಯೇ "ಕನ್ನಡ ಕವಿಗಳಲ್ಲಿ ನಾದಲೋಲ, ಉಪಮಾಲೋಲ, ರೂಪಕ ಸಾಮ್ರಾಜ್ಯ ಚಕ್ರವರ್ತಿ ಮೊದಲಾದ ಬಿರುದುಗಳಲ್ಲಿ ಒಬ್ಬೊಬ್ಬ ಹಿರಿಯ ಕವಿಗೆ ಒಂದೊಂದು ಬಿರುದು ಸಂದಿದೆ; ಆದರೆ ರತ್ನಾಕರವರ್ಣಿಗೆ ಮಾತ್ರ ಇವೆಲ್ಲವೂ ಒಟ್ಟಿಗೆ ಸಲ್ಲುತ್ತದೆ"[3] ಎಂಬ ಮಾತಿಗೆ ಇಲ್ಲಿಯ ಗೇಯಗುಣ, ಸರಮಾಲೆ, ಸರಮಾಲೆಯಾಗಿ ಹೆಜ್ಜೆ ಹೆಜ್ಜೆಗೂ ಲಭ್ಯವಾಗುವ ರೂಪಕಗಳು, ಉಪಮೆಗಳು ನಿತ್ಯಸಾಕ್ಷಿಯಾಗಿವೆ.

ಇನ್ನೊಂದು ವಿಶೇಷವೆಂದರೆ: ಪ್ರತಿ ಪದ್ಯಾಂತ್ಯದಲ್ಲಿ ಬರುವ ಆರಾಧ್ಯ ದೈವದ ಬಗ್ಗೆ ರತ್ನಾಕರನಿಗೆ ಮತೀಯ ಭಾವನೆಯ ಮಡಿವಂತಿಕೆ ಇಲ್ಲ. ಉದಾಹರಣೆಗೆ: ಅಪರಾಜಿತೇಶ, ಚಿದಂಬರ ಪುರುಷ, ಪರಮೇಶಾ, ಮೃತ್ಯುಂಜಯ, ಕಂತುಹರ, ನಿರಂಜನ ಸಿದ್ಧ, ಅರಹಂತನಾಮಧಾರಿ, ಬ್ರಹ್ಮಕುಲಸ್ವಾಮಿ, ಕಮಲಾಧೀಶ, ಸ್ವಾಮಿಕಾರ್ತೀಕ, ಶ್ರೀಮಂಧರಸ್ವಾಮಿ, ಜಿನಸಿಂಧು ರತ್ನಾಕರ ಸಿದ್ಧ, ಪರಂಜ್ಯೋತಿ ಮುಂತಾದ ವಿಭಿನ್ನ ಹಾಗೂ ಅಭಿನ್ನ ಅಂಕಿತಗಳು 'ದೇವನೊಬ್ಬ ನಾಮಹಲವು' 'ಏಕಂಸತ್ ವಿಪ್ರಂ ಬಹುದಾವದಂತಿ' ಎಂಬ ಅಭಿಪ್ರಾಯವನ್ನು ಎತ್ತಿಹಿಡಿದಂತಾಗಿದೆ.

ಕೊನೆಯದಾಗಿ ಸಂಪಾದನಾಕಾರರ ಬಗ್ಗೆ ಒಂದೆರಡು ವಿಚಾರಗಳು: ಆಗಲೇ ಹೇಳಿದಂತೆ—ಈ ಸಂಕಲನದ ಪದ್ಯಗಳೆಲ್ಲ ಗೇಯಗುಣದಿಂದ ಕಳಕಳಿಸುತ್ತಿರುವುದರಿಂದ ಶ್ರೀ ಹಂಪನಾ ಅವರು ಇವುಗಳನ್ನು ಜಿ. ಬ್ರಹ್ಮಪ್ಪನವರು (ಕೆಲವನ್ನು) ಹೆಸರಿಸಿದ ಹಾಗೆ 'ಆಧ್ಯಾತ್ಮಗೀತೆಗಳು' ಎಂದು ಕರೆಯದೇ 'ರತ್ನಾಕರನ ಹಾಡುಗಳು' ಎಂದು ಕರೆದಿರುವುದೇ ಹೆಚ್ಚು ಅರ್ಥಪೂರ್ಣವೆನಿಸುತ್ತದೆ. ಇನ್ನು ಸಂಪಾದಕರಾಗಿ 'ತುಂಬುವ' 'ಕೈಬಿಡುವ' ಕೆಲಸವನ್ನು ಸಹಜತೆ, ಸೌಜನ್ಯಗಳ ಗಡಿದಾಟದಂತೆ ನಿರ್ವಹಿಸಿದ್ದಾರೆ. ಆದರೆ ಒಟ್ಟು ಹಾಡುಗಳ ತಲೆಪಟ್ಟಿಯನ್ನು 'ಕೃತಿ'ಯ ಪ್ರಾರಂಭದಲ್ಲಿ ಪರಿವಿಡಿಯಾಗಿ ಒದಗಿಸುವುದರ ಮೂಲಕ, ಕೆಲವು ಹಾಡುಗಳಿಗೆ ಸೂಚಿಸಿದಂತೆ ಎಲ್ಲ ಹಾಡುಗಳಿಗೆ ರಾಗ-ತಾಳಗಳನ್ನು ಸೂಚಿಸುವುದರ ಮೂಲಕ ಇಲ್ಲವೆ ಎಲ್ಲಿಕ್ಕೂ ಕೈಬಿಡುವ ಮೂಲಕ ಮತ್ತು ಸಮಾನ ಆಶಯಗಳುಳ್ಳ ಹಾಡುಗಳನ್ನು ಒಂದೊಂದು ಗುಂಪುಗಳಾಗಿ ವರ್ಗೀಕರಿಸಿ ಪ್ರತ್ಯೇಕವಾದ ತಲೆಕಟ್ಟು ಒದಗಿಸುವುದರ ಮೂಲಕ ಇನ್ನೂ ಹೆಚ್ಚು ಪರಿಷ್ಕೃತವಾದ ರೀತಿಯಲ್ಲಿ ಈ ಸಂಕಲನವನ್ನು ವಾಚಕರ ಕೈಗಿತ್ತು ಅವರ ಶ್ರಮವನ್ನು ಇನ್ನೂ ಹಗುರಗೊಳಿಸಬಹುದಿತ್ತು ಎನಿಸುತ್ತದೆ.

---

3. ರತ್ನಾಕರನ ಹಾಡುಗಳು—(ಸಂ.) ಹಂಪ. ನಾಗರಾಜಯ್ಯ (ಪ್ರಸ್ತಾವನೆ) xiii

ಡಾ॥ ಬಸವರಾಜ ಮಲಶೆಟ್ಟಿ

# ನೇಮಿನಾಥ ಪುರಾಣ

ಪ್ರಾಚೀನ ಕನ್ನಡ ಕೃತಿಗಳನ್ನು ಗದ್ಯಾನುವಾದದೊಂದಿಗೆ ಪ್ರಕಟಿಸುವ ಕನ್ನಡ ಸಾಹಿತ್ಯ ಪರಿಷತ್ತಿನ ಯೋಜನೆಯ ಅಡಿಯಲ್ಲಿ ಹಂಪನಾ ಅವರ ಕರ್ಣಪಾರ್ಯನ ನೇಮಿನಾಥ ಪುರಾಣ ಪ್ರಕಟಗೊಂಡಿದೆ. ಈ ಕಾವ್ಯ ೧೯೪೦ ರಲ್ಲಿ ಮೊದಲ ಸಲ ಪ್ರಕಟವಾಗಿತ್ತು. ಎಚ್. ಶೇಷ ಅಯ್ಯಂಗಾರ್ ಅವರು ಸಂಪಾದಿಸಿದ್ದ ಈ ಕೃತಿಯನ್ನು ಮದ್ರಾಸ್ ವಿಶ್ವವಿದ್ಯಾಲಯ ಪ್ರಕಟಿಸಿತ್ತು. ಅಲಭ್ಯವಾಗಿದ್ದ ಈ ಕಾವ್ಯವನ್ನು ಗದ್ಯಾನುವಾದದೊಂದಿಗೆ ಪ್ರಕಟಿಸಿರುವುದಕ್ಕಾಗಿ ಹಂಪನಾ ಮತ್ತು ಕನ್ನಡ ಸಾಹಿತ್ಯ ಪರಿಷತ್ತು ಇಬ್ಬರೂ ಅಭಿನಂದನಾರ್ಹರು. ಗದ್ಯಾನುವಾದಕ್ಕೆ ಎಚ್. ಶೇಷ ಅಯ್ಯಂಗಾರ್ ಅವರ ಪ್ರತಿಯನ್ನೇ ಆಧಾರವಾಗಿಟ್ಟುಕೊಂಡಿರುವುದಾಗಿ ಹಂಪನಾ ಪ್ರಸ್ತಾವನೆಯಲ್ಲಿ ತಿಳಿಸಿದ್ದಾರೆ.

ಜೈನರ ೨೨ನೇ ತೀರ್ಥಂಕರನಾದ ನೇಮಿನಾಥನನ್ನು ಕುರಿತು ಪ್ರಾಕೃತ ಸಂಸ್ಕೃತ ಮತ್ತು ದೇಶೀ ಭಾಷೆಗಳಲ್ಲಿ ವಿಪುಲವಾದ ಸಾಹಿತ್ಯವಿದೆ. ಜೈನಧರ್ಮದ ವಿವಿಧ ಪಂಥಗಳು ತೀರ್ಥಂಕರರ ಕತೆಗಳನ್ನು ಭಿನ್ನಪಾಠಗಳ ರೂಪದಲ್ಲಿ ಬೆಳೆಸಿಕೊಂಡು ಬಂದಿವೆ. ನೇಮಿನಾಥ ತೀರ್ಥಂಕರರ ಕತೆಯ ಬೆಳವಣಿಗೆಯನ್ನು ಈ ದೃಷ್ಟಿಯಿಂದ ನೋಡಬೇಕಾಗುತ್ತದೆ. ಕನ್ನಡದಲ್ಲಿ ನೇಮಿನಾಥನನ್ನು ಕುರಿತು ಮೊದಲು ಬರೆದ ಗುಣವರ್ಮನ ಹರಿವಂಶ ಅನುಪಲಬ್ಧ. ಚಾವುಂಡರಾಯ ಪುರಾಣದಲ್ಲಿ ಈ ಕತೆ ಸಂಕ್ಷಿಪ್ತವಾಗಿ ಬಂದಿದೆ. ನಂತರದಲ್ಲಿ ಬರುವುದೇ ಪ್ರಸ್ತುತ ಕರ್ಣಪಾರ್ಯ ನೇಮಿನಾಥ ಪುರಾಣ. ಇದು ಸ್ವತಂತ್ರ–ಪರಿಪೂರ್ಣ ಕೃತಿಯಾಗಿದೆ. ಮುಂದೆ ನೇಮಿಚಂದ್ರ. ಬಂಧುವರ್ಮ. ಮಹಾಬಲ, ಮಂಗರಸ, ಸಾಳ್ವ. ಬ್ರಹ್ಮಣಾಂಕ ಮುಂತಾದವರು ನೇಮಿನಾಥನ ಕತೆ ಬರೆದಿದ್ದಾರೆ.

ಕಾರ್ಯಬಾಹುಳ್ಯದಿಂದಾಗಿ ಗದ್ಯಾನುವಾದದ ಕಾರ್ಯ ನಿಧಾನವಾದಾಗ ಹಂಪನಾ ಅವರು ಶ್ರೀ ಆರ್. ವಿ. ಕುಲಕರ್ಣಿಯವರ ನೆರವು ಪಡೆದಿದ್ದಾರೆ. ಪ್ರಾರಂಭದ ೪೩ ಪುಟಗಳ ಪ್ರಸ್ತಾವನೆ ಅವರದೇ. ಕವಿಯ ಜೀವನ, ಕಾಲ, ನೇಮಿನಾಥ ವಾಙ್ಮಯ, ಜೈನಪುರಾಣ ಪರಂಪರೆ ಮುಂತಾದ ವಿಷಯಗಳನ್ನು ಹಂಪನಾ ವಿದ್ವತ್ಪೂರ್ಣವಾಗಿ ವಿವೇಚಿಸಿದ್ದಾರೆ. ಅಭ್ಯಾಸಿಗಳಿಗೆ ಇದು ತುಂಬಾ ಉಪಯುಕ್ತವಾಗಿದೆ.

ಕರ್ಣಪಾರ್ಯನ ಕಾಲದ ಬಗ್ಗೆ ಸಾಕಷ್ಟು ವಿವರವಾದ ಚರ್ಚೆ ಇಲ್ಲಿದೆ. ರುದ್ರಭಟ್ಟ, ಅಂಡಯ್ಯ, ಪಾರ್ಶ್ವಪಂಡಿತ ಈ ಮೂವರು ಕವಿಗಳು ಕರ್ಣಪಾರ್ಯನನ್ನು ಕಣ್ಣಮಯ್ಯನೆಂದು ಹೆಸರಿಸಿದ್ದಾರೆ. ಆದರೆ ಹಲವಾರು ಜನ ಕಣ್ಣಮಯ್ಯರಿರುವುದರಿಂದ ಈ ಕವಿಗಳು ಹೆಸರಿಸಿರುವ ಕಣ್ಣಮಯ್ಯನು ಪ್ರಸ್ತುತ ನೇಮಿನಾಥ ಪುರಾಣದ ಕರ್ತೃವಾದ ಕಣ್ಣಮಯ್ಯನೇ ಕರ್ಣಪಾರ್ಯ ಆಗಿರಬೇಕೆಂದು ಖಚಿತವಾಗಿ ಹೇಳಲಾಗದೆಂದು ಹಂಪನಾ ಪ್ರಾಮಾಣಿಕವಾಗಿ ಒಪ್ಪಿಕೊಂಡಿದ್ದಾರೆ. ಮಂಗರಸ ಮತ್ತು ದೊಡ್ಡಯ್ಯ ಇವರಿಬ್ಬರು ತಮ್ಮ ಕೃತಿಗಳಲ್ಲಿ ಕರ್ಣಪಾರ್ಯನನ್ನು ಅವನ ಕಾವ್ಯದೊಂದಿಗೆ ಹೆಸರಿಸಿರುವುದನ್ನು ಗುರುತಿಸಿದ್ದಾರೆ.

ನಮ್ಮ ಬಹಳಷ್ಟು ಜನ ಕವಿಗಳ ಕಾಲ ವಿಚಾರ ಸಂದಿಗ್ಧತೆಗೆ ಎಡೆಮಾಡಿ ಕೊಟ್ಟಿವೆ. ಕರ್ಣಪಾರ್ಯನೂ ಇದಕ್ಕೆ ಹೊರತಾದವನಲ್ಲ. ಹಂಪನಾ ಬಾಹ್ಯ ಮತ್ತು ಅಂತರ್ ಪ್ರಮಾಣಗಳ ಸಹಾಯದಿಂದ ಕರ್ಣಪಾರ್ಯನ ಕಾಲವನ್ನು ನಿರ್ಣಯಿಸಿದ್ದಾರೆ. ಕರ್ಣಪಾರ್ಯನ ಕಾಲದ ಬಗ್ಗೆ ತಿಳಿದುಕೊಳ್ಳಲು ನೆರವು ನೀಡುವ ಮೂರು ಅಂಶಗಳತ್ತ ಗಮನ ಸೆಳೆದಿದ್ದಾರೆ. ೧) ಕವಿಯ ಪೋಷಕನಿಗೆ ದೊರೆಯಾಗಿದ್ದ ವಿಜಯಾದಿತ್ಯನ ಕಾಲ, ೨) ಕವಿ ಹೇಳುವ ನಾಗಚಂದ್ರ ಕವಿಯ ಕಾಲವಿಚಾರ ೩) ಕವಿಯ ಗುರು ಕಲ್ಯಾಣಕೀರ್ತಿಯ ಕಾಲವಿಚಾರ—ಇವೇ ಆ ಮೂರು ಅಂಶಗಳು. ಕವಿ ಕರ್ಣಪಾರ್ಯನಿಗೆ ಲಕ್ಷ್ಮ ಎಂಬ ಪ್ರತಿಷ್ಠಿತ ವ್ಯಕ್ತಿ ಆಶ್ರಯ ನೀಡಿದ್ದನು. ಈ ಲಕ್ಷ್ಮನ ದೊರೆ ವಿಜಯಾದಿತ್ಯ. ಅಂದ ಮೇಲೆ ವಿಜಯಾದಿತ್ಯನ ಕಾಲಕ್ಕೆ ಲಕ್ಷ್ಮ ಮತ್ತು ಕರ್ಣಪಾರ್ಯರು ಇದ್ದ ಹಾಗಾಯಿತು. ಕೊಲ್ಲಾಪುರದ ಶಿಲಾಹಾರ ರಾಜಮನೆತನದ ಈ ವಿಜಯಾದಿತ್ಯನ ಆಡಳಿತದ ಅವಧಿ ಕ್ರಿ. ಶ. ೧೧೪೦ — ಕ್ರಿ. ಶ. ೧೧೭೫ ಎಂದು ಇತಿಹಾಸಕಾರರು ನಿರ್ಣಯಿಸಿದ್ದಾರೆ. ವಿಜಯಾದಿತ್ಯನು ಯುವರಾಜನಾಗಿದ್ದಾಗ ಥಾನಾದ ಶಿಲಾಹಾರ ದೊರೆ ಒಂದನೆಯ ಅಪರಾರ್ಕನ ಸಲುವಾಗಿ ಗೋವೆಯ ಇಮ್ಮಡಿ ಜಯಕೇಶಿಯನ್ನು ಪರಾಭವಗೊಳಿಸಿದನು. ಈ ಚಾರಿತ್ರಿಕ ಅಂಶ ಕರ್ಣಪಾರ್ಯನ ನೇಮಿನಾಥ ಪುರಾಣದ

> ಗೋಮಂತ ಶೈಲಾಗ್ರದಿಂ ಧೃತ ಭಾಸ್ವ
> ತ್ಕಮಳಾವಭಾಸಿ ವಿಜಯಾದಿತ್ಯಂ ಜಗದ್ದೀಪಕಂ (೧-೨೬)

ಈ ಪದ್ಯಭಾಗದಲ್ಲಿ ವ್ಯಕ್ತವಾಗಿರುವುದನ್ನು ಹಂಪನಾ ಗುರುತಿಸಿದ್ದಾರೆ. ಕರ್ಣಪಾರ್ಯನ ನೇಮಿನಾಥ ಪುರಾಣದಲ್ಲಿ ನಾಗಚಂದ್ರ ಕವಿಯ ಪ್ರಸ್ತಾಪವಿದೆ (೧-೧೨). ಅಂದಮೇಲೆ ನಾಗಚಂದ್ರನು ಕರ್ಣಪಾರ್ಯನಿಗಿಂತ ಹಿಂದಿನವನೋ ಅಥವಾ ಸಮಕಾಲೀನನೋ ಆಗಿರಬೇಕು. ಕರ್ಣಪಾರ್ಯನ ಪದ್ಯದ ಭಾವವನ್ನು ಗ್ರಹಿಸಿದ ಹಂಪನಾ 'ಇಲ್ಲಿಯ ಆಶಯ ಸಮಕಾಲೀನತೆಗಿಂತ ಸಮೀಪವರ್ತಿತ್ವವನ್ನು ಸೂಚಿಸುತ್ತದೆ' ಎಂದು ತಿಳಿಸಿದ್ದಾರೆ. ಕರ್ಣಪಾರ್ಯನ ಗುರು ಕಲ್ಯಾಣಕೀರ್ತಿಯ ಉಲ್ಲೇಖ ಶ್ರವಣಬೆಳ್ಗೊಳದ ಶಾಸನದಲ್ಲಿದೆ. ಈ ಶಾಸನದ ಕಾಲ ಕ್ರಿ. ಶ. ೧೧೦೦-೧೧೩೫. ಈ ಎಲ್ಲ ಆಧಾರಗಳನ್ನು ಕೂಲಂಕಷವಾಗಿ ಪರಿಶೀಲಿಸಿದ ಹಂಪನಾ ಅವರು ಕರ್ಣಪಾರ್ಯನ ಕಾಲ ಕ್ರಿ. ಶ. ಸು ೧೧೪೫ ಎಂದು ತರ್ಕಬದ್ಧವಾಗಿ ಊಹಿಸಿದ್ದಾರೆ.

"ಜೈನ ಪುರಾಣ ಪರಂಪರೆ'ಯ ಬಗೆಗಿನ ವಿವರ ಈ ಪ್ರಸ್ತಾವನೆಯ ಮುಖ್ಯ ಭಾಗವಾಗಿದೆ. 'ಮಹಾವೀರರಿಗೆ ಗೌತಮ, ಸುಧರ್ಮ, ಜಂಬೂಸ್ವಾಮಿ ಮುಂತಾದ ಹನ್ನೊಂದು ಮಂದಿ ಪ್ರಮುಖ ಶಿಷ್ಯರಿದ್ದರು. ಅವರನ್ನು ಗಣಧರರೆಂದು ಕರೆಯುತ್ತಿದ್ದರು. ಈ ಗಣಧರರು ಮಹಾವೀರರ ಸಮಸ್ತ ಉಪದೇಶಗಳನ್ನು ಹನ್ನೆರಡು ಅಂಗಗಳಲ್ಲಿ ಲಿಪಿಬದ್ಧಗೊಳಿಸಿದರು" (ಪು. ೯). ಇದು ಜೈನ ಪುರಾಣ ಪರಂಪರೆಗೆ ನಾಂದಿಯಾಯಿತು. ಹನ್ನೆರಡು ಅಂಗಗಳಿಗೆ ಹದಿನಾಲ್ಕು ಪೂರ್ವಗಳು ಉಂಟು. ಕಾಲಕಾಲಕ್ಕೆ ವಿಷ್ಣು, ನಂದಿಮಿತ್ರ, ಅಪರಾಜಿತ, ಗೋವರ್ಧನ, ಭದ್ರಬಾಹು, ವಿಶಾಖಾಚಾರ, ಪ್ರೋಷ್ಠಿಲಾಚಾರ್ಯ, ಕ್ಷತ್ರಿಯಾಚಾರ್ಯ, ಜಯಾಚಾರ್ಯ, ನಾಗಸೇನ, ಜಯಪಾಲ, ಪಾಂಡವ, ಸುಭದ್ರ, ಯಶೋಭದ್ರ ಮುಂತಾದವರಿಂದ ಬೆಳೆಯುತ್ತ ಪರಿಷ್ಕಾರಗೊಳ್ಳುತ್ತ ಬಂದ ಜೈನಪುರಾಣ ಪರಂಪರೆ ಜಿನಸೇನಾಚಾರ್ಯ-ಗುಣಭದ್ರಾಚಾರ್ಯರ ಕಾಲಕ್ಕೆ ಒಂದು ಘಟ್ಟಕ್ಕೆ ಬಂದು ತಲುಪಿತು. ಒಟ್ಟಾರೆ ಈ ಪರಂಪರೆಯ ಬೆಳವಣಿಗೆ ಮತ್ತು ವೈಶಿಷ್ಟ್ಯಗಳನ್ನು "ಎಲ್ಲ ಜೈನ ಪುರಾಣಗಳು ವಸ್ತುವಿನ ಮೂಲ ಪೂರ್ವಾನುಯೋಗ, ಶಲಾಕಾ ಪುರುಷರ ಚರಿತೆಯೇ ಪೂರ್ವಾನುಯೋಗದ ವಿಷಯ. ತ್ರಿಲೋಕ ಕ್ಷೇತ್ರ ಪ್ರಮಾಣ ನಿರೂಪಣಾಂಗವೇ ಕರಣಾನುಯೋಗ, ಸೂರ್ಯ-ಚಂದ್ರ ಪ್ರಜ್ಞಪ್ತಿಗಳೂ ಜಯಧವಳಾದಿಗಳೂ ಈ ಕರಣಾನುಯೋಗದ ವಿಷಯವನ್ನು ಒಳಗೊಂಡಿವೆ. ಜೈನ ಯತಿಗಳ, ಶ್ರಾವಕರ ಆಚಾರ ಶುದ್ಧಿಯನ್ನು ಚರಣಾನುಯೋಗ ತಿಳಿಸುತ್ತದೆ. ರತ್ನಕರಂಡ ಶ್ರಾವಕಾಚಾರ, ಆರಾಧನಾ ಕಥಾಕೋಶಗಳು ಈ ವಿಷಯವನ್ನು ನಿರೂಪಿಸುತ್ತವೆ. ಜೀವಾದಿ ದ್ರವ್ಯಗಳನ್ನು ಹೇಳುವುದು ದ್ರವ್ಯಾನುಯೋಗ. ತತ್ವಾರ್ಥಸೂತ್ರ, ಗೊಮ್ಮಟಸಾರ ಮೊದಲಾದ ಕೃತಿಗಳು ಈ ವಿಷಯವನ್ನು ವಿವರಿಸುತ್ತವೆ. ಪೂರ್ವಾನುಯೋಗ (ಪ್ರಥಮಾನುಯೋಗ), ಕರಣಾನುಯೋಗ, ಚರಣಾನುಯೋಗ, ದ್ರವ್ಯಾನುಯೋಗಗಳನ್ನು ಸೇರಿಸಿ ಶ್ರುತಸ್ಕಂಧವೆಂದು ಹೆಸರಿಸಿದ್ದಾರೆ. ಇವನ್ನು ಅನುಯೋಗ

ಚತುಷ್ಟಯವೆಂದೂ ಕರೆದಿದ್ದಾರೆ. ಇವುಗಳಲ್ಲಿ 'ಎಲ್ಲ ತೀರ್ಥಂಕರರ ಚರಿತೆ ಪ್ರಥಮಾನುಯೋಗದಲ್ಲಿ ಬರುತ್ತದೆ. ನೇಮಿನಾಥ ಪುರಾಣದ ಕತೆಯೂ ಸಹಜ ವಾಗಿಯೇ ಈ ವಿಭಾಗದಲ್ಲಿ ಸೇರ್ಪಡೆಯಾಗಿದೆ." (ಪು. ೧೨) ಹೀಗೆ ಸಂಗ್ರಹವಾಗಿ ವಿಶದಪಡಿಸಿದ್ದಾರೆ.

ನೇಮಿನಾಥ ವಾಙ್ಮಯದ ಸಮಗ್ರ ವಿವೇಚನೆ ಅಭ್ಯಾಸಪೂರ್ಣವಾಗಿದೆ. ಸಂಕ್ಷಿಪ್ತವಾಗಿ ನೇಮಿ ಕಥಾ ಪರಂಪರೆಯನ್ನು ಚರ್ಚಿಸಿದ್ದಾರೆ. 'ಜೈನ ಸಾಹಿತ್ಯದಲ್ಲಿ ನೇಮಿನಾಥ ತೀರ್ಥಂಕರರನ್ನು ಕುರಿತು ರಚಿತವಾಗಿರುವ ಕೃತಿಗಳು ಹಲವಾರು. ಲಬ್ಧ ಕೃತಿಗಳು ಇರುವಂತೆ ಅನುಪಲಬ್ಧ ಕೃತಿಗಳೂ ಇವೆ. ಕನ್ನಡದಲ್ಲಿಯೂ ಚಾವುಂಡರಾಯ, ಕರ್ಣಪಾರ್ಯ, ನೇಮಿಚಂದ್ರ, ಬಂಧುವರ್ಮ, ಸಾಳ್ವ, ಮಂಗರಸ, ಮೊದಲಾದವರ ಗ್ರಂಥಗಳು ದೊರಕಿವೆ. ಗುಣವರ್ಮನ ಹರಿವಂಶ ಮಾತ್ರ ದೊರೆತಿಲ್ಲ. ನೇಮಿನಾಥ ಪುರಾಣದಲ್ಲಿ ಬರುವ ಕಾವ್ಯಗುಣ, ಕಥಾಂಶ, ಶಾಸ್ತ್ರ ವಿವರಣೆ, ಭಾರತ ಭಾಗವತಗಳ ಮೇಳ—ಇವೆಲ್ಲ ಕೂಡಿಕೊಂಡು ಅದರ ಜನಪ್ರಿಯತೆಯನ್ನು ಹೆಚ್ಚಿಸಿವೆ. ಮುಖ್ಯವಾಗಿ ಇದರಲ್ಲಿ ಮಹಾಭಾರತದ ಕತೆಯೂ ಬೆರೆತು ಜೈನ ಮತ್ತು ವೈದಿಕಗಳ ಸಮನ್ವಯ ಸಿದ್ಧಾಂತದ ಸೂತ್ರವೊಂದು ತೋರುಕೊಂಡಿದೆ. ನೇಮಿನಾಥ ಪುರಾಣ ಮಹಾಭಾರತಕ್ಕೆ ಮಹಾಭಾರತವೂ ಆಯಿತು. ಜೈನ ಪುರಾಣಕ್ಕೆ ಪುರಾಣವೂ ಆಯಿತು ಎಂಬಂತಿದೆ' (ಪು. ೧೪). ಹೀಗೆ ನೇಮಿನಾಥ ವಾಙ್ಮಯದ ವ್ಯಾಪ್ತಿ, ವಿಸ್ತಾರ, ವೈಶಿಷ್ಟ್ಯಗಳನ್ನು ತುಂಬಾ ಮಾರ್ಮಿಕವಾಗಿ ಹಂಪನಾ ಹೇಳಿದ್ದಾರೆ.

ಮೊದಲನೆಯ ಗುಣವರ್ಮನ ಹರಿವಂಶವೇ ಕನ್ನಡದ ಪ್ರಥಮ ನೇಮಿ ಕಥೆ. ಇದು ಅನುಪಲಬ್ಧ. ನಂತರದ ಚಾವುಂಡರಾಯನ 'ತ್ರಿಷಷ್ಟಿ ಲಕ್ಷಣ ಪುರಾಣ'ದಲ್ಲಿ ನೇಮಿನಾಥನ ಕಥೆ ಸಂಕ್ಷಿಪ್ತವಾಗಿ ಬರುತ್ತದೆ. ಆದರೆ ಕನ್ನಡದ ಮೊದಲನೆಯ ಪೂರ್ಣ ಪ್ರಮಾಣದ ನೇಮಿನಾಥ ಪುರಾಣ ಪ್ರಸ್ತುತ ಕರ್ಣಪಾರ್ಯನ ಕೃತಿಯೇ ಆಗಿದೆ. ಹಂಪನಾ ಚಾವುಂಡರಾಯ ಮತ್ತು ಕರ್ಣಪಾರ್ಯರ ನೇಮಿ ಕಥೆಗಳನ್ನು ತೌಲನಿಕವಾಗಿ ಹೀಗೆ ವಿವೇಚಿಸಿದ್ದಾರೆ. 'ಚಾವುಂಡರಾಯ ಪುರಾಣದ ನೇಮಿನಾಥ ಚರಿತೆಯ ಭಾಗ ಹಿರಿದೂ ಅಲ್ಲ ಕಿರಿದೂ ಅಲ್ಲ. ಎಲ್ಲ ಅರ್ಥದಲ್ಲೂ ಅದು 'ಶುದ್ಧ ಗದ್ಯ' ಆಗಿದೆ. ಚಾವುಂಡರಾಯ ಹೊತ್ತ ಹೊಣೆ ಹಿರಿದು. ಆ ದೊಡ್ಡ ಜವಾಬ್ದಾರಿಯನ್ನು ನಿರ್ವಹಿಸುವುದರಲ್ಲಿ ಶಾಸ್ತ್ರೀಯವಾಗಿ ಗೆದ್ದರೂ ಕಲಾತ್ಮಕವಾಗಿ ಕವಿ ಸೋತಿದ್ದಾನೆ. ಇದಕ್ಕೆ ಹೋಲಿಸಿದಾಗ ಕರ್ಣಪಾರ್ಯನದು ಸಣ್ಣ ಹೊಣೆ. ಈ ಹೊಣೆ ನಿತ್ತರಿಸುವ ಕಾವ್ಯ ಕಾಯಕದಲ್ಲಿ ಕರ್ಣಪಾರ್ಯ ಉತ್ತಮ ದರ್ಜೆಯಲ್ಲೇ ತೇರ್ಗಡೆಯಾಗಿದ್ದಾನೆ. ಆದರೆ ನೇಮಿಚಂದ್ರನಿಗೆ ಸಿಗುವ ಸುವರ್ಣಪದಕ ಕರ್ಣಪಾರ್ಯನಿಗೆ ಸಿಗದು. ಚಾವುಂಡರಾಯನಿಗೆ ಪ್ರಶಂಸೆಗಳು. ಶಾಸ್ತ್ರದ ಪರಿಮಿತಿಯಿದೆ.

ಕರ್ಣಪಾರ್ಯನಿಗೆ ಅವುಗಳಿಲ್ಲ... ಕರ್ಣಪಾರ್ಯನಲ್ಲಿ ನಿರ್ಬಂಧದ ಮಾತೇ ಇಲ್ಲ. ಈತ ಓತಪ್ರೋತವಾಗಿ ಧಾವಿಸುತ್ತಾನೆ. ಇವನ ಕೆಲಸ ಪ್ರವಚನವಲ್ಲ. ನಿರ್ವಚನ. ಮಹಾ ಮಾತುಗಾರ. ವಾಚಾಳಿ. ಚಾವುಂಡರಾಯ ಪುರಾಣ ಶಾಸ್ತ್ರಕ್ಕಷ್ಟೇ ಕಣ್ಣಾಗಿರುವ ಸಂಕ್ಷಿಪ್ತ ಕೃತಿ. ಕಾವ್ಯಗುಣ ಗೌಣವಾಗಿರುವ ಈ ಕೃತಿಯ ಸಂಗ್ರಹ ಗುಣ ಗಣ್ಯವಾಗಿದೆ. ಹೀಗಾಗಿ ಚಾವುಂಡರಾಯ ಪುರಾಣ ತನ್ನ ಹೆಸರನ್ನು ಸಾರ್ಥಕಪಡಿಸಿಕೊಂಡು ಕೇವಲ ಪುರಾಣವಾಗಿದೆ" (ಪು, ೧೭).

ಹಂಪನಾ ನೇಮಿನಾಥ ಪುರಾಣಗಳ ಸಾಲಿನಲ್ಲಿ ಕರ್ಣಪಾರ್ಯನ ಕೃತಿಗಿರುವ ಸ್ಥಾನವನ್ನು ಸರಿಯಾಗಿ ಗುರುತಿಸಿದ್ದಾರೆ. ಕವಿಯ ಪಾಂಡಿತ್ಯ, ಪ್ರತಿಭೆ, ಶೈಲಿಗಳ ಬಗ್ಗೆ ಯಥಾಶಕ್ತಿ ಚರ್ಚಿಸಿದ್ದಾರೆ. "ಕರ್ಣಪಾರ್ಯನು ಪಂಪ ರನ್ನರ ಮಾನಸ ಪುತ್ರ, ಚಂಪೂಕಾವ್ಯ ಮಾರ್ಗದ ಕೃತಿ ನಿರ್ವಹಣೆಯಲ್ಲಿ. ಆದ್ದರಿಂದ ಅತ ಅಲ್ಲಿನ ವೈದಿಕ ಪರವಾದ ಭಾರತ ಕತೆಯನ್ನು ಮೆಚ್ಚಿ ಆ ಮೆಚ್ಚುಗೆಯಿಂದ ತನ್ನನ್ನು ಪೂರ್ತಿ ಬಿಡಿಸಿಕೊಳ್ಳಲಾಗದೆ ಅದನ್ನೂ ಸ್ವಲ್ಪ ತಂದು ನೇಮಿನಾಥ ಪುರಾಣದ ಮಾಮೂಲಿನ ಎರಕಕ್ಕೆ ಸೇರಿಸಿಬಿಟ್ಟಿದ್ದಾನೆ" (ಪು. ೧೮) ಈ ಮಾತುಗಳು ಕವಿಯನ್ನು ಅರ್ಥಮಾಡಿಕೊಳ್ಳಲು ತುಂಬಾ ಸಹಾಯವಾಗುತ್ತವೆ. ಸಂಸ್ಕೃತ ಪ್ರಾಕೃತ ಕನ್ನಡ ಭಾಷೆಗಳಲ್ಲಿ ಬೆಳೆದುಬಂದ ಸಮಗ್ರ ನೇಮಿ ಸಾಹಿತ್ಯವನ್ನು ಅಚ್ಚುಕಟ್ಟಾಗಿ ಪಟ್ಟಿ ಮಾಡಿದ್ದಾರೆ. ಇದು ಅಭ್ಯಾಸಿಗಳಿಗೆ ತುಂಬಾ ಉಪಯುಕ್ತವಾದ ಆಕರವಾಗಿದೆ. ಇಲ್ಲಿ ಒಂದು ಅಪರೂಪದ ನೇಮಿನಾಥ ಅಷ್ಟಕದ ಪೂರ್ಣ ಪಾಠವನ್ನು ಒದಗಿಸಿದ್ದಾರೆ. ಒಟ್ಟಾರೆ ಈ ಪ್ರಸ್ತಾವನೆಯು ಅಭ್ಯಾಸಪೂರ್ಣವೂ ತೂಕಬದ್ಧವೂ ಉಪಯುಕ್ತವೂ ಆಗಿದೆ.

ಗದ್ಯಾನುವಾದ ಸಮರ್ಪಕವಾಗಿದೆ. ಹಳಗನ್ನಡ ಪದ್ಯಗಳನ್ನು ಹೊಸಗನ್ನಡ ಗದ್ಯದಲ್ಲಿ ಇಳಿಸುವಾಗ ಹಲವಾರು ಸಮಸ್ಯೆಗಳು ಎದುರಾಗುತ್ತವೆ. ಮೂಲ ಪದ್ಯದ ಸಹಜ ಸೊಗಸು ಗದ್ಯದಲ್ಲಿ ಎಷ್ಟೋ ಸಲ ಮರೆಯಾಗುವುದುಂಟು. ಪದ್ಯದ ರಸವತ್ತಾದ ನಿರೂಪಣೆ ಗದ್ಯರೂಪದಲ್ಲಿ ವ್ಯಕ್ತವಾದಾಗ ನೀರಸ–ಕೃತಕ ಆಗುವುದುಂಟು. ಈ ಎಲ್ಲ ಅಂಶಗಳನ್ನು ಗಮನದಲ್ಲಿಟ್ಟುಕೊಂಡು ನೋಡಿದರೆ ಹಂಪನಾ ಮತ್ತು ಆರ್. ವಿ. ಕುಲಕರ್ಣಿಯವರ ಗದ್ಯಾನುವಾದದ ಯಶಸ್ಸು ಕಂಡುಬರುತ್ತದೆ. ಸಂಸ್ಕೃತ ಭೂಯಿಷ್ಠವಾದ ಪದ್ಯಗಳನ್ನು ಹೇಗೆ ಸರಳಗನ್ನಡ ಗದ್ಯಕ್ಕೆ ಅನುವಾದಿಸಿದ್ದಾರೆಂಬುದಕ್ಕೆ ಈ ಎರಡು ಉದಾಹರಣೆಗಳನ್ನು ನೋಡಬಹುದು.

೧) ದುರಘಾತಮೋವಿದೂರರವಿನಷ್ಟ ವಿಶಿಷ್ಟ ಗುಣಾಷ್ಟಕಾನ್ವಿತರ್
ಚರಮಸಮಗ್ರ ವಿಗ್ರಹಸಮರ್ ಭುವನತ್ರಿತಯಾಗ್ರಸಂಸ್ಥಿತರ್
ಪರಮ ಪವಿತ್ರರಪ್ರತಿಮಸನ್ನುತ ಸಾರಸುಖೈಕಪಾತ್ರರೀ
ಗರುತರ ಸಿದ್ಧಿಯಂ ನಮಗೆ ಸಿದ್ಧರನಂತಸುಖಪ್ರವೃದ್ಧಿಯಂ (೧-೨)

ದುಷ್ಟವಾದ ಪಾಪವೆಂಬ ಕತ್ತಲೆಯಲ್ಲಿ ದೂರಗೊಳಿಸಿದವರು, (ಸಮ್ಯಕ್ತ್ವ, ಜ್ಞಾನ, ದರ್ಶನ, ವೀರ್ಯ, ಸೂಕ್ಷ್ಮ, ಅವಗಾಹನ, ಅಗರುಲಘು ಮತ್ತು ಅವ್ಯಾಬಾಧ ಎಂಬ) ಶಾಶ್ವತವೂ (ಮುಕ್ತ ಜೀವನಿಗೆ) ವಿಶಿಷ್ಟವೂ ಆದ ಎಂಟು ಗುಣಗಳಿಂದ ಕೂಡಿದವರೂ ಪುನರ್ಜನ್ಮವಾಗಲಿ, ಮರಣವಾಗಲಿ ಆಗದಿರುವಂತಹ ಚರಮ ಧಾರಿಗಳು, ಮೂರು ಲೋಕಗಳ ತುದಿಯಲ್ಲಿ ನೆಲೆಸಿರುವವರು, ಅತ್ಯಂತ ಶುದ್ಧರು ಹಾಗೂ ಪೂಜ್ಯರು, ಅತ್ಯಂತ ಸ್ತುತ್ಯವಾದ ಕೈವಲ್ಯ ಸುಖಕ್ಕೆ ಅರ್ಹತೆಯನ್ನು ಪಡೆದವರು—ಹೀಗಿರುವಾಗ ಸಿದ್ಧರು ನಮಗೆ ಶ್ರೇಷ್ಠವಾದ ಸಿದ್ಧಿಯನ್ನೂ ಉತ್ತರೋತ್ತರವಾಗಿ ಹೆಚ್ಚುತ್ತಾ ಹೋಗುವಂತಹ ಅನಂತ ಸುಖ ಲಾಭವನ್ನೂ ದಯಪಾಲಿಸಲಿ.

೨) ತುಂಗ ಕುಭೃತ್ತಟ ಪ್ರಥಿತಸಾರ ಸಮುನ್ನತ ಭೂಜರಾಜಿಯೊಳ್
ಸಂಗತ ಸತ್ತರಂಗತತಿಯಿಂದೆಸೆದಿರ್ದ ಸರಿತ್ಸಮೀಪದೊಳ್
ಪಿಂಗದೆ ಸಾಂದ್ರಮಪ್ಪ ನೆಟಿಲೊಳ್ ಗಜಯೂಥಜಯಂ
ಮಹೋಗ್ರಮಾ
ತಂಗ ಸಮೇತಮಿರ್ದುವು ನಿರಾಕುಳಮಾ ವನದೊಳ್
ನಿರಂತರಂ (೩–೧೮೬)

ಎತ್ತರವಾದ ಬೆಟ್ಟದ ತಡಿಯಲ್ಲಿ ಬೆಳೆದು ನಿಂತ ಉನ್ನತವಾದ ಮರಗಳ ಗುಂಪಿನಲ್ಲಿ ದೊಡ್ಡ ದೊಡ್ಡ ಅಲೆಗಳಿಂದ ಶೋಭಿಸುವ ಕೊಳದ ಬದಿಯಲ್ಲಿ, ದಟ್ಟವಾಗಿ ಕವಿದ ನೆಳಲಲ್ಲಿ ಪ್ರಚಂಡವಾದ ಸಲಗಗಳೊಂದಿಗೆ ಕೂಡಿಕೊಂಡು ಆನೆಯ ಹಿಂಡು ಆ ವನದಲ್ಲಿ ನಿರಾತಂಕವಾಗಿ ನೆಲಸಿದ್ದವು.

ಎಂ. ಎ. ಜಯಚಂದ್ರ

# 'ಪೊನ್ನನ ಶಾಂತಿಪುರಾಣ'ದ ಸುದೀರ್ಘ ಪೀಠಿಕೆ

ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಹತ್ತನೇ ಶತಮಾನ ಸುವರ್ಣ ಯುಗವೆನಿಸಿದೆ. ಈ ಕಾಲದ ಪ್ರಸಿದ್ಧ ಕವಿಗಳಲ್ಲಿ ಪೊನ್ನನೂ ಒಬ್ಬ. ಈತ ಕವಿರತ್ನತ್ರಯರಲ್ಲಿ ಮಧ್ಯಮ, ಕವಿಚಕ್ರವರ್ತಿಗಳಲ್ಲಿ ಮೊದಲಿಗ. ಮುಂದೆ ಬಂದ ಜೈನ ಹಾಗೂ ಜೈನೇತರ ಕವಿಗಳು ಈತನನ್ನು ಮುಕ್ತಕಂಠದಿಂದ ಹೊಗಳಿದ್ದಾರೆ. ಸ್ಮರಿಸಿ ಗೌರವ ಸಲ್ಲಿಸಿದ್ದಾರೆ.

ಪೊನ್ನನ ಉಪಲಬ್ಧ ಏಕೈಕ ಮಹಾಕೃತಿ–ಶಾಂತಿಪುರಾಣಂ. ಇದರ ವಸ್ತು, ಜೈನ ಪರಂಪರೆಯಲ್ಲಿ ಬರುವ ಹದಿನಾರನೇ ತೀರ್ಥಂಕರನಾದ ಶಾಂತಿನಾಥನ ಕಥೆ. ಶಾಂತಿನಾಥ ತೀರ್ಥಂಕರನೂ ಹೌದು. ಆ ಕಾಲದ ಚಕ್ರವರ್ತಿ ಹಾಗೂ ಮನ್ಮಥನೂ ಹೌದು. ಈತನ ಭವಾವಳಿ ಎಷ್ಟು ಸಂಕೀರ್ಣವೋ ಅಷ್ಟೇ ಸ್ವಾರಸ್ಯವೂ ಜೈನಧರ್ಮ ಕೈಪಿಡಿಯೂ ಆಗಿದೆ.

ಜೈನ ಸಾಹಿತ್ಯದಲ್ಲಿ 'ಪುರಾಣ ಚೂಡಾಮಣಿ' ಎನಿಸಿಕೊಂಡ ಈ ಹಳೆಗನ್ನಡ ಕಾವ್ಯ ೧೯೨೯ರಲ್ಲಿ ಮದರಾಸಿನಲ್ಲಿ ಮುದ್ರಣಗೊಂಡಿತು. ಅಂದಿನಿಂದ ೧೯೮೨ರವರೆಗೆ ಪುನರ್ ಮುದ್ರಣವಾಗದೆ ಇದ್ದ ಈ ಕಾವ್ಯವನ್ನು ಸಂಪಾದಿಸಿ, ಸರಳಗನ್ನಡದ ಅನುವಾದ ನೀಡಿ, ೧೮೪ ಪುಟಗಳಷ್ಟು ಸುದೀರ್ಘ ಪೀಠಿಕೆಯನ್ನು ಬರೆದು ಡಾ॥ ಹಂಪನಾ ಅವರು ಕನ್ನಡ ಸಾಹಿತ್ಯ ಪರಿಷತ್ತಿನ ಹಳಗನ್ನಡ ಗದ್ಯಾನುವಾದ ಮಾಲೆಯಲ್ಲಿ ಪ್ರಕಟಿಸಿ ಉಪಕರಿಸಿದ್ದಾರೆ.

ಹಂಪನಾ ಅವರ ಸರಳ ಸುಂದರ ಗದ್ಯಾನುವಾದ ಶ್ರೀಸಾಮಾನ್ಯನನಿಗೆ ಉಪಯುಕ್ತವಾದರೆ, ಅವರ ಸುದೀರ್ಘ ಪೀಠಿಕೆ ಹಳಗನ್ನಡ ಕಾವ್ಯಾಭ್ಯಾಸಿಗಳಿಗೆ ಮತ್ತು ಸಂಶೋಧಕರಿಗೆ ಅತ್ಯುಪಯುಕ್ತವಾಗಿದೆ. ಈ ಪೀಠಿಕೆಯೇ ಒಂದು ಪಿಹೆಚ್.ಡಿ. ನಿಬಂಧದಂತಿದೆ.

ಪೊನ್ನ ಸ್ತವ ಪದ್ಯ ಕುಸುಮಾಂಜಲಿ. ಪೊನ್ನನ ವ್ಯಕ್ತಿತ್ವ, ಪೊನ್ನನ ಶಾಂತಿಪುರಾಣ ಕಾರಣ ಪುರುಷರು, ಪೊನ್ನನ ಶಾಂತಿಪುರಾಣದ ಕಥಾಸಾರ (ಸಂಕ್ಷಿಪ್ತ ಸಮೀಕ್ಷೆ), ಪೊನ್ನನ ಶಬ್ದಭಂಡಾರ, ಪೊನ್ನ ಮತ್ತು ಶಾಸ್ತ್ರ ಕೃತಿಗಳು, ಪೊನ್ನನ ವಾಕ್ಯಮಾಣಿಕ್ಯ ಕೋಶ, ಉಪಮಾಲೋಲ ಕವಿ ಪೊನ್ನ, ಪೊನ್ನ ಕವಿಯ ವಿಶಿಷ್ಟ ಪದ್ಯಗಳು, ಪೊನ್ನ ಕವಿ ಮತ್ತು ಸಂಸ್ಕೃತ, ಆನೆ ಮತ್ತು ಶಾಂತಿಪುರಾಣ, ಶಾಂತಿಪುರಾಣದಲ್ಲಿ ವ್ಯಕ್ತವಾಗಿರುವ ರಾಜನೀತಿ, ಪೊನ್ನ ಮತ್ತು ಜೈನಧರ್ಮ, ಶಾಂತಿಪುರಾಣ : ಜೈನಧರ್ಮ ಕೈಪಿಡಿ, ಕಾವ್ಯವಾಗಿ ಬಂದ ವೈರಾಗ್ಯ. ಪೊನ್ನನ ಕಾವ್ಯ ಶೈಲಿ, ಪೊನ್ನನ ಗದ್ಯ. ಪೊನ್ನ ಮತ್ತು ಅಸಗ, ಪೊನ್ನ ಮತ್ತು ಕಮಲಭವ, ಪೊನ್ನ ಮತ್ತು ಛಂದಸ್ಸು, ಪೊನ್ನನ ಕೃತಿ-ಕಾಲ, ನಾಗವರ್ಮ ಮತ್ತು ಪೊನ್ನ, ಸಮಾರೋಪ, ಗ್ರಂಥ ಸಂಪಾದನೆ ಹೀಗೆ ೨೪ ಶೀರ್ಷಿಕೆಯಲ್ಲಿ ಕವಿ ಕಾವ್ಯ ವಿಮರ್ಶೆ ಮಾಡಿದ್ದಾರೆ. ಇಷ್ಟೊಂದು ಮಗ್ಗಲುಗಳಲ್ಲಿ ಪೊನ್ನ ಕವಿಯ ಬಗ್ಗೆ ವಿವೇಚಿಸಿರುವವರಲ್ಲಿ ಹಂಪನಾ ಮೊದಲಿಗರಾಗಿದ್ದಾರೆ. ಕಾವ್ಯಸ್ವಾರಸ್ಯದ ದೃಷ್ಟಿಯಿಂದ ಒಂದು ಕಾವ್ಯ ಅತಿ ಉತ್ಕೃಷ್ಟವಲ್ಲದಿದ್ದರೂ ಇತರ ಅನೇಕ ದೃಷ್ಟಿಗಳಿಂದ ಆ ಕಾವ್ಯ ಎಷ್ಟು ಪ್ರಯೋಜನಕಾರಿ ಎಂಬುದನ್ನು ಈ ಪೀಠಿಕೆಯಿಂದ ಅರಿಯಬಹುದಾಗಿದೆ. 'ಪೊನ್ನನ ಶಬ್ದ ಭಂಡಾರ' ಎಂಬ ಭಾಗದಲ್ಲಿ ಕವಿಯ ಶಬ್ದ ಭಂಡಾರವನ್ನು ಕಾಣುವುದರ ಜೊತೆಗೆ ಭಾಷಾ ವಿಜ್ಞಾನಿ ಹಂಪನಾ ಅವರನ್ನು ಕಾಣಬಹುದಾಗಿದೆ. ಈ ಪೀಠಿಕೆ ಕನ್ನಡ ಸಾಹಿತ್ಯ ಚರಿತ್ರೆಗೆ ಹಂಪನಾ ನೀಡಿದ ಮೌಲಿಕ ಕೊಡುಗೆಗಳಲ್ಲಿ ಒಂದು. ಅಲ್ಲದೆ ಪೊನ್ನ ಕವಿಯ ಕಾವ್ಯವನ್ನು ಅರ್ಥಮಾಡಿಕೊಳ್ಳಲು ಈ ಪೀಠಿಕೆ ಸಹಾಯಕವಾಗಿರುವಂತೆ ಮುಂದಿನ ಸಂಶೋಧಕರಿಗೆ ಹೊಸ ಆಲೋಚನೆಗೆ ಪ್ರಚೋದಕವೂ ಆಗಿದೆ. ಅನೇಕ ವರ್ಷಗಳ ಸತತ ಅಭ್ಯಾಸದ ಫಲವಾಗಿ ಮೂಡಿಬಂದಿರುವ ಈ ಪೀಠಿಕೆ ಹಂಪನಾ ಅವರ ಆಳವಾದ ಪಾಂಡಿತ್ಯಕ್ಕೆ ದ್ಯೋತಕವಾಗಿದೆ.

ಡಾ॥ ಬಿ. ಸಿ. ಜವಳಿ

# ಚಂದ್ರಸಾಗರ ವರ್ಣಿಯ ಕೃತಿಗಳು

ಡಾ॥ ಹಂಪನಾ ಅವರು ಈ ಕೃತಿಯಲ್ಲಿ ಚಂದ್ರಸಾಗರ ವರ್ಣಿ ಬರೆದಿರುವ ೧೮ ಕೃತಿಗಳನ್ನು ಶ್ರೀ ಎಸ್. ಶಿವಣ್ಣ ಅವರೊಡನೆ ಸಂಪಾದಿಸಿದ್ದಾರೆ. ಕನ್ನಡ ಸಾಹಿತ್ಯ ಪರಿಷತ್ತಿನಿಂದ ೧೯೮೧ ರಲ್ಲಿ ಪ್ರಕಟಪಡಿಸಿದ್ದಾರೆ. ಇಬ್ಬರು ಜೊತೆಗೂಡಿ ಈ ಕೃತಿಗಳನ್ನು ಸಂಪಾದಿಸಿದ್ದರೂ ಇದಕ್ಕೆ ಸುಂದರವಾದ ಮುನ್ನುಡಿ ಮತ್ತು ೯೧ ಪುಟಗಳ ಬಹು ಉಪಯುಕ್ತ ಪೀಠಿಕೆ ಬರೆದವರು ಹಂಪನಾ ಅವರು. ಚಂದ್ರಸಾಗರವರ್ಣಿಯ ಈ ಕೃತಿಗಳನ್ನು ಪ್ರಕಟಿಸುವಲ್ಲಿ ಅವರು ಮುನ್ನುಡಿಯಲ್ಲಿ ಹೀಗೆ ಹೇಳಿದ್ದಾರೆ :

"೧೮ ನೆಯ ಶತಮಾನದ ಉತ್ತರಾರ್ಧ ಹಾಗೂ ೧೯ ನೆಯ ಶತಮಾನದ ಪೂರ್ವಾರ್ಧದಲ್ಲಿ ಜೀವಿಸಿದ ಚಂದ್ರಸಾಗರ ವರ್ಣಿ ಎಂಬ ಕವಿಯ ಕೆಲವು ಅಪ್ರಕಟಿತ ಕಾವ್ಯಗಳನ್ನು ಇಲ್ಲಿ ಇದೀಗ ಮೊದಲಬಾರಿಗೆ ಪುಸ್ತಕರೂಪದಲ್ಲಿ ಪ್ರಕಟಿಸಲಾಗುತ್ತಿದೆ. ಕಾವ್ಯದ ದೃಷ್ಟಿಯಿಂದ ಉತ್ಕೃಷ್ಟವೆನ್ನಲಾಗದಿದ್ದರೂ ಸಾಮಾಜಿಕ, ಸಾಹಿತ್ಯಿಕ ಹಾಗೂ ಭಾಷಿಕ ದೃಷ್ಟಿಗಳಿಂದ ಮಹತ್ವ ಪಡೆದಿದೆ ಈ ಕೃತಿ"–ಈ ಮಾತುಗಳು ಗಮನಾರ್ಹವಾಗಿವೆ.

ಪೀಠಿಕೆಯಲ್ಲಿ ಕವಿಯ ಬಗೆಗೆ ಬರೆಯುತ್ತಾ, ಚಂದ್ರಸಾಗರವರ್ಣಿ ಹಾಗೂ ಬ್ರಹ್ಮಣಾಂಕ ಈ ಎರಡೂ ಹೆಸರುಗಳು ಒಬ್ಬನವೇ. ಈತ ೧೯ನೆಯ ಶತಮಾನದ ಕನ್ನಡ ಕವಿಗಳಲ್ಲಿ ಅಗ್ರಗಣ್ಯ. ಬ್ರಹ್ಮಣಾಂಕ ಮತ್ತು ಚಂದ್ರಸಾಗರವರ್ಣಿ ಕವಿಗಳು ಬೇರೆ ಬೇರೆ ಅಲ್ಲ ಎಂಬುದನ್ನು ಸಿದ್ಧಪಡಿಸಲು ಹಂಪನಾ ಅವರು ಎರಡು ಲೇಖನ ಬರೆದುದನ್ನು ತಿಳಿಸಿದ್ದಾರೆ : ಒಂದು 'ವಿವೇಕಾಭ್ಯುದಯ'ದಲ್ಲಿ (ಸಪ್ಟಂಬರ್ ೧೯೭೧ ರಲ್ಲಿ) ಇನ್ನೊಂದು 'ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ'ಯಲ್ಲಿ (೫೮–೨). ಹೀಗಾಗಿ ಈ ವಿಷಯದಲ್ಲಿ ಅವರು ಈ ತೀರ್ಮಾನಕ್ಕೆ

ಬರುವಾಗ ಸುದೀರ್ಘವಾಗಿ ಚಿಂತನೆ ಮಾಡಿದ್ದಾರೆಂಬುದು ಸುಸ್ಪಷ್ಟ. ಈ ಪೀಠಿಕೆಯಲ್ಲಿ ಹಂಪನಾ ಅವರು ಅಲ್ಲಿ ಬಿಟ್ಟ ಇನ್ನು ಕೆಲವು ಅಂಶಗಳನ್ನು ಎಂದರೆ 'ಸರಸ್ವತೀಸ್ತುತಿ' ಪದ್ಯಗಳನ್ನು ಮತ್ತು ಪಂಚಪರಮೇಷ್ಠಿ, ಯಕ್ಷಯಕ್ಷಿಯ ಸ್ತೋತ್ರಾದಿಗಳನ್ನು ಉದಾಹರಿಸಿ, ಹಿಂದಿನ ತಮ್ಮ ವಾದವನ್ನು ಎತ್ತಿ ಹಿಡಿದಿದ್ದಾರೆ. ಒಬ್ಬ ಕವಿ ಹಲವು ಕೃತಿಗಳನ್ನು ಬರೆದಾಗ ಅಲ್ಪಸ್ವಲ್ಪ ಬದಲಾವಣೆಗಳೊಂದಿಗೆ ಸ್ತೋತ್ರಪದ್ಯಗಳನ್ನು ಬರೆದಿರುವುದು ಸಹಜ. ಚಂದ್ರಸಾಗರವರ್ಣಿಗೆ ಹಲವು ಹೆಸರುಗಳಿದ್ದು ಅವುಗಳಲ್ಲಿ ಬ್ರಹ್ಮಣಾಂಕ ಎಂಬುದೂ ಒಂದು. ಅದು ಅವನು ಸನ್ಯಾಸಾಶ್ರಮ ಸ್ವೀಕರಿಸುವ ಪೂರ್ವದ ಹೆಸರು. ಅವನು ಕ್ರಿ. ಶ. ೧೭೬೦ರ ವೇಳೆಗೆ ಜನಿಸಿ, ಹುಟ್ಟಿ ಬೆಳೆದುದು ಈಗಿನ ತುಮಕೂರು ಜಿಲ್ಲೆಯ ಕೊರಟಗೆರೆ ತಾಲೂಕಿನ ತೋವಿನಕೆರೆ ಗ್ರಾಮ. ಈತನ ಪೂರ್ವಜರು ತುಂಗಭದ್ರೆಯ ಬಳಿಯ 'ಹುಲಿಗೆ'ಯ ಹೆಗ್ಗಡೆಗಳ ಮನೆತನಕ್ಕೆ ಸೇರಿದವರು. ಇಕ್ಷ್ವಾಕು ವಂಶದವರು : ಚಂದ್ರನಾಥ ಕವಿಯು ಅಜ್ಜ : ಕವಿಯ ತಂದೆ ಚಂದಪ್ಪ, ತಾಯಿ ಪೊಂಬುಚಿ. ಈತನಿಗೆ ಚಂದ್ರನಾಥ, ಬ್ರಹ್ಮ, ಪದ್ಮ ಇವರು ಒಡಹುಟ್ಟಿದವರು. ಈ ಕವಿಯ ಜನನ ಕ್ರಿ. ಶ. ೧೭೬೦ : ವಿವಾಹ ೧೭೮೮ : ದೀಕ್ಷೆ ೧೮೦೩ ಮತ್ತು ನಿಧನ ೧೮೩೫, ಇದರಿಂದ ಕವಿ ನಿಡಿಬಾಳನ್ನು ಬಾಳಿದ್ದಾನೆಂದು ತಿಳಿದುಬರುತ್ತದೆ. ಈ ವಿವರಗಳನ್ನು ಹಂಪನಾ ಅವರು ತಮ್ಮ ಬಳಿ ಇರುವ ಅಪ್ರಕಟಿತ ಕೃತಿ 'ವಿಕ್ರಮಂಧರ' ಕಾವ್ಯದ ಆಧಾರದಿಂದ ನೀಡಿದ್ದಾರೆ.

ಈ ಕವಿಗೆ ಕಾವ್ಯ–ಶಾಸ್ತ್ರಗಳಲ್ಲಿ ಅಪಾರ ಆಸಕ್ತಿ. ಭೇತಾಳವನ್ನು ವಶಪಡಿಸಿಕೊಳ್ಳುವ ಹಂಬಲವೂ ಇತ್ತಂತೆ. ಆತನ ಸಾಹಿತ್ಯದ ಒಲವು ಸಂಸಾರದ ಸೆಳೆತವನ್ನು ಇಕ್ಕಿ ಮೆಟ್ಟಿತಂತೆ. ಜೈನ ತೀರ್ಥಕ್ಷೇತ್ರಗಳನ್ನು ಸಂಚರಿಸಿದ್ದನಂತೆ. ಜೈನ ಸಮಾಜದಲ್ಲಿ ಅವನಿಗೆ ಸಾಕಷ್ಟು ಮನ್ನಣೆ ಇದ್ದಿತ್ತು. ಈತನ ಮೇಲೆ ಕುಮಾರವ್ಯಾಸನ ಭಾರತದ ಪ್ರಭಾವವಿದ್ದುದನ್ನು ಆತ ಬರೆದ ಜಿನಭಾರತದಿಂದ ತಿಳಿಯಬಹುದು. ಕವಿ ಜೈನಧರ್ಮಿಯನಾಗಿ ಅದನ್ನು ಅತ್ಯಂತ ಗೌರವದಿಂದ ಕಾಣುತ್ತಿದ್ದನು. ಈತನು ಒಂದು ಜಿನಭಾರತವನ್ನು ಭಾಮಿನೀಷಟ್ಪದಿಯಲ್ಲಿ ಬರೆದಿದ್ದಾನೆ. ಇದೊಂದು ಬೃಹತ್ ಕಾವ್ಯ. ೮೪ ಸಂಧಿಗಳಲ್ಲಿ ೪೬೨೮ ಪದ್ಯಗಳನ್ನೊಳಗೊಂಡಿದೆ. ಹೀಗಾಗಿ ಚಂದ್ರಸಾಗರವರ್ಣಿಯ ಕಾವ್ಯದ ಹರಹು ವಿಸ್ತಾರವಾದುದೆಂದು ಸಹಜವಾಗಿಯೇ ಗ್ರಹಿಸಬಹುದು. ಜೈನ ಸಾಹಿತ್ಯ ಪರಿಚಯ, ಜೈನಕ್ಷೇತ್ರಗಳ ಸಂದರ್ಶನಗಳಿಂದಾಗಿ ವೈರಾಗ್ಯೋದಯವಾಗಿ ಕೊಲ್ಲಾಪುರಕ್ಕೆ ಹೋಗಿ, ಅಲ್ಲಿ ಚಂದ್ರಪ್ರಭ ಚೈತ್ಯಾಲಯದಲ್ಲಿ ದೀಕ್ಷೆ ತೆಗೆದುಕೊಂಡು 'ಚಂದ್ರಸಾಗರವರ್ಣಿ' ಎಂದು ತನ್ನ ಹೆಸರನ್ನು ಮಾರ್ಪಡಿಸಿಕೊಂಡನು. ಅವನಿಗೆ ದೀಕ್ಷೆಕೊಟ್ಟ ಗುರುಗಳ ಹೆಸರು ಲಕ್ಷ್ಮೀಸೇನರು. ಈತನು ಮುನಿದೀಕ್ಷೆ ತೆಗೆದುಕೊಂಡ ವಿಷಯವು ಕವಿಯ

ಕಾವ್ಯಗಳಲ್ಲಿ ಒಂದಾದ 'ಜಿನಮುನಿ' ಕಾವ್ಯದಿಂದ ತಿಳಿದುಬರುತ್ತದೆ. ಇದು ಭಾಮಿನೀಷಟ್ಪದಿಯಲ್ಲಿದೆ. ಈತನು ಕನ್ನಡದಲ್ಲಿ ಒಂದು ಜೈನರಾಮಾಯಣವನ್ನೂ ಬರೆದಿದ್ದಾನೆ ; ಇದರಲ್ಲಿ ೭೪ ಆಶ್ವಾಸಗಳಿದ್ದು ೪೩೦೯ ಪದ್ಯಗಳಿವೆ ; ಕ್ರಿ. ಶ. ೧೮೧೪ ರಲ್ಲಿ ಈ ಕಾವ್ಯವನ್ನು ಬರೆದು ಮುಗಿಸಿದ್ದಾನೆ. ಇಲ್ಲಿಯವರೆಗೆ ೧೬ ಪುಟಗಳಲ್ಲಿ ಈ ಕವಿಯ ಹೆಸರು–ಜೀವನ–ಪರಿವರ್ತನೆ, ಅಭ್ಯಾಸ–ಈ ಎಲ್ಲ ವಿವರಗಳನ್ನು ಡಾ॥ ಹಂಪನಾ ಬಹುಶ್ರಮವಹಿಸಿ ಕಲೆಹಾಕಿದ್ದಾರೆ. ಒಬ್ಬ ಕವಿಯ ಜೀವನದ ಹಿನ್ನೆಲೆ–ಪರಿಸರ ತಿಳಿದಾಗ ಕೃತಿ ಬೆಲೆಕಟ್ಟಲು ಅನುಕೂಲ ಎಂಬ ಅವರ ಮಾತು ಒಪ್ಪತಕ್ಕುದೇ. ಅಲ್ಲದೇ ಪೀಠಿಕೆಯ ಪು. (XVI) ೧೬ರಲ್ಲಿ ಈ ಕವಿಯ ಬಗೆಗೆ ಹಂಪನಾ ಬರೆದಿರುವ ಮಾತುಗಳು ಗಮನಾರ್ಹ :

> "ಕನ್ನಡ ಸಾಹಿತ್ಯದಲ್ಲಿ ವಸ್ತು, ಛಂದಸ್ಸು, ಸಂಖ್ಯೆಯ ದೃಷ್ಟಿಯಿಂದ ಹೆಚ್ಚಿನ ಕೃತಿರಚನೆ ಮಾಡಿರುವ ಕೆಲವೇ ಜೈನಕವಿಗಳಲ್ಲಿ ಮೂರನೆಯ ಮಂಗರಸ ಹಾಗೂ ಚಂದ್ರಸಾಗರವರ್ಣಿ ಗಣ್ಯರು ; ಶುದ್ಧಸಾಹಿತ್ಯ ಕೃತಿಗಳಾಗಿ ಚಂದ್ರಸಾಗರವರ್ಣಿಯ ಕಾವ್ಯಗಳ ಮೌಲ್ಯಮಾಪನಕ್ಕೆ ತೊಡಗಿದಾಗ, ಆತ, ಪಂಪ, ರನ್ನಾದಿಗಳ ಮಾತಂತಿರಲಿ, ತಾನು ಗುರುವೆಂದು ಆದರ್ಶವಾಗಿಟ್ಟುಕೊಂಡಿರುವ ಮಂಗರಸನ ಮಟ್ಟಕ್ಕೂ ಬರುವುದಿಲ್ಲ."

ಈ ಹೇಳಿಕೆ ಅತ್ಯಂತ ಸಾಧುವಾದುದು ಮಾತ್ರವಲ್ಲ, ಕಾವ್ಯವಿಮರ್ಶಕರು ವಿಮರ್ಶೆಗೆ ಮಾನದಂಡವಾಗಿರಿಸಿಕೊಳ್ಳಬಲ್ಲ ಹಿನ್ನೆಲೆಯು, ತೂಕಬದ್ಧ ವಿಮರ್ಶೆಯ ಬರಹವೂ ಆಗಿದೆ. ಒಬ್ಬ ಕವಿ ನಮ್ಮ ಗಮನ ಸೆಳೆಯುವುದು ಕಾವ್ಯದ ಸಂಖ್ಯೆ, ಗಾತ್ರಗಳಿಂದಲ್ಲ, ಕಾವ್ಯ ಸತ್ವ ಮತ್ತು ಕಲಾತ್ಮಕತೆಗಳಿಂದ ಎಂಬುವನ್ನು ಯಾರಾದರೂ ಒಪ್ಪಿಕೊಳ್ಳಲೇಬೇಕಾದುದು. ಪೀಠಿಕೆಯ ಪುಟ ೧೨ ರಲ್ಲಿ "ಜಿನಭಾರತ ಕನ್ನಡ ಕಾವ್ಯಶ್ರೇಣಿಯಲ್ಲಿ ಮಹಾಭಾರತ ವಸ್ತುವನ್ನು ಆಧರಿಸಿ ಬರೆದ ಉಳಿದ ಕಾವ್ಯಗಳೊಡನೆ ತುಲನಾತ್ಮಕ ಅಧ್ಯಯನಕ್ಕೆ ಅವಕಾಶ ಮಾಡಿಕೊಡುವ ಒಂದು ವಿಶಿಷ್ಟ ಕಾವ್ಯ ಜಿನಭಾರತ" ಎಂದಿರುವ ಮಾತು ಸಾಧುವಾದುದು. ಕವಿಯ ಬಗೆಗೆ ಹೆಚ್ಚಿನ ಮಾಹಿತಿ ದೊರೆಯಲು ಆತನು ಬರೆದ ೪೬ ಕೃತಿಗಳ ಒಂದು ಪಟ್ಟಿಯನ್ನೇ ಹಂಪನಾ ಕೊಟ್ಟಿದ್ದಾರೆ. ಇಲ್ಲಿ ಮಾತ್ರ ೧೮ ಕೃತಿಗಳನ್ನು ಪ್ರಕಟಿಸಿದ್ದಾರೆ. ಇಷ್ಟೆಲ್ಲ ಕೃತಿಗಳನ್ನು ಚಂದ್ರಸಾಗರವರ್ಣಿ ಬರೆದಿದ್ದರೂ ಇವನು "ಕನ್ನಡದ ಒಬ್ಬ ಮಹತ್ವದ ಕವಿಯೆನಿಸಿಕೊಳ್ಳುವುದಿಲ್ಲ" (ಪೀಠಿಕೆ, ಪು. (XVII) ಎಂಬ ಮಾತು ಒಪ್ಪಬೇಕಾಗಿದೆ. "ವಸ್ತು ನಿರ್ವಹಣೆ ದೃಷ್ಟಿಯಿಂದ ಮಂಗರಸನ ಮಾದರಿಯ ಜಾನಪದ ಕವಿ"; ಇದಕ್ಕೆ ಕಾರಣ "ಕ್ರಮಬದ್ಧವಾದ ಶಿಕ್ಷಣದ ಅಭಾವ; ಚಂದ್ರಸಾಗರವರ್ಣಿಯ ಕಾವ್ಯಶಕ್ತಿ, ರಚನೆ ಅಸ್ಪಷ್ಟ. ಕಾವ್ಯವಸ್ತುಗಳ ಆಯ್ಕೆಯಲ್ಲಿ ಕ್ರಮಬದ್ಧತೆ ಇಲ್ಲ ; ಆಯ್ದುಕೊಂಡವಸ್ತುವಿನ ಮೇಲೆ ಪ್ರಭುತ್ವವಿಲ್ಲ" ಹೀಗಾಗಿ "ಚಂದ್ರಸಾಗರ

ವರ್ಣಿಯ ಕಾಣಿಕೆ ತೀರಸಾಮಾನ್ಯವಾದುದು : ಪ್ರಜ್ಞಾಜನ್ಯ ಪ್ರತಿಭೆಯೂ ಕಡಿಮೆಯೇ." ಐತಿಹಾಸಿಕ ವಸ್ತುವನ್ನು ನಿರ್ವಹಿಸುವಲ್ಲಂತೂ ಅವನಿಗೆ ತಯಾರಿ ಯಾವ ರೀತಿಯಲ್ಲೂ ಸಾಲದು : ಹೀಗಾಗಿ ಅವನ ಕಥೆಗಳು ಕಲ್ಪನೆಯ ಕಥೆಗಳಾಗುತ್ತವೆ. "ಅಭದ್ರವಾದ ಜನಜನಿತ ಕಿಂವದಂತಿಯ ತಳಹದಿಯ ಮೇಲೆ ಕಟ್ಟಿದ ಕಟ್ಟಡಗಳೆಂದು ಬಿಜ್ಜಳರಾಯಪುರಾಣ, ಕದಂಬಪುರಾಣ, ಮುಲ್ಲಾಶಾಸ್ತ್ರಗಳನ್ನು ಹೆಸರಿಸಬಹುದು" (ಪೀಠಿಕೆ, ಪು. XVIII). 'ಬಿಜ್ಜಳರಾಯ ಪುರಾಣ' ಈ ಕಾರಣದಿಂದ ವೀರಶೈವರಲ್ಲಿ ಗಲಭೆಯನ್ನುಂಟು ಮಾಡಿರುವುದು ಬಹುಜನರಿಗೆ ಗೊತ್ತಿದ್ದ ವಿಷಯ. ಇನ್ನು ಹರಿಹರನು ಬಿಜ್ಜಳನನ್ನು ಚಿತ್ರಿಸುವಾಗ ಬೇಕಿರುವಂತೆ ಚಿತ್ರಿಸಿದ್ದಾನೆಯೇ ? ಇದು ಯೋಚಿಸಬೇಕಾದ ವಿಷಯ. ಬಿಜ್ಜಳನನ್ನು ಚಿತ್ರಿಸುವಾಗ ಹರಿಹರಕವಿಯ ಲಕ್ಷ್ಯವೆಲ್ಲ, ಕಥಾನಾಯಕ, ಭಕ್ತಿಭಂಡಾರಿ ಬಸವಣ್ಣನ ಮೇಲಿದ್ದರೂ ಬಿಜ್ಜಳನು ಬಸವಣ್ಣನಿಗೆ ವೈರಿಯಲ್ಲ. ಬಿಜ್ಜಳನನ್ನು ವರ್ಣಿಸುವಾಗ, 'ಕಲಿಯುಗ ರಾವಣ', 'ಪರನೃಪಾಳಗಪರ್ವತ ಕುಲಿಶ', 'ಪರಿಪಂಥಿ ಪನ್ನಗವೈನತೇಯ', 'ಘನಮಹಿಮ' ಎಂಬ ಪದಗಳನ್ನು ಬಳಸಿರುವುದನ್ನು ನೋಡಿದರೆ ಅವನ ಶೌರ್ಯ, ಪ್ರತಾಪಗಳ ಬಗೆಗೆ ಹರಿಹರ ಕವಿಗೆ ತಿಳಿದಿತ್ತೆಂಬುದು ಗೋಚರಿಸುತ್ತದೆ (ಇದೇ ಲೇಖಕನ ಹರಿಹರ ಮಹಾಕವಿಯ ಶ್ರೀ ಬಸವೇಶ್ವರದೇವರ ಚರಿತ್ರೆ, ಪು. ೬೦, ೧೯೬೬, ನೋಡಿರಿ). ಬಸವಣ್ಣನೋ ಕ್ರಾಂತಿಕಾರಿ. ಬಿಜ್ಜಳನು ಸನಾತನ ಧರ್ಮಪರಂಪರೆಗೆ ಹೊದ್ದಿದವನು. ಕರ್ನಾಟಕದಲ್ಲಿ ಮಹತ್ತರ ಕ್ರಾಂತಿ ನಡೆದಾಗ ಇತಿಹಾಸವೇ ಅದನ್ನು ನಮೂದಿಸದೇ ಹೋದಾಗ ಆ ಇತಿಹಾಸಕಾರರೆಂತಹರು ಎಂಬುದರ ಅರಿವು ನಮಗಾಗುತ್ತದೆ.

ಆದುದರಿಂದ ಹರಿಹರಕವಿ ಇತಿಹಾಸಕ್ಕೆ (ಬಿಜ್ಜಳನ ಬಗೆಗೆ) ಅಪಚಾರ ಮಾಡಿದ್ದಾನೆನ್ನುವುದಕ್ಕಿಂತ ಇತಿಹಾಸಕಾರರೇ ಬಸವಣ್ಣನಿಗೆ ಅಪಚಾರ ಬಗೆದಿದ್ದಾರೆನ್ನುವುದು ಸಮಂಜಸ. ಬಸವಣ್ಣ ಹೊಸ ಇತಿಹಾಸ ನಿರ್ಮಾಪಕ ಎಂಬುದನ್ನು ಗುರುತಿಸುವುದು ಅನಿವಾರ್ಯ. ಇಂತಹ ಬಸವಣ್ಣನ ಪಾತ್ರಕ್ಕೆ ಚಂದ್ರಸಾಗರವರ್ಣಿ 'ಮಸಿಬಳಿದುದು' ಸಮಂಜಸವಲ್ಲ ಎಂಬ ಹಂಪನಾ ಅವರ ತೀರ್ಮಾನ ಸರಿಯಾದುದೇ. ಚಂದ್ರಸಾಗರವರ್ಣಿ ಬಾಳಿ ಬೆಳಗಿದುದು ಮತೀಯ ವಾತಾವರಣದ ಪ್ರಭಾವವಿದ್ದ ಕಾಲದಲ್ಲಿ. ಆದುದರಿಂದ ಅವನಿಗೆ ತನ್ನ ಕಾಲದ ಬಂಧುಬಾಂಧವರನ್ನು ಮೆಚ್ಚಿಸುವುದು ಮಹತ್ವದ್ದಾಗಿತ್ತು, ಹಾಗೆ ಮಾಡಿದ್ದಾನೆ. ಹಲವಾರು ಛಂದೋರೂಪಗಳನ್ನು ಬಳಸಿದುದು, ಯಕ್ಷಗಾನದಲ್ಲಿ ಕೃತಿ ರಚಿಸಿದುದು, ವ್ಯಾಖ್ಯಾನ ಸಾಹಿತ್ಯ ನಿರ್ಮಿಸಿದುದು ಅವನ ವೈಶಿಷ್ಟ್ಯವೆನ್ನಲೇಬೇಕು.

ಅವನ ಕೊಡುಗೆ ವಿಶೇಷವಾಗಿ ಕಂಡುಬರುವುದು, ಆತ ಆಡುಮಾತಿಗೆ ವ್ಯಾವಹಾರಿಕ ಕನ್ನಡಕ್ಕೆ ಮಹತ್ವಕೊಟ್ಟುದು ಎಂಬ ಹಂಪನಾ ಅವರ ನಿರ್ಣಯ

ಒಪ್ಪಬೇಕಾದುದು. ಅವನನ್ನು "ಹೊಸಗನ್ನಡದ ಮುಂಗೋಳಿ" ಎಂದು ಕರೆದಿದ್ದಾರೆ-ಪೀಠಿಕೆ ಪು. (XXIII) ೨೩ರಲ್ಲಿ. ಅವನಿಗೆ ಬರೆಯುವುದರಲ್ಲಿ ಅತ್ಯುತ್ಸಾಹ : ಬರೆಯುವಲ್ಲಿ 'ಕಾವ್ಯರಚನೆಗೆ ಬೇಕಾದ ಬಂಡವಾಳ ಕಡಿಮೆ'. ಪೀಠಿಕೆ ಪು. ೨೪ರಲ್ಲಿ ತಾವು ಕೃತಿ ಸಂಪಾದನೆಗೆ ಬಳಸಿದ ಹಸ್ತಪ್ರತಿಗಳ ವಿವರ ನೀಡಿದ್ದಾರೆ : ಮತ್ತು ಪ್ರತಿಯೊಂದು ಕೃತಿಯ ಸಾರವನ್ನು ಅತಿ ಸಂಕ್ಷಿಪ್ತವಾಗಿ ಕೊಟ್ಟು ಉಪಕರಿಸಿದ್ದಾರೆ. ಕಠಿಣ ಪದಕೋಶ, ಟಿಪ್ಪಣಿ ಕೊಟ್ಟಿದ್ದರೆ ಇನ್ನೂ ಚೆನ್ನಾಗುತ್ತಿತ್ತು.

ಒಟ್ಟಿನಲ್ಲಿ ಹಂಪನಾ ಅವರ ಕೃತಿವಿಮರ್ಶೆ ಮಾದರಿಯದೂ ಕೃತಿನಿಷ್ಠವೂ ಆಗಿ, ಓದುಗರನ್ನು ಆಕರ್ಷಿಸುವಂತಿದೆ. ಒಬ್ಬ ಕವಿಯ ಎಲ್ಲ ಕೃತಿಗಳನ್ನು ಅಧ್ಯಯನ ಮಾಡಿದರೆ ಒಂದಿಲ್ಲೊಂದು ಕಾರಣದಿಂದ ನಮಗೆ ಆ ಕವಿ ಮಹತ್ವದವನೆನಿಸುತ್ತಾನೆ. ಹಂಪನಾ ಅವರ ತೂಕಬದ್ಧ ವಿಮರ್ಶೆ, ಅಲ್ಲಲ್ಲಿ ನೀಡಿದ ಸೂಚನೆ, ಪಾಂಡಿತ್ಯಪೂರ್ಣ ಬರಹ ನಮಗೆ ಮೆಚ್ಚಿಗೆಯೆನಿಸುತ್ತವೆ.

ಡಾ॥ ನಂ. ತಪಸ್ವೀಕುಮಾರ್

# ಸಾಹಿತ್ಯ ಸಮ್ಮೇಳನ ಸಂಪುಟಗಳ ಸಂಪಾದಕರಾಗಿ

ಈಗ ಪ್ರಾಧ್ಯಾಪಕರಾಗಿರುವ ಡಾ॥ ಹಂಪ. ನಾಗರಾಜಯ್ಯನವರ ಪ್ರಧಾನ ಸಂಪಾದಕತ್ವದಲ್ಲಿ ಕಳೆದ ಆರೇಳು ವರ್ಷಗಳ ಅವಧಿಯಲ್ಲಿ ಅಕ್ಷರಶಃ ನೂರಾರು ಬಹು ಬಗೆಯ ಕನ್ನಡ ಗ್ರಂಥಗಳು ಕನ್ನಡ ಸಾಹಿತ್ಯ ಪರಿಷತ್ತಿನಿಂದ ಪ್ರಕಟವಾಗಿವೆ. ಈ ಒಂದೊಂದರ ಮೌಲಿಕತೆಯ ಬಗೆಗೆ ಹಂಪನಾ ಅವರು ಮುನ್ನುಡಿ ಬರೆದು, ಆಯಾ ಗ್ರಂಥದ ಸಾರ, ಸಂದೇಶ ಏನು ಎಂಬುದನ್ನು ತುಂಬ ಸಮರ್ಥವಾಗಿ, ಸಂಗ್ರಹವಾಗಿ ತಿಳಿಸಿ ಓದುಗರಿಗ ಮಾರ್ಗದರ್ಶಿಯಾಗಿದ್ದಾರೆ. ಎಂತಲೇ ಹಂಪನಾ ಅವರ ಪ್ರಧಾನ ಸಂಪಾದಕತ್ವವು ನಾಮಕಾವಸ್ಥೆಯದಾಗಿರದೆ ಶ್ರದ್ಧಾವಂತ ಸಾಹಿತಿಯೊಬ್ಬರ ವಸ್ತುನಿಷ್ಠ ವಿಮರ್ಶೆಯನ್ನುಳ್ಳ ಜವಾಬ್ದಾರಿಯುತ ಕರ್ತವ್ಯವಾಗಿ ಸಾರ್ಥಕವೆನ್ನಿಸಿದೆ.

ಇಂತಹ ದಕ್ಷ ಸಂಪಾದಕರ ನೇತೃತ್ವದಲ್ಲಿ ಪ್ರಕಟವಾಗಿರುವ ಕನ್ನಡ ಸಾಹಿತ್ಯ ಸಮ್ಮೇಳನ ಸಂಪುಟಗಳನ್ನು ಕುರಿತ ಒಂದು ಲೇಖನವನ್ನು ಹಂಪನಾ ಅಭಿನಂದನ ಗ್ರಂಥಕ್ಕಾಗಿ ಬರೆದು ಕೊಡಿ, ಎಂದು ಈ ಕೃತಿಯ ಸಂಪಾದಕರು ಕೇಳಿದ್ದಾರೆ. ಅದು ತುಂಬ ಸಂತೋಷದ ಸಂಗತಿಯೆ. ಏಕೆಂದರೆ ದಕ್ಷತೆಗೆ, ಕಾರ್ಯ ಕುಶಲತೆಗೆ ಹಾಗೂ ಚುರುಕುತನಕ್ಕೆ ಇನ್ನೊಂದು ಹೆಸರು ಎಂಬಂತೆ, ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾಗಿ ದುಡಿದು ದೊಡ್ಡ ಹೆಸರು ಮಾಡಿರುವ ಹಂಪನಾ ಅವರ ಕ್ರಿಯಾಶಕ್ತಿಗೆ ನಾಲ್ಮೊಗಗಳಿರುವುದನ್ನು ನಾನು ಗುರುತಿಸಿದ್ದೇನೆ. ೧) ಶ್ರೀಯುತರು ಪರಿಷತ್ತಿನ ದೈನಂದಿನ ವ್ಯವಹಾರಗಳಲ್ಲಿ ತೋರುತ್ತಿದ್ದ ಚತುರತೆ, ಕಾರ್ಯ ಕುಶಲತೆ, ೨) ಹಲವು ಬಗೆಯ ಜಾನಪದೀಯ ಕೃತಿಗಳನ್ನೂ ಹಲವಾರು ಪಿಎಚ್.ಡಿ. ನಿಬಂಧಗಳನ್ನೂ ಅನ್ಯ ಪ್ರಕಾಶಕರು ಪ್ರಕಟಿಸಲು ಹಿಂದೇಟು ಹಾಕುತ್ತಿದ್ದಂತಹ ಉತ್ತಮ ಗ್ರಂಥಗಳನ್ನೂ ಹಂಪನಾ ಅವರು

ಪ್ರೀತಿಯಿಂದ ಕೈಗೆತ್ತಿಕೊಂಡು. 'ಜೇಬಿ ಪುಸ್ತ ಬುಕ್' ಮಾಲೆಯಲ್ಲಿ ನೂರಾರು ಸಂಖ್ಯೆಯಲ್ಲಿ ಸಾಹಿತ್ಯ ಪರಿಷತ್ತಿನಿಂದ ಪ್ರಕಟಿಸಿದುದು. ೩) ತಮ್ಮ ಅಧ್ಯಕ್ಷಾವಧಿಯಲ್ಲಿ ಹಂಪನಾ ಅವರು ಆರೇಳು ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನಗಳನ್ನೂ ಹತ್ತಾರು ಜಿಲ್ಲಾ ಸಾಹಿತ್ಯ ಸಮ್ಮೇಳನಗಳನ್ನೂ ವಿಚಾರ ಸಂಕಿರಣಗಳನ್ನೂ ತುಂಬ ಯಶಸ್ವಿಯಾಗಿ ನಾಡಿನ ಹಲವೆಡೆಗಳಲ್ಲಿ ನಡೆಸಿದುದು. ಇದು ಸಾಧಾರಣ ಸಾಧನೆಯಲ್ಲವೆಂಬುದನ್ನು ಬಲ್ಲವರೇ ಬಲ್ಲರು. ಹಲವು ಹನ್ನೊಂದು ಬಗೆಯ ಸಾಹಿತಿಗಳನ್ನು ಪತ್ರಕರ್ತರನ್ನು ಹಾಗೂ ಸಾರ್ವಜನಿಕರನ್ನು ಮನವೊಲಿಸಿ, ಮೆಚ್ಚಿಸಿ, ಅವರನ್ನು ಸಮ್ಮಿಳನಗೊಳಿಸಿ. ಯಶಸ್ವಿಯಾಗಿ ಕಾರ್ಯಕ್ರಮಗಳನ್ನು ನಿರ್ವಹಿಸುವುದೆಂದರೆ ಕತ್ತಿಯ ಮೇಲೆ ನಡೆದಂತೆ. ಜೊತೆಗೆ ಅಖಿಲ ಭಾರತದ ಕನ್ನಡ ಸಾಹಿತ್ಯ ಸಮ್ಮೇಳನಗಳ ಮುಖ್ಯ ಕಾರ್ಯಕಲಾಪಗಳನ್ನು ಅನಂತರ ಅಚ್ಚುಕಟ್ಟಾಗಿ ಗ್ರಂಥ ರೂಪದಲ್ಲಿ ಪ್ರಕಟಿಸಿರುವುದು ಮೇಲಾದ ಇನ್ನೊಂದು ಸಾಧನೆ. ೪) ಇವೆಲ್ಲಕ್ಕಿಂತ ಮಹತ್ವದ ಅಂಶವೆಂದರೆ, ಹಂಪನಾ ಅವರು ತಮ್ಮ ಸಾರ್ವಜನಿಕ ಬದುಕಿನ ಇಷ್ಟೆಲ್ಲ ಗಡಿಬಿಡಿಯ ನಡುವೆಯೂ ಬಿಡುವು ಮಾಡಿಕೊಂಡು, ತಮ್ಮ ವಿದ್ವತ್ತು ಹಾಗೂ ಅಧ್ಯಾಪಕತ್ವವನ್ನು ಧಾರಾಳವಾಗಿ ಬಂದ ಹೊಗಳಿಕೆ ತೆಗಳಿಕೆಗಳಿಂದ ಹಿಗ್ಗಿ ಕುಗ್ಗಿ, ಸೊಕ್ಕಿ ಸೊರಗಿ, ಮುಗ್ಗಿ ಮೂಲೆ ಹಿಡಿಯದಂತೆ ಜಾಗ್ರತೆ ವಹಿಸಿದುದು. ತಾವು ಇಂದಿಗೂ ಶ್ರೇಷ್ಠ ಕನ್ನಡ ವಿದ್ವಾಂಸರೂ ಹೌದು ಎಂಬುದನ್ನು ಶ್ರೀಯುತರು ತಮ್ಮ ಹಲವು ಸಂಶೋಧನಾತ್ಮಕ ಲೇಖನಗಳು, ವಿದ್ವತ್ಪೂರ್ಣ ಉಪನ್ಯಾಸಗಳು ಹಾಗೂ ಭಾಷಣಗಳ ಮುಖಾಂತರ ತೋರಿಸಿಕೊಟ್ಟಿರುವುದು. ನಿದರ್ಶನಾರ್ಥವಾಗಿ, ಹಂಪನಾ ಅವರ 'ಕಮ್ಮಟದ ಕಿಡಿಗಳು' ಗ್ರಂಥವನ್ನು ಮೈಸೂರು ವಿಶ್ವವಿದ್ಯಾನಿಲಯದ ಅಂಚೆ ಮತ್ತು ತೆರಪಿನ ಶಿಕ್ಷಣ ಸಂಸ್ಥೆಯ ಕನ್ನಡ ಎಂ. ಎ. ತರಗತಿಗಳಿಗೆ, ನೇಮಿಚಂದ್ರ ಮೊದಲಾದ ಕವಿಗಳನ್ನು ಕುರಿತು ನೀಡಿದ ವಿಶೇಷೋಪನ್ಯಾಸಗಳನ್ನೂ ನೆನೆಯಬಹುದು. ಹೀಗೆ ಬಹುಮುಖಿ ಪ್ರತಿಭೆ ಶಕ್ತಿ ಸಾಮರ್ಥ್ಯಗಳನ್ನು ಮೆರೆದಿರುವ ಹಂಪನಾ ಅವರು ತಾವು ಕೈಗೊಂಡ ಯಾವುದೇ ಕೆಲಸವನ್ನಾದರೂ ಅಚ್ಚುಕಟ್ಟಾಗಿ ಮಾಡಿ ಮುಗಿಸಿ ಸೈ ಎನ್ನಿಸಿಕೊಳ್ಳುವುದರಲ್ಲಿ ಎತ್ತಿದ ಕೈ. ಇಂಥ ವಿಶಿಷ್ಟರ ವ್ಯಕ್ತಿತ್ವವನ್ನು ಮೆಚ್ಚಿ ಅಭಿನಂದನೆ ಸಲ್ಲಿಸುವುದು ಕನ್ನಡನಾಡಿಗರೆಲ್ಲರ ಹೆಮ್ಮೆಯ ಹೊಣೆ. ಅದಕ್ಕೆ ಎಲ್ಲ ಯಶಸ್ಸೂ ಕೂಡಿಬರಲಿ. ಸಮಸ್ತ ಕನ್ನಡಿಗರ ಬೆಂಬಲವೂ ಅವರಿಗಿರಲಿ.

**ಧರ್ಮಸ್ಥಳ ಸಾಹಿತ್ಯ ಸಮ್ಮೇಳನ ೧೯೭೯ :** ಎಂಬುದು ಒಂದು ಸಾಹಿತ್ಯ ಸಮ್ಮೇಳನ ಸಂಪುಟದ ಶೀರ್ಷಿಕೆ. ಅದರ ಮುಖಪುಟದ ಮೇಲೆ ಓಲೆಯ ಗ್ರಂಥ ಹಾಗೂ ಅಚ್ಚಾದ ಆಧುನಿಕ ಗ್ರಂಥ ಮತ್ತು ಗ್ರಥನ ಸಾಮಗ್ರಿಗಳಾದ ಮಸಿಕುಡಿಕೆ, ಲೇಖನಿ, ಪೆನ್ನುಗಳುಳ್ಳ ಅರ್ಥವತ್ತಾದ ನಕಾಶೆ. ಪ್ರಕಾಶನ ಸಂಸ್ಥೆ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು. ಈ ಗ್ರಂಥ ಪ್ರಕಟವಾಗಿರುವುದು

೧೯೮೦ರಲ್ಲಿ. ೪೬೦ಕ್ಕೂ ಹೆಚ್ಚಿನ ಮುದ್ರಿತ ಪುಟಗಳನ್ನೂ ಹಲವು ಸಾಂದರ್ಭಿಕ ಭಾವಚಿತ್ರಗಳನ್ನೂ ಒಳಗೊಂಡಿರುವ ಈ ಆಕರ್ಷಕ ಕೃತಿಗೆ ಹಂಪ. ನಾಗರಾಜಯ್ಯನವರು ಬರೆದಿರುವ ಮುನ್ನುಡಿ ಭಾಗವು ಅನೇಕ ನಿಟ್ಟಿನಿಂದ ಮಹತ್ವದ್ದಾಗಿದೆ. ಎಂತಲೇ ಅದರ ಕೆಲವು ಭಾಗಗಳು ಉದ್ಧರಣಾರ್ಹವಾಗಿವೆ :

"೧೯೧೫ನೇ ಇಸವಿಯಲ್ಲಿ ಪ್ರಾರಂಭವಾದ ಕನ್ನಡ ಸಾಹಿತ್ಯ ಪರಿಷತ್ತು ಇದುವರೆಗೆ ೫೧ ಕನ್ನಡ ಸಾಹಿತ್ಯ ಸಮ್ಮೇಳನಗಳನ್ನು ಏರ್ಪಾಡು ಮಾಡಿದೆ. **೬೪ ವರ್ಷಗಳ ಅವಧಿಯಲ್ಲಿ ನಡೆದಿರುವ ಈ ಸಾಹಿತ್ಯ ಸಮ್ಮೇಳನಗಳ ಒಟ್ಟು ಕಾರ್ಯ ಕಲಾಪಗಳು ಒಂಡೆಡೆ ಪ್ರತ್ಯೇಕವಾಗಿ ಪುಸ್ತಕ ರೂಪದಲ್ಲಿ ಇದುವರೆಗೂ ಒಮ್ಮೆಯೂ ಪ್ರಕಟವಾಗಿಲ್ಲ. ಈ ಕೊರತೆಯನ್ನು ಹೋಗಲಾಡಿಸಲು ಮೊಟ್ಟ ಮೊದಲ ಬಾರಿಗೆ ೧೯೭೯ನೇ ಇಸವಿ ಮಾರ್ಚಿ ತಿಂಗಳು........ಧರ್ಮಸ್ಥಳದಲ್ಲಿ ನಡೆದ ಅಖಿಲ ಭಾರತ ೫೧ನೆಯ ಕನ್ನಡ ಸಾಹಿತ್ಯ ಸಮ್ಮೇಳನ ಕಲಾಪಗಳನ್ನು ಒಂದು ಪುಸ್ತಕ ರೂಪದಲ್ಲಿ ಹೊರ ತರುತ್ತಿದ್ದೇನೆ.*** ವಿವಿಧ ಗೋಷ್ಠಿಗಳಲ್ಲಿ ಭಾಗವಹಿಸಿ, ವಿದ್ವತ್ಪೂರ್ಣ ಪ್ರಬಂಧಗಳನ್ನು ಮಂಡಿಸಿರುವ ವಿದ್ವಾಂಸರುಗಳ ಚಿಂತನೆಗಳು ಗಾಳಿಯಲ್ಲಿ ಆವಿಯಾಗಿ ಹೋಗಬಾರದೆಂಬ ಕಳಕಳಿಯಿಂದ ಕೈಗೊಂಡಿರುವ ಈ ಪ್ರಯತ್ನವನ್ನು ಸಾಹಿತ್ಯಾಭಿಮಾನಿಗಳು ಸಂತೋಷದಿಂದ ಸ್ವಾಗತಿಸುತ್ತಾರೆಂಬ ವಿಶ್ವಾಸ ನನಗಿದೆ.

ಶ್ರಮವಹಿಸಿ ಸಿದ್ಧಪಡಿಸಿರುವ ಈ ಪುಸ್ತಕದಲ್ಲಿ ಯಾವ ಭಾಷಣವೂ ಕವನವೂ ಕೈಬಿಟ್ಟು ಹೋಗದ ಹಾಗೆ ಆದಷ್ಟು ಪ್ರಾಮಾಣಿಕವಾಗಿ ಪ್ರಯತ್ನಿಸಲಾಗಿದೆ. ಇಡೀ ಸಮ್ಮೇಳನದ ಕಾರ್ಯ ಕಲಾಪಗಳನ್ನು ಧ್ವನಿಮುದ್ರಿಸಿಕೊಂಡಿದ್ದುದರಿಂದ ಈ ಕೆಲಸ ಸಾಧ್ಯವಾಗಿದೆ......"

ಹೀಗೆ ಹಂಪನಾ ಅವರು ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾದ ಮೇಲೆ ಕೈಗೊಂಡ ಇಂಥ ಸ್ತುತ್ಯ ಪ್ರಪ್ರಥಮ ಕಾರ್ಯದ ಫಲವಾಗಿ, ಈಗ ಆ ಬಗೆಯ ಏಳು ಸಾಹಿತ್ಯ ಸಮ್ಮೇಳನಗಳ ಕಾರ್ಯಕಲಾಪಗಳು ಗ್ರಂಥರೂಪದಲ್ಲಿ ಅಚ್ಚಾಗಿದ್ದು. (ಅಚ್ಚಾಗುತ್ತಿದ್ದು). ಆ ಎಲ್ಲ ಸಮ್ಮೇಳನಗಳಲ್ಲಿಯೂ ಭಾಗಿಯಾಗದವರು ವಿರಾಮವಾಗಿ ಕುಳಿತು, ಆ ಮೇಳಗಳಲ್ಲಿ ನಡೆದ ವಿವಿಧ ವಿಚಾರಗಳನ್ನು ಓದಿ ತಿಳಿಯಲು ಸಹಾಯಕವಾಗಿದೆ. ಈ ಒಂದು ಸಾಧನೆಗಾಗಿಯೇ ಹಂಪನಾ ಅವರನ್ನು ಎಷ್ಟೋ ಕೊಂಡಾಡಬೇಕಾಗುತ್ತದೆ.

ಧರ್ಮಸ್ಥಳ ಸಾಹಿತ್ಯ ಸಮ್ಮೇಳನದ ಬಹುವಿಧ ಕಾರ್ಯಕ್ರಮಗಳ ಪೈಕಿ, ಮೊದಲಲ್ಲಿ ಸಾಂಪ್ರದಾಯಿಕವೆನ್ನಬಹುದಾದ ಸ್ವಾಗತ ಸಮಿತಿಯ ಅಧ್ಯಕ್ಷರ,

---

* ಮೇಲಿನ ವಾಕ್ಯಗಳ ಮೇಲಿನ ಒತ್ತು ನನ್ನದು.

ಪರಿಷತ್ತಿನ ಅಧ್ಯಕ್ಷರ ಭಾಷಣಗಳೂ ಹಿಂದಿನ ಸಮ್ಮೇಳನದ ಅಧ್ಯಕ್ಷರ, ಪ್ರಕೃತ ಸಮ್ಮೇಳನಾಧ್ಯಕ್ಷರ ಹಾಗೂ ಉದ್ಘಾಟಕರ ಭಾಷಣಗಳೂ ಪ್ರಕಟವಾಗಿವೆ. ಕೆಲವಿನ ಸಂಚಿಕೆಗಳ ಬಿಡುಗಡೆಯ ಭಾಷಣಗಳೂ ಇಲ್ಲಿವೆ. ಹೀಗೆ ಹೀರಿಕಾ ರೂಪದ ಪ್ರಾಸ್ತಾವಿಕ ಭಾಷಣಗಳೂ ಉದ್ಘಾಟನೆಗಳೂ ವಿವಿಧ ಘೋಷಣೆಗಳೂ ಒಂದು ಸಾಹಿತ್ಯಕ ಬೃಹದುತ್ಸವದಲ್ಲಿ ಇರುವಂಥವೇ. ಅವುಗಳನ್ನು ಓದಿದಾಗ, ಕನ್ನಡ ಸಾಹಿತ್ಯ, ಭಾಷಾಕ್ಷೇತ್ರಗಳಲ್ಲಿ ಆಗಬೇಕಾಗಿರುವ ಮಹತ್ತರ ಕಾರ್ಯಗಳತ್ತ ಕಾಳಜಿಯ ಧ್ವನಿಗಳು ಮೊಳಗಿ, ಸಂಬಂಧಪಟ್ಟವರು ಜಾಗೃತರಾಗಿ ಕಾರ್ಯ ಪ್ರವೃತ್ತರಾಗುವಂತೆ ನೀಡಿದ ಕರೆ ನಮ್ಮ ಕಿವಿಗೂ ಮುಟ್ಟಿ, ನಾವು ಜಾಗೃತರಾಗಿ, ಆ ನಿಟ್ಟಿನಲ್ಲಿ ವಿಚಾರ ಮಾಡುವಂತೆ ಪ್ರೇರೇಪಿಸುತ್ತವೆ.

ಭಾಷಣ ರೂಪದ ಲೇಖನಗಳು ಮುಂದಿನ ವಿವಿಧ ಗೋಷ್ಠಿಗಳಲ್ಲಿ ಮಂಡಿತ ವಾಗಿರುವುದು ಕಾಣಬರುತ್ತದೆ. ಭಾಷಾ ಬಾಂಧವ್ಯ, ದಲಿತ ಸಾಹಿತ್ಯ ಮತ್ತು ಚಳುವಳಿಗಳು, ಶಿಶುಸಾಹಿತ್ಯ, ಕವಿಗೋಷ್ಠಿ, ಆಡಳಿತ ಭಾಷೆ, ಸಾಹಿತ್ಯ ಮತ್ತು ಚಲನಚಿತ್ರ—ಹೀಗೆ ವೈವಿಧ್ಯಪೂರ್ಣವಾಗಿರುವ ವಸ್ತುಗಳನ್ನು ಕುರಿತು ಖ್ಯಾತ ನಾಮರಾದ ಹಲವು ಮಂದಿ ವಿದ್ವಾಂಸರು, ಚಿಂತಕರು, ವಿಮರ್ಶಕರು ತಮ್ಮ ವಿಚಾರಗಳನ್ನು ಮಂಡಿಸಿರುವ ರೀತಿ ಯುಕ್ತವಾಗಿದೆ.

ಈ ವ್ಯವಸ್ಥೆಯಲ್ಲಿ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾಗಿದ್ದ ಹಂಪ. ನಾಗರಾಜಯ್ಯ ನವರ ಪಾತ್ರ ಸೂತ್ರಧಾರನದು. ಮೇಲೆ ಸೂಚಿಸಲಾದ ವಿವಿಧ ವಿಷಯಕ ಗೋಷ್ಠಿಗಳಿಗೆ ಪ್ರತಿಷ್ಠಿತರೂ ಹಿರಿಯರೂ ಆದ ಶಿವರಾಮ ಕಾರಂತ, ಮಾಸ್ತಿ. ವಿ. ಎಸ್. ಮೂರ್ತಿರಾವ್, ಬಸವರಾಜ ಕಟ್ಟೀಮನಿ, ಜಿ. ಪಿ. ರಾಜರತ್ನಂ. ಎಂ. ಗೋಪಾಲಕೃಷ್ಣ ಅಡಿಗ, ತೆಕ್ಕುಂಜೆ ಗೋಪಾಲಕೃಷ್ಣ ಭಟ್ಟ-ಇತ್ಯಾದಿಗಳನ್ನಲ್ಲದೆ, ಹಾ. ಮಾ. ನಾಯಕ, ಜಿ. ಎಚ್. ನಾಯಕ, ಯು. ಆರ್. ಅನಂತಮೂರ್ತಿ. ಚಂದ್ರಶೇಖರ ಕಂಬಾರ. ಲಂಕೇಶ್, ಎಂ. ಟಿ. ವಾಸುದೇವನ್ ನಾಯರ್, ಬಿ. ವಿ. ಕಾರಂತ, ತ. ರಾ. ಸು., ಬಿ. ಜಿ. ಎಲ್. ಸ್ವಾಮಿ—ಇವರೇ ಆದಿಯಾದವರನ್ನು ತೊಡಗಿಸಿ, ಅವರಿಂದ ವಿಚಾರ ಪ್ರಚೋದಕ ವಿಷಯಗಳು ಚರ್ಚೆಗೆ ಬರುವಂತೆ ಮಾಡುವ ಯೋಜನೆ, ಕಾರ್ಯಸಾಧನೆ ಹಂಪನಾ ಅವರದು. ಈ ಸಾಹಿತ್ಯ ಸಮ್ಮೇಳನ ಗಳಲ್ಲಿ ಮಂಡಿತವಾಗಿರುವ ಸಂಗತಿಗಳನ್ನು ಓದುತ್ತ, ಅವು ಜೀವಂತ ಗೋಷ್ಠಿಗಳಲ್ಲಿ ಪ್ರಸ್ತಾಪಿಸಲಾಗಿರುವುದನ್ನು ಕಲ್ಪಿಸಿಕೊಂಡಾಗ, ನಿಜವಾಗಿಯೂ ನಾವೂ ಮಾನಸಿಕವಾಗಿ ಅವುಗಳಲ್ಲಿ ಪಾಲ್ಗೊಂಡಂತಹ ಅನುಭವವಾಗುತ್ತದೆ.

ಇನ್ನು ಈ ಗ್ರಂಥದಲ್ಲಿ ಅಚ್ಚಾಗಿರುವ ಒಂದೊಂದು ಲೇಖನವನ್ನೂ ಕವಿತೆಯನ್ನೂ ಎತ್ತಿಕೊಂಡು ಪ್ರಸ್ತಾಪಿಸುವುದು ಅನವಶ್ಯ ಅಷ್ಟೇ ಅಲ್ಲ, ಅಪ್ರಸ್ತುತವೂ

ಆದೀತು. ಲೇಖನಗಳೇ ಕಣ್ಣೆದುರಿಗೆ ಇದ್ದು, ಅವು ಮನಃಪಟಲದ ಮೇಲೆ ಹಾಯ್ದು ಹೋಗುವಾಗ ವ್ಯಾಖ್ಯಾನದ ಮರು ಹಂಗೇಕೆ ?

ಒಟ್ಟಿನ ಮೇಲೆ ಹೇಳುವುದಾದರೆ, ಧರ್ಮಸ್ಥಳದ ಸಾಹಿತ್ಯ ಸಮ್ಮೇಳನ ತುಂಬ ಯಶಸ್ವಿಯಾದುದಕ್ಕೆ ಧರ್ಮಸ್ಥಳದ ವೀರೇಂದ್ರ ಹೆಗ್ಗಡೆಯವರಿಗೆ ಗೌರವ ಸಲ್ಲುವಂತೆಯೇ, ಅದನ್ನು ಯೋಜಿಸಿ, ಅಚ್ಚುಮಾಡಿ, ಆ ಕಾರ್ಯಕಲಾಪಗಳನ್ನು ಕ್ರಮವತ್ತಾಗಿ ಪ್ರಕಟಪಡಿಸಲು ಶ್ರಮಿಸಿದ ಮುಖ್ಯ ಸಂಪಾದಕರಾದ ಹಂಪನಾ ಅವರಿಗೂ ಅವರ ಸಹಾಯಕರಾದ ಸಿಬ್ಬಂದಿ ವರ್ಗಕ್ಕೂ ಕ್ರೆಡಿಟ್ ಸಿಗಬೇಕು, ಸಿಕ್ಕಿದೆ.

ಅಚ್ಚುಕಟ್ಟಾದ ಮುದ್ರಣ, ಅಚ್ಚಿನ ತಪ್ಪಿಲ್ಲದ ಎಚ್ಚರವಂತಿಕೆ, ಗ್ರಂಥದ ಕೊನೆಗೆ ಆಯ್ದ ಕೆಲವು ಸಮ್ಮೇಳನ ಸಂದರ್ಭಗಳಿಗೆ ಸಂಬಂಧಿಸಿದ ಛಾಯಾಚಿತ್ರಗಳು ಇವೆಲ್ಲವೂ ಒಪ್ಪವಾಗಿವೆ, ಆಕರ್ಷಕವಾಗಿ ಹೊಂದಿ ಬಂದಿವೆ. ಇದೆಲ್ಲದರ ಹಿಂದೆ ಹಂಪನಾ ಅವರ ಶ್ರಮ, ಶ್ರದ್ಧೆ ಮತ್ತು ಉತ್ಸಾಹಗಳ ದುಡಿಮೆ ಇದೆ. ಎಂತಲೇ ಎಲ್ಲವೂ ಪಾಂಕ್ತ, ಸಾರ್ಥಕ.

೧೯೮೧ ರ ಸಾಲಿನಲ್ಲಿ ಎರಡು ಕನ್ನಡ ಸಾಹಿತ್ಯ ಸಮ್ಮೇಳನಗಳು ಜರುಗಿರುವುದೊಂದು ಅಪೂರ್ವ ದಾಖಲೆ. ೮೧ ರ ಮಾರ್ಚಿಯಲ್ಲಿ ಚಿಕ್ಕಮಗಳೂರಿನಲ್ಲಿ ಒಂದು ಸಮ್ಮೇಳನ ಏರ್ಪಟ್ಟಿದ್ದಿತು ; ಅದೇ ನವೆಂಬರಿನಲ್ಲಿ ಮಡಿಕೇರಿಯಲ್ಲಿ ಮತ್ತೊಂದು ಸಮ್ಮೇಳನ ಜರುಗಿತು. ಅದಕ್ಕೂ ಮೊದಲು, ೧೯೮೦ ರ ಫೆಬ್ರವರಿಯಲ್ಲಿ ಬೆಳಗಾವಿಯಲ್ಲಿ ೫೨ ನೆಯ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನ ಜರುಗಿತು. ಆ ಕಾರ್ಯಕಲಾಪಗಳನ್ನೊಳಗೊಂಡ ಗ್ರಂಥವೂ ಪ್ರಕಟವಾಗಿದೆ. ಆದರೆ ಅದರ ಪ್ರತಿಯು ನನಗೆ ದೊರೆಯದೆ ಹೋದುದರಿಂದ ಆ ಬಗೆಗೆ ಮೌನವಹಿಸಬೇಕಾಗಿದೆ.

ಈ ಗ್ರಂಥಗಳನ್ನು ವಿದ್ವಾಂಸರು ಮೆಚ್ಚಿ ಮಾನ್ಯ ಮಾಡಿರುವುದನ್ನು ಸ್ಮರಿಸುತ್ತ ೫೩ನೆಯ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನವು ಚಿಕ್ಕಮಗಳೂರಿನಲ್ಲಿ ನಡೆದದ್ದರ ಬಗ್ಗೆ ಪ್ರಕಟವಾಗಿರುವ 'ಚಿಕ್ಕಮಗಳೂರು ಸಾಹಿತ್ಯ ಸಮ್ಮೇಳನ-೧೯೮೧' ಎಂಬ ಗ್ರಂಥವನ್ನು ಪರಿಶೀಲಿಸಬಹುದು.

ಈ ಕೃತಿಯ ಮುನ್ನುಡಿಯಲ್ಲಿ ಹಂಪನಾ ಅವರು, ಈ ಹಿಂದಿನ ಕೃತಿಗಳ ಅರೆಕೊರೆಗಳನ್ನು ನಿವಾರಿಸಿಕೊಂಡು, ಮುಂದಿನ ಸಂಪುಟಗಳನ್ನು ಸಿದ್ಧಪಡಿಸಿರುವುದಾಗಿಯೂ ಇವುಗಳ ಉತ್ತಮಿಕೆಗೆ ಬರುವ ಸಲಹೆ ಸೂಚನೆಗಳಿಗೆ ಸ್ವಾಗತವಿದೆ ಎಂಬುದಾಗಿಯೂ ಮನವಿ ಮಾಡಿಕೊಂಡಿದ್ದಾರೆ.

ಗ್ರಂಥದ ಪರಿವಿಡಿಯಲ್ಲಿ ಸ್ವಾಗತ ಸಮಿತಿಯ ಅಧ್ಯಕ್ಷರ ಹಾಗೂ ಹಿಂದಿನ ಸಮ್ಮೇಳನಾಧ್ಯಕ್ಷರ ಭಾಷಣಗಳೂ ಇತರ ಸಾಂಪ್ರದಾಯಕ ಉದ್ಘಾಟನಾ ಸಮಾರಂಭದ ಭಾಷಣಗಳೂ ಸೂಚಿತವಾಗಿವೆ. ಚಿಕ್ಕಮಗಳೂರು ಸಾಹಿತ್ಯ ಸಮ್ಮೇಳನಾಧ್ಯಕ್ಷರು

ವ್ಯ. ತಿ. ನರಸಿಂಹಾಚಾರ್ಯರು. ಅನಂತರ ಜರುಗಿದ ವಿವಿಧ ಗೋಷ್ಠಿಗಳ ಪೈಕಿ ಮೊದಲನೆಯದಾಗಿ ನಾಟಕ ಗೋಷ್ಠಿ ಇದೆ. ಅದರ ಉದ್ಘಾಟನೆಯನ್ನು ಹಿರಿಯ ನಾಟಕಕಾರರಾದ ಶ್ರೀರಂಗರು ಮಾಡಿದ್ದು, ಅನಂತರ ಮಾಸ್ಟರ್ ಹಿರಣ್ಣಯ್ಯ, ಸಾ. ತಿ. ಮರುಳಯ್ಯ, ವಿಜಯಾ, ಚಂದ್ರಕಾಂತ ಕುಸನೂರ—ಇವರು ನಾಟಕರಂಗದ ವಿವಿಧ ಮುಖಗಳನ್ನು ಕುರಿತು ಪ್ರಸ್ತಾಪಿಸಿದ ಭಾಷಣಗಳು ಇಲ್ಲಿವೆ.

ಅದರ ಮುಂದಿನದಾದ 'ಸಾಹಿತ್ಯ ಗೋಷ್ಠಿ'ಯ ಉದ್ಘಾಟನೆಯು ರಂ. ಶ್ರೀ. ಮುಗಳಿಯವರಿಂದಾಗಿದ್ದು, ಎಸ್. ಎಲ್. ಭೈರಪ್ಪ, ಸದಾನಂದ ನಾಯಕ, ಬುದ್ಧಣ್ಣ ಹಿಂಗಮಿರೆ—ಇವರು ಸಂಶೋಧನೆ ಮತ್ತು ಕಾವ್ಯ ಕ್ಷೇತ್ರಗಳನ್ನು ಕುರಿತು ಮಂಡಿಸಿದ ವಿಚಾರಗಳು ಅಚ್ಚಾಗಿವೆ.

ಅನಂತರ ನಡೆದ 'ದಲಿತ ಸಾಹಿತ್ಯ ಗೋಷ್ಠಿ'ಯ ಉದ್ಘಾಟನೆಯನ್ನು ಕಮಲಾ ಹಂಪನಾ ಅವರು ಮಾಡಿದ್ದು, ಅದರ ಅಧ್ಯಕ್ಷ ಭಾಷಣವನ್ನು ಅನುಪಮ ನಿರಂಜನ ಅವರು ಮಾಡಿದ್ದಾರೆ. ಅನಂತರ ಕನ್ನಡದಲ್ಲಿ ಹಾಗೂ ನೆರೆಹೊರೆಯ ನಾಡುಗಳಲ್ಲಿ ದಲಿತ ಸಾಹಿತ್ಯ ಸೃಷ್ಟಿ ಹೇಗೆ ಆಗಿದೆ, ಎಂಬುದರ ಪ್ರಸ್ತಾಪವನ್ನು ಮಾಡಿರುವ ಸಿ. ವೀರಣ್ಣನವರು ಕನ್ನಡದಲ್ಲಿ ದಲಿತ ಸಾಹಿತ್ಯದ ಸ್ವರೂಪವನ್ನೂ ರಾಮಚಂದ್ರ ಉಚ್ಚಿಲ್ ಮರಾಠಿಯ ದಲಿತ ಸಾಹಿತ್ಯವನ್ನೂ ಡಾ॥ ಬಿ. ಕೆ. ತಿಮ್ಮಪ್ಪನವರು ಮಲಯಾಳದ ದಲಿತ ಸಾಹಿತ್ಯವನ್ನೂ ಆರ್ವೀಯಸ್ ಸುಂದರಂ ಅವರು ತೆಲುಗಿನ ದಲಿತ ಸಾಹಿತ್ಯದ ಸ್ವರೂಪವನ್ನೂ ಪರಿಚಯಿಸಿದ್ದಾರೆ.

'ಸಾಹಿತ್ಯ ಮತ್ತು ಇತರ ಕಲೆಗಳು' ಎಂಬ ಮತ್ತೊಂದು ಗೋಷ್ಠಿಯನ್ನು ಶಿವರಾಮ ಕಾರಂತರು ಅಧ್ಯಕ್ಷರಾಗಿ ನಿರ್ವಹಿಸಿದ್ದಾರೆ. ಅನಂತರ ಸಾಹಿತ್ಯ ಮತ್ತು ಕಲೆಗಳಿಗಿರುವ ಬಾಂಧವ್ಯವನ್ನು ಕುರಿತು ಜಿ. ಆರ್. ತಿಪ್ಪೇಸ್ವಾಮಿ, ಅ. ಸುಂದರ, ಕೆ. ವಿ. ಆಚಾರ್, ಜಿ. ವೈ. ಹುಬ್ಳೀಕರ್—ಇವರು ಪ್ರಸ್ತಾಪಿಸಿ ಪ್ರಬಂಧಗಳನ್ನು ಮಂಡಿಸಿದ್ದಾರೆ. ಅನಂತರ 'ಜನಪದ ಸಾಹಿತ್ಯ ಗೋಷ್ಠಿ' ಜರುಗಿದ್ದು, ಅದರಲ್ಲಿ ದೇ. ಜವರೇಗೌಡ, ಕೆ. ಆರ್. ಲಿಂಗಪ್ಪ, ಕೃಷ್ಣಮೂರ್ತಿ ಹನೂರ ಹಾಗೂ ಎಂ. ಎ. ಜಯಚಂದ್ರರು ಮಂಡಿಸಿರುವ ಜನಪದ ಸಾಹಿತ್ಯಕ ಸಂಗತಿಗಳಿಗೆ ಸಂಬಂಧಿಸಿದ ಪ್ರಬಂಧಗಳಿವೆ. 'ಕವಿಗೋಷ್ಠಿ'ಯು ಒಟ್ಟು ೧೫ ಕವಿಗಳ ವಿವಿಧ ವಸ್ತು, ಛಂದಸ್ಸನ್ನುಳ್ಳ ವಿಚಾರ ಪ್ರಚೋದಕ ವಿಷಯಗಳನ್ನು ಕುರಿತ ಕವಿತೆಗಳನ್ನೊಳಗೊಂಡಿದೆ.

ಅನಂತರ 'ನಾನೇಕೆ ಈ ಪ್ರಕಾರದಲ್ಲಿ ಬರೆಯುತ್ತೇನೆ'–ಎಂಬ ಶೀರ್ಷಿಕೆಯಲ್ಲಿ ವಿ. ಎಂ. ಇನಾಂದಾರ್, ಸುಧಾಕರ, ಎಸ್. ಎಸ್. ಲಕ್ಷ್ಮೀನಾರಾಯಣಭಟ್ಟ ಹಾಗೂ ಚಂದ್ರಶೇಖರ ಕಂಬಾರರು ಕಥೆ, ಕಾವ್ಯ, ಕಾದಂಬರಿ ಹಾಗೂ ನಾಟಕ ಪ್ರಕಾರಗಳಲ್ಲಿ

ತಾವು ಬರೆಯುತ್ತಿರುವುದೇಕೆ, ಎಂಬುದನ್ನು ಸ್ವಾರಸ್ಯಪೂರ್ಣವಾಗಿ ವಿವರಿಸಿರುವುದು ಕಂಡುಬರುತ್ತದೆ.

ಚಿಕ್ಕಮಗಳೂರು ಸಾಹಿತ್ಯ ಸಮ್ಮೇಳನ ಸುಗಮವಾಗಿ ನೆರವೇರಿದ್ದಕ್ಕೆ ಸಾಕ್ಷಿಗಳಿವೆ. ಆದರೂ ಆಕ್ಷೇಪಣೆಗಳಿಗೆ ಎಂದೂ ಬರವಿಲ್ಲ. ಈ ಬಗೆಗೆ ಸ್ವಾಗತ ಭಾಷಣ ಮಾಡುತ್ತ ಹಂಪನಾ ಅವರು ಆಡಿರುವ ನುಡಿಗಳು ಗಮನಾರ್ಹವಾಗಿವೆ :

"ಸಾಹಿತ್ಯ ಸಮ್ಮೇಳನದ ಏರ್ಪಾಟು ಹಿಂದಿನಂತೆ ಇಂದು ಸುಲಭ ಸಾಧ್ಯವಾಗಿರದೆ, ಜಟಿಲವಾಗಿದೆ; ಸಂಕೀರ್ಣವಾಗಿದೆ. ಯಾವ ರೀತಿಯಲ್ಲಿ ಸಮ್ಮೇಳನವನ್ನು ಸಜ್ಜುಗೊಳಿಸಿದರೂ ಆರೋಪಗಳಿಗೆ ಅವಕಾಶ ಇದ್ದೇ ಇರುತ್ತದೆ. ಹಿರಿಯ ಸಾಹಿತಿಗಳನ್ನು ಕರೆಸಿದರೆ 'ಕೇವಲ ಹಳಬರಿಗೇ ಅವಕಾಶ ಕೊಡುತ್ತೀರಿ, ಅದೇ ಹಳೆಯ ಮುಖಗಳನ್ನು ಪ್ರತಿ ಸಮ್ಮೇಳನದಲ್ಲೂ ನೋಡಬೇಕಾಗುತ್ತದೆ' ಎಂದು ಆಕ್ಷೇಪಿಸುತ್ತಾರೆ. ಹೊಸಬರಿಗೆ ಅವಕಾಶ ಕೊಟ್ಟರೆ ಆಗಲೂ ಆಕ್ಷೇಪಣೆ ತಪ್ಪಿದ್ದಲ್ಲ. 'ಎಲ್ಲಾ ಹೊಸಬರನ್ನೇ ಕರೆಸಿದ್ದಾರೆ; ಹಿರಿಯರೇ ಇಲ್ಲ' ಎಂದು ದೂರುತ್ತಾರೆ."

ಇಂಥ ದೂರು ದೂಷಣೆ, ಅಭಿನಂದನೆ ಸಂತೃಪ್ತಿ ಅತೃಪ್ತಿಗಳು ಉದ್ದಕ್ಕೂ ವ್ಯಕ್ತವಾಗುತ್ತಿದ್ದರೂ ಬಿಡದೆ, ಸಾಹಿತ್ಯ ಸಮ್ಮೇಳನಗಳನ್ನು ಅಚ್ಚುಕಟ್ಟಾಗಿ ನಡೆಸಿಕೊಂಡು ಬಂದ ಕೀರ್ತಿಶಾಲಿ ಹಂಪನಾ. ಅವರು ತಮ್ಮ ಅಧ್ಯಕ್ಷ ಭಾಷಣದಲ್ಲಿ ತಮ್ಮ ಅಧ್ಯಕ್ಷಾವಧಿಯ ಕಳೆದ ಎರಡೂವರೆ ವರ್ಷಗಳಲ್ಲಿ ಸಾಹಿತ್ಯ ಪರಿಷತ್ತಿನ ಮುಖಾಂತರ ಸಾಧಿಸಿ ತೋರಿದ ಬಹು ಬಗೆಯ ಸಮ್ಮೇಳನ ಹಾಗೂ ಗೋಷ್ಠಿಗಳ ದೊಡ್ಡಪಟ್ಟಿಯನ್ನೇ ಒದಗಿಸಿದ್ದಾರೆ (ಪುಟ ೯). ಅನಂತರ ಅವರು ಕನ್ನಡ ಭಾಷೆ ಹಾಗೂ ಸಾಹಿತ್ಯ ಕ್ಷೇತ್ರಗಳಲ್ಲಿ ಆಗುತ್ತಿರುವ ಅಪಚಾರ, ಅನ್ಯಾಯ ಹಾಗೂ ಬೇಜವಾಬ್ದಾರಿಗಳನ್ನು ಬಯಲಿಗೆಳೆದು, ಕನ್ನಡಿಗರು ಜಾಗ್ರತರಾಗಿ ಮುನ್ನಡೆಯಬೇಕಾಗಿ ಕರೆ ನೀಡಿರುವುದೂ ಗಮನಾರ್ಹ.

ಹೀಗೆ ಸರ್ವಾಂಗ ಸುಂದರವಾಗಿ, ವಿಚಾರ ಪ್ರಚೋದಕ ವಿಷಯಗಳ ರಸಬುತ್ತಿಯಾಗಿರುವ ಚಿಕ್ಕಮಗಳೂರು ಸಾಹಿತ್ಯ ಸಮ್ಮೇಳನ ಕುರಿತ ಸಂಪುಟವು ೪೫೦ ಪುಟಗಳಷ್ಟು ವಿಸ್ತಾರವಾಗಿದ್ದು, ಬೆಲೆಯುಳ್ಳ ಕೃತಿಯಾಗಿದೆ. ಇದರ ಲೇಖನಗಳನ್ನು ಓದುತ್ತ ಪರ್ಯಾಲೋಚಿಸಿದಂತೆಲ್ಲ ನಾವೂ ಆ ಸಮ್ಮೇಳನದಲ್ಲಿ ಓಡಾಡುತ್ತ ಪಾಲ್ಗೊಂಡ ಅನುಭವ ಉಂಟಾಗುತ್ತದೆ.

೧೯೮೧ನೆಯ ಸಾಲಿನಲ್ಲಿಯೇ ಜರುಗಿದ 'ಮಡಿಕೇರಿ ಸಾಹಿತ್ಯ ಸಮ್ಮೇಳನ'ವು ಅಖಿಲ ಭಾರತ ೫೪ನೆಯ ಕನ್ನಡ ಸಾಹಿತ್ಯ ಸಮ್ಮೇಳನವಾಗಿದೆ. ಆ ಚಿತ್ರ ಸುಂದರ ಸಂಪುಟವು ೮೨ರ ಡಿಸೆಂಬರಿನಲ್ಲಿ ಪ್ರಕಟವಾಗಿದೆ. ಈ ಸಮ್ಮೇಳನಾಧ್ಯಕ್ಷರು

ಶಂಬಾ ಜೋಶಿ ಅವರು. ಇವರ ಹಾಗೂ ಇತರ ಮುಖ್ಯ ಸಾಹಿತಿಗಳ ಭಾಷಣಗಳು ಸಾಂಪ್ರದಾಯಿಕವಾಗಿ ಗ್ರಂಥದ ಮೊದಲಲ್ಲಿ ಪ್ರಕಟವಾಗಿವೆ.

ಅನಂತರ ಸಾಹಿತ್ಯ ಸಮೀಕ್ಷಕ ಗೋಷ್ಠಿ, ಸಮೂಹ ಮಾಧ್ಯಮ ಗೋಷ್ಠಿ, ಕೊಡಗಿನ ಹಿರಿಮೆ ಕುರಿತ ಗೋಷ್ಠಿ, ಕವಿ ಗೋಷ್ಠಿ, ಆಡಳಿತ ಭಾಷಾ ಗೋಷ್ಠಿ, ವಿಚಾರ ವಾಙ್ಮಯ ಗೋಷ್ಠಿ–ಈ ಕ್ರಮದಲ್ಲಿ ಹಲವು ಗೋಷ್ಠಿಗಳು ಜರುಗಿ, ಪ್ರಸ್ತಾಪಿತವಾದ ಸಂಗತಿಗಳ ಮಾಹಿತಿ ಪೂರ್ಣವಾಗಿ ದೊರೆಯುತ್ತದೆ.

ಈ ಎಲ್ಲ ವಿಚಾರಗಳನ್ನೊಳಗೊಂಡ ಗ್ರಂಥವು ೫೭೦ ಪುಟದಷ್ಟು ವಿಸ್ತಾರವಾಗಿ ವೈವಿಧ್ಯಮಯವಾಗಿ ಆಕರ್ಷಕವಾಗಿ ಪ್ರಕಟವಾಗಿರುವುದು ಮೆಚ್ಚಬೇಕಾದ ವಿಷಯ. ಈ ಗ್ರಂಥವನ್ನು ತೆರೆದು ಓದತೊಡಗಿದಾಗ, ಶಂಬಾ ಜೋಶಿಯವರು, ದಿ॥ ರಾವ ಬಹಾದ್ದೂರ, ಗಿರಡ್ಡಿ ಗೋವಿಂದರಾಜ, ಶಂಕರ ಮೊಕಾಶಿ ಪುಣೇಕರ, ಯಶವಂತ ಚಿತ್ತಾಲ, ಎಸ್. ಕೆ. ರಾಮಚಂದ್ರರಾವ್, ಕೆ. ಕುಶಾಲಪ್ಪಗೌಡ, ಕೆ. ರಾಮಕೃಷ್ಣ ಉಡುಪ-ಈ ಮೊದಲಾದವರನ್ನು ಮುಖಾಮುಖಿಯಾಗಿ ಭೆಟ್ಟಿಯಾಗಿ ಚರ್ಚೆಗೆ ತೊಡಗಿ ದಂತೆ ಅನ್ನಿಸುತ್ತದೆ ; ತರುಣ ಕವಿಗಳ ಆಕ್ರೋಶದ, ವ್ಯಂಗ್ಯದ ಧ್ವನಿ ಕಿವಿಗೆ ಬಡಿಯು ತ್ತದೆ. ಪ್ರಾಜ್ಞರ ವಿಚಾರವಂತಿಗೆಯು ನಮ್ಮನ್ನು ವಿಚಾರಪರರನ್ನಾಗಿ ಮಾಡುತ್ತದೆ.

ಹೀಗೆ ಬಹುವಿಧ ಪರಿಣಾಮಕಾರಿಯಾಗಿರುವ ಈ ಸಂಪುಟದ ಕೊನೆಯಲ್ಲಿ ಆಯ್ದ ಕೆಲವು ಭಾವಚಿತ್ರಗಳೂ ಭಾಗಿಗಳಾಗಿದ್ದ ಸಾಹಿತಿಗಳ ವಿಳಾಸಗಳೂ ಅಚ್ಚಾಗಿದ್ದು, ತುಂಬ ಸಹಾಯಕವೆನ್ನಿಸುವಂತಿದೆ.

'ಶಿರಸಿ ಸಾಹಿತ್ಯ ಸಮ್ಮೇಳನ–೧೯೮೨'–ಇದು ಮತ್ತೊಂದು ಅಖಿಲ ಭಾರತ ೫೫ನೆಯ ಕನ್ನಡ ಸಾಹಿತ್ಯ ಸಮ್ಮೇಳನದ ಕಾರ್ಯಕಲಾಪಗಳನ್ನು ಕನ್ನಡಿಸುವ ಕೃತಿ. ೧೯೮೨ರ ಡಿಸೆಂಬರ್‌ನಲ್ಲಿ ಶಿರಸಿಯಲ್ಲಿ ನಡೆದ ಸಮ್ಮೇಳನವನ್ನು ಕುರಿತ ಇದು ೧೯೮೪ರ ಮಾರ್ಚಿಯಲ್ಲಿ ಪ್ರಕಟವಾಗಿದೆ. ಈ ಗ್ರಂಥ ಕೂಡ ಆಕರ್ಷಕವಾಗಿದ್ದು, ಇದರ ಮುನ್ನುಡಿಯಲ್ಲಿ ಸಂಪಾದಕರಾದ ಹಂಪನಾ ಅವರು ಕರ್ನಾಟಕ ರಾಜ್ಯೋತ್ಸವದ ರಜತೋತ್ಸವ ವರ್ಷವಾದ ೮೧–೮೨ರ ಸಾಲಿನಲ್ಲಿ, 'ಬೆಳ್ಳಿ ಬಿಟ್ಟ ಬಳ್ಳಿ' ಎಂಬ ಮಾಲೆಯಲ್ಲಿ ಪರಿಷತ್ತು ಒಂದು ನೂರಕ್ಕಿಂತ ಹೆಚ್ಚಿನ ಸಂಖ್ಯೆಯ ವೈವಿಧ್ಯಪೂರ್ಣ ಗ್ರಂಥಗಳನ್ನು ಪ್ರಕಟಿಸುವುದರ ಬಗೆಗೆ ಹೇಳಿದ್ದಾರೆ. ಪ್ರಕೃತ ಗ್ರಂಥವನ್ನು ಕೋಲಾರ ಜಿಲ್ಲೆಯ ಕೈವಾರದಲ್ಲಿ ೧೯೮೪ರಲ್ಲಿ ನಡೆದ ೫೬ನೆಯ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನ ಸಂದರ್ಭದಲ್ಲಿ ಬಿಡುಗಡೆ ಮಾಡಿದುದಾಗಿಯೂ ತಿಳಿಸಿದ್ದಾರೆ. ಈ ಸಂಪುಟದ ಸಿದ್ಧತೆಯಲ್ಲಿ ತಮಗೆ ನೆರವು ನೀಡಿದ ಪರಿಷತ್ತಿನ ಗೌರವ ಕಾರ್ಯದರ್ಶಿಗಳಲ್ಲಿ ಒಬ್ಬರಾದ ಲಕ್ಷ್ಮಣ್ ತೆಲಗಾವಿ ಅವರನ್ನು ವಿಶೇಷವಾಗಿ ಸ್ಮರಿಸಿದ್ದಾರೆ. ಆದರೆ ಸ್ಮರಣೆ ಮಾಡದಿರುವ, ಆದರೂ ಈ ಸಂಪುಟದ ಸಂಪಾದನ ಕಾರ್ಯದಲ್ಲಿ ದುಡಿದ ಇತರ ಪರಿಷತ್ತಿನ ಸಿಬ್ಬಂದಿಯವರೂ ಅಭಿನಂದನಾರ್ಹರಾಗಿದ್ದಾರೆ.

ಶಿರಸಿ ಸಾಹಿತ್ಯ ಸಮ್ಮೇಳನಾಧ್ಯಕ್ಷರು ಗೊರೂರು ರಾಮಸ್ವಾಮಿ ಅಯ್ಯಂಗಾರರು. ಅವರ ಭಾಷಣದಂತೆಯೇ ಇತರ ಹಲವರು ಮಹನೀಯರ ಭಾಷಣಗಳೂ ಗ್ರಂಥಾ ರಂಭದಲ್ಲಿ ಸೇರಿವೆ. ಅನಂತರ ಜರುಗಿದ ಸಾಹಿತ್ಯ ಗೋಷ್ಠಿ–೧ ಎಂಬುದರಲ್ಲಿ ರಂ. ಶ್ರೀ. ಮುಗಳಿ, ಶಾಂತಿನಾಥ ದೇಸಾಯಿ, ಎಸ್. ಎಸ್. ಭೂಸರೆಡ್ಡಿ, ಧರಣೇಂದ್ರ ಕುರಕುರಿ, ದಯಾನಂದ ತೊರ್ಕೆ, ಟಿ. ಪಿ. ಅಶೋಕ ಹಾಗೂ ಟಿ. ಎಸ್. ನಾಗರಾಜಶೆಟ್ಟಿ–ಇವರು ಮಂಡಿಸಿದ ಕಥೆ, ಕಾದಂಬರಿ, ಕಾವ್ಯ ಹಾಗೂ ಸಂಶೋಧನಾ ಕ್ಷೇತ್ರಕ್ಕೆ ಸೇರಿದ ಪ್ರಬಂಧಗಳಿವೆ.

ಸಾಹಿತ್ಯ ಗೋಷ್ಠಿ–೨ರಲ್ಲಿ ಜಿ. ವೆಂಕಟಸುಬ್ಬಯ್ಯ, ಎಲ್. ಎಸ್. ಶೇಷಗಿರಿ ರಾವ್, ಜಿ. ವಿ. ವಜ್ರಮಟ್ಟಿ, ಕಮಲ ಹಂಪನಾ, ಎಸ್. ಬಿ. ಮಿಣಜಿಗಿ, ಶಾಂತಿನಾಥ ದಿಬ್ಬದ– ಇವರು ಪ್ರಗತಿಶೀಲ, ದಲಿತ, ನವೋದಯ ಹಾಗೂ ಬಂಡಾಯ ಸಾಹಿತ್ಯ ಚಳವಳಿಗಳ ಹಿನ್ನೆಲೆಯನ್ನೂ ಅವುಗಳ ಪ್ರಭಾವವನ್ನೂ ಗುರುತಿಸಿ ಪ್ರಬಂಧಗಳನ್ನು ಮಂಡಿಸಿದ್ದಾರೆ.

ಅನಂತರ ನಾಟಕ ಗೋಷ್ಠಿ ಜರುಗಿದೆ. ಇದರಲ್ಲಿ ಹಂಪ. ನಾಗರಾಜಯ್ಯ, ಪರ್ವತವಾಣಿ, ಜಿ. ಎಂ. ಶಿರಹಟ್ಟಿ, ಎ. ಕೆ. ರಾಮೇಶ್ವರ, ಸಿದ್ಧಲಿಂಗ ಪಟ್ಟಣಶೆಟ್ಟಿ, ಶ್ರೀನಿವಾಸಪ್ರಭು–ಹೀಗೆ ನಾಟಕ ಕ್ಷೇತ್ರವನ್ನು ಅರಿತು ನುರಿತವರು ಕೆಲವರ ವಿಚಾರ ಪ್ರಚೋದಕ ಬರೆಹಗಳಿವೆ.

ಜಾನಪದ ಗೋಷ್ಠಿ ಮುಂದಿನದು. ಇದರಲ್ಲಿ ಎನ್. ಆರ್. ನಾಯಕ, ವಿಲಿಯಂ ಮಾಡ್ತ, ಎ. ಎಸ್. ಧರಣೇಂದ್ರಯ್ಯ, ಮಳಲಿ ವಸಂತಕುಮಾರ್, ವಿ. ಟಿ. ಹೆಗಡೆ–ಇವರು ಮಂಡಿಸಿದ ಜಾನಪದೀಯ ವಿಷಯಕ ಪ್ರಬಂಧಗಳು ಸೇರಿವೆ.

ಕವಿ ಗೋಷ್ಠಿಯಲ್ಲಿ ೧೩ ಮಂದಿ ಹಳೆಯ ಹೊಸಬ ಕನ್ನಡ ಕವಿಗಳು ತಮ್ಮ ಕವಿತೆಗಳ ಮೂಲಕ ವಿಚಾರಗಳನ್ನು ಸಭಿಕರಿಗೆ–ಈಗ ಓದುಗರಿಗೆ–ತಲುಪಿಸುವ ಪ್ರಯತ್ನ ಮಾಡಿದ್ದಾರೆ. ಈ ಕವಿಗಳ ಪೈಕಿ ಪು.ತಿ.ನ., ಸು. ರಂ. ಎಕ್ಕುಂಡಿ, ಇವರಿರುವಂತೆಯೇ ಪಿ. ಎಸ್. ರಾಮಾನುಜಂ, ಗುಡಿಬಂಡೆ ಪೂರ್ಣಿಮಾ, ಧರಣೇಂದ್ರ ಕುರಕುರಿ ಮೊದಲಾದವರೂ ಇದ್ದಾರೆ. ಮುಂದೆ ಪ್ರತಿಕಾ ಗೋಷ್ಠಿ ಮತ್ತು ಭಾಷಾ ಬಾಂಧವ್ಯ ಗೋಷ್ಠಿಗಳೂ ಜರುಗಿವೆ. ವಿಶೇಷವಾಗಿ ಭಾಷಾ ಬಾಂಧವ್ಯ ಗೋಷ್ಠಿಯಲ್ಲಿ ಕನ್ನಡ ಮತ್ತು ಸೋದರ ಭಾಷೆಗಳಾದ ತುಳು, ಕೊಡವ, ಹವ್ಯಕ, ಉರ್ದು, ಕೊಂಕಣಿ-ಈ ಮೊದಲಾದ ಕೆಲವು ಉಪಭಾಷೆ, ಭಾಷೆ ಗಳಿಗಿರುವ ಬಾಂಧವ್ಯವನ್ನು ಗುರುತಿಸುವ ಪ್ರಯತ್ನವನ್ನು ಹಲವು ವಿದ್ವಾಂಸರು ಮಾಡಿದ್ದಾರೆ.

ಒಟ್ಟಿನ ಮೇಲೆ ಶಿರಸಿ ಸಾಹಿತ್ಯ ಸಮ್ಮೇಳನವನ್ನು ಕುರಿತ ಈ ಗ್ರಂಥವು ಹಿಂದಿನವುಗಳಿಗಿಂತ ಗಾತ್ರದಲ್ಲಿ ದೊಡ್ಡದಾಗಿರುವಂತೆಯೇ ಆಕರ್ಷಕವೂ ಆಗಿದೆ.

ಈ ಸಂದರ್ಭದಲ್ಲಿ ನಾವು ಮೆಚ್ಚ ಮಾರ್ಗಾಡಿಯಬೇಕಾಗಿ ಇರುವುದು, ಈ ಹಲವು ಬಗೆಯ ವಿಷಯ ವೈವಿಧ್ಯ ಹಾಗೂ ವಿವಿಧ ವೈಚಾರಿಕ ಪಾತಳಿಗಳನ್ನುಳ್ಳ ಸಂಗತಿಗಳನ್ನು ವರ್ಷದಿಂದ ವರ್ಷಕ್ಕೆ ಹೊಸತನವನ್ನು ತುಂಬಿಕೊಳ್ಳುವಂತೆ ಆಯ್ಕೆ ಮಾಡುವುದು, ಹಾಗೆ ಆಯ್ದ ವಿಷಯಗಳನ್ನು ಸಮರ್ಥವಾಗಿ ವಿವೇಚಿಸಬಲ್ಲಂತಹ ಸಾಹಿತಿಗಳನ್ನು ಗುರುತಿಸಿ ಅವರನ್ನು ಒಪ್ಪಿಸಿ ಪ್ರಬಂಧಗಳನ್ನು ಬರೆಸಿ, ಅವುಗಳನ್ನು ವ್ಯವಸ್ಥಿತವಾಗಿ ಮಂಡಿಸಲು ತಕ್ಕ ವ್ಯವಸ್ಥೆ ಮಾಡುವುದು ಹಾಗೂ ಇವುಗಳನ್ನೆಲ್ಲ ಕೇಳಿ ಮೆಚ್ಚಬಲ್ಲಂತಹ ಸಭಿಕರನ್ನು ಸಮ್ಮೇಳನದಿಂದ ಸಮ್ಮೇಳನಕ್ಕೆ ಹೆಚ್ಚಿಸಿಕೊಳ್ಳುತ್ತ ಹೋಗುವುದು–ಇದೆಲ್ಲ ನಾವು ಭಾವಿಸುವಷ್ಟು ಸಾಧಾರಣ ಸಂಗತಿಯಲ್ಲ. ಇಂಥ ಜಟಿಲ ಕಾರ್ಯದಲ್ಲಿ ತೊಡಗಿ ಯಶಸ್ಸನ್ನು ಪಡೆಯುವ ಗುಟ್ಟು ಹಂಪನಾ ಅವರಿಗೆ ಸಿದ್ಧಿಸಿದಂತೆ ಅನ್ಯರಿಗೆ ಸಿದ್ಧಿಸುವುದು ವಿರಳ. ಈ ದೃಷ್ಟಿಯಿಂದ ಹಂಪನಾ ಅವರು ಅದೃಷ್ಟವಂತರು : ಅವರನ್ನು ಪರಿಷತ್ತಿನ ಅಧ್ಯಕ್ಷರನ್ನಾಗಿ ಪಡೆದಿದ್ದ ನಾವು ಪುಣ್ಯವಂತರೇ.

ದಿಟ, ಡಾ॥ ಹಂಪನಾ ಅವರ ಮೇಲೆ ಆರೋಪಗಳು ಬಂದಿವೆ. ಆದರೆ ಅವರ ದಕ್ಷ ಕಾರ್ಯನಿರ್ವಹಣೆಯ ಬಗೆಗೆ, ಸ್ನೇಹಶೀಲ ಸೌಹಾರ್ದತೆಯ ಬಗೆಗೆ, ಅವರ ಸೌಜನ್ಯದ ಬಗೆಗೆ, ಯಾರೂ ಬೆರಳೆತ್ತುವಂತಿಲ್ಲ. ಇಂಥ ದಕ್ಷರ ಅಧ್ಯಕ್ಷತೆಯ ಮಾರ್ಗದರ್ಶನದಲ್ಲಿ ನಡೆದ ಮತ್ತೆರಡು ಸಾಹಿತ್ಯ ಸಮ್ಮೇಳನಗಳ ಕಾರ್ಯಕಲಾಪಗಳನ್ನುಳ್ಳ 'ಕೈವಾರ ಕನ್ನಡ ಸಾಹಿತ್ಯ ಸಮ್ಮೇಳನ–೧೯೮೪' ಹಾಗೂ 'ಬಿದರೆ ಸಾಹಿತ್ಯ ಸಮ್ಮೇಳನ–೧೯೮೫'– ಎಂಬ ಗ್ರಂಥಗಳು ಸಿದ್ಧತೆಯಲ್ಲಿದ್ದು, ಬೇಗನೆ ಬಿಡುಗಡೆ ಆಗುತ್ತವೆಂದು ಆಶಿಸ ಬಹುದು. ೧೯೮೭ರ ಗುಲ್ಬರ್ಗ ಸಮ್ಮೇಳನವು ಬರಗಾಲದ ಪ್ರಯುಕ್ತ ಮುಂದೆ ಹೋದುದು ಒಳ್ಳೆಯದೇ ಆಯಿತು.

ಈ ಎಲ್ಲ ಕಾರ್ಯ ಚಟುವಟಿಕೆಗಳನ್ನೂ ಶ್ರದ್ಧೆಯಿಂದ ಆಗುಮಾಡಿ, ಈಗ ಪರಿಷತ್ತಿನ ಕಾರ್ಯಕ್ಷೇತ್ರದಿಂದ ಹೊರಬಂದಿರುವ ಪ್ರಾಧ್ಯಾಪಕ ಡಾ॥ ಹಂಪನಾ ಅವರು, ಮುಂದಿನ ದಿನಗಳಲ್ಲಿ ತಮ್ಮ ಪಾಂಡಿತ್ಯವನ್ನು ಬೆಳೆಸಿಕೊಂಡು, ವಿದ್ಯಾರ್ಥಿಗಳಿಗೆ ಹಾಗೂ ಕನ್ನಡ ಸಾರಸ್ವತ ಲೋಕಕ್ಕೆ ಬೆಲೆಯುಳ್ಳ ಗ್ರಂಥ ಕಾಣಿಕೆಗಳನ್ನು ಕೊಡು ವಂತಾಗಲಿ. ಅವರಿಗೆ ಕನ್ನಡ ಸಾಹಿತ್ಯಲೋಕದಲ್ಲಿ ಚಿರಸ್ಮರಣಾರ್ಹ ಸ್ಥಾನ ಒದಗಲಿ. ಅವರು ನೂರ್ಕಾಲ ಬಾಳಲಿ, ಎಂದು ಹೃತ್ಪೂರ್ವಕವಾಗಿ ಹಾರೈಸುವವರ ಜೊತೆಗೆ ನಾನೂ ದನಿಗೂಡಿಸುತ್ತೇನೆ.

ಡಾ॥ ಎಸ್. ಪಿ. ಪಾಟೀಲ

# ಶಂಭವಸಾಗರ ಮಹಾರಾಜರ ಜೀವನಚರಿತ್ರೆ

ಕರ್ನಾಟಕ ಮತ್ತು ಜೈನಧರ್ಮಗಳ ಸಂಬಂಧ ತೀರ ಪ್ರಾಚೀನವಾದುದು : ನಿಕಟವಾದುದು. ಭದ್ರಬಾಹು ಮುನಿಗಳು ಚಂದ್ರಗುಪ್ತ ಮೌರ್ಯನೊಂದಿಗೆ ಕರ್ನಾಟಕದ ಶ್ರವಣಬೆಳಗೊಳಕ್ಕೆ ಬರುವ ಪೂರ್ವದಲ್ಲಿಯೇ ಇಲ್ಲಿ ಜೈನಧರ್ಮ ನೆಲೆಸಿದ್ದಿತೆಂದೂ ಶ್ರವಣಬೆಳಗೊಳದಂತೆ ಕೊಪ್ಪಳವೂ ಪವಿತ್ರ ಜೈನಕ್ಷೇತ್ರವಾಗಿತ್ತೆಂಬುದು ತಿಳಿದುಬರುತ್ತದೆ. ಕರ್ನಾಟಕವನ್ನಾಳಿದ ರಾಜಮನೆತನಗಳು ಒಂದಿಲ್ಲ ಒಂದು ದೃಷ್ಟಿಯಿಂದ ಜೈನಧರ್ಮವನ್ನು ಗೌರವಿಸಿದುದನ್ನು ಇತಿಹಾಸದುದ್ದಕ್ಕೂ ಕಾಣುತ್ತೇವೆ. ಅನೇಕ ರಾಜಮಹಾರಾಜರು ಜೈನಧರ್ಮವನ್ನು ಸ್ವೀಕರಿಸಿ, ಜೈನಾಚಾರ್ಯರನ್ನು ಗೌರವಿಸಿ, ಜೈನಮಂದಿರ-ಕ್ಷೇತ್ರಗಳ ನಿರ್ಮಾಣ, ಪುನರುದ್ಧಾರ, ನಿತ್ಯಪೂಜಾ ನಿರ್ವಹಣೆ ಮುಂತಾದ ಕಾರ್ಯಗಳಿಗಾಗಿ ದಾನವಿತ್ತು ಮನ್ನಿಸಿದುದನ್ನು ನಾಡಿನ ಶಾಸನಗಳು ಎತ್ತಿ ತೋರುತ್ತಿವೆ. ಹೀಗೆ ಕರ್ನಾಟಕ ಸಂಸ್ಕೃತಿಯು ಇತಿಹಾಸದುದ್ದಕ್ಕೂ ಹಾಸುಹೊಕ್ಕಾಗಿ ಬೆಳೆದು ಬಂದ ಜೈನಧರ್ಮ ಹನ್ನೆರಡನೆಯ ಶತಮಾನದ ತರುವಾಯ ಮುಂಚಿನ ವೈಭವದ ದಿನಗಳನ್ನು ಕಳೆದುಕೊಂಡಿದ್ದರೂ ಸಂಖ್ಯಾಬಲದಿಂದ ಸೊರಗಿದ್ದರೂ ತನ್ನ ಅಂತಸ್ಸತ್ವವನ್ನು ಉಳಿಸಿಕೊಂಡು ಬಂದುದಲ್ಲದೆ ಅದನ್ನು ಜಗತ್ತಿಗೆ ತೋರುವಂತೆ ಬೆಳೆದುದು ಇಂದಿಗೂ ಮನವರಿಕೆಯಾಗುವಂತಿದೆ.

ಜೈನತೀರ್ಥಂಕರರೆಲ್ಲ ಜನನ. ತಪಸ್ಸು, ಧರ್ಮಪ್ರಸಾರ ಹಾಗೂ ನಿರ್ವಾಣಗಳೆಲ್ಲ ಉತ್ತರ ಭಾರತದಲ್ಲಾದರೂ ಅವರ ಉಪದೇಶವನ್ನೊಳಗೊಂಡ ಶಾಸ್ತ್ರಗಳನ್ನು ಆಳವಾಗಿ ಅಭ್ಯಸಿಸಿ

---

'ಮುನಿಶ್ರೀ ೧೦೮ ಶಂಭವಸಾಗರ ಮಹಾರಾಜರ ಜೀವನಚರಿತ್ರೆ' : ಹಂಪ. ನಾಗರಾಜಯ್ಯ, ಪ್ರ : ಶ್ರೀಪಚ್ಚಣ್ಣ ಮತ್ತು ಅವರ ಧರ್ಮಪತ್ನಿ ರತ್ನಮ್ಮನವರು ; ಗೌರೀಬಿದನೂರು, ೧೯೬೪.

ಅವುಗಳಿಗೆ ಟೀಕೆಯನ್ನು ಬರೆದ ಪಂಡಿತೋತ್ತಮರೆಲ್ಲರು, ಆಚಾರ್ಯರು ದಕ್ಷಿಣ ಭಾರತದವರು. ಹೀಗಾಗಿ ತೀರ್ಥಂಕರರ ಉಪದೇಶ ಕಾಲಧರ್ಮಕ್ಕೆ ಅನುಗುಣವಾಗಿ ವಿವರಿಸಲ್ಪಟ್ಟದು ದಕ್ಷಿಣಭಾರತದ ಜೈನಾಚಾರ್ಯರಿಂದ. ಮುನಿ, ಶ್ರಾವಕ, ಶ್ರಾವಕಿಯರನ್ನೊಳಗೊಂಡ ಚತುರ್ವಿಧ ಸಂಘ ಜೈನಧರ್ಮದ ಆಧಾರಸ್ತಂಭ. ಈ ಪರಂಪರೆ ಅವ್ಯಾಹತವಾಗಿ ಸಾಗಿ ಬಂದಿದ್ದರೂ ಇಪ್ಪತ್ತನೆಯ ಶತಮಾನದ ಆದಿಭಾಗದಲ್ಲಿ ಮುನಿಪರಂಪರೆ ನಷ್ಟವಾಗುವ ಸ್ಥಿತಿಗೆ ಬಂದು ತಲುಪಿದ್ದಿತು. ಮುನಿಜೀವನ ಸುಲಭ ಸಾಧ್ಯವಲ್ಲ; ಅದು ಹರಿತವಾದ ಕತ್ತಿಯ ಮೇಲಣ ನಡಿಗೆ. ಈ ಯುಗದಲ್ಲಿ ಅದು ನಶಿಸಿ ಹೋಗದಂತೆ ಬೆಳೆಸಿದವರಲ್ಲಿ ಉತ್ತರ ಕರ್ನಾಟಕದ ಪರಮಪೂಜ್ಯ ಚಾರಿತ್ರ ಚಕ್ರವರ್ತಿ ಶ್ರೀ ಶಾಂತಿಸಾಗರ ಮಹಾರಾಜರು, ವ್ಯಾಖ್ಯಾನಕೇಸರಿ ಶ್ರೀಪಾಯಸಾಗರ ಮುನಿ ಮಹಾರಾಜರು, ಪೂಜ್ಯಶ್ರೀ ಸಿದ್ಧಸಾಗರ ಮಹಾರಾಜರು ಪ್ರಮುಖರಾದರೆ ಮೈಸೂರು ಭಾಗದಲ್ಲಿ ಪೂಜ್ಯಶ್ರೀ ೧೦೮ ಅಜಿತಕೀರ್ತಿ ಮಹಾಸ್ವಾಮಿಗಳು ಮುಖ್ಯ ರಾದವರು. ಇವರೆಲ್ಲರ ಸಾತ್ವಿಕ ಬದುಕು, ಮುನಿಧರ್ಮದ ಸೂಕ್ಷ್ಮ ಆಚರಣೆ ಮುಂದೆ ಅನೇಕ ಸಾಧಕರಿಗೆ ಮಾರ್ಗದರ್ಶಿಯಾಯಿತಲ್ಲದೆ ಪರಮಪೂಜ್ಯ ಭಾರತರತ್ನ ಶ್ರೀದೇಶ ಭೂಷಣ ಮುನಿಮಹಾರಾಜ, ಪೂಜ್ಯ ಏಲಾಚಾರ್ಯ ಮುನಿಶ್ರೀ ವಿದ್ಯಾನಂದ ಮಹಾರಾಜ, ಪೂಜ್ಯಶ್ರೀ ಸುಬಲಸಾಗರ ಮಹಾರಾಜ, ಗಣಧರಾಚಾರ್ಯ ಕುಂಥು ಸಾಗರ ಮಹಾರಾಜ, ಬಾಲಾಚಾರ್ಯ ಶ್ರೀ ಬಾಹುಬಲಿ ಮಹಾರಾಜ, ಪೂಜ್ಯಶ್ರೀ ಶಂಭವಸಾಗರ ಮಹಾರಾಜ ಮೊದಲಾದ ಚಾರಿತ್ರ ಸಂಪನ್ನ ಮುನಿಗಳ ಪರಂಪರೆಯನ್ನು ಬೆಳೆಸಲು ಕಾರಣವಾಯಿತು. ಈ ಪರಂಪರೆಯ ಹಿನ್ನೆಲೆಯಲ್ಲಿ ಪೂಜ್ಯಶ್ರೀ ಶಂಭವಸಾಗರ ಮುನಿಮಹಾರಾಜರ ಜೀವನ ಸಾಧನೆಯನ್ನು ಅವಲೋಕಿಸ ಬೇಕಾಗುತ್ತದೆ.

ಶ್ರೀ ಶಂಭವಸಾಗರ ಮುನಿಮಹಾರಾಜರ ಜೀವನಚರಿತ್ರೆಯನ್ನು ನೀಡಿದವರು ಕನ್ನಡದ ಸುಪ್ರಸಿದ್ಧ ಲೇಖಕರೂ ವಿದ್ವಾಂಸರೂ ಕನ್ನಡದ ಕಾರ್ಯವನ್ನು ತ್ರಿಕರಣ ಪೂರ್ವಕ ಸೇವೆಯೆಂದು ಸ್ವೀಕರಿಸಿದ ಡಾ॥ ಹಂಪ. ನಾಗರಾಜಯ್ಯ ಅವರು. ಈ ಕೃತಿಯಲ್ಲಿ ಎರಡು ಮೂರು ವಿಭಾಗಗಳು ಸ್ಪಷ್ಟವಾಗಿ ಗೋಚರಿಸುತ್ತವೆ. ಮೊದಲನೆಯದಾಗಿ ಕಥಾನಾಯಕರಾದ ಶ್ರೀ ಶಂಭವಸಾಗರ ಮಹಾರಾಜ ಅವರ ಜೀವನಚರಿತ್ರೆ ಸಂಕ್ಷೇಪವಾಗಿ ಬಂದಿದೆ. ಅದರೊಂದಿಗೆ ಅವರ ಪ್ರವಚನದ ಸಂಗ್ರಹ. ಹಾಗೂ ಅವರು ಸಂಸಾರದಿಂದ ವೈರಾಗ್ಯ ಹೊಂದಿ ಮುನಿಮಾರ್ಗದಲ್ಲಿ ಬ್ರಹ್ಮಚರ್ಯ ದೀಕ್ಷೆವಹಿಸಿ ಜೈನತೀರ್ಥಕ್ಷೇತ್ರಗಳ, ಹಿರಿಯ ಮುನಿಮಹಾರಾಜರ ದರ್ಶನ ಪಡೆಯಲು ಕೈಕೊಂಡ ವಿಹಾರಯಾತ್ರೆಯ ಸಂಕ್ಷೇಪ ನಿರೂಪಣೆ ಹಾಗೂ ಜೈನ ಮುನಿಯ ವ್ಯಕ್ತಿತ್ವ ಕುರಿತು ಪೂರ್ವಾಚಾರ್ಯರು ವ್ಯಕ್ತಪಡಿಸಿದ ಗೌರವಪರ ಮಾತುಗಳು ಮೂಲಸಂಸ್ಕೃತ ಉದ್ಧರಣೆಗಳೊಂದಿಗೆ ತಿಳಿಗನ್ನಡದಲ್ಲಿ ಹೇಳಲಾಗಿದೆ.

ಹೀಗೆ ಆಕಾರದಲ್ಲಿ ಚಿಕ್ಕ ಕೃತಿಯಾದರೂ ಇದು ಅನೇಕ ಅಂಶಗಳಿಂದ ಮಹತ್ತನ್ನು ಒಳಗೊಂಡಿರುವುದನ್ನು ಕಾಣಬಹುದು.

ಶ್ರೀ ಶಂಭವಸಾಗರ ಮಹಾರಾಜರ ಪೂರ್ವಾಶ್ರಮದ ಹೆಸರು ಮಂಜುನಾಥ. ಗುರುಭಕ್ತರಾದ ಮೇಲೆ ಬಂದುದು ರವಿಕೀರ್ತಿ. ಅದರೊಂದಿಗೆ ಚಂದ್ರಕೀರ್ತಿ, ಪಾರ್ಶ್ವಕೀರ್ತಿ ಎಂಬ ಹೆಸರುಗಳೂ ಬಳಕೆಯಲ್ಲಿದ್ದವು. ಅವರು ಜನಿಸಿದುದು ದಕ್ಷಿಣ ಕನ್ನಡ ಜಿಲ್ಲೆಯ ಕುಂದಾಪುರ ತಾಲೂಕಿನ ಬೈಂದೂರು ಗ್ರಾಮದಲ್ಲಿ ಬಾಲಯ್ಯ ಮತ್ತು ಪಾರ್ವತಿದೇವಿಯರು ತಂದೆ-ತಾಯಿಗಳು. ಒಟ್ಟು ಐದು ಜನ ಸಹೋದರರು, ಮೂರು ಜನ ಸಹೋದರಿಯರಲ್ಲಿ ಇವರು ಎರಡನೆಯವರು. ಜನ್ಮತಃ ಇವರು ಕ್ಷತ್ರಿಯರು, ಹೊಂಬಳೀದಾರ ಮನೆತನದವರಾದರೂ ಮದ್ಯ-ಮಾಂಸಾದಿಗಳ ಸೇವನೆಯಿಂದ ದೂರವಿದ್ದವರು. ಶ್ರೀ ಶಂಭವಸಾಗರರು ಇಪ್ಪತ್ತೆರಡನೆಯ ವಯಸ್ಸಿನಲ್ಲಿಯೇ ಶ್ರೀ ೧೦೮ ಆಚಾರ್ಯ ಮಹಾವೀರಕೀರ್ತಿ ಅವರಿಂದ ಬ್ರಹ್ಮಚರ್ಯ ದೀಕ್ಷೆಯನ್ನು ಸ್ವೀಕರಿಸಿದರು. ಜೀವನ ನಿರ್ವಹಣೆಗಾಗಿ ಬಸ್ ಕಂಡಕ್ಟರ್‌ನಾಗಿ ಪ್ರಯಾಣಿಕರ ಸುರಕ್ಷಿತ ಪ್ರಯಾಣದ ಹೊಣೆಹೊತ್ತ ಮಂಜುನಾಥ ವಿರಕ್ತಿಯನ್ನು ಹೊಂದಿ ಸನ್ಯಾಸ ಸ್ವೀಕರಿಸಿ ಮುನಿಯಾಗಿ ಸಂಸಾರಯಾತ್ರೆ ಕೈಗೊಂಡ ಶ್ರಾವಕರನ್ನು ಸಂಸಾರದಿಂದ ಸುರಕ್ಷಿತ ಪಾರುಗಾಣಿಸುವ ನಿರ್ವಹಣೆಯನ್ನು ಹೊತ್ತು ಮುನಿಗಳಾದರು. ಹೀಗೆ ಸಂಸಾರದಿಂದ ಬಿಡುಗಡೆ ಹೊಂದಿ ಮುನಿಧರ್ಮವನ್ನು ಸ್ವೀಕರಿಸಿದ ಇಪ್ಪತ್ತೆರಡರ ಯುವಕನ ಬಾಲ್ಯ, ಮನೋನಿರ್ಧಾರ, ಆತ್ಮೋನ್ನತಿಗಾಗಿ ಹಂಬಲ—'ಹಿನ್ನೆಲೆ'ಯ ರೂಪದಲ್ಲಿ ಸಂಕ್ಷೇಪವಾಗಿ ಬಂದಿದೆ.

ಜೈನಧರ್ಮದ ಪ್ರಾಚೀನತೆ, ಅದರ ಉದಾತ್ತ ತತ್ವಗಳು, ಅಹಿಂಸೆಯ ಮಹಿಮೆ, ಆತ್ಮಧರ್ಮದ ವ್ಯಾಪಕತೆ, ಶುದ್ಧ ಆಹಾರ-ಪಾನೀಯ-ಚಾರಿತ್ರ್ಯದ ಅಗತ್ಯತೆಗಳನ್ನು ಕುರಿತ ಶ್ರೀ ಶಂಭವಸಾಗರರ ಅಮೃತವಾಣಿ 'ಗರಿ-೧' ರಲ್ಲಿ ಸಂಗ್ರಹಿತವಾಗಿದೆ. ಶ್ರೀ ಶಂಭವಸಾಗರರ ಬಾಲ್ಯ, ಮನೆತನ, ವೈರಾಗ್ಯವುಂಟಾಗಲು ಕಾರಣ, ಶ್ರೀ ಸ್ವಾಮಿ ವಿಶ್ವಹಿತರ ದರ್ಶನ, ೧೯೬೪ ರ ಜನವರಿಯಲ್ಲಿ ವ್ರತಸ್ವೀಕಾರ, ವಿಶ್ವಹಿತಸ್ವಾಮಿ ಶ್ರೀ ೧೦೮ ಅಜಿತಕೀರ್ತಿ ಸ್ವಾಮಿಗಳು—ಈ ಎಲ್ಲ ವಿವರ 'ಗರಿ-೨' ರಲ್ಲಿ ವ್ಯಾಪಿಸಿದೆ. ಇನ್ನು ಮುಂದಿನ ಗರಿ-೩ ರಿಂದ ೬ರ ವರೆಗೆ ಶ್ರೀ ಶಂಭವಸಾಗರರು ಕೈಕೊಂಡ ವಿಹಾರಯಾತ್ರೆಯ ವರ್ಣನೆ ಅವರ ದಿನಚರಿಯ ರೂಪದಲ್ಲಿಯೇ ಇಲ್ಲಿದೆ. ಅವರು ಸಂದರ್ಶಿಸಿದ ಕ್ಷೇತ್ರಗಳು, ಅವುಗಳ ಚರಿತ್ರೆ, ಅಲ್ಲಿರುವ ಜಿನಮಂದಿರ, ಜಿನಬಿಂಬಗಳ ವಿವರ, ಶ್ರಾವಕರ ಮನೆಗಳು, ವಿಹಾರದಲ್ಲಿದ್ದ ಹಿರಿಯ ಮುನಿಗಳ ದರ್ಶನ-ಧರ್ಮೋಪದೇಶ ಆಲಿಸುವ ಅವಕಾಶ, ಕೇಶಲೋಚ ಸಮಾರಂಭ, ಕೃತಿಯ ಕೊನೆಯಲ್ಲಿ ಶ್ರವಣಬೆಳಗೊಳದ ೧೯೬೭ರ ಮಹಾಮಸ್ತಕಾಭಿಷೇಕದಲ್ಲಿ ಭಾಗಿಯಾದುದು—ಈ ವಿವರವೆಲ್ಲ ಸಂಕ್ಷೇಪವಾಗಿ ಮೂಡಿನಿಂತಿದೆ.

ಜೈನ ತೀರ್ಥಕ್ಷೇತ್ರಗಳ ವಿಹಾರ ಕಥನ ತೀರ ಸಂಕ್ಷೇಪವಾಗಿ ದಿನಚರಿಯ ಟಿಪ್ಪಣಿಗಳ ರೂಪದಲ್ಲಿದ್ದರೂ ಪೂಜ್ಯಶ್ರೀ ಶಂಭವಸಾಗರರು ದೀಕ್ಷೆವಹಿಸಿದ ಹೊಸದರಲ್ಲಿಯೇ ಯಾತ್ರೆ ಕೈಕೊಂಡಿದ್ದರೂ ತಾವು ಸಂದರ್ಶಿಸುವ ತೀರ್ಥಕ್ಷೇತ್ರಗಳ ಮಹತ್ವದ ಬಗ್ಗೆ ಸಂಗ್ರಹಿಸಿದ ವಿವರ ಆಸಕ್ತಿಯನ್ನೂ ಭಕ್ತಿಯನ್ನೂ ಸೂಚಿಸುತ್ತದೆ. ಎರಡನೆಯದಾಗಿ ಮಾಂಗೀತುಂಗಿಯಲ್ಲಿ ಶ್ರೀ ಶಾಂತಿಸಾಗರ ಮಹಾರಾಜರ, ಗಜಪಂಥದಲ್ಲಿ ಶ್ರೀ ೧೦೮ ಮಹಾವೀರ ಕೀರ್ತಿಗಳ, ದಿಲ್ಲಿಯಲ್ಲಿ ಪೂಜ್ಯಮುನಿಶ್ರೀ ವಿದ್ಯಾನಂದ ಮಹಾರಾಜರ, ಶ್ರವಣಬೆಳಗೊಳದಲ್ಲಿ ಆಚಾರ್ಯರತ್ನ ದೇಶಭೂಷಣರ ಹಾಗೂ ಹಾಸನದಲ್ಲಿ ಶ್ರೀ ೧೦೮ ಸುಬಾಹುಸಾಗರ ಕೇಶಲೋಚ ಸಮಾರಂಭ—ಈ ಎಲ್ಲ ಭೇಟಿ, ದರ್ಶನ ಸಂದರ್ಭಗಳಲ್ಲಿ ತಾವು ಆಲಿಸಿದ ಧರ್ಮೋಪದೇಶದಿಂದ ಮನಸ್ಸಿಗೆ ಆನಂದವುಂಟಾಯಿತು, ಸಮ್ಯಕ್ತ್ವ ದೃಢವಾಯಿತು–ಎಂಬುದಾಗಿ ಬರೆಯುವಲ್ಲಿ ಆತ್ಮೋನ್ನತಿಯ ಮಾರ್ಗದಲ್ಲಿ ಅವರು ಇರಿಸಿದ ಶ್ರದ್ಧೆ, ಅದರತ್ತಲೇ ಕೇಂದ್ರೀಕೃತ ಮನಸ್ಸು, ಹಿರಿಯ ಮುನಿಗಳ ಬಗೆಗೆ ಅಪಾರವಾದ ಗೌರವ, ಪೂಜ್ಯಭಾವನೆ, ಸ್ವಂತದ ಬಗ್ಗೆ ವಿನೀತ ಭಾವಗಳಿಲ್ಲ ಸಹಜ-ಸರಳವಾದ ಆಡಂಬರ ರಹಿತ ಮಾತುಗಳಲ್ಲಿ ಕೊನೆಗೊಂಡು ನಿಂತಿವೆ. ಪೂಜ್ಯಮುನಿ–ತ್ಯಾಗಿಗಳಂತೆಯೇ ಖ್ಯಾತ ವಿದ್ವಾಂಸರಾದ ಪಂ. ಲೋಕನಾಥ ಶಾಸ್ತ್ರಿಗಳು, ಪಂ. ಸುಬ್ಬಯ್ಯ ಶಾಸ್ತ್ರಿಗಳು ಅವರಂಥ ಮಹಾ-ಮೇಧಾವಿ ಪಂಡಿತರೊಂದಿಗೆ ಭೇಟಿಯಾದುದಕ್ಕೆ ತಮಗಾದ ಸಂತೋಷವನ್ನು ದಾಖಲಿಸುವುದನ್ನು ಮರೆಯುವಂತಿಲ್ಲ. ಅವರ ಈ ವಿಹಾರ ಇನ್ನಿಷ್ಟು ವಿವರವಾಗಿ ಬರಬಹುದಾಗಿತ್ತು. ಆದರೂ ಅದು ಅನೇಕ ವಿಚಾರಗಳನ್ನು ಒಳಗೊಂಡಿದ್ದು ಮನರಂಜನೆಗಿಂತ ಆತ್ಮವಿಕಾಸಕ್ಕೆ ದಾರಿದೀಪವಾಗುವ ದೃಷ್ಟಿಯಿಂದ 'ವೀತರಾಗ' ಭಾವದಿಂದ ಒಡಮೂಡಿದುದನ್ನು ಅನುಭವಿಸಬಹುದಾಗಿದೆ.

'ಜೈನಯತಿಯ ವ್ಯಕ್ತಿತ್ವ' ಭಾಗದಲ್ಲಿ ಡಾ॥ ಹಂಪ. ನಾಗರಾಜಯ್ಯ ಅವರ ವಿಪುಲ ವ್ಯಾಸಂಗವನ್ನೂ ಅದನ್ನು ನಿರೂಪಿಸುವಲ್ಲಿ ಅವರು ತೋರುವ ಔಚಿತ್ಯವನ್ನೂ ಮನಗಾಣಬಹುದು. ಜೈನಯತಿಯ ಸದ್ಗುಣಗಳ ಬಗ್ಗೆ ಮೂಲದ ಸಂಸ್ಕೃತ ಶ್ಲೋಕಗಳನ್ನು ಸರಳ-ಶುದ್ಧ-ಲಲಿತವಾದ ಕನ್ನಡದಲ್ಲಿ ನೀಡಿದುದು ತುಂಬ ಉಪಯುಕ್ತ ಅಂಶವಾಗಿದೆ ; ಕೃತಿಯ ಬೆಲೆಯನ್ನು ಹೆಚ್ಚಿಸಿದೆ.

ಡಾ॥ ಹಂಪ. ನಾಗರಾಜಯ್ಯ ಅವರ ಶ್ರೀ ಶಂಭವಸಾಗರ ಚರಿತ್ರೆ ಯನ್ನು ಓದಲು ಎತ್ತಿಕೊಂಡು ಕ್ಷಣ ಓದುಗ ನಿರೀಕ್ಷಿಸುವುದು ಅವರ 'ಸವ್ಯಸಾಚಿ ಪಂಪ'. 'ನಾಗಶ್ರೀ', 'ಹೆಸರಿನ ಸೊಗಸು' ಅಷ್ಟೇ ಏಕೆ 'ಭಾಷಾವಿಜ್ಞಾನ' ಕುರಿತು ಬರೆದ ಶಾಸ್ತ್ರಗ್ರಂಥಗಳಲ್ಲಿಯೂ ಕಂಡುಬರುವ ಲಲಿತವಾದ ಬಿಡಿ ಬಿಡಿ ಶಬ್ದಗಳಿಂದೊಡಗೂಡಿದ ಸಂಕ್ಷೇಪವೂ ಲಲಿತವೂ ಅರ್ಥವತ್ತಾದ ಶೈಲಿ 'ಜೈನಯತಿಯ ವ್ಯಕ್ತಿತ್ವ'

ವಿಭಾಗದಲ್ಲಿ ಮಾತ್ರ ನಮಗೆ ಕಾಣಸಿಗುತ್ತದೆ. ಮುಂದಿನ ಭಾಗವನ್ನು ಪೂಜ್ಯ ಶ್ರೀ ಶಂಭವಸಾಗರರ ದಿನಚರಿಯ ಅವರ ಮಾತುಗಳಲ್ಲಿಯೇ ಕೊಡಬೇಕೆಂಬ ಉದ್ದೇಶವಿರಿಸಿಕೊಂಡುದರಿಂದ ಅಲ್ಲಿ ಹಂಪನಾ ಶೈಲಿಯನ್ನು ಅಪೇಕ್ಷಿಸುವುದು ಉಚಿತವಲ್ಲ. ಈ ಉಪಕ್ರಮದಿಂದಾಗಿ ಚಾರಿತ್ರಿಕ ವ್ಯಕ್ತಿಯ ಮೂಲ ಭಾವ, ಭಾಷೆ, ಶೈಲಿಯನ್ನು ಪರಿಚಯಿಸುವ ಉದ್ದೇಶ ಔಚಿತ್ಯಪೂರ್ಣವೆಂದೇ ಹೇಳಬೇಕಾಗುತ್ತದೆ. ಅಲ್ಲದೆ ಪೂಜ್ಯಶ್ರೀ ಶಂಭವಸಾಗರರು ಹುಟ್ಟಿನಿಂದ ಅಜೈನರಾದರೂ ಜೈನಧರ್ಮದ ತತ್ವಗಳಲ್ಲಿ ಆಸಕ್ತರಾಗಿ, ಅವುಗಳನ್ನು ಆಚರಿಸುವ ಮೂಲಕ ಗೃಹಸ್ಥಧರ್ಮ ಹಾಗೂ ಮುನಿಧರ್ಮವನ್ನು ಸ್ವೀಕರಿಸಿದುದು ಜೈನ–ಜೈನೇತರರೆಲ್ಲರೂ ಗಮನಿಸಬೇಕಾದ ಅಂಶ. ಜನ್ಮಕ್ಕಿಂತ ಗುಣಶ್ರೇಷ್ಠ. ಈ ಗುಣವನ್ನು ಹೊಂದಲು ಆತ್ಮದ ಉನ್ನತಿಯನ್ನು ಸಾಧಿಸಲು ಜನ್ಮ ಯಾವ ಅಡ್ಡಿಯನ್ನೂ ಉಂಟುಮಾಡಲಾರದೆಂಬುದನ್ನು ಈ ಕೃತಿಯ ಮೂಲಕ ಸೂಚಿಸುವುದೇ ಲೇಖಕರ ಸದುದ್ದೇಶವೆಂದು ಭಾವಿಸಬಹುದಾಗಿದೆ.

ಒಟ್ಟಿನಲ್ಲಿ ಶ್ರೀ ಶಂಭವಸಾಗರ ಮಹಾರಾಜರ ಜೀವನ ಚರಿತೆ ಊರ್ಧ್ವಗಾಮಿ ಚೇತನದ ಚರಿತ್ರವಾಗಿದೆ. ಅಲ್ಲದೆ ಜೈನಧರ್ಮ, ಸಂಸ್ಕೃತಿ, ಕಲೆ, ಉದಾತ್ತತತ್ವ, ಮುನಿ ಪರಂಪರೆ ಮೊದಲಾದ ಅಪಾರವಾದ ವಿಷಯವನ್ನು ಸ್ವಲ್ಪದರಲ್ಲಿ ಕೊಡುವ ಡಾ॥ ಹಂಪ. ನಾಗರಾಜಯ್ಯ ಅವರ ಪ್ರಯತ್ನಕ್ಕೆ ನಿದರ್ಶನವಾಗಿದೆ. ಕನ್ನಡ ನಾಡಿನ ಮುನಿ ಪರಂಪರೆಯಲ್ಲಿ ಬೆಳಗುತ್ತಿರುವ ಒಂದು ಚೇತನವನ್ನು ಊರ್ಧ್ವಗಾಮಿಯ ಮಾತೃತ್ವವನ್ನು ಪರಿಚಯಿಸುವ ಸ್ತುತ್ಯ ಉಪಕ್ರಮವಾಗಿದೆ.

ಪಾರ್ಶ್ವನಾಥ ಜಿ. ಕೆಂಪಣ್ಣವರ

# ಗೋವಿಂದ ಪೈ ಬದುಕು ಬರಹ

ಕನ್ನಡ ಸಾರಸ್ವತ ಪ್ರಪಂಚದಲ್ಲಿ ತಮ್ಮ ವೈಶಿಷ್ಟ್ಯಪೂರ್ಣ ಬರಹಗಳ ಮೂಲಕ, ಅಸಾಧಾರಣ ಕರ್ತೃತ್ವ ಶಕ್ತಿಯ ಮೂಲಕ ಚಿರಪರಿಚಿತರಾಗಿರುವವರು ಡಾ॥ ಹಂಪನಾರವರು. ಬರಹದಲ್ಲಿ ತಮ್ಮದೇ ಆದ ವಿಶಿಷ್ಟ ಸಿದ್ಧಿಯನ್ನು ಹೊಂದಿರುವ ಇವರು ಕನ್ನಡಕ್ಕಿತ್ತ ಕೃತಿ ಕುಸುಮಗಳಲ್ಲಿ ಕನ್ನಡ ಕಾವ್ಯಶ್ರೀಗೆ ಮಕುಟ ಮಣಿಯನ್ನಿತ್ತ ಕವಿಕುಲ ಗುರು 'ಗೋವಿಂದ ಪೈಗಳ ಬದುಕು-ಬರಹ ಎಂಬ ಕೃತಿ ಅಸಾಧಾರಣ ಮತ್ತು ಅನುಕರಣೀಯ ವಾಗಿದೆ.

ಒಂದು ಹಿರಿಯ ಜೀವ ಇನ್ನೊಂದು ಹಿರಿಯ ಜೀವನವನ್ನು ಮೆಚ್ಚಿಕೊಂಡು ರಾಗರಹಿತವಾಗಿ ಬದುಕಿನ ಹಿನ್ನೆಲೆಯನ್ನು, ಏರಿದ ಉನ್ನತಿಯನ್ನು ತಿಳಿಸುವುದು ವೈಶಿಷ್ಟ್ಯಪೂರ್ಣವಾಗು ತ್ತದೆ. 'ಗೋವಿಂದ ಪೈ-ಬದುಕು ಬರಹ' ಎಂಬ ಕೃತಿಯು ಹಂಪನಾ ಮತ್ತು ಕಾವ್ಯಜೀವಿಗಳ ಬರಹ ಸಿದ್ಧಿಯ ಪ್ರತೀಕ ವಾಗಿದೆ.

ಒಟ್ಟು ೧೩೧ ಪುಟಗಳನ್ನು ಹೊಂದಿದ ಈ ಗ್ರಂಥದ ಆದಿ ಯಲ್ಲಿಯೇ ಪೈಗಳ ಇಡೀ ಬದುಕಿನ ಪಕ್ಷಿ ನೋಟವನ್ನು ಕೊಟ್ಟದ್ದು ಓದುಗರಿಗೆ ಬಹಳ ಪ್ರಯೋಜನಕಾರಿಯಾಗಿದೆ. ನಂತರ ವಾಚಕರ ಅನುಕೂಲಕ್ಕಾಗಿ ಪೈಗಳ ಬದುಕು, ಸಿದ್ಧಿ ಸಾಧನೆಗಳನ್ನೆಲ್ಲ ನಾಲ್ಕು ಪ್ರಮುಖ ಘಟ್ಟಗಳಾಗಿ ವಿಂಗಡಿಸಿ ದ್ದಾರೆ. ಮೊದಲನೆಯದು ಕಾವ್ಯಮಯ ಬದುಕು, ಎರಡನೆ ಯದು ಸಾರಸ್ವತ ತಪಸ್ವಿ, ಮೂರನೆಯದು ಧೀಮಂತ ಸಂಶೋಧಕ, ಕೊನೆಯಲ್ಲಿ ಕಾವ್ಯರ್ಷಿಯ ಕೊನೆಯ ದಿನಗಳು. ಹೀಗೆ ತಾವು ಚಲಿಸಲಿರುವ ದಾರಿಯ ರೂಪುರೇಷೆಗಳನ್ನು ಹಾಕಿ ಕೊಂಡು ಸಾಗಿದ ಲೇಖಕರು ಅದರಿಂದ ವಿಚಲಿತರಾಗಿಲ್ಲ, ಓದು ಗರಿಗೆ ಕಳವಳ ಮೂಡಿಸಿಲ್ಲವೆಂಬುದು ಕೃತಿಯ ಪ್ರಾಮುಖ್ಯತೆ ಆಗಿದೆ.

ಜೀವನಚರಿತ್ರೆಯೆಂದರೆ ನೀರಸ ಘಟನೆಗಳ ಸಾರಸಂಗ್ರಹವಲ್ಲ, ಅವುಗಳನ್ನು ಕುರಿತ ಲೇಖಕ ಹೇಗೆ ಕಲಾತ್ಮಕವಾಗಿ ರಸಭರಿತವಾಗಿ ಮಾಡಬಲ್ಲರೆಂಬುದುಕ್ಕೆ ಈ ಕೃತಿ ಸಾಕ್ಷಿಯಾಗಿದೆ. ಪ್ರಸ್ತುತಪಡಿಸಲಿರುವ ವ್ಯಕ್ತಿಯ ಹುಟ್ಟು, ಸಾವು, ನೋವು, ನಲಿವು ಮುಖ್ಯವಲ್ಲ, ಇಷ್ಟಿದ್ದೂ ಅವರು ಹೇಗೆ ಸಾಧನೆಯ ಎತ್ತರಕ್ಕೇರಿದರೆಂಬುದು ಮಹತ್ವ. ಗ್ರಂಥದ ಆದಿಯಲ್ಲಿಯೇ ಗೋವಿಂದ ಪೈಗಳ ಔನ್ನತ್ಯ ತಿಳಿಸುತ್ತ "ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ನೋಡಬೇಕಾದ ಎರಡೇ ಎರಡು ಅಪೂರ್ವಗಳು–ಒಂದು ಸಮುದ್ರ ಮತ್ತೊಂದು ಮಂಜೇಶ್ವರದ ಗೋವಿಂದ ಪೈ" (ಪು. ೫) ಎಂದು ತಿಳಿಸಿದ್ದು ಪ್ರಶಂಸನೀಯವಾದ ಮಾತು, ನುಡಿ.

ಕವಿಯ ಹುಟ್ಟು, ಬಂಧು ಬಳಗವನ್ನು ತಿಳಿಸಿದ ನಂತರ ಅವರು ನೆಲನಿಂತ ಸ್ಥಳದ ಮಹಿಮೆ ಪೈಗಳಿಂದ ಹೇಗ ಹೆಚ್ಚಾಯಿತೆಂಬುದನ್ನು "ಪಂಪನಿಗೆ ಬನವಾಸಿ, ಬೇಂದ್ರೆಯವರಿಗೆ ಧಾರವಾಡ, ಗೋವಿಂದ ಪೈಗಳಿಗೆ ಮಂಜೇಶ್ವರ, ಇದೇ ಮುಂದೆ ಕನ್ನಡಿಗರ ಯಾತ್ರಾಸ್ಥಳ" (ಪು. ೭) ಎಂಬ ಮಾರ್ಮಿಕ ಹಾಗೂ ನೈಜ ಸಂಗತಿಯನ್ನು ಪಡಿಮೂಡಿಸಿದ್ದಾರೆ. ೧೮೮೩ ಮಾರ್ಚ ೨೩ರಂದು ಜನಿಸಿದ ಕವಿ ಕೇವಲ ಹದಿನೈದು ವರ್ಷ ತುಂಬುವುದರೊಳಗಾಗಿಯೇ ಹಳಗನ್ನಡ ಕಾವ್ಯವನ್ನು ಅರೆದು ಕುಡಿದಿದ್ದ, ಅಷ್ಟೇ ಏಕೆ, ಕನ್ನಡ ಕಾವ್ಯ ಪರಂಪರೆಯನ್ನೇ ಧಿಕ್ಕರಿಸುವ ಧೈರ್ಯದ ದೀಕ್ಷೆ ತೊಟ್ಟು ಗಡುಚಾದ ಕಾವ್ಯಗಳನ್ನು ರಚಿಸಿದ ಬಗೆಯನ್ನು, ಪ್ರಾಸತ್ಯಾಗಕ್ಕಾಗಿ ದೀಕ್ಷಾಗುರು ಪಂಜೆ ಮಂಗೇಶರಾಯರನ್ನೇ ಪ್ರಶ್ನಿಸಿದ ಧೀಮಂತಿಕೆಯನ್ನು ಅಳವಡಿಸಿದ್ದೂ ಪೈಗಳ ಬದುಕಿಗೆ ಮೆರುಗು ಕೊಟ್ಟಂತಾಗಿದೆ.

ಬಿ.ಎ. ಮುಗಿಸದೆ ಮನೆಗೆ ಮರಳಿದ ಪೈ ಲಕ್ಷ್ಮದೇವಿಯ ಕೈಹಿಡಿದದ್ದು, ೧೯೧೧ರ ವೇಳೆಗಾಗಲೇ ಬಂಗಾಲಿ ಭಾಷಾ ಪ್ರವೀಣರಾಗಿದ್ದು, ಪಾಲಿ ಭಾಷಾ ಅಧ್ಯಯನದ ಫಲವಾಗಿ ಬಂದ ಬೌದ್ಧ ಧರ್ಮ ಸೂತ್ರಗಳ ರಚನಾ ಶೈಲಿ, ಮುಂದೆ ರಾಷ್ಟ್ರಕವಿಯಾದ ಕವಿಯೂ ಹೇಗೆ ಉದ್ಯೋಗಕ್ಕಾಗಿ ಪರದಾಡಿದ ಎಂಬ ರೋಚಕ ಸಂಗತಿಯನ್ನು ಲೇಖಕರು ಸುಂದರವಾಗಿ ನಿರೂಪಿಸಿದ್ದಾರೆ. ಇದರ ಜೊತೆಗೆ ಧೀಮಂತ ನಾಯಕರಾದ ಕಾಕಾ ಕಾಲೇಲ್ಕರರಂತಹವರ ಭೆಟ್ಟಿ ಬೇರು ಬಿಟ್ಟು ಹೆಮ್ಮರವಾಗಿ ಬೆಳೆದ ಬಗೆ, ಕಾಲೇಲ್ಕರು ಮಂಜೇಶ್ವರಕ್ಕೆ ಭೆಟ್ಟಿಯಿತ್ತಾಗ ಪ್ರೀತಿಯ ಕಾಣಿಕೆಯಾಗಿ ಕೊಟ್ಟ ಊರುಗೋಲು ಮುಂದೆ ಕಾಲೇಲ್ಕರರಿಂದ ಗಾಂಧೀಜಿಗೆ ಹಸ್ತಾಂತರಗೊಂಡು ತನ್ಮೂಲಕ ಪೈ ಮತ್ತು ಗಾಂಧೀಜಿಯ ಬದುಕಿನ ಬೆಸುಗೆಯನ್ನೂ ಹೇಳಿ "ಆ ಕೋಲು ಕನ್ನಡದ್ದು ಎಂಬುದು ಕೆಲವರಿಗೆ ಮಾತ್ರ ತಿಳಿದ ವಿಷಯ" (ಪು. ೧೩) ಎಂಬ ಲೇಖಕರ ನುಡಿ ನಾಡಿನ ಅಭಿಮಾನದ ರಾಷ್ಟ್ರಪುರುಷನಿಗೆ ಊರುಗೋಲಾಗಿ ನಿಂತ ಕೋಲಿನ ರಹಸ್ಯವನ್ನೂ ತಿಳಿಸುವಲ್ಲಿ ಯಶಸ್ವಿಯಾಗಿದೆ.

ಪೈಗಳ ಜ್ಞಾನ ತೃಷೆಯ ಪರಿಚಯ ಮಾಡಿಸುತ್ತ ಇಡೀ ಮನೆಯ ಗೋಡೆ ಗಳೆಲ್ಲ ಪುಸ್ತಕಗಳಿಂದಲೇ ಅಲಂಕರಣಗೊಂಡಿದ್ದುವೆಂದೂ ಸ್ವಂತ ಹಣದಿಂದ ದೇಶ ವಿದೇಶದ ಹೊಸ ಪುಸ್ತಕಗಳನ್ನೂ ನಿಘಂಟುಗಳನ್ನೂ ತರಿಸಿಕೊಂಡು ಓದಿ ಗ್ರೀಕ್, ಪರ್ಷಿಯನ್, ಇಟಾಲಿಯನ್, ಫ್ರೆಂಚ್, ಜಪಾನೀ, ತಮಿಳು, ತೆಲುಗು, ಮಲೆಯಾಳಿ ಮುಂತಾದ ಇಪ್ಪತ್ತೆರಡಕ್ಕೂ ಹೆಚ್ಚು ಭಾಷೆಗಳನ್ನು ತಮ್ಮದಾಗಿಸಿಕೊಂಡ ಶ್ಲಾಘನೀಯ ಸಂಗತಿ ತಿಳಿಸಿ ಅನೇಕರಿಗೆ ಉತ್ತೇಜನ ನೀಡಿದ್ದರೆಂದರೆ ತಪ್ಪಾಗಲಿಕ್ಕಿಲ್ಲ.

ಒಬ್ಬ ಸಮರ್ಥ ಕವಿಯಾದವನಿಗೆ ಕಂಡುಂಡ ಘಟನೆಗಳು ಹೇಗೆ ಸಾಹಿತ್ಯ ಕೃತಿಗೆ ಪ್ರೇರಕವಾಗಬಲ್ಲವೆಂಬ ಸತ್ಯಕತೆಯನ್ನೂ ಪೈಗಳ ಬದುಕಿನಲ್ಲಿ ನಡೆದ ಘಟನೆ ಯನ್ನೂ ತಿಳಿಸಿ ಸ್ಪಷ್ಟಪಡಿಸಿದ್ದಾರೆ. ಕೈಹಿಡಿದ ಅರ್ಧಾಂಗಿ ೧೯೨೭ರಲ್ಲಿ ಅಗಲಿದಾಗ ಅವರು ಪಟ್ಟಪಾಡೆಲ್ಲ ಹುಟ್ಟು ಹಾಡಾಗಿ ಪರಿವರ್ತನೆಯಾದದ್ದನ್ನು, 'ಗೊಮ್ಮಟ ಜಿನಸ್ತುತಿ' ಮುಂತಾದ ಶ್ರೇಷ್ಠ ಕಾವ್ಯ ಕನ್ನಡಕ್ಕೆ ದೊರೆತದ್ದನ್ನೂ ತಿಳಿಸಿ ಅರ್ಧಾಂಗಿಯ ಸಾವು ಪೈಗಳಿಗೆ ಆಘಾತವನ್ನು ಉಂಟುಮಾಡದೇ ಇದ್ದಲ್ಲಿ, ಪೈ ರಾಷ್ಟ್ರಕವಿಯಾಗುತ್ತಿರಲಿಲ್ಲ. ಕನ್ನಡಕ್ಕೆ, ಅಷ್ಟೇ ಏಕೆ; ಭಾರತೀಯ ಸಾರಸ್ವತ ಲೋಕಕ್ಕೆ ಉನ್ನತ ಕೃತಿ ಲಭಿಸುತ್ತಿರಲಿಲ್ಲ ಎಂಬ ಭಾವವನ್ನೂ ಸ್ಪಷ್ಟಪಡಿಸಿದ್ದಾರೆ.

ಸಾಹಿತ್ಯರಂಗಕ್ಕೆ ಇಳಿಯದ ಪೈಗಳ ಪೂರ್ವದ ಮನೋವೃತ್ತಿಯನ್ನೂ ಬದುಕಿನ ಏರು ಪೇರುಗಳನ್ನೂ ತಿಳಿಸಿದ ನಂತರ ಇಡೀ ಗೋವಿಂದ ಪೈಗಳ ಸಾಹಿತ್ಯ ಕೃತಿಗಳ ಸಂಖ್ಯೆಯನ್ನಷ್ಟೇ ಅಲ್ಲ, ಪುಟ ಸಂಖ್ಯೆಯನ್ನೂ ನಿರ್ದಿಷ್ಟವಾಗಿ ತಿಳಿಸಿದ್ದು ಅವರ ಪ್ರಾಮಾಣಿಕ ಪ್ರಯತ್ನವನ್ನೂ ಮನಗಾಣಿಸುತ್ತದೆ. ಕಾಲನ ಗರ್ಭದಲ್ಲಿ ಲೀನವಾಗಿ ಹೋಗಬಹುದಾದ ಕವಿ ಕೃತಿಗಳ ಸಂಖ್ಯೆ, ಒಳತಿರುಳನ್ನು ತಿಳಿಸಿ ಸಾಹಿತ್ಯಾಸಕ್ತರಿಗೆ ಹಂಪನಾರವರು ಮಹದುಪಕಾರ ಮಾಡಿದ್ದಾರೆ. ಮುಂದೆ ಅವರ ಒಟ್ಟು ಸಾಹಿತ್ಯವನ್ನು ಕ್ರಮವಾಗಿ ಕಾವ್ಯ, ನಾಟಕ, ನೋ ನಾಟಕಗಳು, ಪ್ರಬಂಧ ಗಳು, ಸಂಶೋಧನೆಗಳು ಎಂದು ಕ್ರಮಾನುಸಾರ ವಿಂಗಡಿಸಿ ಮತ್ತೆ ಪ್ರತಿಯೊಂದು ಭಾಗವನ್ನು ಹಲವು ಭಾಗವಾಗಿಸಿ ಪ್ರತಿಯೊಂದನ್ನೂ ಚಿಕ್ಕದಿದ್ದರೂ ಚೊಕ್ಕದಾಗಿ, ವಸ್ತುನಿಷ್ಠವಾಗಿ, ರಾಗರಹಿತವಾಗಿ ವಿಶ್ಲೇಷಣೆಗೆ ಒಳಗಾಗಿಸಿದ್ದಾರೆ. ಆದಕ್ಕೆಂದೇ ಈ ಗ್ರಂಥ ಪೈಗಳ ಬದುಕು, ಸಾಧನೆಗಳ ಸಮಗ್ರ ಕೈಪಿಡಿಯಾಗಿದೆಯೆಂದರೆ ತಪ್ಪಾಗದು.

ಇಲ್ಲಿಯ ಲೇಖಕರು ಸ್ವತಃ ಗೋವಿಂದ ಪೈಗಳೇ ಬರೆದಿಟ್ಟ ಆತ್ಮಕಥನವನ್ನು ಅವಲೋಕಿಸಿ ಅವರ ಪ್ರಥಮ ಬರಹ ರೂಪುಗೊಂಡದ್ದು ೧೮೯೫ರ ಫೆಬ್ರವರಿಯಲ್ಲಿ ಎಂಬ ನಿಶ್ಚಿತ ಸಮಯ ತಿಳಿಸಿ ಅನೇಕರು ತಿಳಿದಂತೆ ಗೋವಿಂದ ಪೈ ಸಾಹಿತ್ಯ ಕ್ಷೇತ್ರಕ್ಕೆ ಧುಮುಕಿದ್ದು ಕವಿಯಾಗಿಯಲ್ಲ ನಾಟಕಕಾರನಾಗಿ ಎಂಬ ಗುಟ್ಟನ್ನು ಹೇಳಿ ಸಂಶಯ ಪರಿಹರಿಸಿದ್ದಾರೆ. ಪೈಗಳ ಸಮಗ್ರ ಕಾವ್ಯಗಳ ವಿಶ್ಲೇಷಣೆ ಮಾಡುತ್ತ ಪತ್ನಿ ಸಾವಿನ

ಶೋಕತಪ್ತ ಹೃದಯ 'ಗೊಮ್ಮಟ ಜಿನಸ್ತುತಿ'ಯಂತಹ ಕಾವ್ಯಕ್ಕೆ ಜನ್ಮನೀಡಿದ್ದನ್ನೂ ಉಮರ್ ಖಯಾಮ್‌ನ 'ರುಬಿಯಾತ್'ಗಳು ಪರ್ಷಿಯನ್‌ದಿಂದ ನೇರವಾಗಿ ಕನ್ನಡಕ್ಕೆ ಬಂದ ಸಾಹಸದ ಸಂದರ್ಭವನ್ನೂ ತಿಳಿಸಿ "ಉಮರ್ ಖಯಾಮ್‌ನನ್ನೂ ಕನ್ನಡಕ್ಕೆ ತಂದವರು ಪೈಗಳೇ ಮೊದಲು–ಅಲ್ಲದೆ ಮೂಲ ಪರ್ಷಿಯನ್‌ದಿಂದಲೇ ಅನುವಾದಿಸಿದವರೂ ಸಹ ಅವರೊಬ್ಬರೇ" (ಪು. ೬೧) ಎಂದು ಹೇಳಿ ಪೈಗಳ ಸಾಧನೆ, ಪರಭಾಷಾ ಪಾಂಡಿತ್ಯದ ಪರಿಚಯ ಮಾಡಿಸಿದ್ದಾರೆ.

ಕನ್ನಡ ಕಾವ್ಯಾರಾಮದಲ್ಲಿ ಧ್ರುವತಾರೆಯಾಗಿ ನಿಂತ ಪೈಗಳ 'ಗಿಳಿವಿಂಡು' ಅವರ ಪ್ರಥಮ ಕವನ ಸಂಕಲನವೆಂಬುದನ್ನೂ ತಿಳಿಸಿ "ಕನ್ನಡ ನವೋದಯ ಸಾಹಿತ್ಯಕ್ಕೆ ಅರುಣೋದಯದ ಕುತ್ತೂರಿಯನ್ನೊದಿದ ಆದ್ಯತೆ ದೊರೆಯಬೇಕಾದ್ದು ಹೆಚ್ಚು ಕಡಿಮೆ ಒಂದೇ ಕಾಲದಲ್ಲಿ ಪ್ರಕಟವಾದ ಎರಡು ಕವನ ಸಂಗ್ರಹಗಳಿಗೆ. ಒಂದು ಬಿ. ಎಂ. ಶ್ರೀ ಅವರ 'ಇಂಗ್ಲೀಷ್ ಗೀತಗಳು' : ಇನ್ನೊಂದು 'ಗಿಳಿವಿಂಡು' (ಪು.೬೪) ಎಂಬ ಮಾತಿನಲ್ಲಿ ಆ ಕೃತಿಯ ಸಾರವೆಲ್ಲ ಅಡಗಿ ನಿಂತಿದೆ. ಅದೇ ಪ್ರಕಾರ 'ಗೊಲ್ಗೊಥಾ'ದ ಬಗ್ಗೆ ಹೇಳುತ್ತ "ಏಸುವಿನ ಮರಣವನ್ನು ಆ ಸನ್ನಿವೇಶಗಳನ್ನು, ಗೊಲ್ಗೊಥಾದಲ್ಲಿರುವಷ್ಟು ಮಟ್ಟಿಗೆ ಕಣ್ಣಿಗೆ ಕಟ್ಟಿಸಬಲ್ಲ ಕವನ ಕನ್ನಡದಲ್ಲಿ ಇದುವರೆಗೂ ಬಂದಿಲ್ಲ" (ಪು.೬೭) ಎಂದು ಅದರ ಸತ್ವದ ಸತ್ಯದರ್ಶನ ಮಾಡಿಸುತ್ತಾರೆ. ಅದೇ ಪ್ರಕಾರ ನಂದಾದೀಪ, ಸೈರಂಧ್ರಿ, ಬುದ್ಧನ ಬದುಕು ತಿಳಿಸುವ ವೈಶಾಖಿ, ಪ್ರಭಾಸ, ದೆಹಲಿ ಮುಂತಾದ ಕಾವ್ಯಗಳ ಒಟ್ಟು ತಿರುಳನ್ನೂ ಕನ್ನಡ ಸಾರಸ್ವತ ಲೋಕದಲ್ಲಿ ಅವುಗಳ ಸ್ಥಾನಮಾನಗಳನ್ನೂ ಹಲವಾರು ದೃಷ್ಟಾಂತಗಳಿಂದ ಮನಗಾಣಿಸಿದ್ದಾರೆ.

ಗೋವಿಂದ ಪೈಗಳ ಸಮಗ್ರ ನಾಟಕಗಳ ವಸ್ತು, ತಂತ್ರ, ವಿನ್ಯಾಸ ಕನ್ನಡ ಹಾಗೂ ಭಾರತೀಯ ಸಾಹಿತ್ಯದಲ್ಲಿ ಅವುಗಳ ಸ್ಥಾನಮಾನ ಕುರಿತು ಲೇಖಕರು ವಿವರಪೂರ್ಣವಾದ ಮಾಹಿತಿ ನೀಡಿದ್ದಾರೆ. ಒಟ್ಟು ಪೈಗಳ ನಾಟಕಗಳ ಸಂಖ್ಯೆ ಹನ್ನೊಂದು ಎಂದು ಹೇಳಿ ಅವುಗಳಲ್ಲಿ ಎರಡು ಸ್ವತಂತ್ರ ಕೃತಿಗಳಾದರೆ ಒಂಬತ್ತು ಅನುವಾದಿತ ಕೃತಿಗಳೆಂಬುದನ್ನು ಲೇಖಕರು ತಿಳಿಸಿ ಪ್ರತಿ ನಾಟಕದ ಕಥಾಸಾರ, ರಚನೆಯಾದ ಹಿನ್ನೆಲೆ, ಆಂತರಿಕ ಸತ್ವಗಳನ್ನು ಒಂದೊಂದಾಗಿ ತಿಳಿಸಿದ್ದು ವಾಚಕರಿಗೆ, ಅಧ್ಯಯನಶೀಲರಿಗೆ ಪ್ರಯೋಜನಕಾರಿಯಾಗಿದೆ. ಅವರ 'ಹೆಬ್ಬೆರಳು' ನಾಟಕವಂತೂ ಪೌರಾಣಿಕ ವಸ್ತುವುಳ್ಳ ವಿಶಿಷ್ಟ ನಾಟಕವೆಂದು ಎತ್ತಿ ಹಿಡಿದು ಜಪಾನಿನ ನೋ ನಾಟಕಗಳ ಹಾಗೂ ಗ್ರೀಕ್ ನಾಟಕಗಳ ತಂತ್ರ ಇದರಲ್ಲಡಗಿದೆಯೆಂಬುದನ್ನೂ ತೌಲನಿಕವಾಗಿ ಅಭ್ಯಸಿಸಿದ ಹಂಪನಾರವರು ತಮ್ಮ ವಸ್ತುನಿಷ್ಠ ವಿಮರ್ಶಾಪ್ರಜ್ಞೆಯನ್ನು ಇಲ್ಲಿ ಸ್ಪಷ್ಟೀಕರಿಸಿದ್ದಾರೆ.

ಹೂಗಳನ್ನೇ ಪಾತ್ರವನ್ನಾಗಿಸಿಕೊಂಡ 'ತಾಯಿ' ನಾಟಕ ಕನ್ನಡದಲ್ಲಿಯೇ ಪಂಪ್ಪ 'ಚಿತ್ರಭಾನು ಅಥವಾ ೧೯೪೨'ರ ನಾಟಕ ಕುರಿತು "ಘಟನೆ ಹಳೆಯದಾಗಿದ್ದರೂ ಈಗಲೂ ಸಹ ಹಳೆಯದೆನ್ನಿಸದೆ ಇರುವುದು ಈ ನಾಟಕದ ಸಜೀವತೆಗೆ, ಸಾರ್ವತ್ರಿಕತೆಗೆ ಪ್ರಮಾಣವಾಗಿದೆ" (ಪು. ೮೭) ಎಂಬ ಮಾತು ಕೃತಿಯ ಕೈಗನ್ನಡಿಯಾಗಿ ಬಂದಿದೆ. ಜಪಾನೀ ಭಾಷೆಯಿಂದ 'ನೋ' ನಾಟಕಗಳು ನೇರವಾಗಿ ಕನ್ನಡಕ್ಕೆ ಬಂದದ್ದು ನಮ್ಮೆಲ್ಲರ ಪುಣ್ಯ. ಅಂತೆಯೇ ಲೇಖಕರು "ಶ್ರೀಯುತ ಗೋವಿಂದ ಪೈಯವರು ಕನ್ನಡಕ್ಕೆ ಮಾಡಿದ ಇನ್ನೊಂದು ಮಹೋಪಕಾರ"ವೆಂದಿದ್ದಾರೆ. "ನೋ ನಾಟಕಗಳದು ವಾಮನ ಗಾತ್ರ, ತ್ರಿವಿಕ್ರಮನ ಅರ್ಥ" ಎಂಬ ಮಾತಿನಲ್ಲಿಯೇ ಆ ಎಲ್ಲ ನಾಟಕಗಳ ಸತ್ವದರ್ಶನ ಮಾಡಿಸಿದ್ದಾರೆ.

ಕೊನೆಯ ಘಟ್ಟದಲ್ಲಿ ಗೋವಿಂದ ಪೈಗಳು ಬರೆದ ಒಟ್ಟು ಪ್ರಬಂಧಗಳ ವಿಶ್ಲೇಷಣೆ ಬಂದಿದೆ. ಆಯಾ ಕವಿ, ಸಾಹಿತಿಗಳ ಬಗ್ಗೆ, ಜಪಾನಿನ ನೋ ನಾಟಕಗಳ ಬಗ್ಗೆ ಬರೆದವುಗಳನ್ನು ವರ್ಣನಾತ್ಮಕ ಪ್ರಬಂಧಗಳೆಂದು ಕರೆದು ಉಳಿದ ಗಂಭೀರವಾದ ಮತ್ತು ಸಂಶೋಧನಾತ್ಮಕ ಪ್ರಬಂಧಗಳನ್ನು 'ಧೀಮಂತ ಸಂಶೋಧಕ' ಎಂಬ ಭಾಗದಲ್ಲಿ ವಿಶ್ಲೇಷಣೆಗೆ ಒಳಗಾಗಿಸಿದ್ದಾರೆ. ಪೈಗಳ ಅವಿಶ್ರಾಂತ ದುಡಿಮೆಯನ್ನು ಸಂಶೋಧನೆಯ ತೃಷೆಯನ್ನು ನಿಷ್ಕಲ್ಮಶ ಹೃದಯವನ್ನು ಕೊಂಡಾಡಿದ ಹಂಪನಾರವರು "ಪೈ ಕಡಲಿನಾಳಕ್ಕೆ ಇಳಿದರು, ಅಲ್ಲಿಂದ ಮುತ್ತುರತ್ನಗಳನ್ನು ತಂದರು, ಕಪ್ಪೆಚಿಪ್ಪುಗಳು ತಪ್ಪಿ ಕೂಡಾ ಬರಲಿಲ್ಲ, ತಂದ ತೃಪ್ತಿಯೇ ಸಾಕಾಯಿತು ಅವರಿಗೆ, ಚೆಲ್ಲಿಬಿಟ್ಟರು ಅವನ್ನು ವಿಶಾಲ ಪೃಥ್ವಿಯ ಮೇಲೆ, ಕಂಡ ಕಂಡವರೆಲ್ಲ ಹೆಕ್ಕಿಕೊಂಡು ಜ್ಞಾನನಿಧಿಗೆ ಒಡೆಯರಾದರು" (ಪು. ೯೫) ಎಂಬ ಸತ್ಯಸ್ಯ ಸತ್ಯಕತೆಯನ್ನು ಹೇಳುವಲ್ಲಿ ಕೃತಿಕಾರರು ಹಿಂಜರಿದಿಲ್ಲ.

ಪೈಯವರನ್ನು ಗೆಜಬೇಂಟೆಗಾರ ಎಂದು ಕರೆದ ಪ್ರಸ್ತುತ ಲೇಖಕರು ಅವರು ಮೊಣಕಾಲುದ್ದದ ನೀರಲ್ಲಿ ಗಾಳ ಹಾಕದೆ ಸಮುದ್ರಕ್ಕೇ ಬಲೆಬೀಸಿ ಆಳಕ್ಕಿಳಿದು ಅನಂತದರ್ಶನ ಮಾಡಿಸಿದರೆಂದು ನಿಷ್ಕಲ್ಮಶವಾಗಿ ಕೊಂಡಾಡಿದ್ದಾರೆ. ಧೀಮಂತ ಸಂಶೋಧಕರಾದ ಪೈಗಳು ಸಂಶೋಧನೆ ಮಾಡಿದ್ದು ಅಪಾರ. ಎಲ್ಲವನ್ನು ಒರೆಗಲ್ಲಿಗೆ ಹಚ್ಚಿ ನೋಡುವ ದುಷ್ಟಾರರವರು. ಒಟ್ಟು ಅವರ ಸಂಶೋಧನಾ ಪ್ರಬಂಧಗಳನ್ನು ಐತಿಹಾಸಿಕ ಸಂಶೋಧನೆ, ಕನ್ನಡ ಸಾಹಿತ್ಯ ಸಂಶೋಧನ ಎಂಬ ಎರಡು ಪ್ರಮುಖ ವರ್ಗಗಳಾಗಿ ವಿಂಗಡಿಸಿ ಮತ್ತೆ ಅವುಗಳಲ್ಲಿ ತುಳುನಾಡು, ಕರ್ನಾಟಕ, ಭಾರತ, ಧಾರ್ಮಿಕ, ಭಾಷೆಗಳ ಐತಿಹಾಸಿಕ ಸಂಶೋಧನ ಪ್ರಬಂಧಗಳೆಂದೂ ಹಳಗನ್ನಡ ಕವಿಕಾವ್ಯ ಮತ್ತು ಹೊಸಗನ್ನಡ ಸಾಹಿತ್ಯ ಸಂಶೋಧನ ಪ್ರಬಂಧಗಳೆಂದೂ ವಿಂಗಡಿಸಿ ವಿಶ್ಲೇಷಿಸಿದ್ದು ಕೃತಿಕಾರರ ವೈಚಾರಿಕ ಪ್ರಜ್ಞೆಯ ಪ್ರತೀಕವಾಗಿದೆ.

ಎಲ್ಲವನ್ನರಿವ ಮೊದಲು, ತನ್ನ ತಾನರಿಯಬೇಕೆಂಬ ಮಾತನ್ನು ಕೃತಿಯಲ್ಲಿ ತಂದ ಪೈಗಳು ಇತಿಹಾಸ ಸಂಶೋಧನೆಗೆ ಇಳಿದದ್ದು ತಮ್ಮ ಸಾರಸ್ವತ ಬ್ರಾಹ್ಮಣ ವಂಶದ ಮೂಲವನ್ನರಸಲಿಕ್ಕೆ. ಅದರಲ್ಲಿ ಯಶಸ್ವಿಯೂ ಆದರು. ಅದನ್ನು ಮೆಚ್ಚಿದ ಲೇಖಕರು "ಪೈಯವರ ಮೊದಲ ಮೊಟ್ಟೆಯೇ ಅಪ್ಪಟ ಬಂಗಾರದ ಮೊಟ್ಟೆ" ಎಂದಿದ್ದಾರೆ. ತುಳುನಾಡು, ಕರ್ನಾಟಕ ಅಷ್ಟೇ ಏಕೆ ಇಡೀ ಭಾರತದ ಇತಿಹಾಸದ ಮೂಲ ಬೇರಿಗೆ ಕೈಹಾಕಿದ ಧೀಮಂತನ ಧೀಮಂತ ಚಿತ್ರಣ ಇಲ್ಲಿ ಪಡಿಮೂಡಿ ಬಂದಿದೆಯೆಂದರೆ ತಪ್ಪಾಗಲಿಕ್ಕಿಲ್ಲ.

ಅಜಿತ ಪುರಾಣ ಹಾಗೂ ಗದಾಯುದ್ಧ ಕೃತಿಗಳನ್ನು ರಚಿಸಿದ ರನ್ನ ಒಬ್ಬನೇ ಎಂಬುದನ್ನು ಸ್ಪಷ್ಟೀಕರಿಸಿ ಮುಂದೆ ರನ್ನನ ಅಲಭ್ಯ ಕೃತಿಗಳಾದವುಗಳನ್ನೂ ಸಹ ಇಂಥವೇ ಎಂದು ಹೇಳಿ ಅವು ನಿರ್ಮಾಣವಾದ ತಿಥಿ, ವಾರ, ನಕ್ಷತ್ರಗಳನ್ನೂ ಸಹ ನಿಖರವಾಗಿ ಸಿದ್ಧಮಾಡಿದ ಪೈಗಳನ್ನು–ದೊರಕದ ವಸ್ತುಗಳ ಗುಣಗಳನ್ನು ಮುಂಚಿತ ವಾಗಿಯೇ ಪಟ್ಟಿ ಮಾಡಿ ಹೇಳುತ್ತಿದ್ದ ರಷ್ಯದ ವಿಜ್ಞಾನಿ 'ಮೆಂಡಲೀಫ'ನಿಗೆ ಹೋಲಿಸಿದ್ದು ಲೇಖಕರ ಬಹುಮುಖ ಪ್ರತಿಭೆಯ ಪ್ರತೀಕವಾಗಿದೆ, ಸಮಂಜಸವಾಗಿದೆ.

ಕೃತಿಯ ಅಂತ್ಯಭಾಗದಲ್ಲಿ ಕಾವ್ಯರ್ಷಿಯ ಕೊನೆಯ ದಿನಗಳ [illegible]ವು ನಲಿವುಗಳನ್ನು ಜೀವನ್ಮರಣದ ಹೋರಾಟವನ್ನು ಲೇಖಕರು ಮನಮಿಡಿಯುವಂತೆ ನಿರೂಪಿಸಿದ್ದಾರೆ. ಸಾವಿನ ಕೂಡ ಸೆಣಸಾಟವಾಡುವಾಗಲೂ ಕವಿ ಮುದ್ದುಮಕ್ಕಳು ತನ್ನನ್ನು ಅಕ್ಕರತೆಯಿಂದ ಕರೆಯುತ್ತಿದ್ದ 'ಗೋಯ್ದುಮಾಮಾ, ಅಜ್ಜಾ!' ಎಂಬ ಮಾತುಗಳನ್ನೇ ಮೆಲುಕು ಹಾಕುತ್ತಿದ್ದ ಎಂಬ ಸಂಗತಿ ತಿಳಿಸಿ ಅವರ ಮಕ್ಕಳ ವಾತ್ಸಲ್ಯದ ಆಳವನ್ನು ನಮ್ಮ ಮರ್ಮಕ್ಕೆ ತಿಳಿಸಿದ್ದಾರೆ.

ಒಟ್ಟಿನಲ್ಲಿ ಹಂಪನಾ ಮತ್ತು ಕಾವ್ಯಜೀವಿಗಳ ಪ್ರಯತ್ನ ಸಾರ್ಥಕವಾಗಿದೆ. ಬಹುಭಾಷಾ ಪಂಡಿತ, ಋಷಿಕವಿ, ಗಜಬೇಂಟೆಗಾರನ ನೈಜ ಬದುಕು ಸಾಧನೆಗಳ ಪದರು ಪದರುಗಳನ್ನು ಬಿಚ್ಚಿ ತೋರಿಸಿ ಬರುವ ಸಂಶೋಧಕರಿಗೆ, ಸಾಹಿತ್ಯಾಸಕ್ತರಿಗೆ ಮಾರ್ಗದರ್ಶನ ನೀಡಬಲ್ಲ ಒಂದು ದೀಪಸ್ತಂಭವನ್ನು ಪ್ರತಿಷ್ಠಾಪಿಸಿದ್ದಾರೆಂದರೆ ಆಭಾಸವಾಗಲಿಕ್ಕಿಲ್ಲ. ಅದಕ್ಕಿಂ[illegible] ಈ ಕೃತಿ ಕೇವಲ ಗೋವಿಂದ ಪೈಗಳ ಸಾಹಿತ್ಯ ಕೃತಿ ಸಾಧನೆಗಳ ವಿಮರ್ಶೆಯಾಗದೆ ಅವರ ಬದುಕಿನ ವಸ್ತುನಿಷ್ಠ ವಿಶ್ಲೇಷಣೆಯೂ ಆಗಿದೆ. ಗ್ರಂಥದ ಆದಿಯಲ್ಲಿ ಹೇಳಿದ "ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ನೋಡಬೇಕಾದ ಆಶ್ಚರ್ಯಗಳು ಎರಡೇ : ಒಂದು ಸಮುದ್ರ : ಮತ್ತೊಂದು ಮಂಜೇಶ್ವರದ ಗೋವಿಂದ ಪೈ" ಎಂಬ ಉಕ್ತಿಯನ್ನು ಬದಲಿಸಿ "ಭಾರತದಲ್ಲಿ ನೋಡಬೇಕಾದ ಆಶ್ಚರ್ಯಗಳು ಎರಡೇ: ಒಂದು ಸಮುದ್ರ: ಇನ್ನೊಂದು ಕರ್ನಾಟಕದ ಗೋವಿಂದಪೈ" ಎಂಬುದಾಗಿ ಮಾಡಬಹುದೆಂಬುವಷ್ಟರಮಟ್ಟಿಗೆ ಹಂಪನಾ ಮತ್ತು ಕಾವ್ಯಜೀವಿಗಳು ಪೈಗಳ ನಿಜದರ್ಶನ ಮಾಡಿಸಿದ್ದಾರೆ.

ಡಾ. ಮ. ಗು. ಬಿರಾದಾರ

## ಸಮ್ಮೇಳನಾಧ್ಯಕ್ಷರು

ಪ್ರಕಟವಾದ ಎಲ್ಲ ರೀತಿಯ ಗ್ರಂಥಗಳು ಒಂದೇ ಅಳತೆ ಗೋಲಿನಿಂದ ಮೌಲ್ಯಮಾಪನ ಮಾಡಲಾಗದು. ಅವುಗಳ ವಸ್ತು, ಉದ್ದೇಶ ಮೊದಲಾದವುಗಳನ್ನು ಪರಿಗಣನೆಗೆ ತೆಗೆದು ಕೊಂಡು, ಅವುಗಳನ್ನು ವಿವಿಧ ಚೌಕಟ್ಟಿನಲ್ಲಿ–ಸಿಟ್ಟಿನಲ್ಲಿ ಅಳೆಯ ಬೇಕಾಗುತ್ತದೆ. ಕೃತಿ ಸೃಜನಾತ್ಮಕವಿರಬಹುದು, ಸಂಪಾದಿತ ವಿರಬಹುದು. ಇಲ್ಲವೆ ನಾಳಿನ ಜನಾಂಗಕ್ಕೆ ಬೇಕಾಗಬಹುದಾದ ಐತಿಹಾಸಿಕ ಮಾಹಿತಿಗಳ ದಾಖಲೆಯಾಗಿರಬಹುದು. ಇದ ರಿಂದಾಗಿಯೇ ಕೃತಿಯನ್ನು ಮೇಲು ಕೀಳೆಂದು ಬಗೆಯಲಾಗದು. ಕೃತಿಯ ಉಪಯುಕ್ತತೆಯನ್ನು ಪ್ರಮುಖವಾಗಿ ಗಮನಿಸ ಬೇಕಾದುದಾದರೂ ಕೃತಿಯ ಅಭಿವ್ಯಕ್ತಿಯ ಶಕ್ತಿ, ಅದು ಸಹೃದಯರ ಮೇಲೆ ಬೀರಬಹುದಾದ ಪ್ರಭಾವಗಳನ್ನು ವಿಶೇಷ ವಾಗಿ ಗಣಿಸಬೇಕಾಗುತ್ತದೆ.

'ಸಮ್ಮೇಳನಾಧ್ಯಕ್ಷರು' ಕೃತಿ ನಾಳಿನ ಕನ್ನಡ ಕುಲಕ್ಕೆ ಕನ್ನಡ ನುಡಿ, ಕನ್ನಡ ಸಾಹಿತ್ಯವನ್ನು ಕುರಿತು ಇಂದಿನವರು, ಹಿಂದಿ ನವರು ಮಾಡಿದ ಚಿಂತನ ಮಂಥನವಲ್ಲದೆ ಸಾಹಿತ್ಯ ಕೃಷಿಯ ನಿಚ್ಚಳ ಕಲ್ಪನೆ ಮೂಡಿಸುವ ಒಂದು ಸಫಲ ಗ್ರಂಥ. ಹಂಪ. ನಾಗರಾಜಯ್ಯನವರು ಕನ್ನಡ ಸಾಹಿತ್ಯ ಪರಿಷತ್ತಿಗೆ ಅಧ್ಯಕ್ಷರಾಗಿ ಹಲವಾರು ಒಳಿತನ್ನು ಮಾಡಿದರಾದರೂ ಒಬ್ಬ ಲೇಖಕನಾಗಿ ಮಾಡಿದ ಈ ಕೆಲಸ ಸದಾ ಸ್ಮರಣೀಯ. ಲೆಕ್ಕಪತ್ರದ ವಹಿಯ ಆಕಾರದಲ್ಲಿ ಪ್ರಕಟವಾದ ಮುನ್ನೂರಾ ಇಪ್ಪತ್ತೇಳು ಪುಟಗಳ ಈ ಗ್ರಂಥ ನಡೆದು ಬಂದ ಕನ್ನಡ ಕಾರ್ಯದ ಒಂದು ದೃಷ್ಟಿಯ ಲೆಕ್ಕಪತ್ರವೇ ಆಗಿದೆ. ಹಲವಾರು ಕನ್ನಡ ಸಮ್ಮೇಳನಗಳನ್ನು ನಡೆಯಿಸಿಕೊಂಡು ಬಂದ ವ್ಯಾಪಕ ಅನುಭವ ಅವರಿಗಿರುವುದ ರಿಂದ ಇಂಥ ಕೃತಿಯನ್ನು ಸಮರ್ಥವಾಗಿ ವಿರಚಿಸಲು ಸಾಧ್ಯ ವಾಗಿದೆ.

ಐವತ್ತೇಳು ಕನ್ನಡ ಸಾಹಿತ್ಯ ಸಮ್ಮೇಳನಗಳನ್ನು ನಡೆಸಿದ್ದೇವೆ. ಈ ಸಂಖ್ಯೆ ಹೀಗೇ ಮುಂದುವರಿಯುತ್ತಿದೆ. ಆದರೆ ಸಮ್ಮೇಳನಗಳು ಹೇಗೆ ನಡೆದವು ? ಮುಂದೆ ಹೇಗೆ ನಡೆಯಬೇಕಾಗಿದೆ ? ಅವುಗಳ ಅರಕೆಗಳಾವುವು ? ಉತ್ತಮ ಅಂಶಗಳೆಷ್ಟು ? ಸಮ್ಮೇಳನ ಎಲ್ಲಿ, ಯಾವಾಗ, ಯಾರ ಅಧ್ಯಕ್ಷತೆಯಲ್ಲಿ ನೆರವೇರಿತು ? ಅಧ್ಯಕ್ಷರು ಏನು ಅಪ್ಪಣೆ ಕೊಡಿಸಿದರು ? ಒಂದು ಸಾಹಿತ್ಯ ಸಮ್ಮೇಳನದಿಂದ ಇನ್ನೊಂದು ಹೇಗೆ ಎಷ್ಟರಮಟ್ಟಿಗೆ ಭಿನ್ನವಾಯಿತು ? ಹೀಗೆ ಹಲವಾರು ಮಾಹಿತಿಗಳ ಸಂಗ್ರಹ ಒಂದೆಡೆಗೆ ಸಿಕ್ಕುವುದು ಬಹಳ ಅವಶ್ಯವಿತ್ತು. ಅಷ್ಟೇ ಅಲ್ಲ ಒಂದು ಸಮ್ಮೇಳನವನ್ನು ಇನ್ನೊಂದರೊಡನೆ ಹೋಲಿಸಿ ನೋಡುವ ಅವಕಾಶವನ್ನೂ ಈ ಗ್ರಂಥ ಕಲ್ಪಿಸಿಕೊಟ್ಟಿದೆ. ನಡೆದು ಹೋದ ಕಾರ್ಯದ ಸ್ಮೃತಿಗಳನ್ನು ಸಂಗ್ರಹಿಸಿಡುವುದೂ ಅಷ್ಟೇ ಮಹತ್ವದ ಕಾರ್ಯ. ಸಮ್ಮೇಳನಾಧ್ಯಕ್ಷರ ಜೀವನ, ಅವರ ಸಾಹಿತ್ಯಿಕ ಸಾಧನೆಗಳ ಅರಿವು ಮುಂಬರುವ ಕನ್ನಡ ಸಾಹಿತ್ಯ ಸಾಧಕರಿಗೆ ಮಾರ್ಗದರ್ಶನಕ್ಕಾದರೂ ಅತ್ಯವಶ್ಯಕವಲ್ಲವೇ ? ಇದನ್ನೆಲ್ಲಾ ಮನಗಂಡು, ಹಂಪನಾ ಅವರು ಈ 'ಸಮ್ಮೇಳನಾಧ್ಯಕ್ಷರು' ಕೃತಿಯನ್ನು ರಚಿಸಿ, ಸಾಹಿತ್ಯ ಸಮ್ಮೇಳನಗಳ ಅನುಕ್ರಮವಾದ ಇತಿಹಾಸವನ್ನೇ ನಿರೂಪಿಸಿದ್ದಾರೆ.

ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರು ನಡೆದು ಬಂದ ಹಾದಿ ಎಂದು ಬರೆಯುತ್ತ. ಬಹಳಷ್ಟು ಪ್ರಾಂಜಲ ಮನಸ್ಸಿನಿಂದ ಹಂಪನಾ ಅವರು ವಾಸ್ತವ ಸಂಗತಿಗಳನ್ನು ಬಯಲಿಗೆಳೆದಿದ್ದಾರೆ. ಒಂದು ಕಾಲಕ್ಕೆ ಅಧ್ಯಕ್ಷರನ್ನು ಹುಡುಕುವುದೇ ಸಮಸ್ಯೆಯಾಗಿದ್ದರೆ, ಈಗ ಹಲವರಲ್ಲೊಬ್ಬರನ್ನು ಆಯ್ಕೆ ಮಾಡುವುದೇ ದುಸ್ತರವಾಗಿದೆ! ಅದರಲ್ಲಿ ರಾಜಕೀಯವೂ ನುಸುಳಿ ನೂರಕ್ಕೆ ನೂರರಷ್ಟು ಯೋಗ್ಯರು ಆಯ್ಕೆಯಾಗದೆ ಯಾರೋ ಬಂದು ಗದ್ದುಗೆ ಅಲಂಕರಿಸಿದ್ದನ್ನು ಒಪ್ಪುತ್ತಾರೆ. ಯೋಗ್ಯತೆ ಇದ್ದೂ ಅಧ್ಯಕ್ಷ ಪಟ್ಟ ಸಿಗದೆ ಹೋದ ತೀ.ನಂ.ಶ್ರೀ.. ಮಿರ್ಜಿ ಅಣ್ಣಾರಾಯ ಮತ್ತು ಬೇಟಗೇರಿಯವರಂಥ ಹಲವು ಗಣ್ಯರನ್ನು ಕಳಕಳಿಯಿಂದ ಗುರುತಿಸಿದ್ದಾರೆ. ನಮ್ಮ ದೇಶದಲ್ಲಿ ಸ್ಥಾನಬಲದಿಂದ ವ್ಯಕ್ತಿ ದೊಡ್ಡವನಾಗುವ ಸಂಪ್ರದಾಯ ಬೆಳೆದು ಬಂದಿದೆ. ಆದರೆ ವ್ಯಕ್ತಿ ಸ್ಥಾನವನ್ನು ಹಿರಿದು ಮಾಡುವ ಶಕ್ತಿ ಪಡೆದುಕೊಂಡಿಲ್ಲ. ನಮಗೆಲ್ಲ ಖುರ್ಚಿ ಪ್ರಮಾಣ ಪತ್ರವಲ್ಲದೆ ಯೋಗ್ಯತೆ ಅಲ್ಲ. ಈ ಮಾತು ಸಾಹಿತ್ಯ ಸಮ್ಮೇಳನದ ಅಧ್ಯಕ್ಷಪದವಿಗೂ ಅನ್ವಯಿಸುವುದು ತೀರ ವಿಷಾದದ ಸಂಗತಿ ಹೀಗಿರುವಾಗ ಅಧ್ಯಕ್ಷರಾಗುವ ಅವಕಾಶ ಸಿಗದವರನ್ನು ಅಯೋಗ್ಯರೆಂದು ಎಂದೂ ಹೇಳಲಾಗದು. ಅದರಂತೆ ಅಧ್ಯಕ್ಷರಾದವರೆಲ್ಲ ಬಹಳ ದೊಡ್ಡವರೆಂದು ಪರಿಗಣಿಸುವುದೂ ತಪ್ಪು. ಇಂಥ ಲೋಪ-ದೋಷಗಳ ಕಡೆಗೆ ನಿಕಟಾನುಭವಿ ಹಂಪನಾ ಅವರು ಗಮನ ಹರಿಯಿಸಿದ್ದು ಈ ಕೃತಿಯ ಮೌಲ್ಯ ಹೆಚ್ಚಿಸಿದೆ.

ಡಾ. ಮ. ಗು. ಬಿರಾದಾರ

## ಸಮ್ಮೇಳನಾಧ್ಯಕ್ಷರು

ಪ್ರಕಟವಾದ ಎಲ್ಲ ರೀತಿಯ ಗ್ರಂಥಗಳ್ನು ಒಂದೇ ಅಳತೆ ಗೋಲಿನಿಂದ ಮೌಲ್ಯಮಾಪನ ಮಾಡಲಾಗದು. ಅವುಗಳ ವಸ್ತು, ಉದ್ದೇಶ ಮೊದಲಾದವುಗಳನ್ನು ಪರಿಗಣನೆಗೆ ತೆಗೆದು ಕೊಂಡು, ಅವುಗಳನ್ನು ವಿವಿಧ ಚೌಕಟ್ಟಿನಲ್ಲಿ–ನಿಟ್ಟಿನಲ್ಲಿ ಅಳೆಯ ಬೇಕಾಗುತ್ತದೆ. ಕೃತಿ ಸೃಜನಾತ್ಮಕವಿರಬಹುದು, ಸಂಪಾದಿತ ವಿರಬಹುದು. ಇಲ್ಲವೆ ನಾಳಿನ ಜನಾಂಗಕ್ಕೆ ಬೇಕಾಗಬಹುದಾದ ಐತಿಹಾಸಿಕ ಮಾಹಿತಿಗಳ ದಾಖಲೆಯಾಗಿರಬಹುದು. ಇದ ರಿಂದಾಗಿಯೇ ಕೃತಿಯನ್ನು ಮೇಲು ಕೀಳೆಂದು ಬಗೆಯಲಾಗದು. ಕೃತಿಯ ಉಪಯುಕ್ತತೆಯನ್ನು ಪ್ರಮುಖವಾಗಿ ಗಮನಿಸ ಬೇಕಾದುದಾದರೂ ಕೃತಿಯ ಅಭಿವ್ಯಕ್ತಿಯ ಶಕ್ತಿ, ಅದು ಸಹೃದಯರ ಮೇಲೆ ಬೀರಬಹುದಾದ ಪ್ರಭಾವಗಳನ್ನು ವಿಶೇಷ ವಾಗಿ ಗಣಿಸಬೇಕಾಗುತ್ತದೆ.

'ಸಮ್ಮೇಳನಾಧ್ಯಕ್ಷರು' ಕೃತಿ ನಾಳಿನ ಕನ್ನಡ ಕುಲಕ್ಕೆ ಕನ್ನಡ ನುಡಿ, ಕನ್ನಡ ಸಾಹಿತ್ಯವನ್ನು ಕುರಿತು ಇಂದಿನವರು, ಹಿಂದಿ ನವರು ಮಾಡಿದ ಚಿಂತನ ಮಂಥನವಲ್ಲದೆ ಸಾಹಿತ್ಯ ಕೃಷಿಯ ನಿಚ್ಚಳ ಕಲ್ಪನೆ ಮೂಡಿಸುವ ಒಂದು ಸಫಲ ಗ್ರಂಥ. ಹಂಪ. ನಾಗರಾಜಯ್ಯನವರು ಕನ್ನಡ ಸಾಹಿತ್ಯ ಪರಿಷತ್ತಿಗೆ ಅಧ್ಯಕ್ಷರಾಗಿ ಹಲವಾರು ಒಳಿತನ್ನು ಮಾಡಿದರಾದರೂ ಒಬ್ಬ ಲೇಖಕನಾಗಿ ಮಾಡಿದ ಈ ಕೆಲಸ ಸದಾ ಸ್ಮರಣೀಯ. ಲೆಕ್ಕಪತ್ರದ ವಹಿಯ ಆಕಾರದಲ್ಲಿ ಪ್ರಕಟವಾದ ಮುನ್ನೂರಾ ಇಪ್ಪತ್ತೇಳು ಪುಟಗಳ ಈ ಗ್ರಂಥ ನಡೆದು ಬಂದ ಕನ್ನಡ ಕಾರ್ಯದ ಒಂದು ದೃಷ್ಟಿಯ ಲೆಕ್ಕಪತ್ರವೇ ಆಗಿದೆ. ಹಲವಾರು ಕನ್ನಡ ಸಮ್ಮೇಳನಗಳನ್ನು ನಡೆಯಿಸಿಕೊಂಡು ಬಂದ ವ್ಯಾಪಕ ಅನುಭವ ಅವರಿಗಿರುವುದ ರಿಂದ ಇಂಥ ಕೃತಿಯನ್ನು ಸಮರ್ಥವಾಗಿ ವಿರಚಿಸಲು ಸಾಧ್ಯ ವಾಗಿದೆ.

ಐವತ್ತೇಳು ಕನ್ನಡ ಸಾಹಿತ್ಯ ಸಮ್ಮೇಳನಗಳನ್ನು ನಡೆಸಿದ್ದೇವೆ. ಈ ಸಂಖ್ಯೆ ಹೀಗೇ ಮುಂದುವರಿಯುತ್ತಿದೆ. ಆದರೆ ಸಮ್ಮೇಳನಗಳು ಹೇಗೆ ನಡೆದವು ? ಮುಂದೆ ಹೇಗೆ ನಡೆಯಬೇಕಾಗಿದೆ ? ಅವುಗಳ ಅರಕೆಗಳಾವುವು ? ಉತ್ತಮ ಅಂಶಗಳೆಷ್ಟು ? ಸಮ್ಮೇಳನ ಎಲ್ಲಿ, ಯಾವಾಗ, ಯಾರ ಅಧ್ಯಕ್ಷತೆಯಲ್ಲಿ ನೆರವೇರಿತು ? ಅಧ್ಯಕ್ಷರು ಏನು ಅಪ್ಪಣೆ ಕೊಡಿಸಿದರು ? ಒಂದು ಸಾಹಿತ್ಯ ಸಮ್ಮೇಳನದಿಂದ ಇನ್ನೊಂದು ಹೇಗೆ ಎಷ್ಟರಮಟ್ಟಿಗೆ ಭಿನ್ನವಾಯಿತು ? ಹೀಗೆ ಹಲವಾರು ಮಾಹಿತಿಗಳ ಸಂಗ್ರಹ ಒಂದೆಡೆಗೆ ಸಿಕ್ಕುವುದು ಬಹಳ ಅವಶ್ಯವಿತ್ತು. ಅಷ್ಟೇ ಅಲ್ಲ ಒಂದು ಸಮ್ಮೇಳನವನ್ನು ಇನ್ನೊಂದರೊಡನೆ ಹೋಲಿಸಿ ನೋಡುವ ಅವಕಾಶವನ್ನೂ ಈ ಗ್ರಂಥ ಕಲ್ಪಿಸಿಕೊಟ್ಟಿದೆ. ನಡೆದು ಹೋದ ಕಾರ್ಯದ ಸ್ಮೃತಿಗಳನ್ನು ಸಂಗ್ರಹಿಸಿಡುವುದೂ ಅಷ್ಟೇ ಮಹತ್ವದ ಕಾರ್ಯ. ಸಮ್ಮೇಳನಾಧ್ಯಕ್ಷರ ಜೀವನ, ಅವರ ಸಾಹಿತ್ಯಿಕ ಸಾಧನೆಗಳ ಅರಿವು ಮುಂಬರುವ ಕನ್ನಡ ಸಾಹಿತ್ಯ ಸಾಧಕರಿಗೆ ಮಾರ್ಗದರ್ಶನಕ್ಕಾದರೂ ಅತ್ಯವಶ್ಯಕವಲ್ಲವೇ ? ಇದನ್ನೆಲ್ಲಾ ಮನಗಂಡು, ಹಂಪನಾ ಅವರು ಈ 'ಸಮ್ಮೇಳನಾಧ್ಯಕ್ಷರು' ಕೃತಿಯನ್ನು ರಚಿಸಿ, ಸಾಹಿತ್ಯ ಸಮ್ಮೇಳನಗಳ ಅನುಕ್ರಮವಾದ ಇತಿಹಾಸವನ್ನೇ ನಿರೂಪಿಸಿದ್ದಾರೆ.

ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರು ನಡೆದು ಬಂದ ಹಾದಿ ಎಂದು ಬರೆಯುತ್ತ. ಬಹಳಷ್ಟು ಪ್ರಾಂಜಲ ಮನಸ್ಸಿನಿಂದ ಹಂಪನಾ ಅವರು ವಾಸ್ತವ ಸಂಗತಿಗಳನ್ನು ಬಯಲಿಗೆಳೆದಿದ್ದಾರೆ. ಒಂದು ಕಾಲಕ್ಕೆ ಅಧ್ಯಕ್ಷರನ್ನು ಹುಡುಕುವುದೇ ಸಮಸ್ಯೆಯಾಗಿದ್ದರೆ, ಈಗ ಹಲವರಲ್ಲೊಬ್ಬರನ್ನು ಆಯ್ಕೆ ಮಾಡುವುದೇ ದುಸ್ತರವಾಗಿದೆ ! ಅದರಲ್ಲಿ ರಾಜಕೀಯವೂ ನುಸುಳಿ ನೂರಕ್ಕೆ ನೂರರಷ್ಟು ಯೋಗ್ಯರು ಆಯ್ಕೆಯಾಗದೆ ಯಾರೋ ಬಂದು ಗದ್ದುಗೆ ಅಲಂಕರಿಸಿದ್ದನ್ನು ಒಪ್ಪುತ್ತಾರೆ. ಯೋಗ್ಯತೆ ಇದ್ದೂ ಅಧ್ಯಕ್ಷ ಪಟ್ಟ ಸಿಗದೆ ಹೋದ ತೀ.ನಂ.ಶ್ರೀ., ಮಿರ್ಜಿ ಅಣ್ಣಾರಾಯ ಮತ್ತು ಬೇಟಗೇರಿಯವರಂಥ ಹಲವು ಗಣ್ಯರನ್ನು ಕಳಕಳಿಯಿಂದ ಗುರುತಿಸಿದ್ದಾರೆ. ನಮ್ಮ ದೇಶದಲ್ಲಿ ಸ್ಥಾನಬಲದಿಂದ ವ್ಯಕ್ತಿ ದೊಡ್ಡವನಾಗುವ ಸಂಪ್ರದಾಯ ಬೆಳೆದು ಬಂದಿದೆ. ಆದರೆ ವ್ಯಕ್ತಿ ಸ್ಥಾನವನ್ನು ಹಿರಿದು ಮಾಡುವ ಶಕ್ತಿ ಪಡೆದುಕೊಂಡಿಲ್ಲ. ನಮಗೆಲ್ಲ ಖುರ್ಚಿ ಪ್ರಮಾಣ ಪತ್ರವಲ್ಲದೆ ಯೋಗ್ಯತೆ ಅಲ್ಲ. ಈ ಮಾತು ಸಾಹಿತ್ಯ ಸಮ್ಮೇಳನದ ಅಧ್ಯಕ್ಷಪದವಿಗೂ ಅನ್ವಯಿಸುವುದು ತೀರ ವಿಷಾದದ ಸಂಗತಿ ಹೀಗಿರುವಾಗ ಅಧ್ಯಕ್ಷರಾಗುವ ಅವಕಾಶ ಸಿಗದವರನ್ನು ಅಯೋಗ್ಯರೆಂದು ಎಂದೂ ಹೇಳಲಾಗದು. ಅದರಂತೆ ಅಧ್ಯಕ್ಷರಾದವರೆಲ್ಲ ಬಹಳ ದೊಡ್ಡವರೆಂದು ಪರಿಗಣಿಸುವುದೂ ತಪ್ಪು. ಇಂಥ ಲೋಪ-ದೋಷಗಳ ಕಡೆಗೆ ನಿಕಟಾನುಭವಿ ಹಂಪನಾ ಅವರು ಗಮನ ಹರಿಯಿಸಿದ್ದು ಈ ಕೃತಿಯ ಮೌಲ್ಯ ಹೆಚ್ಚಿಸಿದೆ.

ಸಮ್ಮೇಳನ ಅಧ್ಯಕ್ಷರನ್ನು ಆಯ್ಕೆ ಮಾಡಲು ಪಾಲಿಸಬೇಕಾದ ವಿಧಾನವನ್ನು ಎಷ್ಟೇ ಪ್ರಜಾಸತ್ತಾತ್ಮಕವೆಂದು ಹೇಳಿದರೂ ಆಯ್ಕೆಯಲ್ಲಿ ಉದ್ಭವಿಸುವ ಸಮಸ್ಯೆಗಳು ಸ್ವಾರ್ಥ ಸಂಕುಚಿತ ಮನೋವೃತ್ತಿಯ ಸದಸ್ಯರನ್ನವಲಂಬಿಸಿರುವುದರಿಂದ ಸಾಹಿತ್ಯ ಸಾಧನೆ ಗೌಣವಾಗಿ, ಜಾತಿ ಪ್ರದೇಶಗಳಂಥ ಭಾವನೆಗಳೇ ಪ್ರಮುಖವಾಗಿ ಕೆಲಸ ಮಾಡುತ್ತವೆ. ಇದಕ್ಕೆ ಸಾಹಿತಿಗಳಲ್ಲದವರು ಸದಸ್ಯರಾಗಿರುವುದೊಂದು ಹಿರಿಕಾರಣ ವೆಂದೇ ಹೇಳಬೇಕಾಗುತ್ತದೆ. ಅದಲ್ಲದೆ ನಾವೆಲ್ಲ ಕರ್ನಾಟಕದವರಾದರೂ ಪ್ರಾದೇಶಿಕ, ಜಾತಿಯ ವಲಯಗಳನ್ನು ಹರಿದು ಕನ್ನಡಿಗರಾಗಿಲ್ಲ ಎಂಬುದೂ ಸ್ಪಷ್ಟ. ಹೀಗಿರುವಾಗ ಅಧ್ಯಕ್ಷಪದ ಅರ್ಹತೆಯನ್ನವಲಂಬಿಸಿ ನಿರ್ಣಯವಾಗುವ ಕಾಲ ಇನ್ನೂ ಬರಬೇಕಿದೆ.

ಸಮ್ಮೇಳನದ ಹೆಸರಿನಲ್ಲಿ ಕನ್ನಡದ ಜಾತ್ರೆಯಾಗುತ್ತಿದ್ದ ಕಾಲ ಒಂದಿತ್ತು. ಅದು ಇಂದು ಒಂದು ವ್ಯವಸ್ಥೆಗೆ ಬಂದಿದೆಯಾದರೂ ಒಳಗೊಳಗೇ ಹೊಗೆಯಾಡುವ ಅತೃಪ್ತ ಮನಸ್ಸುಗಳನ್ನೂ ಈ ಗ್ರಂಥ ಗುರುತಿಸಿದೆ. ಹೀಗಾಗಿ ಸಮ್ಮೇಳನಗಳು ಮೇಳಗಳಾಗಿವೆಯೇ ಹೊರತು ಸಂಪೂರ್ಣ ಸಮ್ಮೇಳನಗಳಾಗಿಲ್ಲ. ಇದಕ್ಕೆ ಕಾರಣ ವ್ಯಕ್ತಿಯಲ್ಲಿಯ ಅನರ್ಹತೆಯ ಅತ್ಯಾಸೆ ಎಂದೇ ಹೇಳಬೇಕು. ನಾಡು, ನುಡಿಯ ಸಾಮೂಹಿಕ ಹಿತಾಸಕ್ತಿಯನ್ನು ಗಮನಿಸದ ನಾವು, ವೈಯಕ್ತಿಕ ಪ್ರತಿಷ್ಠೆಯಲ್ಲಿ ತೊಡಗಿದ್ದೇವೆ. ರಾಜಕೀಯ ಪೈಪೋಟಿ ಸಾಹಿತ್ಯದಲ್ಲಿಯೂ ನಡೆದು ಸಾಹಿತ್ಯ, ಸಂಸ್ಕೃತಿಯ ಮುಖವಾಡಗಳು ಕಳಚಿಬೀಳಹತ್ತಿವೆ. ಹಂಪನಾ ಅವರ ಮಾತಿನಲ್ಲಿ ಇದೆಲ್ಲ ಧ್ವನಿತವಾಗಿದೆ. ಈ ವಿಚಾರಗಳು ಕನ್ನಡ ಸಾಹಿತಿಗಳನ್ನು ಆತ್ಮಶೋಧನೆಗೆ ತೊಡಗಿಸಬೇಕಲ್ಲದೆ ಅನವಶ್ಯಕ ವ್ಯಾಜ್ಯಕ್ಕಲ್ಲ. ಸಮ್ಮೇಳನದ ಅಧ್ಯಕ್ಷ ಪದವಿ ಒಂದು ಜನಾಂಗದ ಗೌರವವಲ್ಲದೆ ಅಧಿಕಾರದ ನೆಲೆ ಅಲ್ಲ. ಆರ್ಥಿಕ ಸೆಲೆ ಅಲ್ಲ ಎಂಬ ಮಾತು ಈ ಗ್ರಂಥ ಓದಿದ ಯಾರಿಗೂ ಅನ್ನಿಸುವ ಪ್ರಾಮಾಣಿಕ ಅನಿಸಿಕೆ.

ಗ್ರಂಥದ ಪ್ರಮುಖ ಭಾಗ ಮತ್ತು ಉದ್ದೇಶ ಐವತ್ತೈದು ಜನ ಸಮ್ಮೇಳನದ ಅಧ್ಯಕ್ಷರುಗಳ ಸ್ಥೂಲ ಪರಿಚಯ, ಪರಿಚಯ, ಜೀವನ ಸಾಧನೆ, ಪರಿಷತ್ತಿನೊಂದಿಗೆ ; ಪ್ರಶಸ್ತಿ ಮತ್ತು ಅಧ್ಯಕ್ಷ ಪೀಠದಿಂದ ಹೀಗೆ ಆರು ವಿಭಾಗಗಳಲ್ಲಿ ಅಧ್ಯಕ್ಷರುಗಳ ಕಿರು ಪರಿಚಯ, ಕಿರಿಯ ಕನ್ನಡಿಯಲ್ಲಿಳವಡಿಸಿದಂತೆ ಅಚ್ಚುಕಟ್ಟಾಗಿ, ಸಮಗ್ರ ಕಲ್ಪನೆ ಬರುವಂತೆ ನಿರೂಪಿತವಾಗಿದೆ. ಸಕಾಲಕ್ಕೆ ಸಿಗದಿರಬಹುದಾದ ಆರು ಜನರ ಫೋಟೋಗಳನ್ನು ಬಿಟ್ಟು ಉಳಿದೆಲ್ಲರ ಫೋಟೋಗಳನ್ನೊಳಗೊಂಡ ಈ ಕೃತಿ ಅಧ್ಯಕ್ಷರುಗಳ ಸ್ಪಷ್ಟ ಕಲ್ಪನೆ ಕೊಡುವಲ್ಲಿ ಹೆಚ್ಚು ಸಹಾಯಕಾರಿಯಾಗಿದೆ. ಸಾಮಾನ್ಯ ಓದುಗರಿಗೂ ತಿಳುವಳಿಕೆ ನೀಡುವ ಈ ಭಾಗ ಹಂಪನಾ ಅವರ ಗದ್ಯ ಶೈಲಿಯ ವೈಶಿಷ್ಟ್ಯಕ್ಕೊಂದು ಸಾಕ್ಷಿಯಾಗಿದೆ. ಅರಳು ಹುರಿದಂತೆ ಮಾತನಾಡಬಲ್ಲ ಹಂಪನಾ ಅವರು ಹೂ ಅರಳಿದಂತೆ ಗದ್ಯ ಬರೆಯಬಲ್ಲರು ಎಂಬುದಕ್ಕೆ ಈ ಕೃತಿ ನಿದರ್ಶನ

ವಾಗಿದೆ. ಚಿಕ್ಕ ಚಿಕ್ಕ ವಾಕ್ಯಗಳಲ್ಲಿ ಕಂಡರಿಸಿದ ವ್ಯಕ್ತಿಚಿತ್ರ, ಶುದ್ಧ. ವಾಸ್ತವ ಬದುಕಿನ ನೇರದರ್ಶನ ಓದುಗರಿಗೆ ನಿರಾಯಾಸವಾಗಿ ಸಿಕ್ಕುವಂತಾಗಿದೆ.

ಅಧ್ಯಕ್ಷ ಪೀಠದಿಂದ ಅಪ್ಪಣೆ ಕೊಡಿಸಿದ ಭಾಗಗಳ ಪ್ರಮುಖ ಅಂಶಗಳ ನ್ನಾಯುವಲ್ಲಿ ಹಂಪನಾ ತೋರಿದ ಬುದ್ಧಿವಂತಿಕೆಯಿಂದಾಗಿ ಕನ್ನಡದ ಕೆಲಸದ ಪರಿಪೆ ಓದುಗನಿಗೆ ಬರುವಂತಾಗಿದೆ. ಈ ಎಲ್ಲ ಭಾಗಗಳನ್ನು ಅಧ್ಯಯನ ಮಾಡುವುದರಿಂದ ಕಾಲದಿಂದ ಕಾಲಕ್ಕೆ ಉದ್ಭವಿಸಿದ ಕನ್ನಡದ ಸಮಸ್ಯೆಗಳ ಅರಿವು ಮೂಡುತ್ತದೆ. ಕನ್ನಡ ಮಾಧ್ಯಮದಂಥ ಸಮಸ್ಯೆ ಎಷ್ಟು ಹಳೆಯದು? ಎಷ್ಟು ಪ್ರಮುಖ ಎನ್ನುವುದರ ಕಲ್ಪನೆ ಓದುಗನಿಗೆ ಮೂಡುತ್ತದೆ. ಕನ್ನಡ ಭಾಷೆ. ಸಾಹಿತ್ಯ. ಸಂಸ್ಕೃತಿ. ಜನಾಂಗವನ್ನು ಕುರಿತು ಕಾಲ ಕಾಲಕ್ಕೆ ಇದ್ದ ಚಿಂತನೆಗಳು ನಮ್ಮನ್ನು ಎಚ್ಚರಗೊಳಿಸುತ್ತವೆ. ಏಕೀಕರಣ ಪೂರ್ವದ ಕನ್ನಡಿಗರ ಸ್ಥಿತಿಯನ್ನು ಅರ್ಥಮಾಡಿಕೊಳ್ಳಲು ದ. ರಾ. ಬೇಂದ್ರೆ ಅವರ ಮಾತು "ನಮ್ಮ ಕನ್ನಡನಾಡು ಇನ್ನೂ ನಮ್ಮದಾಗಿಲ್ಲ. ಒತ್ತೆಯ ಮನೆಯಲ್ಲಿ ಒಕ್ಕಲರಂತೆ ನಾವು ಬದುಕು ಮಾಡುತ್ತಿದ್ದೇವೆ. ಇದು ಸಲ್ಲದು. ಮಹಾರಾಷ್ಟ್ರ ಸಿಂಹದ ಕೈಯಲ್ಲಿ ಕೆಲವು ಭಾಗ, ನಿಜಾಮ ಮಹಾಪ್ರಭುಗಳ ನೆರಳಲ್ಲಿ ಕೆಲವು. ಶ್ರೀ ಮನ್ಮಹಾರಾಜರ ಕೃಪಾ ಛತ್ರದಲ್ಲಿ ಸ್ವಲ್ಪ, ಬ್ರಿಟಿಷ್ ಸಾಮ್ರಾಜ್ಯದ ಹೊಟ್ಟೆಯಲ್ಲಿ ಕೆಲವು—ನಮ್ಮೊಳಗೆ ನಾವೇ ಒಂದಲ್ಲ ಎಂಬಂತೆ ಹಲವು" ಅಂದಿನ ಕನ್ನಡಿಗರ ಸ್ಥಿತಿಗತಿಯ ಕಲ್ಪನೆ ಕೊಡುವುದರ ಜೊತೆಗೆ ಏಕೀಕೃತ ಕರ್ನಾಟಕದ ಇಂದಿನ ಸ್ಥಿತಿಯನ್ನು ಅಣಕವಾಡುವಂತಿದೆ. ಕರ್ನಾಟಕದ ಮಣ್ಣು ಒಂದಾಗಿದೆ. ಮನ ಮಾತ್ರ ಕನ್ನಡವಾಗದೆ ಪ್ರದೇಶ, ಜಾತಿಗಳ ಗುಂಪುಗಾರಿಕೆಯಿಂದ ಕೂಡಿದ್ದನ್ನು ಅಲ್ಲಗಳೆಯದ ಸ್ಥಿತಿ ನಮಗಿದೆ. ಹೀಗೆ 'ಸಮ್ಮೇಳನಾಧ್ಯಕ್ಷರು' ಅಭಿವ್ಯಕ್ತಪಡಿಸಿದ ಹಲವಾರು ಆಶೋತ್ತರಗಳಲ್ಲಿ ಹುದುಗಿದ್ದ ಕಳಕಳಿಗೆ ಅವರ ವಾರಸುದಾರರಾದ ನಾವು ಏನು ಮಾಡಿದ್ದೇವೆ? ಏನು ಮಾಡುತ್ತಿದ್ದೇವೆ ಎಂಬುದನ್ನು ವಿಮರ್ಶಿಸಿಕೊಳ್ಳಬೇಕಾಗಿದೆ. ಸಾಮಾನ್ಯರ ಮಾತಿರಲಿ, ಸಾಹಿತಿಗಳಾದರೂ ಈ ದಿಸೆಯಲ್ಲಿ ಎಷ್ಟು ಪರಿಶುದ್ಧರು! ಇಂಥ ಹಲವಾರು ಕನ್ನಡ ಜನಮನದ ಸಮಸ್ಯೆಗಳಿಗೆ ನಾವಿಂದು ಪರಿಹಾರ ಕಂಡುಕೊಳ್ಳುವುದಿರಲಿ ಪರಿಹಾರ ಹುಡುಕುವ ಪ್ರಯತ್ನದಲ್ಲಾದರೂ ಇದ್ದೇವೆಯೇ? ಇಂಥ ಸಾವಿರಾರು ಪ್ರಶ್ನೆಗಳನ್ನು ಪ್ರಜ್ಞಾವಂತರಲ್ಲಾದರೂ ಮೂಡಿಸುವ ಕಾರ್ಯ ಈ ಕೃತಿ ಮಾಡಿದೆ. ಇದು ಸತ್ತವರ ಕಥೆಯಲ್ಲ. ಕಳೆದುಹೋದ ವಿಷಯವಲ್ಲ, ಕಲ್ಪನೆಯ ಕಾದಂಬರಿಯಲ್ಲ. ನಮ್ಮ ಭಾಷೆ, ಪರಂಪರೆ, ಸಂಸ್ಕೃತಿ. ಸಾಹಿತ್ಯಿಕ ವಿಚಾರಗಳ ಜೀವಂತಿಕೆಯ ಸರಮಾಲೆ. ಸಾಹಿತ್ಯ. ಸಂಸ್ಕೃತಿ ಸಾಗಿಬಂದ ದಾರಿಯಲ್ಲಿ ಇದೊಂದು ವಿಶಿಷ್ಟ ಮೈಲುಗಲ್ಲೆಂದು ಹೇಳುವುದು ಅತಿಶಯೋಕ್ತಿಯೇನಲ್ಲ. ಹಂಪನಾ ಅವರು ಪರಿಷತ್ತಿನಲ್ಲಿಯ ಸಾಹಿತ್ಯಿಕ ದಾಖಲೆಗಳ ಸದುಪಯೋಗಪಡಿಸಿಕೊಂಡುದರ ಸಾರ್ಥಕತೆಗೆ ಈ 'ಸಮ್ಮೇಳನಾಧ್ಯಕ್ಷರು' ಒಂದು ಉತ್ತಮ ಸಾಕ್ಷಿ.

ಈ ಕೃತಿಯು ಒಂದು ದೃಷ್ಟಿಯಿಂದ ಕನ್ನಡ ಸಾಹಿತ್ಯ ಸಮ್ಮೇಳನಗಳ ಸ್ಥಳ ಕಾಲ ಮೊದಲಾದ ವಿವರಗಳನ್ನು ಅವುಗಳ ಅಧ್ಯಕ್ಷರುಗಳ ಜೀವನ, ವಿರಚಿತ ಕೃತಿಗಳನ್ನು ತಿಳಿದುಕೊಳ್ಳಬೇಕೆನ್ನುವ ನಾಳಿನ ಪೀಳಿಗೆಗೆ (Ready Reference) ಸಿದ್ಧಪಡಿಸಿಟ್ಟ ಆಕರ ಗ್ರಂಥವಾಗಿದೆ. ಕೊನೆಗೆ ಕೊಟ್ಟ ಅಧ್ಯಕ್ಷರುಗಳ ಪ್ರಕಟಿತ–ಕೃತಿಗಳ ಇಸ್ವಿಸಹಿತ ಪಟ್ಟಿ ಬಹಳ ಉಪಯುಕ್ತ ಮಾಹಿತಿ ಸಂಗ್ರಹವಾಗಿದೆ. ಒಂದು ದೃಷ್ಟಿಯಿಂದ ಇದು ಕನ್ನಡ ಕಾರ್ಯದ ಸ್ವರ್ಣ ಸಂಪುಟದ ಬಹಳ ಉಪಯುಕ್ತ ಭಾಗವೆಂದೇ ಹೇಳಬೇಕು.

ಸಮ್ಮೇಳನಗಳಲ್ಲಿ ತೆಗೆದುಕೊಂಡ ಕೆಲವು ಮುಖ್ಯ ನಿರ್ಣಯಗಳ ಪಟ್ಟಿ ಕಳೆದ ಕಾಲದ ಕನ್ನಡದ ಸಮ್ಮೇಳನಗಳಿಗೆ ಬೆಳಕಿನ ಕಿಂಡಿಯಾಗಿದೆ. ಅದನ್ನು ನೋಡಿದಾಗ 'ಸಾಹಿತಿಗಳ ನಿರ್ಣಯಗಳಿಗೆ ಏನು ಬೆಲೆಯಿದೆ' ಎಂದು ನೊಂದುಕೊಳ್ಳಬೇಕಾದ ಪ್ರಸಂಗ ನಮ್ಮ ಪಾಲಿನದಾಗುತ್ತದೆ. ಶಿಕ್ಷಣ ಕನ್ನಡ ಭಾಷೆಯ ಮೂಲಕ ನಡೆಯಬೇಕು ಮತ್ತು ಕನ್ನಡ ರಾಜ್ಯಭಾಷೆಯಾಗಬೇಕು. ಅಂಚೆ ಇಲಾಖೆಯ ಮನಿಯಾರ್ಡರ್ ಮೊದಲಾದ ಫಾರ್ಮುಗಳು, ರೈಲ್ವೇ ಗೈಡು ಕನ್ನಡದಲ್ಲಿಯೂ ಇರಬೇಕು ಎಂದು ಮೇ ೧೯೧೯ರಲ್ಲಿ ಐದನೆಯ ಸಾಹಿತ್ಯ ಸಮ್ಮೇಳನದಲ್ಲೇ ತೆಗೆದುಕೊಂಡ ನಿರ್ಣಯಗಳು ! ಕಾಗದದಲ್ಲಿ ಬಿತ್ತಿದ ಈ ಕರಿಯ ಬೀಜಗಳು ಎಪ್ಪತ್ತು ವರ್ಷ ಕಳೆದರೂ ಮೊಳೆತು ಮರವಾಗಿ ಫಲಬಿಟ್ಟಿಲ್ಲ. ಇಂದೂ ಈ ಸಮಸ್ಯೆಗಳು ಜ್ವಲಂತವಾಗೇ ಇವೆ. ಕನ್ನಡವನ್ನು ಆಡಳಿತ ಭಾಷೆಯಾಗಿಸುವ, ಶಿಕ್ಷಣ ಮಾಧ್ಯಮವಾಗಿಸುವ ಪ್ರಯತ್ನದಲ್ಲೇ ಇದ್ದೇವೆ. ಅಂಚೆ-ರೈಲ್ವೆಯಂಥ ಕೇಂದ್ರದ ಇಲಾಖೆಗಳಂತೂ ಸರಿಯೇ ಸರಿ. ಕರ್ನಾಟಕದ ಎಷ್ಟೋ ಇಲಾಖೆಗಳಲ್ಲಿ ಕನ್ನಡ ಇನ್ನೂ ಕಣ್ಣೇ ತೆರೆದಿಲ್ಲ.

ಇದರಂತೆ ಪರಿಷತ್ತಿನ ಶಾಖೆಗಳನ್ನು ಪ್ರತಿಯೊಂದು ಜಿಲ್ಲೆಯಲ್ಲಿ ಸ್ಥಾಪಿಸಬೇಕೆಂಬುದು ಹನ್ನೆರಡನೆಯ ಬಳ್ಳಾರಿ ಸಾಹಿತ್ಯ ಸಮ್ಮೇಳನದಲ್ಲಿ ೧೯೨೬ರಲ್ಲಿ ತೆಗೆದುಕೊಂಡ ನಿರ್ಣಯ. ಆದರೆ ಪರಿಷತ್ತು ಇನ್ನೂ ಬೆಂಗಳೂರ ಕೇಂದ್ರ ಬಿಟ್ಟು ಕೆಳಗಿಳಿಯದೆ ಕೇವಲ ಕೆಲವರ ಕಪಿ ಮುಷ್ಟಿಯಲ್ಲೇ ಇದೆ. ೧೯೨೯ರ ಬೆಳಗಾವಿಯ ಸಮ್ಮೇಳನದಲ್ಲಿ ಬೆಳಗಾವಿ ಕೋರ್ಟಿನ ವ್ಯವಹಾರಗಳು ಮರಾಠಿಯಲ್ಲಿಯೂ ನಡೆಯಬೇಕೆಂಬ ಹೈಕೋರ್ಟಿನ, ಅದೇ ಆಗ ಬಂದ ಆದೇಶವನ್ನೂ ರದ್ದು ಮಾಡಿ ಮೊದಲಿನಂತೆ ಕನ್ನಡದಲ್ಲಿಯೇ ನಡೆಯಿಸಬೇಕೆಂದು ಸಮ್ಮೇಳನ ನಿರ್ಣಯ ತೆಗೆದುಕೊಂಡಿತು. ಆದರೆ ಇಂದು ಆ ಸಮಸ್ಯೆ ಇನ್ನಷ್ಟು ಉಲ್ಬಣವಾದುದನ್ನು ನಾವು ಅನುಭವಿಸುತ್ತಿದ್ದೇವೆ. ಬೆಳಗಾವಿಯನ್ನೇ ಕಬಳಿಸುವ ಯತ್ನ ನಡೆಯುತ್ತಿದೆ. ಇದೆಲ್ಲವನ್ನೂ ಗಮನಿಸಿದರೆ ಪರಿಷತ್ತಿನ ನಿರ್ಣಯಗಳು ಕಾರ್ಯಗತವಾಗುವ ಬದಲು, ಆ ಸಮಸ್ಯೆಗಳು ಮತ್ತಷ್ಟು ಜಟಿಲವಾಗುತ್ತ ನಡೆದಿವೆ ಎಂಬ ಕಲ್ಪನೆ ಬಂದು ಕನ್ನಡ ಅಭಿಮಾನಿಗಳಿಗೆ ಕಳವಳವನ್ನುಂಟುಮಾಡುತ್ತಿವೆ. ಇಂಥ ಹಲವಾರು ನಿರ್ಣಯಗಳು ಕಾರ್ಯ

ಗತವಾಗದಿರುವುದನ್ನು ನೋಡಿದರೆ ಈ ನಿರ್ಣಯ ತೆಗೆದುಕೊಳ್ಳುವ ನಾಟಕವನ್ನು ಸಮ್ಮೇಳನದ ಅಂಗವಾಗಿ ಯಾಕಾದರೂ ನಡೆಯಿಸಬೇಕು ಅನ್ನಿಸುತ್ತದೆ.

ಹೀಗೆ 'ಸಮ್ಮೇಳನಾಧ್ಯಕ್ಷರು' ಗ್ರಂಥ ಕನ್ನಡಿಗರನ್ನು ಆತ್ಮಶೋಧನೆಗೆ ತೊಡಗಿಸುತ್ತದೆ. ಇದು ಕೇವಲ ಪ್ರಯೋಜನಕಾರಿ ಕನ್ನಡದ ಕಾರ್ಯಗಳ ಮಾಹಿತಿ ನೀಡುವುದರ ಜೊತೆಗೆ ಕನ್ನಡದ ಸತ್ಕಾರ್ಯಕ್ಕೆ ಪ್ರಚೋದನೆಯನ್ನೂ ನೀಡುತ್ತದೆ. ಕನ್ನಡ, ಕನ್ನಡ ಸಾಹಿತ್ಯ ಪರಿಷತ್ತು ಮತ್ತು ಸಮ್ಮೇಳನಗಳನ್ನು ಕುರಿತು ಹೊಸ ಚಿಂತನೆಗಳಿಗೆ ದಾರಿ ಮಾಡಿಕೊಡುತ್ತದೆ. ಕನ್ನಡಿಗರ ಕರ್ತವ್ಯ ಪ್ರಜ್ಞೆಯನ್ನು ಜಾಗೃತಗೊಳಿಸುತ್ತದೆ.

ಪ್ರೊ॥ ಹಂಪನಾ ಅವರು ಸಮ್ಮೇಳನದ ಸಮಸ್ಯೆಗಳತ್ತ ದಿಕ್‌ಸೂಚನೆ ಕೊಡುತ್ತ ವಾಸ್ತವವಾದ ಸಿಂಹಾವಲೋಕನಕ್ಕೆ ಓದುಗರನ್ನು ತೊಡಗಿಸುತ್ತಾರೆ. ಕನ್ನಡಿಗರೆಲ್ಲರ ಹೆಮ್ಮೆಯ ಸಂಸ್ಥೆಯಾದ ಪರಿಷತ್ತಿನ ಕಾರ್ಯಕಲಾಪ ಮತ್ತು ಕನ್ನಡಿಗನಿಗೆ ಸಲ್ಲುವ ಗೌರವದ ಸ್ಥಾನವಾದ ಸಮ್ಮೇಳನಾಧ್ಯಕ್ಷರ ಆಯ್ಕೆಯ ವಿಷಯದಲ್ಲಿ ಆಸಕ್ತರ ಕಣ್ಣು ತೆರೆಯಿಸುವ ಕೆಲಸ ಮಾಡುತ್ತದೆ ಅವರ ಈ ಕೃತಿ. ನಿಜವಾಗಿಯೂ ಇದೊಂದು ಉಪಯುಕ್ತ ಗ್ರಂಥ.

ಬಿ. ಜಯದೇವಪ್ಪ

# ಗಡಿನಾಡ ಗಾಂಧೀ

ಜೀವನಚರಿತ್ರೆ, ಒಬ್ಬ ವ್ಯಕ್ತಿಯ ಪಲವು ವಿಧವಾದ ಜೀವನದ ಆಗುಹೋಗುಗಳನ್ನು ಪ್ರತಿಪಾದಿಸುತ್ತದೆ. ಅದು ಒಬ್ಬ ವ್ಯಕ್ತಿಯ ಚರಿತ್ರೆಯೂ ಆಗಿ ಆತನಿಂದ ಒಂದು ಜನಾಂಗ ಅಥವಾ ಒಂದು ನಾಡು ರೂಪಿತವಾಗುವುದನ್ನೂ ತಿಳಿಸುತ್ತದೆ. ಇಂತಹ ವ್ಯಕ್ತಿಗಳಲ್ಲಿ ಬರುವ ಅನೇಕ ಸ್ವಾತಂತ್ರ್ಯಪ್ರಿಯ ಹೋರಾಟಗಾರರ ಸಾಲಿನಲ್ಲಿ ಖಾನ್ ಅಬ್ದುಲ್ ಗಫಾರ್‌ಖಾನ್ ಅವರೂ ಒಬ್ಬರು. ಹಂಪ. ನಾಗರಾಜಯ್ಯನವರು ಮತ್ತು ಕಲ್ಲೆ ಶಿವೋತ್ತಮರಾವರು ಕೂಡಿ ಬರೆದಿರುವ 'ಗಡಿನಾಡ ಗಾಂಧಿ' ಎಂಬ ಪುಸ್ತಕವು ಖಾನ್ ಅಬ್ದುಲ್ ಗಫಾರ್‌ಖಾನರ ಜೀವನಚರಿತ್ರೆ ಆಗಿರುತ್ತದೆ. ಗಾಂಧೀಜಿಯವರ ನಿಕಟವರ್ತಿಗಳಾಗಿ ತಮ್ಮ ತನು ಮನ ಧನಗಳನ್ನು ಭಾರತದ ಸ್ವಾತಂತ್ರ್ಯ ಹೋರಾಟದಲ್ಲಿ ತೊಡಗಿಸಿಕೊಂಡು ಹೋರಾಡಿ ಇಂದು ಬದುಕಿರುವವರೂ ಇದ್ದಾರೆ. ಇಂತಹ ಹೋರಾಟಗಾರರಲ್ಲಿ ಹೆಚ್ಚಿನ ರೀತಿಯಲ್ಲಿ ಹೆಸರಾದ ಗಡಿನಾಡ ಗಾಂಧಿ ಎಂದು ಪ್ರಸಿದ್ಧಿಯಾಗಿರುವ ಖಾನ್ ಅಬ್ದುಲ್ ಗಫಾರ್‌ಖಾನ್ ಈಗ ನಮ್ಮ ಮಧ್ಯೆ ಬದುಕಿದ್ದಾರೆ. ಇವರಿಗೆ ಇತ್ತೀಚೆಗೆ ಭಾರತ ಸರ್ಕಾರವು 'ಭಾರತರತ್ನ' ಎಂಬ ಪ್ರಶಸ್ತಿಯನ್ನು ಕೊಟ್ಟು ಈ ಮಹನೀಯರ ಧೀರೋಧಾತ್ತ ವ್ಯಕ್ತಿತ್ವವನ್ನು ಗುರುತಿಸಿದೆ. ಇಂತಹ ಆದರ್ಶ–ವ್ಯಕ್ತಿಯ ನಿಷ್ಕಾಮ ಸೇವೆ, ಐಶ್ವರ್ಯವನ್ನು ಆಶಿಸದ ಮನೋಭಾವ, ಸತ್ಯ ಅಹಿಂಸೆಗಳನ್ನು ಅನುಸರಿಸಿದ ಸಂಕಲ್ಪ, ಇವುಗಳನ್ನು ಮೊದಲೇ ಗುರುತಿಸಿದ ಖಾನ್ ಅಬ್ದುಲ್ ಗಫಾರ್ ಖಾನ್ ಕರ್ನಾಟಕದ ಅಭಿನಂದನ ಸಮಿತಿಯವರು 'ಗಡಿನಾಡ ಗಾಂಧಿ' ಜೀವನ ಚರಿತ್ರೆಯನ್ನು ಹೊರತಂದಿರುವುದು ಅವರ ಸಮಯ ಪ್ರಜ್ಞೆಗೆ ಉದಾಹರಣೆಯಾಗಿದೆ. ೧೯೨೯ರಲ್ಲಿ ಖಾನ್ ಅಬ್ದುಲ್ ಗಫಾರ್‌ಖಾನರು ಗಾಂಧೀಜಿಯನ್ನು ಭೇಟಿ ಮಾಡಿ ಗಾಂಧೀಜಿಯವರ ಅಹಿಂಸಾ ತತ್ವವನ್ನು ಮೆಚ್ಚಿ ಅವರಂತೆಯೇ

ಭಾರತದ ಸ್ವಾತಂತ್ರ್ಯ ಸಂಗ್ರಾಮದ ಮುಂಚೂಣಿಯಲ್ಲಿ ಕೆಚ್ಚೆದೆಯಿಂದ ನಿಂತು ಹೋರಾಡಿದರು. ಯಾವ ಅಧಿಕಾರಕ್ಕೂ ಆಳಿಸದೆ ಅನ್ಯಾಯಗಳ ವಿರುದ್ಧ ಜೀವನ ಮುದ್ದಕ್ಕೂ ಸಿಡಿದೇಳುತ್ತಾ ಅನೇಕ ವರ್ಷಗಳು ಅವರು ಸೆರೆಮನೆವಾಸವನ್ನು ಅನುಭವಿಸಬೇಕಾಯಿತು. ಇವರು ಮಹಾತ್ಮ ಗಾಂಧೀಜಿರವರಿಗೆ ಸಮಾನವಾದ ವ್ಯಕ್ತಿತ್ವವನ್ನು ಪಡೆದು ಅನೇಕ ಕ್ಷೇತ್ರಗಳಲ್ಲಿ ಹೆಚ್ಚಿನ ಮಹತ್ವದ ಸೇವೆ ಸಲ್ಲಿಸಿದ್ದಾರೆ. ಇಂತಹ ಮಹಾನ್ ವ್ಯಕ್ತಿತ್ವದ ದಾಖಲೆಯಾಗಿ ಒಂದು ಜೀವನ ಚರಿತ್ರೆ ಕನ್ನಡದಲ್ಲಿ ಬಹಳ ಅವಶ್ಯಕವಾಗಿತ್ತು. ಎಂಟು ವರ್ಷಗಳ ಹಿಂದೆಯೇ ಸರಹದ್ ಗಾಂಧಿ ಖಾನ್ ಅಬ್ದುಲ್ ಗಫಾರ್‌ಖಾನ್‌ರವರು ೧೯೬೯ರಲ್ಲಿ ಭಾರತದ ಅತಿಥಿಯಾಗಿ ಬಂದು ಇಂಡಿಯಾ ದೇಶದಲ್ಲಿ ಸಂಚಾರ ಕೈಗೊಂಡರು. ಈ ಸಂದರ್ಭದ ಸವಿನೆನಪಿಗಾಗಿ ಕರ್ನಾಟಕದ ಅಭಿನಂದನ ಸಮಿತಿಯವರು 'ಗಡಿನಾಡು ಗಾಂಧಿ' ಎಂಬ ಪುಸ್ತಕವನ್ನು ಪ್ರಕಟಿಸಿದ್ದಾರೆ. ಈ ಪುಸ್ತಕದ ಲೇಖಕರು ಶ್ರೀಗಳಾದ ಕಲ್ಲೆ ಶಿವೋತ್ತಮ ಮತ್ತು ಹಂಪ. ನಾಗರಾಜಯ್ಯ. ತೊಂಬತ್ತು ಪುಟಗಳ ಈ ಪುಸ್ತಕದಲ್ಲಿ ಖಾನ್ ಅಬ್ದುಲ್ ಗಫಾರ್ ಖಾನರ ಜೀವನ ಚರಿತ್ರೆಯು ನಿರೂಪಿತವಾಗಿದೆ. ಕರ್ನಾಟಕದಲ್ಲಿ ಗಡಿನಾಡ ಗಾಂಧಿಯವರು ಅಡಿಯಿಟ್ಟ ಸವಿನೆನಪಿಗೆ ಈ ಗ್ರಂಥ ಸಾಕ್ಷಿಯಾಗಿ ಹೊರಬರುತ್ತಿದೆ ಎಂದು ಗಫಾರ್ ಖಾನ್ ಅಭಿನಂದನ ಸಮಿತಿಯ ಅಧ್ಯಕ್ಷರಾಗಿದ್ದ ಎಂ. ಕೆ. ಪಾಂಡುರಂಗ ಶೆಟ್ಟಿಯವರು ಪುಸ್ತಕದ ನಾಲ್ಕು ಮಾತಿನಲ್ಲಿ ತಿಳಿಸಿದ್ದಾರೆ. ಅಲ್ಲದೆ ಈ ಪುಟ್ಟ ಪುಸ್ತಕದಲ್ಲಿ ಕೆಲವು ಚಿತ್ರಗಳು ನಮ್ಮ ಗಮನ ಸೆಳೆಯುತ್ತವೆ. (೧) ನಂದಲಾಲ್ ಬಸುರವರು ಮರದಲ್ಲಿ ಕೆತ್ತಿರುವ ಗಫಾರ್ ಖಾನರ ಚಿತ್ರ. (೨) ಗಫಾರ್ ಖಾನರು ದಿವಂಗತ ರಾಷ್ಟ್ರಪತಿ ಡಾ॥ ಝಾಕೀರ್ ಹುಸೇನ್ ರೊಡನೆ ಆತ್ಮೀಯಭಾವದಿಂದಿರುವ ಭಾವಚಿತ್ರ, (೩) ಗಫಾರ್‌ಖಾನರು ಆಚಾರ್ಯ ವಿನೋಬಾ ಮತ್ತು ಜಯಪ್ರಕಾಶ್ ನಾರಾಯಣ್‌ರೊಡನೆ ಕುಳಿತುಕೊಂಡಿರುವ ಭಾವಚಿತ್ರ. (೪) ಪ್ರಾರ್ಥನೆಯಲ್ಲಿ ಗಫಾರ್ ಖಾನರು ಕಮಲನಯನ ಬಜಾಜ್ ಮತ್ತು ಆಚಾರ್ಯ ವಿನೋಬಾರೊಂದಿಗೆ ಇರುವ ಭಾವಚಿತ್ರ ಮತ್ತು (೫) ಮಹಾತ್ಮ ಗಾಂಧಿ ಮತ್ತು ಗಫಾರ್ ಖಾನ್ ಇವರಿಬ್ಬರೂ ಪಠಾಣ ಪ್ರಾಂತ್ಯದಲ್ಲಿ ಸಂಚಾರ ಮಾಡುತ್ತಿದ್ದಾಗ ತೆಗೆದ ಭಾವಚಿತ್ರ, ಇವುಗಳು ಈ ಪುಸ್ತಕದ ಸೌಂದರ್ಯವನ್ನು ಹೆಚ್ಚು ಮಾಡಿವೆ.

ಗಫಾರ್ ಖಾನರ ಜೀವನ ಚಿತ್ರವು ಈ ಪುಸ್ತಕದಲ್ಲಿ ಒಂಬತ್ತು ವಿಭಾಗಗಳಲ್ಲಿ ಚಿತ್ರಿತವಾಗಿದೆ. (೧) ಮಹಾತ್ಮ ಕಂಡ ದೇವಮಾನವ (೨) ಹುಟ್ಟು–ಹಿನ್ನೆಲೆ (೩) ಎಳವೆ ಕಲಿಕೆ (೪) ಜನಸೇವೆಯ ದೀಕ್ಷೆ (೫) ಗಾಂಧಾರ ಸಂಸ್ಕೃತಿ ನಾಗರಿಕತೆ (೬) ಬ್ರಿಟನ್‌ನ ಸರಹದ್ ನೀತಿ (೭) ಸಾರ್ವಜನಿಕ ಜೀವನ ಪ್ರಾರಂಭ (೮) ಗಾಂಧೀಜಿಯ ಸಾನಿಧ್ಯದಲ್ಲಿ ಮತ್ತು (೯) ವಿಭಜನೆ. ಪಖ್ತೂನ್ ಹೋರಾಟ.

"ಭಾರತದ ಜನರೆಲ್ಲರಿಂದ ಹಿಡಿದು ನಾಯಕರೆಲ್ಲರ ಆಗ್ರಹದ ಆಮಂತ್ರಣ ಮೇರೆಗೆ ಖಾನ್ ಅಬ್ದುಲ್ ಗಫಾರ್ ಖಾನರು ೧೯೬೯ರ ಕೊನೆಗೆ ಭಾರತಕ್ಕೆ ಆಗಮಿಸಿ ೧೯೭೦ರ ಆರಂಭದಲ್ಲಿಯೂ ಸಂಚಾರ ಕೈಗೊಂಡರು. ಪ್ರಾಯಶಃ ಗಾಂಧೀಜಿಯವರ ನಂತರ ಸಮಗ್ರ ಭಾರತವೇ ಇನ್ನೊಬ್ಬ ಮಾನವನಿಗೆ (ಮಹಾತ್ಮನಿಗೆ) ತೋರಿದ ಭಕ್ತಿ-ಪ್ರೀತಿಗಳನ್ನು ಗಫಾರ್ ಖಾನರಿಗೆ ತೋರಿದಂತೆ ತೋರಿಸಿರಲಿಕ್ಕಿಲ್ಲ. ಗಫಾರ್ ಖಾನರಂತೆ ವಿಶ್ವಕುಟುಂಬಿಗೆ ವಿಶ್ವದಲ್ಲಿ ಎಲ್ಲಿ ಸ್ಥಾನವಿಲ್ಲ?" ಎಂಬ ಅಭಿಪ್ರಾಯವನ್ನು ಲೇಖಕರು ಈ ಪುಸ್ತಕದ ಕೊನೆಯಲ್ಲಿ ವ್ಯಕ್ತಪಡಿಸಿದ್ದಾರೆ.

ರಾಷ್ಟ್ರಪಿತ ಮಹಾತ್ಮ ಗಾಂಧೀಜಿಯವರಂತೆ ಖಾನ್ ಅಬ್ದುಲ್ ಗಫಾರ್ ಖಾನರನ್ನೂ ಜನತೆ ದೇವಮಾನವನೆಂದು ಕರೆದರು. ಸ್ವಾತಂತ್ರ್ಯ ಸಮರದಲ್ಲಿ ಗಫಾರ್‌ಖಾನರು ವಹಿಸಿದ್ದ ಪಾತ್ರಕ್ಕಾಗಿ ಭಾರತ ಪಾಕಿಸ್ತಾನಗಳೆರಡೂ ಅವರಿಗೆ ಚಿರಋಣಿಯಾಗಿರಬೇಕು ಎಂಬ ಮಾತು ಪುಸ್ತಕದ ಉದ್ದಕ್ಕೂ ನಮ್ಮ ಮನಸ್ಸನ್ನು ಮಿಡಿಯುತ್ತದೆ. ಗಫಾರ್ ಖಾನರು ಕೇವಲ ಸ್ವಾತಂತ್ರ್ಯ ಸಂಗ್ರಾಮದ ಯೋಧರಲ್ಲ, ಅದಕ್ಕಿಂತಲೂ ಹೆಚ್ಚಾಗಿ ಅವರು ಗಾಂಧಿವಾದಿ ಅದ್ವಿತೀಯ ಕಾರ್ಯಕರ್ತ, ಅಹಿಂಸೆಯ ತತ್ವದರ್ಶನವನ್ನು ಅವರ ಹಾಗೆ ಕಾರ್ಯಗತಗೊಳಿಸಿದವರು ಗತಿಸಿದವರಲ್ಲಿ ಅಥವಾ ಬದುಕಿದವರಲ್ಲಿ ಯಾರೂ ಇರಲಾರರು ಎಂಬ ಅಭಿಪ್ರಾಯವು ಈ ಪುಸ್ತಕವನ್ನು ಓದಿದವರೆಲ್ಲರಿಗೂ ಮನದಟ್ಟಾಗುತ್ತದೆ.

ಈ ಪುಸ್ತಕದ ಭಾಷೆ ಸರಳವಾಗಿದ್ದು ವ್ಯಾಸಂಗಕ್ಕೆ ಅನುಕೂಲಕರವಾಗಿದೆ. ಭಾಷೆ ಸಹಜ ಸುಂದರವಾಗಿದ್ದು ಚೆನ್ನಾಗಿ ಓದಿಸಿಕೊಳ್ಳುತ್ತದೆ. ಖಾನ್ ಅಬ್ದುಲ್ ಗಫಾರ್‌ಖಾನರ ಹಿರಿಯ ಜೀವನದ ಹೋರಾಟದ ಬದುಕನ್ನು ಸ್ವಾರಸ್ಯವಾಗಿ ಸಂಗ್ರಹವಾಗಿ ಲೇಖಕರಾದ ಕಲ್ಲೆ ಶಿವೋತ್ತಮ ಮತ್ತು ಹಂಪ. ನಾಗರಾಜಯ್ಯನವರು ಚಿತ್ರಿಸುವುದರಲ್ಲಿ ಯಶಸ್ವಿಯಾಗಿದ್ದಾರೆ. ಅಂದು ಗಡಿನಾಡ ಗಾಂಧಿ ಇಂದು ಭಾರತರತ್ನ ಗಡಿನಾಡ ಗಾಂಧಿ.

ಸಿ. ಹನುಮಂತರಾಯಪ್ಪ

# ಜೀವನಚರಿತ್ರೆಕಾರರಾಗಿ

ಯಾವುದೇ ವ್ಯಕ್ತಿಯ ಬದುಕನ್ನು ಸಾಹಿತ್ಯಿಕವಾಗಿ ನಿರೂಪಿಸಿದಾಗ ಜೀವನಚರಿತ್ರೆ ನಿರ್ಮಾಣವಾಗುತ್ತದೆ. ಜೀವನಚರಿತ್ರೆ ಸಾಹಿತ್ಯದ ಹಲವು ಪ್ರಕಾರಗಳಲ್ಲಿ ಒಂದು. ಯುದ್ಧ, ಹೋರಾಟ, ಏಳುಬೀಳು ಮುಂತಾದ ಘಟನಾವಳಿಗಳನ್ನು ನಡೆದಂತೆ ನಿರೂಪಿಸಿದಾಗ ಮಾತ್ರ ಜೀವನ ಚರಿತ್ರೆಗೆ ಮಹತ್ವ ಬರುತ್ತದೆ. ಜೀವನಚರಿತ್ರೆಗಳಲ್ಲಿ ವ್ಯಕ್ತಿಯ ಹುಟ್ಟು, ಬೆಳವಣಿಗೆ, ಸಾಧನೆ ಮುಂತಾದ ವಿಷಯಗಳು ಲಭ್ಯವಾಗುವುದರಿಂದ ಸಾಹಿತ್ಯ ವಿಮರ್ಶೆಗೆ ಮತ್ತು ಸಾಹಿತ್ಯ ಸಂಶೋಧನೆಗೆ ಅನುಕೂಲವಾಗುತ್ತದೆ. ಈ ದೃಷ್ಟಿಯಲ್ಲಿ ಪ್ರೊ॥ ಹಂಪನಾ ರಚಿಸಿದ 'ಅಜಾತ ಶತ್ರು', 'ಮಹಾವೀರ', 'ಗೋವಿಂದ ಪೈ ಬದುಕು ಬರಹ', 'ಗಡಿನಾಡ ಗಾಂಧಿ' (ಇತರರೊಡನೆ ರಚಿಸಿದ ಕೃತಿಗಳು) ಮತ್ತು 'ಶಂಬವ ಸಾಗರ ಚರಿತೆ' 'ವೀರ ಜಿನೇಂದ್ರ ಚರಿತೆ' ಮುಂತಾದವುಗಳಲ್ಲಿ ಮಹಾಪುರುಷರು ಬಾಳಿ ಬೆಳಗಿದ ಮತ್ತು ಸಮಕಾಲೀನ ಸ್ಥಿತಿಗಳ ಬಗ್ಗೆ ಸರಳವಾಗಿ ಜನ ಸಾಮಾನ್ಯರಿಗೂ ಅರ್ಥವಾಗುವಂತೆ ಸುಲಲಿತವಾಗಿ ಬರೆದ ಕೃತಿಗಳಾಗಿವೆ.

ಹಿರಿಯ ಕವಿಗಳಾದ ಮಹಾಕವಿ ಪಂಪ, ರನ್ನ, ಜನ್ನ ಇತ್ಯಾದಿ ಕಿರು ಹೊತ್ತಿಗೆಗಳಲ್ಲಿ ಜೀವನ ಪರಿಚಯ, ಅವರಿಗೆ ಆಶ್ರಯಕೊಟ್ಟ ರಾಜ ಮಹಾರಾಜರ ವಿವರಗಳು ಹಾಗೂ ಸಂಭವಿಸಿದ ಘಟನೆಗಳು ಇಂದಿಗೂ ಜೀವನ ಚರಿತ್ರೆಯ ಕೈಗನ್ನಡಿಯ ಕಿರುಹೊತ್ತಿಗೆಗಳಾಗಿವೆ. ಇತ್ತೀಚೆಗೆ ಅಂದರೆ ಪ್ರಥಮ ವಿಶ್ವಕನ್ನಡ ಸಮ್ಮೇಳನ ಸಾಹಿತ್ಯ ಮಾಲೆಯಲ್ಲಿ ಹೊರ ಬಂದ 'ಸಮ್ಮೇಳನಾಧ್ಯಕ್ಷರು' ಎಂಬ ಪುಸ್ತಕ ಸಾಹಿತ್ಯ ಚರಿತ್ರೆಯ ವಿಭಾಗದಲ್ಲಿ ಹೊಸ ತಿರುವನ್ನು ತಂದು ಕೊಟ್ಟಿದೆ. ಹೇಗೆಂದರೆ ಸುಮಾರು ೫೫ ಜನ ಮಹಾಪುರುಷರ ಜೀವನ ಪರಿಚಯ ಒತ್ತಟ್ಟಿಗೆ ಸಿಗುವುದು ಬಹಳ ಕಡಿಮೆ. ಈ ದಿಸೆಯಲ್ಲಿ ಇದು ಹೆಚ್ಚು ಗಮನಾರ್ಹ ಕೃತಿಯಾಗಿದೆ.

ಶತ್ರುಗಳಿಗೂ ಪ್ರಿಯವಾಗಿದ್ದ ವ್ಯಕ್ತಿ ಹಾಗೂ ಸರ್ವಾನಾಂ ಪ್ರಿಯರು ಮತ್ತು ಭಾರತದ ಗೃಹಸ್ಥ ರಾಜಕಾರಣಿಗಳು ಸರಳ ಸಜ್ಜನಿಕೆಗಳ ಪ್ರತೀಕವಾದ ವ್ಯಕ್ತಿ ಡಾ॥ ರಾಜೇಂದ್ರ ಪ್ರಸಾದರನ್ನು ಕುರಿತ 'ಅಜಾತ ಶತ್ರು' ಕೃತಿ ಹೆಚ್ಚು ಕಡಿಮೆ ನೂರಐವತ್ತು ಪುಟಗಳಲ್ಲಿ ಸರಳೀತವಾಗಿದೆ. ಇದರಲ್ಲಿ ಡಾ॥ ರಾಜೇಂದ್ರ ಪ್ರಸಾದರ ಹುಟ್ಟು, ಬೆಳವಣಿಗೆ ವಿದ್ಯಾರ್ಥಿ ಜೀವನ, ವಕೀಲವೃತ್ತಿ, ರಾಜಕೀಯ ಪ್ರವೇಶ ಹಾಗೂ ಇತರ ರಾಜಕೀಯ ವ್ಯಕ್ತಿಗಳ ಸ್ನೇಹ ಸಂಬಂಧ, ದಿಟ್ಟ ಹೋರಾಟ, ರಾಜಕೀಯ ಪ್ರಜ್ಞೆ ಮತ್ತು ಅವರ ವ್ಯಕ್ತಿತ್ವಕ್ಕೆ ಕಳಸವಿಡುವ ಘಟನೆಗಳನ್ನು ಸವಿವರವಾಗಿ ತಿಳಿಸಿದ್ದಾರೆ.

ಡಾ॥ ರಾಜೇಂದ್ರ ಪ್ರಸಾದರು ಸ್ವತಃ ಲೇಖಕರಾಗಿದ್ದರೆಂಬುದಕ್ಕೆ ಅವರು ಬರೆದ ವಿಭಜಿತ ಭಾರತ ಅಥವಾ ಡಿವೈಡೆಡ್ ಇಂಡಿಯಾ ಮತ್ತು ಆತ್ಮಕಥಾ ಎಂಬ ಗ್ರಂಥಗಳಲ್ಲಿ ಸಾರ್ವಜನಿಕ ಸೇವೆಗೆ ಮಾರ್ಗದರ್ಶನ ಹಾಗೂ ವಸ್ತುನಿಷ್ಠೆಯ ಪ್ರಾಧಾನ್ಯತೆಗೆ ಲವಲೇಶವೂ ದೋಷವಿಲ್ಲವೆಂಬುವುದನ್ನು ಗುರುತಿಸಿದ್ದಾರೆ. ಯಾವ ಪ್ರಶಸ್ತಿ ಪದವಿಗಳಿಗೂ ಆಸೆ ಪಡದ ಪ್ರಸಾದರು ಕೇವಲ ಮಾನವ ನ್ಯಾಯಕ್ಕಾಗಿ ರಾಷ್ಟ್ರ ಸೇವಕರಾದರೆಂಬುದನ್ನು ತಿಳಿಸಿದ್ದಾರೆ. ಹಿಂದೂ-ಮುಸ್ಲಿಂ ಸಮಸ್ಯೆಯ ಜಟಿಲತೆಯ ಬಗ್ಗೆ ಹೇಳುತ್ತಾ ಅದರ ಪ್ರಕಾರ ಇಡೀ ಭೂಭಾಗವನ್ನು ವಿವಿಧ ಜನಾಂಗೀಯ ಸ್ವರೂಪಗಳ ಆಧಾರದ ಮೇಲೆ ಪ್ರದೇಶ ವಲಯಗಳಲ್ಲಿ ವಿಂಗಡಿಸ ಬೇಕು ಅಥವಾ ಸಮಗ್ರ ಸ್ವರೂಪದಲ್ಲಿರಲು ಅಭಿವೃದ್ಧಿ ಸಾಧಿಸಬೇಕೆಂಬ ಮಾರ್ಗ ದರ್ಶನ ಮತ್ತು ಜನಾಂಗದ ಏಳಿಗೆಗೆ ಏಕರಾಷ್ಟ್ರ ಸ್ವರೂಪವೊಂದೇ ಸಾಧ್ಯ ಎಂಬಂತಹ ಅಭಿಪ್ರಾಯಗಳನ್ನು ಕೊಟ್ಟು ಅವರ ಇತಿಹಾಸ ಬದುಕು ಅನಂತರದ ಜನತೆಗೆ ದಾರಿದೀಪಗಳಾಗಿವೆ ಎಂಬುದನ್ನು ಸ್ಪಷ್ಟಪಡಿಸಿದ್ದಾರೆ.

ಸ್ವಾತಂತ್ರ್ಯ ಸಮರ ಕಾಲದಿಂದಲೂ ಕೆಲವರು ಇಂಗ್ಲಿಷ್ ಭಾಷೆಯ ವ್ಯಾಮೋಹಕ್ಕೆ ಮಾರುಹೋಗಿ ಕೃತಿಗಳನ್ನು ರಚಿಸಿದರೆ, ಡಾ॥ ರಾಜೇಂದ್ರ ಪ್ರಸಾದರು ದೇಶೀಯ ಭಾಷೆಯಾದ ಹಿಂದಿ ಭಾಷೆಯಲ್ಲೇ 'ಆತ್ಮಕಥಾ' ಕೃತಿ ರಚಿಸಿ ವಿಶಿಷ್ಟ ಆಕರ್ಷಣೆಗೆ ಗುರಿಯಾದರೆಂದು ಹೇಳಿದ್ದಾರೆ. 'ಆತ್ಮಕಥಾ' ಕೃತಿಯಲ್ಲಿ ಅವರ ನಿಲುವು ಅವರು ಯಾವ ಸ್ಥಾನ-ಮಾನಗಳಿಗೂ ಆಸೆ ಪಡದ ಮತ್ತು ಮಂತ್ರಿ, ವಿಧಾನ ಸಭೆ ಮುಂತಾದ ಹುದ್ದೆಗಳ ಬಗ್ಗೆ ಅಸಡ್ಡೆ ಮತ್ತು ಅನಪೇಕ್ಷೆ ವ್ಯಕ್ತಪಡಿಸಿದ್ದಾರೆಂಬು ದನ್ನು ಕಾಣಿಸಿ ಲೇಖಕರು ವ್ಯಕ್ತಿ ನಿಷ್ಠತೆಯನ್ನು ಗುರುತಿಸಿದ್ದಾರೆ. ಡಾ॥ ರಾಜೇಂದ್ರ ಪ್ರಸಾದರ ಆದರ್ಶಗಳನ್ನು ಬಿಚ್ಚಿ ಹೇಳುವ ಮತ್ತು ಬೋಧನೆ-ಸಿದ್ಧಾಂತವನ್ನು ಪ್ರತಿ ಪಾದಿಸುವ 'ಅಜಾತಶತ್ರು' ಕೃತಿ ಉತ್ಕೃಷ್ಟ ಜೀವನ ಚರಿತ್ರೆಯಾಗಿದೆ.

ರಾಷ್ಟ್ರಕವಿ 'ಗೋವಿಂದ ಪೈ ಬದುಕು ಬರಹ' ಕೃತಿಯಲ್ಲಿ ಪೈ ಅವರು ಹುಟ್ಟಿ ಬೆಳೆದ ವಿಶೇಷ ಪರಿಸರ, ಹಳ್ಳಿಯ ಸಹಜ ಸೌಂದರ್ಯ ಹಾಗೂ ನಿಸರ್ಗದ ವರ್ಣನೆ ಪ್ರತಿಬಿಂಬಿತವಾಗಿದೆ. ಕಾವ್ಯ ರಚನೆ, ಸಂಶೋಧನೆ ಮಾಡಿ 'ಎನಗಿಂತ ಕಿರಿಯರಿಲ್ಲ' ಎಂದು ಒಳತಿಗೆ ತಲೆಬಾಗಿ ನಡೆಯುತ್ತಿದ್ದ ಕವಿಗೆ ಕೀರ್ತಿ, ಪ್ರಶಂಸೆ, ಆಡಂಬರ ಗಳೆಂದರೆ ಸಿಂಹ ಸ್ವಪ್ನವೆಂಬುದನ್ನು ದಾಖಲಾಗಿಸಿ ಅವರು ಯಾವ ಕಟ್ಟು ಪಾಡು ಗಳಿಗೂ ಎಡೆ ಕೊಡದೆ ರೊಚ್ಚಿಗೆದ್ದಂತೆ ಹಿಂದಿನಿಂದ ಬಂದ ಕಂದ, ವೃತ್ತ, ಷಟ್ಪದಿಗಳ ಹಾದಿ ಬಿಟ್ಟು ತನ್ನದೇ ಆದ ಹೊಸ ಮಾರ್ಗ ಹಿಡಿದು ಬಂಡಾಯವೆಬ್ಬಿಸಿದರೆಂಬುದನ್ನು ಸೊಗಸಾಗಿ ಒಡಮೂಡಿಸಿದ್ದಾರೆ. ಷೇಕ್ಸ್‌ಪಿಯರ್ ಹಾಗೂ ಮಿಲ್ಟನ್ ಮುಂತಾದವರ ಪಾಶ್ಚಿಮಾತ್ಯ ಸಾಹಿತ್ಯದ ಆಳವಾದ ಅಭ್ಯಾಸ ನಡೆಸಿ ತನ್ನದೇ ಆದ ವೈವಿಧ್ಯಗಳನ್ನು ಕನ್ನಡ ಸಾಹಿತ್ಯದಲ್ಲಿ ತಂದವರೆಂಬುದನ್ನು ಲೇಖಕರು ಹಂತ ಹಂತವಾಗಿ ವಿಶ್ಲೇಷಿಸಿ ದ್ದಾರೆ. ತಾವು ಬರೆದ ಸಾಹಿತ್ಯಕ್ಕೆ ವಿರೋಧಾಭಿಪ್ರಾಯಗಳು ಬಂದರೂ ತಮ್ಮದೇ ಸರಿಯೆಂಬ ಸಾತ್ವಿಕ ಧೈರ್ಯದಿಂದ ನಿಂತ ಧೀಮಂತ ವ್ಯಕ್ತಿ ಪೈಗಳೆಂದು ಮತ್ತು ಅವರು ಯಾವುದೇ ಗೌರವ, ಸನ್ಮಾನ, ಪ್ರಶಸ್ತಿಗಳಿಗೆ ಆಸೆ ಪಟ್ಟವರಲ್ಲ. ದೃಢಚಿತ್ತ ನಾಗಿರುವ ಋಷಿ ಎಂದು ಕವಿಯ ಬದುಕನ್ನು ಚಿತ್ರಿಸಿದ್ದಾರೆ.

ಪೈ ಅವರು ದೇಶಭಕ್ತಿ ಹಾಗೂ ರಾಜಕೀಯ ಅಭಿಪ್ರಾಯಗಳ ಬಗ್ಗೆ ಹಲವಾರು ಸ್ವತಂತ್ರ ಗೀತೆಗಳನ್ನು ರಚಿಸಿದರೆಂಬುದಕ್ಕೆ ಉದಾಹರಣೆಯಾಗಿ "ಭಾರತವನುಳಿಯುತ್ತ ನನಗೆ ಜೀವನವೆತ್ತ ಭಾರತವೇ ನನ್ನುಸಿರು ನನ್ನೊಗೆದ ಒಸಿರು" ಎಂಬಲ್ಲಿಯೂ ಮತ್ತು 'ಭಾರತಾಂಬೆಯು ಶಕ್ತಿ ಎನಗಾತ್ಮ ಶಕ್ತಿ' ಇಂತಹ ಗೀತೆಗಳ ಮೂಲಕ ಅವರಿಗಿದ್ದ ದೇಶಪ್ರೇಮವನ್ನು ಲೇಖಕರು ವರ್ಗೀಕರಿಸಿದ್ದಾರೆ. ಹಣ, ವಿದ್ಯೆ, ಜಾತಿಗಳ ಆಧಾರದ ಮೇಲೆ ಮೇಲು ಕೀಳುಗಳೆಂಬ ಭೇದ ಸಲ್ಲದೆಂಬಂತಹ ಸಾಮಾಜಿಕ ಮತ್ತು ಧಾರ್ಮಿಕ ಅಭಿಪ್ರಾಯಗಳನ್ನು ಹೇಳಿ ಕವಿಗೆ ಹಿರಿಕಿರಿಯೆಂಬ ಭೇದ ಭಾವನೆ ಗಳಿರಲಿಲ್ಲವೆಂಬುದಕ್ಕೆ ಲೇಖಕರು ಉದಾಹರಣೆ ಸಹಿತ ಹೇಳಿದ್ದಾರೆ.

ಕಾವ್ಯದ ಮುಖ್ಯ ರಸವಾದ ಕರುಣರಸಕ್ಕೆ ಆರಂಭದಿಂದಲೂ ಬುನಾದಿ ಹಾಕಿ ಕಾವ್ಯದುದ್ದಕ್ಕೂ ಉಪಮ ರೂಪಕಗಳನ್ನು ನೀಡಿ 'ಏಸುವಿನ ಮರಣವನ್ನು ಮತ್ತು ಆ ಸನ್ನಿವೇಶಗಳನ್ನು ಹೇಳಬಲ್ಲ 'ಗೋಲ್ಗೊಥಾ' ಬುದ್ಧನ ಕೊನೆಯ ದಿನಗಳನ್ನು ಹಾಗೂ ಯೋಗಿಯೊಬ್ಬನ ಪ್ರಶಾಂತ ಪರಿಸರ್ವಾಣದ ಶಾಂತ ಚಿತ್ರವನ್ನು ಚಿತ್ರಿಸುವ 'ವೈಶಾಖಿ'– ಈ ಎರಡು ಕಾವ್ಯಗಳು ಚಾರಿತ್ರಿಕ ಘಟನೆಗಳನ್ನು ಹೇಳುವುದರ ಮೂಲಕ ಜೀವನ ಚರಿತ್ರೆಯನ್ನು ಪರಿಚಯಿಸುತ್ತವೆ.

ಗೃಹ ಹೀನ, ವಸ್ತ್ರ ಹೀನ, ಧನ-ಧಾನ್ಯ ಹೀನ, ನಿರಾಶ್ರಯ–ಮುಂತಾದ ಮಾನಸಿಕ ತೊಂದರೆಗಳನ್ನು ಹಾಗೂ ಹಸಿವು, ನೀರಡಿಕೆ, ಶೀತೋಷ್ಣ ಇವುಗಳ

ಬಾಧೆಗಳನ್ನು ಸಹಿಸಿ ತಾಳ್ಮೆ ಸ್ಥೈರ್ಯ ಪಡೆದು ಬಾಳು ಬೆಳಗಿದ ಮಹಾವೀರರ ಜೀವನ ಸ್ವರೂಪ ಹಾಗೂ ಅವರ ಸಮಕಾಲೀನ ರಾಜಕೀಯ ಸ್ಥಿತಿಗಳನ್ನು 'ವೀರ ಜಿನೇಂದ್ರ ಚರಿತೆ' ಕೃತಿಯಲ್ಲಿ ತಿಳಿಸಿರುವುದಲ್ಲದೆ ಮಹಾವೀರರು ಚಾರಿತ್ರಿಕ ವ್ಯಕ್ತಿ ಎಂಬುದನ್ನು ಸ್ಪಷ್ಟಪಡಿಸಿದ್ದಾರೆ.

ಮಹಾವೀರರು ಜೈನ ಧರ್ಮದ ತೀರ್ಥಂಕರರಾಗಿದ್ದು ಹೊಸ ತೀರ್ಥಂಕರರ ಪೀಳಿಗೆಗೆ ಮಾರ್ಗದರ್ಶಕರಾಗಿ ಸಮಾಜ ರಚನೆಗೆ ಮೊದಲಿಗರಾಗಿದ್ದರು. ಜೀವನದ ಸುಖಮಯ ಆದರ್ಶಗಳನ್ನು ಪಡೆಯುವಲ್ಲಿ ಅನುಸರಿಸಬೇಕಾದ ಮಾರ್ಗವನ್ನು ತೋರಿಸಿಕೊಟ್ಟರು. ಮಹಾವೀರರಿಗೆ ಇಂದ್ರಭೂತಿ, ಗೌತಮ ಮುಂತಾದ ವಿದ್ವಾಂಸರು ಶಿಷ್ಯರಾಗಿದ್ದು ಅಹಿಂಸೆ ಮಾರ್ಗದ ಉಪದೇಶಗಳನ್ನು ಪ್ರಚುರ ಪಡಿಸಿರುವುದನ್ನು ಕಾಣಬಹುದು.

ಮಹಾವೀರರ ನಿರ್ವಾಣ ಕಾಲವನ್ನು ಅಮಾವಾಸ್ಯೆಯ ಮುಂಜಾವಿಗೆ ಮುಂಚೆ ಎಂದು ಇದನ್ನು ದೇವತೆಗಳು ಮಾನವರು ಕಾರ್ತೀಕ ದೀಪಾವಳಿ ಎಂದು ಆಚರಿಸ ಲಾಗುತ್ತಿದ್ದರೆಂಬ ಪ್ರತೀತಿಯಿದೆ. ಒಟ್ಟಾರೆ 'ವೀರ ಜಿನೇಂದ್ರ ಚರಿತೆ' ಒಂದು ಉತ್ತಮ ಜೀವನಚರಿತ್ರೆಯಾಗಿದ್ದು ಗದ್ಯದ ಶೈಲಿ ಸುಗಮವಾಗಿದೆ.

ವರ್ಷಕ್ಕೊಮ್ಮೆ ಅಥವಾ ಎರಡು ವರ್ಷಕ್ಕೊಮ್ಮೆ ಯಾವುದಾದರೂ ನಿಗದಿತ ಸ್ಥಳಗಳಲ್ಲಿ ಸಾಹಿತ್ಯ ಸಮ್ಮೇಳನ ಸರ್ವವಿದಿತವಾಗಿ ನಡೆದುಕೊಂಡು ಬಂದಿದೆ. ಇದು ಸಾಹಿತ್ಯ ಪರಿಷತ್ತಿನ ಉದ್ದೇಶ ಹಾಗೂ ಕಾರ್ಯಕ್ರಮಗಳಲ್ಲಿ ಒಂದಾಗಿದೆ. ಸಾಹಿತ್ಯ ಸಾಧನೆಯ ಆಧಾರದ ಮೇಲೆ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗುವರು ಮತ್ತು ಅವರ ಒಟ್ಟು ಸಾಧನೆಗೆ ದೊರೆತ ಪುರಸ್ಕಾರವೆಂದು ಹೇಳಬಹುದು. ಸಮ್ಮೇಳನಾಧ್ಯಕ್ಷ ಯಾರೆಂಬುದನ್ನು ಸಾಹಿತ್ಯ ಪರಿಷತ್ತು ಪ್ರಕಟಿಸಿದ ಕೂಡಲೇ ಅವರ ಜೀವನ, ಸಾಹಿತ್ಯ ಪರಿಚಯ ಇತ್ಯಾದಿ ವಿವರಗಳನ್ನು ವಾರಪತ್ರಿಕೆ, ಮಾಸಪತ್ರಿಕೆ, ಹಾಗೂ ದಿನಪತ್ರಿಕೆಯ ಭಾನುವಾರದ ವಿಶೇಷ ಪುರವಣಿಯಲ್ಲಿ ಕಾಣುತ್ತೇವೆ.

ಆಮೇಲೆ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರ ಭಾಷಣಗಳಲ್ಲಿ ಕನ್ನಡ ಭಾಷೆ, ಇತಿಹಾಸ, ಸಂಸ್ಕೃತಿ ಮತ್ತು ಗಡಿನಾಡು ಮುಂತಾದ ವಿಷಯಗಳು ಪ್ರಸ್ತಾಪಿಸಲ್ಪ ಟ್ಟಿರುತ್ತವೆ. ಆದರೆ ಇವುಗಳೆಲ್ಲವು ಸಾಹಿತ್ಯ ಸಮ್ಮೇಳನ ಮುಗಿದ ಕೆಲವೇ ದಿನಗಳಲ್ಲೇ ಮರೆತು ಹೋಗುವ ಸಂಭವ ಹೆಚ್ಚು. ಕಿರು ಪರಿಚಯ ಆದ್ದರಿಂದಲೇ ಇದುವರೆಗೆ ನಡೆದ ೬೬ ಸಾಹಿತ್ಯ ಸಮ್ಮೇಳನಗಳ ಅಧ್ಯಕ್ಷರುಗಳ ಕಿರು ಪರಿಚಯವನ್ನು ಅಂದರೆ ಅವರು ಕನ್ನಡ ನಾಡು ನುಡಿಗೆ ಶ್ರಮಿಸಿದ ರೀತಿ ಅವರ ಹುಟ್ಟು ಬೆಳವಣಿಗೆ, ವಿದ್ಯಾಭ್ಯಾಸ, ಪದವಿ, ಸಾಧನೆ, ಲಭಿಸಿದ ಪ್ರಶಸ್ತಿಗಳ ವಿವರ, ಸಾಹಿತ್ಯ ಪರಿಷತ್ತಿ ನೊಂದಿಗೆ ಅವರಿಗಿರುವ ಸಂಬಂಧ ಮತ್ತು ಅವರು ಅಧ್ಯಕ್ಷ ಪೀಠದಿಂದ ಮಾತಾಡಿದ

ನುಡಿಮುತ್ತುಗಳನ್ನು ಬುದ್ಧಿಪೂರ್ವಕವಾಗಿ ಗ್ರಹಿಸಿ ತನ್ನದೇ ಆದ ಗದ್ಯ ಶೈಲಿಯಲ್ಲಿ ಬಹುಜನರಿಗೆ ಒಪ್ಪಿಗೆಯಾಗುವಂತೆ ಕೂಡಿಟ್ಟು ಕೊಟ್ಟಿದ್ದಾರೆ. ಸಮ್ಮೇಳನಾಧ್ಯಕ್ಷರುಗಳು ಸಾಹಿತ್ಯ ಪರಿಷತ್ತಿನ ಕಾರ್ಯ ಚಟುವಟಿಕೆ ಬಗ್ಗೆ ಹಾಗೂ ಪರಿಷತ್ತು ಮುಂದೆ ಕೈಗೊಳ್ಳಬಹುದಾದ ಯೋಜನೆಗಳ ಬಗೆಗೆ ಸೂಕ್ತವಾಗಿ ನೀಡಿರುವ ಸಲಹೆಗಳನ್ನು ಪ್ರೊ॥ ಹಂಪನಾ ಅವರು ಚಿಕ್ಕದಾಗಿ ಚೊಕ್ಕವಾಗಿ ತಿಳಿಸಿದ್ದಾರೆ. ಈ ಪುಸ್ತಕವನ್ನು ಓದುವಾಗ ಪ್ರತಿಯೊಬ್ಬ ವ್ಯಕ್ತಿಯ ಚಿತ್ರಣ ಹಾಗೂ ಅವರ ಬದುಕಿನ ವೈಖರಿ, ಅವರಾಡಿರುವ ಮಾತುಗಳು ಮತ್ತು ಅನಿಸಿಕೆಗಳನ್ನು ಹದವರಿತು ಚಾರಿತ್ರಿಕ ಅಂಶಗಳಿಂದ ದಾಖಲಾಗಿಸಿ ಕಣ್ಣಿಗೆ ಕಟ್ಟುವಂತೆ ಚಿತ್ರಿಸಿದ್ದಾರೆ. ಅಷ್ಟೇ ಅಲ್ಲದೆ ಸಮ್ಮೇಳನಾಧ್ಯಕ್ಷರ ಭಾವಚಿತ್ರಗಳು ಶೋಭೆಯನ್ನುಂಟು ಮಾಡಿವೆ. ಪುಸ್ತಕದ ಕೊನೆಯ ಭಾಗದಲ್ಲಿ ಅವರ ಕೃತಿಗಳ ಪಟ್ಟಿ ಮಾಡಿ ಹೇಳಿದ್ದಾರೆ. ಆದ್ದರಿಂದ ಈ ಕೃತಿ ಕನ್ನಡದ ಕೆಲವೇ ಉತ್ತಮ ಜೀವನ ಚರಿತ್ರೆಗಳ ಸಾಲಿನಲ್ಲಿ ನಿಲ್ಲುತ್ತದೆ.

'ಸವ್ಯಸಾಚಿ ಪಂಪ' ಹೆಸರಿನಲ್ಲಿ ಕಾದಂಬರಿಯಾದರೂ ವಿಷಯ ನಿರೂಪಣೆಯಲ್ಲಿ ಜೀವನ ಚರಿತ್ರೆಯ ಆಶಯವನ್ನು ಪಡೆದಿದೆ. ಪಂಪನ ಮಾನವೀಯ ಗುಣಗಳನ್ನು ಅಂದಿನ ಸಾಮಾಜಿಕ ಸಮತೋಲನ ಸ್ಥಿತಿಯನ್ನು ಗುರುತಿಸುವುದು ಮುಖ್ಯಾಂಶವಾಗಿದೆ. ಪಂಪನ ಪ್ರತಿಭೆಯನ್ನು ಗುರುತಿಸಿ ಆಶ್ರಯಕೊಟ್ಟ ಇಮ್ಮಡಿ ಅರಿಕೇಸರಿ ಆಸ್ಥಾನಕ್ಕೆ ಬರಮಾಡಿಕೊಂಡು ತನ್ನ ರಾಜಕೀಯ ಚಟುವಟಿಕೆ ಬಗೆಗೆ ಆಡಿಸಿದ ಮಾತುಗಳು ಮತ್ತು ಪಂಪನ ಮನಸ್ಸಿನಲ್ಲಿ ಉಂಟಾದ ತುಮುಲಗಳನ್ನು ಕಾದಂಬರಿ ಬಿಡಿಸುವ ರೀತಿ ಉತ್ತಮವಾಗಿದೆ. ಇಲ್ಲಿ ಬರುವ ವಾಸ್ತವ ಬದುಕಿನ ಚಿತ್ರಣ, ಸಂಪ್ರದಾಯ ಮತಾಂತರ ಹಾಗೂ ಸಂಸ್ಕೃತಿ, ಕಂದಾಚಾರಗಳು ವಿರುದ್ಧ ಸೆಣಸಾಟ ಮತ್ತು ಅಂದಿನ ರಾಜಕೀಯ ಪ್ರಜ್ಞೆ ಹಾಗೂ ಘಟನೆಗಳು ಮತ್ತು ಜೈನಧರ್ಮ ಮುಂತಾದವುಗಳ ಬಗ್ಗೆ ವಿವರವಾಗಿ ಹೇಳುವ 'ಸವ್ಯಸಾಚಿ ಪಂಪ' ಕಾದಂಬರಿ ಸುಲಲಿತ ರೂಪದಿಂದ ಕೂಡಿದ್ದು ಮನಸ್ಸಿಗೆ ಇಷ್ಟವಾಗುವಂತಿದೆ.

'ಖಾನ್ ಅಬ್ದುಲ್ ಗಫಾರ್‌ಖಾನ್' ಅವರ ರಾಜಕೀಯ ಜೀವನದ ಇತಿಹಾಸವನ್ನು ನಿರೂಪಿಸುವ 'ಗಡಿನಾಡ ಗಾಂಧಿ' ಮತ್ತು ಹಳಗನ್ನಡ ಸಾಹಿತ್ಯದ ರಸದೌತಣ ನೀಡಿ ಸಾಹಿತ್ಯ ಚರಿತ್ರೆಯಲ್ಲಿ ಅಚ್ಚಳಿಯದೇ ಕಾಣುವ ಪಂಪ, ರನ್ನ, ಜನ್ನ ಕವಿಗಳನ್ನು ಕುರಿತು ಬರೆದ ಸಣ್ಣ ಕಿರು ಹೊತ್ತಿಗೆಗಳು ಸಾಹಿತ್ಯ ಚರಿತ್ರೆಯಲ್ಲಿ ಮೈಲುಗಲ್ಲುಗಳಾಗಿವೆ.

ಡಾ. ಎಸ್. ಎಸ್. ಕೋತಿನ

# ಸಂಪಾದಿತ ಕೃತಿಗಳು

ನಿಜವಾದ ಹಾಗೂ ಸಂಪೂರ್ಣವಾದ ಅರ್ಥದಲ್ಲಿ ಗ್ರಂಥ ಸಂಪಾದನೆಯೆನ್ನುವುದು ವ್ಯುತ್ಪತ್ತಿಯಿಂದ ಮೈತುಂಬಿಕೊಂಡ ಸಂಪಾದಕನ ವ್ಯಕ್ತಿತ್ವದ ಪ್ರಾಮಾಣಿಕ ದುಡಿಮೆಯ ಮತ್ತು ಆತನ ಸಮಗ್ರ ಪ್ರತಿಭೆಯ ಸವ್ಯಸಾಚಿತ್ವದ ಸತ್ಫಲ. ಅದು ಹಾಳು ದೇವಾಲಯದ ಜೀರ್ಣೋದ್ಧಾರಕ್ಕಿಂತಲೂ ಕಷ್ಟಕರವಾದ ಸಾಹಸ ಮಾತ್ರವಲ್ಲ, ಅದಕ್ಕೂ ಮಿಗಿಲಾದ ಮಹತ್ವದ ಸಾರ್ಥಕ ಕ್ರಿಯೆಯೂ ಹೌದು. ಕಳೆದ ಶತಮಾನದಿಂದ ರೈಸ್. ಕಿಟೆಲ್‌ರಂಥ ಪಾಶ್ಚಾತ್ಯ ವಿದ್ವಾಂಸರಿಂದ ಆರಂಭಗೊಂಡು ನಿಧಾನವಾಗಿ ಬೆಳೆದುಬಂದ ಈ ಕಾರ್ಯ ಈ ಶತಮಾನದ ಆರಂಭದ ದಶಕಗಳಲ್ಲಿ ನಮ್ಮ ನಾಡಿನ ಸಂಸ್ಕೃತಿ-ಪರಂಪರೆಯ ಮೇಲೆ ಬೀರಿದ ಬೆಳಕು ಅಂದಿನ ವರ್ತಮಾನದ ನೆಲೆಯಲ್ಲಿ ಎಂಥ ಒಂದು ಅದ್ಭುತ ಆವಿಷ್ಕಾರಕ್ಕೆ ಕಾರಣವಾಯಿತು ಎಂಬುದನ್ನು ಸ್ಮರಿಸಿಕೊಂಡರೆ ಮೇಲಿನ ಮಾತು ಅನುಭವಕ್ಕೆ ಬರುತ್ತದೆ. ಪ್ರತಿಕಾರರ ಅಜ್ಞಾನ-ಅವಜ್ಞಾನ-ಅತಿಜ್ಞಾನದಿಂದಲೊ, ಇಲ್ಲವೆ ಮರೆವು-ಆಲಸ್ಯಗಳಿಂದಲೊ—ಇವೇ ಮುಂತಾದ ಕಾರಣಗಳಿಂದ ಹಲವಾರು ಪರಂಪರೆ-ಪೀಳಿಗೆಯಲ್ಲಿ ಬೆಳೆದುಕೊಂಡು ಬಂದ ವಿಪುಲ ಹಾಗೂ ವಿಕ್ಷಿಪ್ತ ಪಾಠಾಂತರ, ಸ್ಖಾಲಿತ್ಯಗಳುಳ್ಳ ಮತ್ತು ಹಸ್ತಪ್ರತಿ ಸಂಗ್ರಹಕಾರರ ಮತೀಯ ಹಿನ್ನೆಲೆಯಲ್ಲಿ ಬೆಳೆದು ಬಂದ ಅತಿಭಾವುಕತೆ ಅಥವಾ ಉಪೇಕ್ಷೆಯ ಕಾರಣಗಳಿಂದ ತ್ರುಟಿತಕ್ಕೊಳಗಾದ ಇಲ್ಲವೆ ಜೀರ್ಣಗೊಂಡ ಹಸ್ತಪ್ರತಿಗಳ ನೆರವಿನಿಂದ ಶುದ್ಧಪಾಠಗಳನ್ನು ಗುರುತಿಸಿ ಮೂಲ ಅಥವಾ ಅದರ ಸಮೀಪವರ್ತಿಯಾದ ಕೃತಿಯನ್ನಾಗಿ ಆಕಾರಗೊಳಿಸಿಕೊಡುವದೆಂದರೆ ಮುಳುಗಿಹೋದ ನಿಧಿಯ ನಕ್ಷೆಯನ್ನು ಮೇಲೆತ್ತಿ ಮೊದಲಿನ ಸ್ಥಿತಿಗೆ ತರುವ ಉಸಿರುಗಟ್ಟುವ ಸಾರ್ಥಕ ಸಾಹಸವೆನಿಸುತ್ತದೆ. ಉತ್ತಮ ಪ್ರತಿಗಳು ದೊರೆಯುವದು ಸಂಪಾದಕನ ಮಾತ್ರವಲ್ಲ ಆ ಕವಿಯ, ಆ ನಾಡಿನ ಒಟ್ಟು ಭಾಗ್ಯವೆನ್ನಬೇಕು.

ಕವಿಯ ಹೆಸರನ್ನು ಮೊದಲುಗೊಂಡು ಆತನ ಅಂತರಂಗ-ಬಹಿರಂಗ ಬದುಕಿನ ವಿವರಗಳನ್ನು ಸಾಂಸ್ಕೃತಿಕ ಪರಿಸರದ ಹಿನ್ನೆಲೆಯಲ್ಲಿ ಅರ್ಥೈಸಿಕೊಡುವುದರೊಂದಿಗೆ ಅವೆಲ್ಲಕ್ಕೂ ಸ್ಪಂದಿಸುತ್ತ ಕವಿಯ ಶಕ್ತಿ ಹಾಗೂ ವ್ಯಕ್ತಿತ್ವದ ಸ್ವರೂಪವನ್ನು ನಿರ್ಧರಿಸಿ ಬೆಲೆ ಕಟ್ಟಿಕೊಡುವ ಸಂಶೋಧನೆ ಮತ್ತು ವಿಮರ್ಶೆಯ ಫಲಗಳಿಂದ ಕೂಡಿದ ಪ್ರಸ್ತಾವನೆ, ಉಪಯುಕ್ತ ವಿಷಯಗಳಿಂದ ಕೂಡಿದ ಅನುಬಂಧಗಳಿಂದ ಒಬ್ಬ ಸಾಮಾನ್ಯ ಓದುಗನನ್ನು ಮೊದಲುಗೊಂಡು ಮುಂದಿನ ಸಂಶೋಧಕರಿಗೆ ವಿಮರ್ಶಕರಿಗೆ ಹದಮಾಡಿಕೊಡಬೇಕಾಗುತ್ತದೆ. ಆ ಮೂಲಕ ಸಂಪಾದಕ ತನ್ನ ಶ್ರಮಕ್ಕೆ ಸಾರ್ಥಕತೆಯನ್ನು ತಂದುಕೊಳ್ಳಬೇಕಾಗುತ್ತದೆ. ಆದ್ದರಿಂದ ಗ್ರಂಥ ಸಂಪಾದನೆಯಲ್ಲಿ ತನ್ನನ್ನು ಜವಾಬ್ದಾರಿಯಿಂದ ತೊಡಗಿಸಿಕೊಳ್ಳಬೇಕಾದ ಸಂಪಾದಕ ಹಲವು ಹಂತಗಳಲ್ಲಿ ಹೋರಾಟಗಾರನಾಗಿ ನಿಲ್ಲಬೇಕಾಗುತ್ತದೆ.

ಹೀಗೆ ಗ್ರಂಥ ಸಂಪಾದನೆಯೆನ್ನುವುದು ಒಂದು ಸಂಕೀರ್ಣ ಶಕ್ತಿಯ ಕ್ರಿಯಾಶೀಲ ದುಡಿಮೆಯಾಗಿರುವುದರಿಂದ ಸಂಪಾದಕನಾದವನು ಅಂಥ ಶಕ್ತಿಯನ್ನು ಕಷ್ಟಪಟ್ಟು ಆರ್ಜಿಸಿಕೊಂಡಿರಬೇಕಾಗುತ್ತದೆ. ಲಿಪಿ-ಛಂದಸ್ಸು-ವ್ಯಾಕರಣ-ಕೋಶ-ಭಾಷೆ ಚರಿತ್ರೆ-ಧರ್ಮ-ಸಂಸ್ಕೃತಿ ಇತ್ಯಾದಿ ವಿಷಯಗಳ ಬಗ್ಗೆ ಒಂದು ನಿರ್ದಿಷ್ಟ ಮಿತಿಯಲ್ಲಾದರೂ ಅನುಭವ-ಪರಿಣತಿಯನ್ನು ಪಡೆದಿರಬೇಕಾಗುತ್ತದೆ. ಸಾಮಗ್ರಿಗಳನ್ನು ಸಂಗ್ರಹಿಸಿ, ವರ್ಗೀಕರಿಸಿ, ಪಾಠಗಳನ್ನು ಸಂಕಲನಗೊಳಿಸಿ, ಪರಿಷ್ಕರಿಸಿ ಕೊಡುವಲ್ಲಿ ಆರಂಭದಿಂದ ಕೊನೆಯವರೆಗೂ ಒಂದೇ ಬಗೆಯ ತಾಳ್ಮೆಯಿಂದ, ಒಂದೇ ಬಗೆಯ ಮನಸ್ಥಿತಿಯಲ್ಲಿ ದುಡಿಯಬೇಕಾಗುತ್ತದೆ. ಈ ಎಲ್ಲ ಅರ್ಹತೆಗಳಿಂದಾಗಿಯೇ ಒಬ್ಬ ಸಂಪಾದಕ ಗ್ರಂಥ ಸಂಪಾದನೆಯ ನಿಜವಾದ ಅಧಿಕಾರಿಯಾಗುತ್ತಾನೆ. ಒಟ್ಟಿನಲ್ಲಿ ಕಾವ್ಯದಲ್ಲಿ ಕವಿಯ ಶಕ್ತಿ-ವ್ಯಕ್ತಿತ್ವಗಳು ಹೇಗೋ ಹಾಗೆಯೇ ಗ್ರಂಥ ಸಂಪಾದನೆಯಲ್ಲಿ ಆ ಸಂಪಾದಕನ ಶಕ್ತಿ-ವ್ಯಕ್ತಿತ್ವಗಳು ಸಾಂದ್ರೀಕರಣಗೊಂಡಿರುತ್ತವೆ. ಅಂತೆಯೇ ಒಂದು ಗ್ರಂಥ ಸಂಪಾದನೆಯ ಅವಲೋಕನವೆಂದರೆ ಸಂಪಾದಕನ ಒಟ್ಟು ವ್ಯಕ್ತಿತ್ವದ ಹಾಗೂ ಅದರ ಒಟ್ಟು ವ್ಯಾಪಾರದ ಅವಲೋಕನವೇ ಆಗಿರುತ್ತದೆ.

ಈ ಎಲ್ಲ ಅಂಶಗಳ ಹಿನ್ನೆಲೆಯಲ್ಲಿ ನೋಡಿದಾಗ ಕಳೆದ ಕಾಲು ಶತಮಾನಗಳಿಂದಲೂ ಇತರ ಹತ್ತಾರು ಚಟುವಟಿಕೆಗಳ ಮಧ್ಯದಲ್ಲಿಯೂ ಗ್ರಂಥ ಸಂಪಾದನೆಯಲ್ಲಿ ತಮ್ಮನ್ನು ಅತ್ಯಂತ ಆಸಕ್ತಿಯಿಂದ ತೊಡಗಿಸಿಕೊಂಡ ಹಂಪನಾ ಅವರ ಕೊಡುಗೆ ಆಸಕ್ತರ ಕುತೂಹಲವನ್ನು ಕೆರಳಿಸುತ್ತದೆ.

ಭಾಷಾ ವಿಜ್ಞಾನ, ಸಂಶೋಧನೆ, ವಿಮರ್ಶೆ, ಜಾನಪದ, ಕಾವ್ಯಮೀಮಾಂಸೆ ಹಾಗೂ ಸೃಜನಾತ್ಮಕ ವಲಯಗಳಲ್ಲಿ ಸ್ವತಂತ್ರ ಅಸ್ತಿತ್ವವನ್ನು ಪಡೆದ ಅವರ ಪ್ರತಿಭೆಯ ವಿವಿಧ ಶಾಖೆಗಳ ಮೇಳವನ್ನು ಮೈಗೂಡಿಸಿಕೊಂಡ ವ್ಯಕ್ತಿತ್ವ ಗ್ರಂಥ

ಸಂಪಾದನಾ ಕಾರ್ಯದಲ್ಲಿ ಪೋಷಕ ಶಕ್ತಿಯಾಗಿ ಪ್ರತಿಫಲಿಸಿರುವುದನ್ನು ಕಂಡು ಕೊಳ್ಳಬಹುದಾಗಿದೆ. ಕೈಗೆ ಸಿಕ್ಕ ಹಸ್ತಪ್ರತಿಗಳನ್ನು ಎತ್ತಿಕೊಂಡು ತಮಗೆ ಸರಿಕಂಡ, ಹಗುರೆನಿಸಿದ ಕೃತಿಗಳ ಸಂಪಾದನೆಗೆ ತೊಡಗಿ ಅದನ್ನು ಪ್ರಕಟಿಸಿ ಪ್ರತಿಷ್ಠೆಯ ಉದ್ಯಮ ಅಥವಾ ಹವ್ಯಾಸವನ್ನಾಗಿ ಮಾಡಿಕೊಳ್ಳದೆ ಒಂದು ನಿರ್ದಿಷ್ಟ ಧೋರಣೆಯ ಹಿನ್ನೆಲೆ ಯಲ್ಲಿ, ನಿರ್ದಿಷ್ಟ ಯೋಜನೆಯ ಅಡಿಯಲ್ಲಿ ಸಾಹಿತ್ಯಿಕ ವಲಯದ ವರ್ತಮಾನದ ಅಗತ್ಯವನ್ನರಿತು ಮತ್ತು ತಮ್ಮ ಒಲವು-ಆಸಕ್ತಿ, ಇತಿಮಿತಿಗಳನ್ನು ಅರ್ಥೈಸಿಕೊಂಡು ತಮ್ಮ ದುಡಿಮೆಯನ್ನು ಮೀಸಲುಗೊಳಿಸಿಕೊಂಡಿರುವುದು ಮತ್ತೂ ಸಾರ್ಥಕವೆನಿಸಿದೆ. ತಾವು ಸಂಪಾದಿಸಬೇಕೆಂದಿದ್ದ ಕೃತಿಯ ಹಸ್ತಪ್ರತಿಗಳಿಗಾಗಿ ಕೇವಲ ಯಾವುದೇ ಒಂದು ಸಂಘ ಸಂಸ್ಥೆಯ ಸಂಗ್ರಹಾಲಯವನ್ನು ಮಾತ್ರ ಅವಲಂಬಿಸದೆ, ಸ್ವಂತ ಪರಿಶ್ರಮ ದಿಂದಲೂ ಅಪರೂಪದ ಪ್ರತಿಗಳನ್ನು ಸಂಗ್ರಹಿಸುವ ಹವ್ಯಾಸದಲ್ಲಿ ಅವರ ಕಳಕಳಿಯ ಆಸಕ್ತಿ ಒಡೆದು ಕಾಣುತ್ತದೆ. ಅಲ್ಲದೆ ಜೈನಧರ್ಮದ ಕಾವ್ಯ ಪರಿಷ್ಕರಣಕ್ಕೆ ಮಾತ್ರ ತಮ್ಮ ದುಡಿಮೆಯನ್ನು ಸೀಮಿತಗೊಳಿಸಿಕೊಂಡಿರುವುದೂ ಅವರ ವೈಯಕ್ತಿಕ ಆಸಕ್ತಿಯ ಕಾರಣದಿಂದ ಮಾತ್ರವಲ್ಲ ಮಿಕ್ಕ ಕಾರಣಗಳಿಂದಲೂ ಹೆಚ್ಚು ಪ್ರಯೋಜನ ಕಾರಿಯಾಗಿದೆ. ಹೀಗೆ ತಮಗೆ ಆಸಕ್ತಿಯುಳ್ಳ ಒಂದು ನಿರ್ದಿಷ್ಟ ಕ್ಷೇತ್ರವನ್ನು ಆಯ್ಕೆ ಮಾಡಿಕೊಳ್ಳುವ ಮೂಲಕ ತಮ್ಮ ಎಲ್ಲ ಶಕ್ತಿಯನ್ನು ಒಮ್ಮುಖವಾಗಿ ಹರಿ ಬಿಡುವ ಸಾಧ್ಯತೆಯಿಂದಾಗಿ ಮತ್ತು ಅಂಥ ಕವಿ-ಕೃತಿಗಳ ವಸ್ತು-ರೂಪ, ದರ್ಶನ-ಧೋರಣೆ, ಆಶಯ-ಪ್ರವೃತ್ತಿಗಳಲ್ಲಿ, ಪ್ರಭಾವ-ಪ್ರೇರಣೆಗಳಲ್ಲಿ ಮಾತ್ರವಲ್ಲ ಬದುಕಿನ ಒಳಪದರುಗಳಿಂದಲೂ ಪರಸ್ಪರ ಆಂತರಿಕ ಸಂಬಂಧವಿರುವುದರಿಂದಾಗಿ ಅವುಗಳ ಸಮಗ್ರ ಸತ್ವ-ಸ್ವರೂಪಗಳನ್ನು ಪ್ರತ್ಯಕ್ಷೀಕರಿಸಿಕೊಡುವಲ್ಲಿ ಹೆಚ್ಚಿನ ಸೌಲಭ್ಯವೂ ಇರುತ್ತದೆ; ಜೊತೆಗೆ ಒಂದು ನಿಶ್ಚಿತ ಕ್ಷೇತ್ರಕ್ಕೆ ಒಂದು ಹಂತದ ಸೇವೆ ಯನ್ನು ಸಲ್ಲಿಸಿದ ಸಾರ್ಥಕತೆಯೂ ಇರುತ್ತದೆ. ಹೀಗಾಗಿ ಹಂಪನಾ ಅವರು ಮಾಡಿಕೊಂಡ ಕೃತಿಗಳ ಆಯ್ಕೆಯಲ್ಲಿಯೂ ಔಚಿತ್ಯವಿರುವುದು ಗಮನಾರ್ಹ.

ಹಂಪನಾ ಅವರು ಗ್ರಂಥ ಸಂಪಾದನೆಗೆ ತೊಡಗಿದ್ದು ೧೯೬೩ರ ಸುಮಾರಿಗೆ. ಆ ಕಾಲಕ್ಕಾಗಲೇ ಡಿ. ಎಲ್. ನರಸಿಂಹಾಚಾರ್ಯರ 'ಗ್ರಂಥ ಸಂಪಾದನೆ' ಕೃತಿ ಪ್ರಕಟ ವಾಗಿರಲಿಲ್ಲವಾದರೂ ಕಿಟೆಲ್, ರೈಸರನ್ನು ಮೊದಲುಗೊಂಡು ಆರ್. ನರಸಿಂಹಾ ಚಾರ್, ಎಂ. ಎ. ರಾಮಾನುಜಯ್ಯಂಗಾರ್, ಟಿ. ಎಸ್. ವೆಂಕಣ್ಣಯ್ಯ, ಫ. ಗು. ಹಳಕಟ್ಟಿ, ಶಿ. ಶಿ. ಬಸವನಾಳ, ಉತ್ತಂಗಿ ಚನ್ನಬಸಪ್ಪ, ಡಿ. ಎಲ್. ಎನ್., ತೀ. ನಂ. ಶ್ರೀ ಮೊದಲಾದವರ ಗೆಯ್ಮೆಯಿಂದ ಗ್ರಂಥ ಸಂಪಾದನಾ ಕ್ಷೇತ್ರದಲ್ಲಿ ಒಂದು ಸ್ಪಷ್ಟ ರಹದಾರಿ ನಿರ್ಮಾಣವಾಗಿತ್ತು. ಮುಂದೆ ಡಿ. ಎಲ್. ನರಸಿಂಹಾ ಚಾರ್ಯರ 'ಗ್ರಂಥ ಸಂಪಾದನೆ'ಯೇ ಅಲ್ಲದೆ ಡಾ. ಎಂ. ಎಂ. ಕಲಬುರ್ಗಿಯವರ 'ಕನ್ನಡ ಗ್ರಂಥ ಸಂಪಾದನೆ'ಯಂಥ ಶಾಸ್ತ್ರಗ್ರಂಥಗಳಿಂದ ಮತ್ತು ಆ ದಿಸೆಯಲ್ಲಿ ನಡೆದ

ವಿವಿಧ ಪ್ರಯೋಗಗಳಿಂದ ಆ ದಾರಿ ಹೆದ್ದಾರಿಯ ಸ್ವರೂಪವನ್ನು ತಳೆಯುತ್ತಲೂ ಹೊರಟಿತು. ಹಂಪನಾ ಅವರಿಗೆ ಈ ಎಲ್ಲದರ ಹಿನ್ನೆಲೆಯಲ್ಲದೆ, ಆರಂಭದ ಹಂತದಲ್ಲಿ ಡಿ. ಎಲ್. ನರಸಿಂಹಾಚಾರ್‌ರಂಥ ವಿದ್ವಾಂಸರ ನಿಕಟಸಂಪರ್ಕ, ಸಲಹೆಯಂತಹ ದೊಡ್ಡ ಬೆಂಬಲ ಬೇರೆ.

ಹೀಗೆ ಹರವಾದ ಪಾಂಡಿತ್ಯ, ವೈವಿಧ್ಯಮಯವಾದ ಪ್ರತಿಭೆ, ಚಿಕಿತ್ಸಕರ ದೃಷ್ಟಿ, ಉಡುಗದ ಉತ್ಸಾಹ ಹಾಗೂ ಹಿಂದಿದ್ದ ಪರಂಪರೆ—ಇವೆಲ್ಲವುಗಳು ಅವರ ಗ್ರಂಥ ಸಂಪಾದನಾ ಕೃತಿಗಳ ಹಿಂದಿದ್ದ ಮೌಲಿಕ ಆಕರ-ಪರಿಕರಗಳು.

ಹಂಪನಾ ಅವರು ಸಂಪಾದಿಸಿದ ಒಟ್ಟು ಹತ್ತು ಕೃತಿಗಳಲ್ಲಿ[1] ಪಂಪಭಾರತ ಸಂಗ್ರಹ (೧೯೬೪ ಮತ್ತು ೧೯೬೯), ಜಯನೃಪ ಕಾವ್ಯಸಂಗ್ರಹ (೧೯೬೭)ಗಳು ಹೆಸರೇ ಸೂಚಿಸುವಂತೆ ಕನ್ನಡ ಕಾವ್ಯಸಂಗ್ರಹಗಳ ಸಾಲಿಗೆ ಸೇರಿದವುಗಳು. ನೇಮಿನಾಥ ಪುರಾಣವೂ ಪ್ರಸ್ತಾವನೆ, ಅನುಬಂಧಗಳುಳ್ಳ ಗದ್ಯಾನುವಾದವೇ ಹೊರತು ಪರಿಷ್ಕೃತ ಕೃತಿಗಳಲ್ಲ. ಉಳಿದ ಏಳು ಕೃತಿಗಳು ಸಂಪಾದಿತ ಸಮಗ್ರ ಕಾವ್ಯಗಳು. ಅವುಗಳಲ್ಲಿ 'ಭರತೇಶ ವೈಭವ'ವನ್ನು ಜಿ. ಬ್ರಹ್ಮಪ್ಪ, ಶ್ರೀಮತಿ ಕಮಲಾ ಹಂಪನಾ ಅವರೊಂದಿಗೆ, 'ಚಂದ್ರಸಾಗರವರ್ಣಿ ಕೃತಿಗಳು' ಎಸ್. ಶಿವಣ್ಣನವರೊಡನೆ ಸಂಪಾದಿಸಿ ಕೊಡಲಾಗಿದೆ. ಆದರೆ 'ಚಂದ್ರಸಾಗರವರ್ಣಿ-ಕೃತಿಗಳು' ಗ್ರಂಥಕ್ಕೆ ಸ್ವತಂತ್ರವಾದ, ಸುದೀರ್ಘವಾದ ಪ್ರೌಢ ಪ್ರಸ್ತಾವನೆಯನ್ನು ಒದಗಿಸಿದವರು ಹಂಪನಾ ಅವರು. ಇನ್ನುಳಿದ 'ಸಾಳ್ವಭಾರತ' (೧೯೭೬), ಧನ್ಯಕುಮಾರ ಚರಿತೆ (೧೯೭೬), 'ನಾಗಕುಮಾರ ಷಟ್ಪದಿ'(೧೯೭೮), 'ರತ್ನಾಕರನ ಹಾಡುಗಳು'(೧೯೭೮), 'ಶಾಂತಿ ಪುರಾಣ' (೧೯೮೨)—ಈ ಐದು ಕೃತಿಗಳು ಹಂಪನಾ ಅವರು ಸ್ವತಂತ್ರವಾಗಿ ಸಂಪಾದಿಸಿದ ಕೃತಿಗಳು. ಈ ಎಲ್ಲ ಗ್ರಂಥಗಳಲ್ಲಿ ಸಾಳ್ವಭಾರತ, ಧನ್ಯಕುಮಾರ ಚರಿತೆ, ನಾಗಕುಮಾರ ಷಟ್ಪದಿ, ಚಂದ್ರಸಾಗರವರ್ಣಿ ಕೃತಿಗಳು ಪ್ರಥಮ ಪರಿಷ್ಕರಣಗಳು. ಅದರಲ್ಲಿಯೂ ಧನ್ಯಕುಮಾರಚರಿತೆ ಮತ್ತು ಶಾಂತಿ ಪುರಾಣಗಳು ಗದ್ಯಾನುವಾದದೊಡನೆ ಪ್ರಕಟಣೆಗೊಂಡವುಗಳು.

ಇತರರೊಡನೆ ಸಂಪಾದಿಸಿದ ಕೃತಿಗಳು ಸಂಯುಕ್ತ ಪರಿಶ್ರಮದ ಫಲಗಳಾದ್ದರಿಂದ ಅವರ ಸ್ವತಂತ್ರ ಪ್ರತಿಭೆ-ಪರಿಶ್ರಮವನ್ನು ಗೊತ್ತುಹಚ್ಚುವದು ಕಷ್ಟ. ಆದ್ದರಿಂದ ಸ್ವತಂತ್ರ ಕೃತಿಗಳನ್ನು ಮಾತ್ರ ಈ ಸಂದರ್ಭದಲ್ಲಿ ಗಮನಿಸುವದು ಉಚಿತವೆನಿಸುತ್ತದೆ.

---

1. ಹಂಪನಾ ಅವರ ಜೀವನ ಮತ್ತು ಕೃತಿಗಳ ವಿವರ, ಪು. 4.

'ಸಾಳ್ವಭಾರತ' ೧೯೭೬ ರಲ್ಲಿ ಪ್ರಕಟವಾದರೂ ಅದು ಪ್ರಕಟನೆಗೆ ಸಿದ್ಧವಾದದ್ದು ೧೯೬೩ರಲ್ಲಿ, ಪೊನ್ನನ 'ಶಾಂತಿಪುರಾಣ' ಪ್ರಕಟವಾದದ್ದು ೧೯೮೩ ರಲ್ಲಾದರೂ ಕೆಲವು ವರ್ಷಗಳ ಪೂರ್ವದಲ್ಲಿಯೇ ಅನುವಾದವನ್ನು ಮಾಡಿ, ಮೂರು ಆಶ್ವಾಸನೆಗಳನ್ನು ಮುದ್ರಿಸಿದ್ದನ್ನು ಗಮನಿಸಿದರೆ ಅವರಅನಾತುರದ ದುಡಿಮೆಯು ಕಲ್ಪನೆಯಾಗದಿರದು. ಸಾಳ್ವಭಾರತ, ನಾಗಕುಮಾರಷಟ್ಪದಿಯಂಥ ಬೃಹತ್ಕೃತಿಗಳನ್ನು ಪ್ರಥಮವಾಗಿ ಪರಿಷ್ಕರಿಸಿ ಪ್ರಕಟಿಸಿರುವದು, ರತ್ನಾಕರನ ಹಾಡುಗಳನ್ನು ಪ್ರಥಮ ಬಾರಿಗೆ ಸಮಗ್ರವಾಗಿ ಪ್ರಕಟಿಸಿದ್ದು ಕನ್ನಡ ಅರ್ವಾಚೀನ ಕಾವ್ಯ ಪ್ರಪಂಚಕ್ಕೆ ಹಂಪನಾ ಅವರಿಂದ ಸಂದ ಬಹುಮುಖ್ಯ ಕೊಡಿಗೆವೆನಿಸಿವೆ. ಎಸ್. ಶಿವಣ್ಣನವರೊಡನೆ ಪರಿಷ್ಕರಿಸಿ ಹೊರತಂದ ಚಂದ್ರಸಾಗರವರ್ಣಿಯ ಕೃತಿಗಳನ್ನು ಕುರಿತು ಅಂಥದೇ ದೊಡ್ಡ ಸಾಹಸವೆಂದು ಹೇಳಲಾಗದಿದ್ದರೂ ಅದೂ ಕೂಡ ಜೈನ ಸಾಹಿತ್ಯಕ್ಕೆ ಸಂದ ವಿಶಿಷ್ಟ ಕೊಡಿಗೆಯಂತೂ ಹೌದು.

ಪೊನ್ನನ 'ಶಾಂತಿ ಪುರಾಣವು' ತತ್ಪೂರ್ವದಲ್ಲಿಯೇ ಅಂದರೆ ೧೯೩೯ ರಲ್ಲಿಯೇ ಎಂ. ವೆಂಕಟರಾವ್ ಮತ್ತು ಎಚ್. ಶೇಷಯ್ಯಂಗಾರರ ಸಂಯುಕ್ತ ಪ್ರಯತ್ನದಿಂದ ಪರಿಷ್ಕರಣಗೊಂಡ ಪ್ರಕಟವಾಗಿದ್ದ ಮುದ್ರಿತ ಪ್ರತಿಯನ್ನೇ ಮುಖ್ಯ ಆಧಾರವಾಗಿ ಇಟ್ಟುಕೊಂಡಿದ್ದರೂ ಅಲ್ಲಿಯ ಓರೆ ಕೋರೆಗಳನ್ನು ತಿದ್ದುವುದರ ಜೊತೆಗೆ, ಮೂಲ ಸಂಪಾದಕರಿಗೆ ತಡವಾಗಿ ದೊರೆತ ಕಾರಣ ಅಲ್ಲಿ ಅನುಬಂಧದಲ್ಲಿ ಮಾತ್ರ ಸೂಚಿಸಿದ್ದ ಆರಾ ಪ್ರತಿಯ ಪಾಠಗಳನ್ನು ಮೂಲಪಠ್ಯದಲ್ಲಿಯೇ ಆಯಾ ಸ್ಥಳದಲ್ಲಿ ಸೇರ್ಪಡಿಸಿದ್ದು ; ಅದರೊಡನೆ ಕಾವ್ಯಾವಲೋಕನ, ಶಬ್ದಮಣಿದರ್ಪಣ, ಸೂಕ್ತಿಸುಧಾರ್ಣವ, ಸಾಳ್ವನ ರಸರತ್ನಾಕರದಲ್ಲಿ ಉದ್ಧೃತವಾದ ಪದ್ಯಗಳನ್ನು ಪರಿಷ್ಕರಣಕ್ಕೆ ಬಳಸಿಕೊಂಡದ್ದು, ಅಸಗ ಕವಿಯ 'ಶಾಂತಿ ಪುರಾಣ'ದೊಡನೆ ಹೋಲಿಸಿ ಪಾಠನಿರ್ಣಯ ಕೈಕೊಂಡಿದ್ದು—ಹಂಪನಾ ಅವರ ಶ್ರದ್ಧೆ ಹಾಗೂ ಪರಿಶ್ರಮಕ್ಕೆ ಸಾಕ್ಷಿ; ಇದೆಲ್ಲದರಿಂದಾಗಿ ಮರುಪರಿಷ್ಕರಣದ ಗುಣವಿಶೇಷವನ್ನು ಈ ಗ್ರಂಥದಲ್ಲಿ ಕಾಣಬಹುದಾಗಿದೆ.

ಉಳಿದವುಗಳಲ್ಲಿ, ಗ್ರಂಥ ಸಂಸ್ಕರಣಕ್ಕೆ 'ಧನ್ಯಕುಮಾರ ಚರಿತೆ'ಗೆ ನಾಲ್ಕು ಹಸ್ತಪ್ರತಿಗಳನ್ನು 'ನಾಗಕುಮಾರ ಷಟ್ಪದಿ'ಗ ಎರಡು ಹಸ್ತಿಪ್ರತಿಗಳನ್ನು ಬಳಸಿಕೊಂಡಿದ್ದರೆ 'ಚಂದ್ರಸಾಗರವರ್ಣಿಯ ಕೃತಿಗಳು', 'ಸಾಳ್ವಭಾರತ', 'ರತ್ನಾಕರನ ಹಾಡುಗಳು', ಗ್ರಂಥಗಳಿಗೆ ಏಕೈಕ ಹಸ್ತಪ್ರತಿಯನ್ನು ಬಳಸಿಕೊಂಡಿದ್ದಾರೆ. ಹೀಗೆ ಏಕೈಕ ಹಸ್ತಪ್ರತಿಯಿಂದ ಗ್ರಂಥ ಪರಿಷ್ಕರಣಕ್ಕೆ ತೊಡಗುವದು ಬಾಹ್ಯದೃಷ್ಟಿಯಿಂದ ಮತ್ತು ಬೇಜವಾಬ್ದಾರಿ ಸಂಪಾದಕನ ದೃಷ್ಟಿಯಿಂದ ಹಗುರಾದ, ನಿರಾಯಾಸವಾದ ಕೆಲಸವೆಂಬಂತೆ ಕಂಡುಬಂದರೂ ಒಬ್ಬ ಪ್ರಜ್ಞಾವಂತ ಸಂವೇದನಾಶೀಲನಾದ

ಸಂಪಾದಕನಿಗೆ ಅಪಾಯದ ಕೆಲಸವೂ ಹೌದು. ಏಕೆಂದರೆ ಅದು "ಸಾಕ್ಷಿಗಳಿಲ್ಲದೆ, ಆತ್ಮಸಾಕ್ಷಿಯ ಬಲದಿಂದ ತೀರ್ಮಾನ ನೀಡುವಂತಹ ತುಂಬ ಜವಾಬ್ದಾರಿಯ ಕೆಲಸ.'[2] ಆದರೆ ಇಂಥ ಸಾಹಸ ಪ್ರಜ್ಞಾವಂತ ಸಂಪಾದಕನನ್ನು ಕೆಲಸಲ ಅಪಾಯಕ್ಕೆ, ದಿವ್ಯಪರೀಕ್ಷೆಗೆ ಸಿಲುಕಿಸಿದ್ದರೂ ಗ್ರಂಥ ದುರಂತದಿಂದ ಪಾರುಗೊಂಡು, ಪುನರುಜ್ಜೀವನಗೊಳ್ಳುತ್ತದೆ. ರತ್ನಾಕರನ ಹಾಡುಗಳನ್ನು ತುಮಕೂರು ಜಿಲ್ಲೆಯ ಬಿದರೆ ಗ್ರಾಮದ ಪದ್ಮನಂದಿ ಗ್ರಂಥ ಭಂಡಾರದಲ್ಲಿ ದೊರೆತ ಹಸ್ತಪ್ರತಿಯ ಆಧಾರದಿಂದ ಸಂಕಟಿಸಿಕೊಟ್ಟಿದ್ದರೂ ಅದು ಅತ್ಯುತ್ತಮವೂ ಅಪೂರ್ವವೂ ಆಗಿದ್ದಾಗಲೂ ಬೆಂಗಳೂರು ವಿಶ್ವವಿದ್ಯಾಲಯದ ಅಧ್ಯಯನ ಕೇಂದ್ರದ ಓಲೆಗರಿ ಸಂಗ್ರಹಾಲಯದ ಒಂದೆರಡು ಹಸ್ತಪ್ರತಿಗಳಿಂದಲೂ ಪ್ರಯೋಜನ ಪಡೆದಿರುವುದು ಗಮನಾರ್ಹ. ಆದರೆ ಹೀಗೆ ಪ್ರಯೋಜನವನ್ನು ಪಡೆಯುವುದು ಅನಿವಾರ್ಯವಾಗಿದ್ದಾಗಲಿ ಹಸ್ತಪ್ರತಿಗಳನ್ನೂ ಬಳಸಿಕೊಂಡು ನಿಟ್ಟುಪುಟ್ಟಾಗಿ ಪಾಠಗಳನ್ನು ಸಂಕಲಿಸಿ, ಪಾಠಾಂತರಗಳನ್ನು ನಿರ್ಣಯಿಸುವ ಮೂಲಕ ಪರಿಷ್ಕರಿಸಿದ್ದರೆ, ಅವರ ಪರಿಶ್ರಮಕ್ಕೆ ಶಾಸ್ತ್ರಬದ್ಧತೆಯ ಬಲ ಬರಬಹುದಿತ್ತು. ಮೇಲಾಗಿ ತಾವು ಸಂಗ್ರಹಿಸಿದ ಹಸ್ತಪ್ರತಿಯಲ್ಲಿ ೨೨೫ ಕೀರ್ತನೆಗಳಿವೆಯೆಂದು ಹೇಳಿದ್ದರೂ[3] ಇಲ್ಲಿ ಒಟ್ಟು ೨೧೦ ಹಾಡುಗಳು ಪ್ರಕಟವಾಗಿವೆ. ಹೆಚ್ಚಿನ ಹದಿನೈದು ಹಾಡುಗಳ ಆಕರವನ್ನು ಸಂಪಾದಕರು ಸೂಚಿಸದೇ ಹೋಗಿದ್ದಾರೆ: ಇಷ್ಟೊಂದು ವಿಪುಲ ಪ್ರಮಾಣದಲ್ಲಿ ದೊರೆತ ಹಾಡುಗಳನ್ನು ವಸ್ತು-ಉದ್ದೇಶಗಳ ಹಿನ್ನೆಲೆಯಲ್ಲಿ ವರ್ಗೀಕರಿಸದೆಯೂ ಹೋಗಿದ್ದಾರೆ.

'ಧನ್ಯಕುಮಾರ ಚರಿತೆ'ಗೆ ನಾಲ್ಕು ಓಲೆಯ ಪ್ರತಿಗಳನ್ನು ಬಳಸಿಕೊಂಡಿದ್ದು ಶುದ್ಧವೂ–ಪ್ರಾಚೀನವೂ ಆದ ಮೂಡಬಿದ್ರೆಯ ಪಡುಬಸ್ತಿ ಪದುಮಯ್ಯನ ಮಗ ಚಂದ್ರಪ್ಪ ಇಂದ್ರನು ಬರೆದ ಪ್ರತಿಯನ್ನೇ ಮೂಲವನ್ನಾಗಿ ಇಟ್ಟುಕೊಂಡಿದ್ದಾರೆ, ಆ ಎಲ್ಲ ಹಸ್ತಪ್ರತಿಗಳ ಸ್ವರೂಪವನ್ನು ಹೇಳಿ, ಅವುಗಳ ಪೀಳಿಗೆಯನ್ನು ನಿರ್ಣಯಿಸಿಕೊಟ್ಟಿರುವದು ಅವರ ಶಾಸ್ತ್ರೀಯ ಪ್ರಜ್ಞೆಗೆ ನಿದರ್ಶನವಾಗಿದೆ. ನಾಗಕುಮಾರ ಷಟ್ಪದಿಯನ್ನು ಸಾಲಿಗ್ರಾಮದಲ್ಲಿ ಮತ್ತು ಗುಬ್ಬಿ ತಾಲೂಕಿನ ನಿಟ್ಟೂರ ಬಳಿಯ ಅದಲಗೆರೆಯಲ್ಲಿ ದೊರೆತ ಎರಡು ಓಲೆಪ್ರತಿಗಳ ಆಧಾರದಿಂದ ಪರಿಷ್ಕರಿಸಲಾಗಿದೆ. ಹೀಗೆ ತಾವು ಬಳಸಿಕೊಂಡ ಪ್ರತಿಗಳ ಸ್ವರೂಪವನ್ನು ತಿಳಿಸಿ, ಅವುಗಳಿಗೆ ಪ್ರತ್ಯೇಕ ಸಂಕೇತಗಳನ್ನು ಕೊಟ್ಟು ಉತ್ತಮ ಪ್ರತಿಯನ್ನು ಮೂಲವಾಗಿಟ್ಟುಕೊಂಡು, ಉಳಿದ ಪ್ರತಿಗಳಿಂದ ಮತ್ತು ಹೆಚ್ಚಿನ ಉಪಲಬ್ಧ ಆಕರಗಳಿಂದ ಪಾಠಾಂತರ ನಿರ್ಣಯಕ್ಕೆ ತೊಡಗಿರುವಲ್ಲಿ ಪರಿಷ್ಕರಣದ ಪೂರ್ವಸಿದ್ಧತೆಯ ಬಗ್ಗೆ ವಹಿಸಿದ ಮುಂಜಾಗ್ರತೆಯ

---

2. 'ಕನ್ನಡ ಗ್ರಂಥ ಸಂಪಾದನೆ'(1972) ಎಂ. ಎಂ. ಕಲಬುರ್ಗಿ, ಪು. 127
3. 'ರತ್ನಾಕರನ ಹಾಡುಗಳು'(1977) ಪ್ರಸ್ತಾವನೆ, ಪು. XX

ಕಲ್ಪನೆಯಾಗುತ್ತದೆ. ತಮ್ಮ ಪರಿಶ್ರಮ ಹಾಗೂ ಪ್ರೌಢಿಮೆಯನ್ನು ಪ್ರದರ್ಶಿಸುವ ಹವ್ಯಾಸಕ್ಕೆ ಒಳಗಾಗಿ ಹತ್ತಿಪ್ಪತ್ತು ಅಸುದ್ಧ, ಜೀರ್ಣ, ಅಪೂರ್ಣ, ತ್ರುಟಿತ ತಾಡೋಲೆಗಳನ್ನು ಬಳಸಿಕೊಳ್ಳುವ ವ್ಯರ್ಥ ಗೋಜಿಗೆ ಹೋಗದೆ ತಮ್ಮೆಲ್ಲ ಪರಿ ಶ್ರಮವನ್ನು ಶುದ್ಧವಾದ ಅತ್ಯುತ್ತಮ ಹಸ್ತಪ್ರತಿಗಳನ್ನು ಸಂಗ್ರಹಿಸುವಲ್ಲಿ ವ್ಯಯಿ ಸಿದ್ದಾರೆ.

'ಧನ್ಯಕುಮಾರ ಚರಿತೆ' ಇದಕ್ಕೊಂದು ಉದಾಹರಣೆ. ಅಕ್ಷರ ದೋಷಗಳಂಥ ತೀರ ಚಿಲ್ಲರೆ ಪಾಠಗಳನ್ನು ಬಿಟ್ಟು ಅರ್ಥಕ್ಕೆ–ಸಂದರ್ಭಕ್ಕೆ ಉಪಯುಕ್ತವೆನಿಸುವ, ವಿವಾದಾಸ್ಪದವೆನಿಸುವ ಮಹತ್ವದ ಪಾಠಗಳನ್ನು ಮಾತ್ರ ಗುರುತಿಸುವ ಮೂಲಕ ಕೃತಿಗಳಿಗೆ ಓರಣ ಹಾಗೂ ಅಚ್ಚುಕಟ್ಟುತನವನ್ನು ತರುವದಲ್ಲದೆ, ಮೂಲಪದ್ಯದಲ್ಲಿ ಹೇರಳ ಸಂಕೇತಗಳನ್ನು ಕಾಣಿಸಿದೆ, ಓದುಗರಿಗೆ ವ್ಯರ್ಥ ಪರಿಶ್ರಮ, ಗೊಂದಲವಾಗ ದಂತೆ ಔಚಿತ್ಯವನ್ನು ಮೆರೆದಿದ್ದಾರೆ.

ಹಂಪನಾ ಅವರ ಆಳವಾದ ಪಾಂಡಿತ್ಯ ಪಾಠಗಳನ್ನು ಗುರುತಿಸಿಕೊಡುವಲ್ಲಿ ಸಾಕಷ್ಟು ಸಹಚಾರಿಯಾಗಿದೆ. ಕವಿಯ ಮೇಲಿನ ಅಭಿಮಾನ, ವಸ್ತುವಿನ ಬಗೆಗಿನ ಅತ್ಯೊಲವು ಹಾಗೂ ಶಬ್ದಾರ್ಥಗಳ ಮೇಲಿನ ಮೋಹದಿಂದ ದೂರವಾಗಿ, ಎಲ್ಲವನ್ನೂ ಚಿಕಿತ್ಸಕ ದೃಷ್ಟಿಯಿಂದ ಪರೀಕ್ಷಿಸಿ ಪಾಠ ನಿರ್ಣಯ ಕೈಕೊಳ್ಳುವಲ್ಲಿ ಸಾಕಷ್ಟು ಎಚ್ಚರಿಕೆ ವಹಿಸಿದ್ದು ವೇದ್ಯವಾಗುತ್ತದೆ. ತ್ರುಟಿತ ಭಾಗಗಳನ್ನು, ಲುಪ್ತಾಂಶಗಳನ್ನು ತಮ್ಮ ಅನುಭವ ಹಾಗೂ ತಿಳಿವಳಿಕೆಯ ಹಿನ್ನೆಲೆಯಲ್ಲಿ ಸಾಧ್ಯ ವಾದಷ್ಟೂ ತುಂಬಿಕೊಂಡು ಚೌಕ ಕಂಸಗಳಿಂದ ಸೂಚಿಸಿದ್ದಾರೆ; ಅಸಾಧ್ಯವಾದ ಕಡೆಯಲ್ಲಿ ಕೈಬಿಟ್ಟು ಮತ್ತು ಅರ್ಥವಾಗದ ಸಂದರ್ಭದಲ್ಲಿ ಪಕ್ಕದಲ್ಲಿಯೇ ಪ್ರಶ್ನಾ ರ್ಥಕ ಚಿಹ್ನೆಯಿಂದ ಸೂಚಿಸಿ ಅಂಥ ಅರ್ಥವಾಗದ ಅಂಶಗಳ ಕಡೆಗೆ ಪಂಡಿತರ ಗಮನ ಸೆಳೆದಿದ್ದಾರೆ. ಅಂದರೆ ಅವರ ಗ್ರಂಥ ಸಂಪಾದನೆ ಸಂಪೂರ್ಣ ದೋಷ ವಿದೂರವೆಂದೂ ಹೇಳುವಂತಿಲ್ಲ. ಪಾಠಾಂತರ ಚಿಹ್ನಗಳನ್ನು ಉಪಯೋಗಿಸಿಕೊಂಡಿ ರುವರಾದರೂ ಅವುಗಳ ಬಳಕೆಯಲ್ಲಿ ಒಂದು ಶಿಸ್ತನ್ನು ಒದಗಿಸುವತ್ತ ಹೆಚ್ಚಿನ ನಿಗಾ ವಹಿಸಿದಂತೆ ಕಂಡುಬರುವದಿಲ್ಲ. ಇದರಿಂದಾಗಿ ಅವರ ಪಾಂಡಿತ್ಯ–ಪರಿಶ್ರಮ ಗಳ ಮಧ್ಯದಲ್ಲಿಯೂ ಪರಿಷ್ಕರಣದ ಫಲದಲ್ಲಿ ಅನಿವಾರ್ಯವಾದ ಅರಕೆ ಕಾಣಿಸಿ ಕೊಳ್ಳುವಂತಾಗಿದೆ. ಒಂದು ಪೂರ್ತಿ ಶಬ್ದ, ಚರಣ, ಚರಣಾರ್ಧದ ಪಾಠಾಂತರ ಸೂಚಿಸುವಾಗ ಪದ್ಯದಲ್ಲಿ ಅವುಗಳ ಎರಡೂ ಬದಿಗೆ ಅಂಕಿಗಳನ್ನು ನಮೂದಿಸ ಲಾಗಿದ್ದರೂ ಪಾಠಾಂತರ ಕೊಡುವಾಗ ಅಡಿಟಿಪ್ಪಣಿಯಲ್ಲಿ ಒಂದೇ ಅಂಕಿಯನ್ನು ನಮೂದಿಸಿರುವದು, ಲುಪ್ತಪದ್ಯಭಾಗಗಳನ್ನು ಸೂಚಿಸಲು ಚಿಹ್ನಗಳನ್ನು ಬಳಸದೆ ಅಡಿಟಿಪ್ಪಣಿಯಲ್ಲಿ ಅಂಥ ಪ್ರತಿಗಳ ಹೆಸರನ್ನು ಹೇಳಿ ಬರಹದ ಮೂಲಕ ನೇರವಾಗಿ

ಹೇಳಿರುವದು, ಅದಕ್ಕಿಂತಲೂ ವಿಚಿತ್ರವೆಂದರೆ. ಒಂದು ವರ್ಣದ ಪಾಠಾಂತರವನ್ನು ಸೂಚಿಸಲು ಸಂಪೂರ್ಣ ಚರಣವನ್ನೇ ಉದ್ಧರಿಸಿರುವದು :[4] ಹಾಗೆಯೇ ಲುಪ್ತ ಭಾಗವನ್ನು ಸೂಚಿಸಲು'—' ಚಿಹ್ನವನ್ನು, ತ್ರುಟಿತ ಭಾಗವನ್ನು ಸೂಚಿಸಲು ' X ' ಚಿಹ್ನವನ್ನು ಬಳಸಿಕೊಳ್ಳುವದು ಉಚಿತ. ಹಾಗೆ ಮಾಡವೆ ಅವೆರಡಕ್ಕೂ ಚಿಕ್ಕೆ ಗಳನ್ನು ಉಪಯೋಗಿಸಿರುವದು. ಗ್ರಂಥ ಸಂಪಾದನೆಯ ದೃಷ್ಟಿಯಿಂದ ಶಾಸ್ತ್ರೀಯ ವೆನಿಸುವುದಿಲ್ಲ. ಏಕೆಂದರೆ ಉದ್ದೇಶಪೂರ್ವಕವಾಗಿ ಸಂಪಾದಕರೇ ಕೈಬಿಡುವ ಸಂದರ್ಭ ದಲ್ಲಿ ಮಾತ್ರ ಚಿಕ್ಕೆಗಳನ್ನು ಬಳಸುವದು ಸಾರ್ಥಕ ರೂಢಿ. ಲುಪ್ತ ಹಾಗೂ ತ್ರುಟಿತ ಭಾಗಗಳೆರಡನ್ನೂ ಪ್ರತ್ಯೇಕ ಚಿಹ್ನೆಗಳಿಂದ ಸೂಚಿಸುವದರಿಂದ ಲಿಪಿಕಾರರ ಯೋಗ್ಯತೆ, ಅಂಥ ಪ್ರತಿಗಳ ಸ್ವರೂಪವನ್ನು ಅರ್ಥ ಮಾಡಿಕೊಳ್ಳಲು ಹೆಚ್ಚು ಅನುಕೂಲ. ಏಕೆಂದರೆ ಬರಹದಲ್ಲಿಯ ಲುಪ್ತತೆ ಲಿಪಿಕಾರನ ದೋಷಕ್ಕೆ ನಿದರ್ಶನವಾದರೆ, ತ್ರುಟಿತ ಭಾಗ ಅಥವಾ ಓಲೆಗರಿಗಳ ಪುಟಗಳ ಲುಪ್ತತೆ ಸಂಗ್ರಹಕಾರರ ದೋಷಕ್ಕೆ ನಿದರ್ಶನ ವಾಗಿರುತ್ತದೆ.

ಸಾಳ್ವಭಾರತದ ಪ್ರತಿಯೊಂದು ಷಟ್ಪದಿಯ ಚರಣಾಂತ್ಯಕ್ಕೂ ದಂಡವನ್ನು ಬಳಸುವದು ಅನಿವಾರ್ಯವಾಗಿರಲಿಲ್ಲ ; ಮೂರನೆಯ ಮತ್ತು ಆರನೆಯ ಚರಣದ ಅಂತ್ಯಾಕ್ಷರ ಹ್ರಸ್ವವಾಗಿದ್ದಾಗಲೂ ದೀರ್ಘವಾಗಿಯೇ ಪರಿಗಣಿಸಲ್ಪಡುವದರಿಂದ ಅದನ್ನು ಮತ್ತೆ ಅನವಶ್ಯಕವಾಗಿ ದೀರ್ಘಗೊಳಿಸುವದರಿಂದ ಕೃತಕತೆಗೆ ಎಡೆಗೊಟ್ಟಂತಾ ಗಿದೆ ; ಲುಪ್ತ ಭಾಗವನ್ನು ತುಂಬಿಕೊಂಡ ಸಂದರ್ಭದಲ್ಲಿಯಾದರೂ ಅಂತಹ ಕೃತಕತೆ ಯನ್ನು ತಪ್ಪಿಸಬಹುದಿತ್ತು. "...ಗೃಹದೊಳೊಪ್ಪಿದರೂ !"[5] ಎಂಬುದು ಎಂಥ ಅರ್ಥಾಭಾಸಕ್ಕೆ ಎಡೆಗೊಡುತ್ತದೆಯೆಂಬುದನ್ನು ನೋಡಬಹುದು. ಕೆಲವು ಸಂದರ್ಭ ದಲ್ಲಿಯಂತೂ ಲುಪ್ತಭಾಗವನ್ನು ತುಂಬಿಕೊಳ್ಳುವಾಗ ಛಂದಸ್ಸಿಗೆ, ಗಣವಿಭಜನೆಗೆ ಗಮನ ಹರಿಸಿದಂತೆಯೂ ಕಂಡುಬರುವದಿಲ್ಲ — "ಸರಿಗರೆಲ್ಲಂ ಸ್ಮರನ ಬಳಸಿ ನಿಂದರು ಖಡ್ಗವಾ॥"[6] ಭಾಮಿನಿ ಷಟ್ಪದಿಯ ಈ ಮೂರನೆಯ ಚರಣವನ್ನು ನೋಡಬಹುದು. ಇದೇ ಸಾಳ್ವಭಾರತದ ೧೮ನೆಯ ಸಂಧಿಯ ೩೦ನೆಯ ಪದ್ಯ ಪುನರುಕ್ತವಾಗಿದ್ದಾಗಲೂ ಅದಕ್ಕೆ ೩೮ನೆಯ ಪದ್ಯಸಂಖ್ಯೆಯನ್ನು ಕೊಡಲಾಗಿದೆ; ಅದನ್ನು ಅಡಿಟಿಪ್ಪಣಿಯಲ್ಲಿ ಹೆಚ್ಚಿನ ಪದ್ಯವಾಗಿ ಸೂಚಿಸಬಹುದಿತ್ತು.

---

4. 'ನಾಗಕುಮಾರ ಷಟ್ಪದಿ', ದೀಕ್ಷಾಸಂಧಿ : ಪದ್ಯ 122ರ ಮೂರನೆಯ ಸಾಲು
5. 'ಸಾಳ್ವಭಾರತ'(1976), ಸಂಧಿ 27, ಪದ್ಯ 8, ಪು. 266
6. ಅಲ್ಲೆ, 28–9

'ನಾಗಕುಮಾರ ಷಟ್ಪದಿಯ' ೧೬೩ನೆಯ ಪದ್ಯದ ಮೂರನೆಯ ಸಾಲಿನ ಮಧ್ಯದಿಂದ ೫ನೆಯ ಸಾಲಿನ ಕೊನೆಯುವರೆಗಿನ ಪಾಠಾಂತರ ಒಂದೇ ಪ್ರತಿಗೆ ಸಂಬಂಧಿಸಿದಂತಹುದು ; ಆಗಲೂ ಆ ಎಲ್ಲ ಸಾಲುಗಳನ್ನು ಒಂದೇ ಅಂಕಿಯ ಅಡಿ ಯಲ್ಲಿ ತರದೆ ಒಂದೊಂದು ಸಾಲಿಗೆ ಪ್ರತ್ಯೇಕ ಅಂಕಿಗಳನ್ನು ಬಳಸಿ ಪ್ರತ್ಯೇಕವಾಗಿ ಪಾಠಾಂತರ ಕಾಣಿಸಿರುವದು ಸೂಕ್ತವೆನಿಸುವದಿಲ್ಲ. ಅದೇ ಪದ್ಯದ ಕೊನೆಯ ಸಾಲಿನ ಆರಂಭದ ಮೃದು ಶಬ್ದಕ್ಕೆ ಪತ್ಯದಲ್ಲಿ ಸಂಕೇತವನ್ನು ಕೊಟ್ಟು ಪಾಠಾಂತರವನ್ನು ಸೂಚಿಸದೇ ಹೋಗಿರುವದೂ ಉಂಟು.[7] ಅದೇ ಸಂಧಿಯ ೧೨೨ನೆಯ ಪದ್ಯದ ೩ನೆಯ ಸಾಲಿನಲ್ಲಿ ಕೇವಲ ಒಂದು ವರ್ಣದ ಪಾಠಾಂತರವನ್ನು ಗುರುತಿಸಲು ಇಡಿ ಚರಣವನ್ನೇ ಬಳಸಿಕೊಂಡಿರುವದು ಅನವಶ್ಯಕ ; ಮತ್ತು ೧೨೫ನೆಯ ಭಾಮಿನಿ ಷಟ್ಪದಿಯ ೪ನೆಯ ಸಾಲು ಕೇವಲ ೧೨ ಮಾತ್ರೆಗಳಿಂದ ಕೂಡಿದೆ. ಆ ಪ್ರತಿಯ ಪಾಠಾಂತರವು ಅಸಮರ್ಪಕವೆನಿಸಿದಲ್ಲಿ ಅವನ್ನು ಸಂಸ್ಕರಿಸುವ ಹೊಣೆಯನ್ನೂ ಸಂಪಾದಕರು ವಹಿಸಿಕೊಂಡಿದ್ದರೆ ಹೆಚ್ಚು ಸಮಂಜಸವಾಗುತ್ತಿತ್ತು. ೧೦೭ನೆಯ ಪುಟದ ೪೪ನೆಯ ಪದ್ಯದ ೪ನೆಯ ಸಾಲಿನ ಕೊನೆಯ 'ಹೊಂದಿಯು' ಎನ್ನುವ ಆಯ್ಕೆಯಾದ ಪಾಠಕ್ಕಿಂತ 'ಇ' ಪ್ರತಿಯಲ್ಲಿಯ 'ಹೊಂದಿದು' ಎಂಬ ಪಾಠ ಹೆಚ್ಚು ಗ್ರಾಹ್ಯ ; ಅಂದಾಗ ಮಾತ್ರ ಮುಂದಿನ ಸಾಲಿನ ಆರಂಭದ 'ದೀಗಲಿ' ಎನ್ನುವದಕ್ಕೆ ಸಂಬಂಧ ಉಂಟಾಗಿ 'ಹೊಂದಿದುದೀಗಲಿ' ಎಂದು ನೇರ ಹಾಗೂ ಸ್ಪಷ್ಟವಾದ ಅರ್ಥ ಘಟಿಸುತ್ತದೆ. ಇಲ್ಲವಾದರೆ 'ದೀಗಲಿ'ಎನ್ನುವದಕ್ಕಾಗಲಿ,'ಹೊಂದಿಯುದೀಗಲಿ' ಎನ್ನುವದಕ್ಕಾಗಲಿ ಅರ್ಥಸಾಮಂಜಸ್ಯ ಕಾಣಿಸಲಾರದು. ಮೇಲುನೋಟಕ್ಕೂ ಕಾಣಿಸಿಕೊಳ್ಳುವ ಇಂಥ ದೋಷ-ಆಭಾಸಗಳು ಮನಸ್ಸು ಮುರಿಯುತ್ತವೆ. ಆದರೆ ಇಂಥ ಬೃಹದ್ಗ್ರಂಥಗಳ ಪರಿಷ್ಕರಣದಲ್ಲಿ ಎಂಥ ಜಾಗೃತಪ್ರಜ್ಞೆಯ ಸಂಪಾದಕನಲ್ಲೂ ಇಂಥ ದೋಷಗಳು ಕಾಣಿಸಿಕೊಳ್ಳುವದು ಸಹಜವೆನ್ನುವುದಕ್ಕೆ ಮಾತ್ರ ಇವು ಉದಾಹರಣೆಗಳಾಗಿ ನಿಲ್ಲುತ್ತವೆ. ಇಂಥ ದೋಷಗಳನ್ನು ಮರೆಮಾಚುವ ಗುಣ ಗಳನ್ನೂ ಈ ಸಂದರ್ಭದಲ್ಲಿ ಉಪೇಕ್ಷಿಸುವಂತಿಲ್ಲ.

ಲುಪ್ತ ಹಾಗೂ ತ್ರುಟಿತ ಭಾಗಗಳನ್ನು ಭರಿಸಿಕೊಳ್ಳುವ ಸಂಪಾದಕರ ಔಚಿತ್ಯ ಪ್ರಜ್ಞೆ ಮತ್ತು ಪ್ರತಿಭೆ ಸ್ಮರಣಾರ್ಹ. ಅಂಥ ಭಾಗಗಳು ಒಂದೆರಡು ವರ್ಣಗಳಿಂದ ಕೂಡಿದ್ದರೆ ಆ ಮಾತು ಬೇರೆ. ಆದರೆ ಶಬ್ದಸಮೂಹ. ಚರಣಗಳೇ ಲುಪ್ತವಾದಾಗ ಅವೆಲ್ಲ ಸಂಪಾದಕನಿಗೆ ಬಿಕ್ಕಟ್ಟಿನ ಸವಾಲಾಗಿ ನಿಲ್ಲುತ್ತವೆ. ಅಂಥ ಕೆಲವು ಸಂದರ್ಭದಲ್ಲಿ ಹಂಪನಾ ಅವರು ಅವುಗಳ ಜೊತೆಗೆ ರಾಜಿ ಮಾಡಿಕೊಂಡು ಪ್ರಮಾಣಿಕತೆಯನ್ನು ತೋರಿದ್ದಾರೆ ; ಮತ್ತೆ ಕೆಲವು ಸಲ ತಮ್ಮ ವಿದ್ವತ್ತು-ಅನುಭವ-ಸಂಸ್ಕಾರಗಳ

7. 'ಸಾಳ್ವಭಾರತ'(1976), ಸಂಪಾದಕನ ಅರಿಕೆ, ಪು.VII

ಪ್ರಯೋಜನೆಯಿಂದ ಅಂತಹ ಸವಾಲುಗಳನ್ನು ಎದುರಿಸಿ ಯಶಸ್ವಿಯಾಗಿದ್ದಾರೆ. "[ಕಡಿದ ಪರ್ವತನಿ]ಗಳಪೊಲು ಪಡಲಿಟ್ಟವಾನೆಗಳೂ" ಸಾಳ್ವಭಾರತ, (೪೭-೨೦) ಎಂಬುದನ್ನು ಅವರ ಊಹಾಪರಿಷ್ಕರಣದ ಸಾಮರ್ಥ್ಯಕ್ಕೆ ಕೇವಲ ಒಂದು ನಿದರ್ಶನ ಮಾತ್ರವಾಗಿ ಸ್ಮರಿಸಬಹುದು.

ಅರ್ವಾಚೀನ ಕಾವ್ಯಗಳ ಸಂಪಾದನೆಯು, ಅದರಲ್ಲೂ ವರ್ಣಕ ಕಾವ್ಯಗಳ ಸಂಪಾದನೆಯ ಸಂದರ್ಭದಲ್ಲಿ ಱ,ೞ,ಗಳ ಬಳಕೆ ಸಂಪಾದಕರನ್ನು ಸಂದಿಗ್ಧತೆಗೀಡು ಮಾಡುವ ಸಮಸ್ಯೆಯನ್ನೊಡ್ಡುತ್ತವೆ. ಈ ಕುರಿತು "ಸಾಳ್ವನ ಕಾಲಕ್ಕೆ (೧೪೮೫) ಈ ಎರಡೂ ಧ್ವನಿಗಳು ಉಚ್ಚಾರದಲ್ಲಿ ಬಳಕೆಯಲ್ಲಿರಲಿಲ್ಲ. ೧೩ನೆಯ ಶ.ಮಾ.ದ ಈಚಿನ ಕವಿ ಲಿಪಿಕಾರರು ಬರವಣಿಗೆಯಲ್ಲಿಯಷ್ಟೇ ಉಳಿಸಿಕೊಂಡು ಬಂದಿದ್ದಾರೆ. ಈ ಕಾಲಮಾನದ ದೃಷ್ಟಿಯಿಂದ ವಿವೇಚಿಸಿ ೧೩ನೆಯ ಶ.ಮಾ.ದ. ತರುವಾಯದ ಕೃತಿಗಳನ್ನು ಮುದ್ರಿಸುವಾಗ ಱ, ೞ, ಚಾಕ್ಷುಷ ಚಿಹ್ನೆಗಳನ್ನು ಕೈಬಿಡಬಹುದೆಂದು ತೋರುತ್ತದೆ" ಎಂಬ ಹಂಪನಾ ಅಭಿಪ್ರಾಯ ತೀವ್ರ ಗಮನಾರ್ಹವಾಗಿದೆ. ಅದ ರೊಂದಿಗೆ ಕವಿಚರಿತೆಗಾರರು ಚಂದ್ರಸಾಗರವರ್ಣಿಯ ಪದ್ಯಗಳನ್ನು ಉದಾಹರಿಸು ವಾಗ ಶಕಟರೇಫವನ್ನು ಹಾಕಿರುವುದು ಅನಗತ್ಯ ಎಂಬ ಅಭಿಪ್ರಾಯ.[9] ಈ ವರ್ಣ ಬಳಕೆಯ ಬಗ್ಗೆ ಅವರ ಸ್ಪಷ್ಟ ನಿಲುವನ್ನು ಸಮರ್ಥಿಸುವಂತಿದೆ. ಆದರೆ ತಾವು ಬಳಸಿಕೊಂಡ ಸಾಳ್ವ ಭಾರತದ ಏಕೈಕ ಹಸ್ತಪ್ರತಿಯಲ್ಲಿ ಅವುಗಳ ಶುದ್ಧ ಬಳಕೆ ಇಲ್ಲದಾಗಲೂ ಉಳಿಸಿಕೊಂಡಿರುವುದು ಸೋಜಿಗ! ವಿಮರ್ಶಕರು ಎಲ್ಲಿ ಆ ಕುರಿತು ತಮ್ಮ ಅಧಿಕಾರವನ್ನೇ ಶಂಕಿಸುತ್ತಾರೊ ಎಂಬ ಆತಂಕದಿಂದದೆಂಬಂತೆ ಅವುಗಳನ್ನು ಕಟ್ಟುನಿಟ್ಟಾಗಿ ಬಳಸಿಕೊಂಡಿದ್ದಾರೆ. 'ಶಾಂತಿ ಪುರಾಣ'ದಲ್ಲಿ ತಮಗಿರುವ ಹಳಗನ್ನಡ ಕಾವ್ಯಾಭ್ಯಾಸದತ್ತವಾದ ತಿಳಿವಳಿಕೆಯಿಂದ ಅವುಗಳನ್ನು ಸೂಕ್ತವಾಗಿ ಅಳವಡಿ ಸಿದ್ದಾರೆ. ತಾವು ಮುಖ್ಯ ಆಧಾರವಾಗಿಟ್ಟುಕೊಂಡ ಮುದ್ರಿತ ಪ್ರತಿಯಲ್ಲಿ ಯಾವು ದಿತ್ತೆಂಬುದನ್ನು ಅಡಿಟಿಪ್ಪಣಿಯಲ್ಲಿ ತೋರಿಸಿದ್ದಾರೆ. ಇಂಥ ಸುಮಾರು ೫೦ ಮಾರ್ಪಾಡುಗಳನ್ನಾದರೂ ಮಾಡಿಕೊಂಡಿರುವುದಾಗಿ ತಿಳಿಸಿದ್ದಾರೆ.

ಹಂಪನಾ ಅವರ ಸಂಪಾದಿತ ಕೃತಿಗಳು, ಆ ದಿಶೆಯಲ್ಲಿ ವಿಶಿಷ್ಟ ಹಾಗೂ ಮಹತ್ವದ ಕೊಡುಗೆಯಾಗಿರುವುದಕ್ಕೆ ಅವೆಲ್ಲವುಗಳಿಗೆ ಅತ್ಯಂತ ಪರಿಶ್ರಮದಿಂದ ಒದಗಿಸಿರುವ ವಿದ್ವತ್ಪೂರ್ಣವಾದ ಸುದೀರ್ಘ ಪ್ರಸ್ತಾವನೆ ಮತ್ತು ಅನುಬಂಧಗಳೂ ಮಹತ್ವದ ಕಾರಣಗಳಾಗುತ್ತವೆ. 'ನಾಗಕುಮಾರ ಷಟ್ಪದಿ'ಯ ೧೫೦ ಪುಟಗಳ,

---

8. 'ಸಾಳ್ವಭಾರತ'(1976), ಸಂಪಾದಕನ ಅರಿಕೆ. ಪು.VII
9. 'ಚಂದ್ರಸಾಗರ ವರ್ಣಿಯ ಕೃತಿಗಳು'(1981), ಪೀಠಿಕೆ, ಪು.VII

'ಶಾಂತಿ ಪುರಾಣ'ದ ೧೮೭ ಪುಟಗಳ[10] ವಿಸ್ತಾರವಾದ ಪ್ರಸ್ತಾವನೆ ಅವರ ಸುದೀರ್ಘ ಕಾಲದ ಸತ್ಫಲಗಳನ್ನು ಗರ್ಭೀಕರಿಸಿಕೊಂಡಿವೆ. ಆಯಾ ಯುಗದ ಧಾರ್ಮಿಕ, ರಾಜಕೀಯ ಪರಿಸರ ಹಾಗೂ ಕಾವ್ಯಪರಂಪರೆಯ ಹಿನ್ನೆಲೆಯಲ್ಲಿ ಕೃತಿಗಳ ವಸ್ತು, ಕವಿಗಳ ಜೀವನ, ಮನೋಧರ್ಮ, ಆಶಯಗಳನ್ನು ಪರಿಭಾವಿಸಿ ನಿರೂಪಿಸಿರುವದು ಸಾರ್ಥಕವಾಗಿದೆ. ಶ್ವೇತಾಂಬರ-ದಿಗಂಬರ ಪರಂಪರೆಯಲ್ಲಿ ಬೆಳೆದುಬಂದ ಜೈನ ವಾಙ್ಮಯದ ಅಧ್ಯಯನದ ನೆಲೆಯಲ್ಲಿ ಕಾವ್ಯದ ವಸ್ತುವನ್ನು ಪರಿಚಯಿಸಿ ಅವುಗಳ ನೆಲೆ-ಬೆಲೆಯನ್ನು ನಿರ್ಣಯಿಸಿಕೊಡುವಲ್ಲಿ ಮತ್ತು ಆ ವಸ್ತುವನ್ನು ಕಲಾತ್ಮಕ ಆಕಾರಕ್ಕೆ ಒಳಪಡಿಸುವ ಕವಿಕರ್ಮದ ಕೌಶಲದ ಇತಿ-ಮಿತಿಗಳನ್ನು ಗೊತ್ತುಹಚ್ಚಿ ಮೌಲ್ಯಮಾಪನಕ್ಕೆ ತೊಡಗಿರುವಲ್ಲಿ ಸಂಪಾದಕರ ವಿದ್ವತ್ಪೂರ್ಣವಾದ ವ್ಯಕ್ತಿತ್ವ ಮಿಗಿಲಾದ ಉತ್ಸಾಹವನ್ನು ಪ್ರಕಟಿಸಿದೆ. ಆಯಾ ಕವಿಗಳ ಬಗ್ಗೆ, ಕೃತಿಗಳ ಬಗ್ಗೆ ಮೂಡಿಬಂದ ಸಮಕಾಲೀನ ಪಂಡಿತ-ಸಂಶೋಧಕರ ಅಭಿಪ್ರಾಯಗಳಿಗೆ ಶಾಸನಾದಿಗಳ ಆಧಾರಗಳೊಂದಿಗೆ ತಮ್ಮ ಚಿಕಿತ್ಸಕ ಪ್ರತಿಕ್ರಿಯೆಯನ್ನು ಪ್ರಕಟಿಸಿ ತನ್ಮೂಲಕ ಸಂಶೋಧನಾ ಕ್ಷೇತ್ರಕ್ಕೆ ಹೊಸ ಬೆಳಕನ್ನೂ ಚೆಲ್ಲಿದ್ದಾರೆ.

ಅದುವರೆಗೂ ಕ್ರಿ. ಶ. ೧೫೫೦ ಎಂಬ ಕವಿ ಚರಿತೆಕಾರರ ಅಭಿಪ್ರಾಯವನ್ನೇ ಒಪ್ಪಿಕೊಂಡು ಬಂದ ಸಾಳ್ವನ ಕಾಲವನ್ನು ಮೊಟ್ಟ ಮೊದಲ ಬಾರಿಗೆ - ಕವಿಯ ರಾಜಗುರು, ಗುರುಪರಂಪರೆ, ಆಶ್ರಯದಾತನ ಹಿನ್ನೆಲೆ, ಶಾಸನಗಳ ಆಧಾರದಿಂದ ೧೪೮೫ ಎಂದು ನಿರ್ಣಯಿಸಿ ಕೊಟ್ಟಿರುವುದು, ಚಂದ್ರಸಾಗರವರ್ಣಿ ಮತ್ತು ಬ್ರಹ್ಮಣಾಂಕ ಬೇರೆ ಬೇರೆ ಎಂಬ ಕವಿತೆಕಾರರ ಅಭಿಪ್ರಾಯವನ್ನು ಅಲ್ಲಗಳೆದು ಬೇರೆ ಬೇರೆ ಪ್ರಮಾಣಗಳೊಂದಿಗೆ ಅವರಿಬ್ಬರೂ ಅಭಿನ್ನರು ಎಂದು – ತತ್ಪೂರ್ವದ ತಮ್ಮ ಎರಡು ಲೇಖನಗಳಲ್ಲಿ ಮಂಡಿಸಿದ ಅಭಿಪ್ರಾಯವನ್ನೂ – ಇನ್ನೂ ಹೆಚ್ಚಿನ ಆಧಾರಗಳೊಂದಿಗೆ ದೃಢೀಕರಿಸಿರುವುದು, ವಿವಿಧ ಆಕಾರಗಳ ಹಿನ್ನೆಲೆಯಲ್ಲಿ ಕವಿಜೀವನದ ವಿವರಗಳನ್ನು ಒದಗಿಸಿರುವುದು-ಇವೇ ಮೊದಲಾದವುಗಳನ್ನು ಅವರ ಸಂಶೋಧನಾ ಪ್ರತಿಭೆಗೆ ಪ್ರೌಢ ನಿದರ್ಶನಗಳನ್ನಾಗಿ ಸ್ಮರಿಸಿಕೊಳ್ಳಬಹುದಾಗಿದೆ.

ಕಾವ್ಯಾಭ್ಯಾಸಿಗಳಿಗೆ ಮುಂದಿನ ಸಂಶೋಧನಗಳಿಗೆ, ವಿಮರ್ಶಕರಿಗೆ ಅನುಕೂಲವಾಗುವಂತೆ ಆಶ್ಚರ್ಯಕರವಾದ ರೀತಿಯಲ್ಲಿ ಹೇರಳವಾದ ಸಾಮಗ್ರಿಯನ್ನು ರಾಶಿ-ರಾಶಿಯಾಗಿ ಸಂಗ್ರಹಿಸಿ ಕೊಟ್ಟು ಪ್ರಸ್ತಾವನೆಯ ಉಪಯುಕ್ತತೆಯನ್ನು ಹೆಚ್ಚಿಸಿರುವುದು, ಆ ಮೂಲಕ ಒಟ್ಟು ಕೃತಿಗಳ ಘನತೆಯನ್ನು ಹೆಚ್ಚಿಸಿರುವುದು ಅವರ ಶಿಸ್ತಿನ ಸತತಾಭ್ಯಾಸಕ್ಕೆ, ನಿರಂತರ ಪರಿಶ್ರಮಕ್ಕೆ ಸಾಕ್ಷಿಯಾಗಿದೆ.

---

10. 'ಸಾಳ್ವ ಭಾರತ'ಕ್ಕೆ ಸಿದ್ಧಪಡಿಸಿದ್ದ ಪ್ರಸ್ತಾವನೆಯನ್ನು ಮೂರನೆಯ ಒಂದು ಭಾಗಕ್ಕೆ ಇಳಿಸಿಕೊಡಲಾಗಿದೆ – 'ಸಾಳ್ವಭಾರತ', ಸಂಪಾದಕ ಅರಿಕೆ, ಪು.VIII

ಸಾಳ್ವಭಾರತದಲ್ಲಿ ತೀರ್ಥಂಕರ, ಶ್ರೇಣಿಕ, ಗಣಧರ, ಪರಂಪರೆಯ ಸ್ಥೂಲ ಪರಿಚಯದೊಂದಿಗೆ ಅಪಾರವಾದ ನೇಮಿನಾಥ ವಾಙ್ಮಯವನ್ನು ಜನಪದ ಅಧಿಗಮ ವನ್ನು ಮೊದಲುಗೊಂಡು ಸಂಸ್ಕೃತ–ಪ್ರಾಕೃತ ಮತ್ತು ಕನ್ನಡ ಪರಂಪರೆಯ ಹಿನ್ನೆಲೆ ಯಲ್ಲಿ ಸುಮಾರು ಇಪ್ಪತ್ತು ಪುಟಗಳಷ್ಟು ವಿಸ್ತಾರವಾಗಿ ವಿವರಿಸಲಾಗಿದೆ. ನೇಮಿನಾಥ ನನ್ನು ಕುರಿತ ಕನ್ನಡದ ಪುಸ್ತಕ–ವರ್ಣಕಗಳ ಕಾವ್ಯ ಪರಂಪರೆಯಲ್ಲಿ ಸಾಳ್ವ ಭಾರತದ ಸ್ಥಾನವನ್ನು ನಿರ್ದೇಶಿಸಿ ಕೊಡಲಾಗಿದೆ. ಸಾಳ್ವಕವಿಯ ದೇಶ–ಕಾಲ–ಕೃತಿಗಳನ್ನು ಕುರಿತೂ ವಿಸ್ತಾರವಾಗಿ ಚರ್ಚಿಸಿರುವರಲ್ಲದೆ ಶಾಸನಗಳ ಆಧಾರದಿಂದ ಕವಿಗೆ ಸಂಬಂಧಿಸಿದ ತುಳು ದೇಶದ ನಗಿರಾಜ್ಯದ ರಾಜಕೀಯ ಪರಿಚಯವನ್ನು ಔಚಿತ್ಯ ಪೂರ್ಣವಾಗಿ ಮಾಡಿಕೊಡಲಾಗಿದೆ. 'ನಾಗಕುಮಾರ ಷಟ್ಪದಿ'ಯಲ್ಲಿ ಕಾಮದೇವರಲ್ಲಿ ಒಬ್ಬನಾದ ನಾಗಕುಮಾರನನ್ನು ಕುರಿತು ಸಂಸ್ಕೃತ–ಪ್ರಾಕೃತ ಮತ್ತು ತಮಿಳು ಭಾಷೆ ಯಲ್ಲಿ ಮೂಡಿಬಂದ ಸಾಹಿತ್ಯದ ಸ್ವರೂಪವನ್ನು ಸ್ಥೂಲವಾಗಿ ಪರಿಚಯಿಸಿ, ೧೫ನೆಯ ಶತಮಾನದಿಂದ ೧೮ನೆಯ ಶತಮಾನದವರೆಗೆ ಕನ್ನಡದಲ್ಲಿ ಷಟ್ಪದಿ–ಸಾಂಗತ್ಯ ರೂಪ ಗಳಲ್ಲಿ ಮೂಡಿಬಂದ ಕೃತಿಗಳನ್ನು ಮಿಕ್ಕ ಭಾಷಾ ಕೃತಿಗಳೊಂದಿಗೆ ತೌಲನಿಕವಾಗಿ ಸುಮಾರು ೧೩೩ ಪುಟಗಳಷ್ಟು ಸುದೀರ್ಘವಾಗಿ ಸಮೀಕ್ಷಿಸಲಾಗಿದೆ.

ಆದಿಯಪ್ಪನ ಚರಿತೆಯಲ್ಲಿ ಕವಿಯ ಕಾಲ–ದೇಶ–ವಂಶ–ವೃತ್ತಿ ಮತ್ತು ಕೃತಿ ರಚನೆಯ ಹಿಂದಿರುವ ಪ್ರೇರಣೆಗಳು-ಇವೇ ಮೊದಲಾದವುಗಳ ಬಗ್ಗೆ ಅತ್ಯಂತ ಸಂಯಮದಿಂದ ಅಷ್ಟೇ ಸಮರ್ಥವಾಗಿ ನಿರೂಪಿಸಿದ್ದಾರೆ. ಕಥಾಸಾರವನ್ನು ಕೊಡುವುದರ ಜೊತೆಗೆ ಆ ಕಾವ್ಯದ ಸರಳತೆ, ಸಾಂಗತ್ಯದಲ್ಲಿಯ ನಿರರ್ಗಳತೆ–ಹೀಗೆ ಕವಿಯ ಪ್ರತಿಭೆ, ಜೀವನಾನುಭವಗಳ ಇತಿ-ಮಿತಿಯ ಹಿನ್ನೆಲೆಯಲ್ಲಿ ಒಟ್ಟು ಕಾವ್ಯದ ನೆಲೆಬೆಲೆಗಳನ್ನು ನಿರ್ಣಯಿಸಿಕೊಟ್ಟಿದ್ದಾರೆ. ಕನ್ನಡ ಮತ್ತು ಸಂಸ್ಕೃತದಲ್ಲಿ ಬೆಳೆದು ಬಂದ ಧನ್ಯಕುಮಾರ ಚರಿತೆಯ ಪರಂಪರೆಯನ್ನು ಔಚಿತ್ಯಪೂರ್ಣವಾಗಿ ವಿವರಿಸಿ ಅಲ್ಲಿಯ ಸಾಮ್ಯ–ವೈಷಮ್ಯಗಳನ್ನೂ ಗುರುತಿಸಲಾಗಿದೆ.

ಪೊನ್ನನ 'ಶಾಂತಿ–ಪುರಾಣ'ದ ಪ್ರಸ್ತಾವನೆಯಲ್ಲಂತೂ ಅದರ ಎಲ್ಲ ಪಾರ್ಶ್ವ ಪದರುಗಳನ್ನು ಕುರಿತು ಮತ್ತೂ ಹೆಚ್ಚಿನ ಶ್ರದ್ಧೆ ಕಂಡುಬರುತ್ತದೆ. 'ಪೊನ್ನಕವಿ ಸ್ತವ ಕುಸುಮಾಂಜಲಿ' ಎಂದು ಕರೆಯಬಹುದಾದ ರನ್ನಾದಿ ೫೦ ಜನ ಕವಿ ವಿರಚಿತ ಪೊನ್ನನ ಸ್ತುತಿ ಪದ್ಯಗಳನ್ನು ಉದ್ಧರಿಸಿದ್ದಾರೆ. ಅದರೊಂದಿಗೆ ಪೊನ್ನನ ವ್ಯಕ್ತಿತ್ವ ಕಾವ್ಯಶೈಲಿ, ಕಾವ್ಯರಚನೆಯ ಪ್ರೇರಣೆಗಳು, ಮಲ್ಲಪಯ್ಯ-ಪೊನ್ನಮಯ್ಯರ ಮನೆತನದ ಮತ್ತು ವೆಂಗಿ ವಿಷಯದ ವಿವರ, ಶಾಂತಿ ಪುರಾಣದ ಕಥಾಸಾರ ಮೊದಲಾದವುಗಳ ಬಗ್ಗೆ ಹೆಚ್ಚಿನ ಶ್ರದ್ಧೆಯನ್ನು ತೋರಿದ್ದಾರೆ. ಪೊನ್ನ ಮತ್ತು ಶಾಸ್ತ್ರ ಕೃತಿಗಳು, ಪೊನ್ನನ ಉಪಮೆ ಕುರಿತ ಸುಮಾರು ೧೩೦ ಉದಾಹರಣೆಗಳು, ಪೊನ್ನನ ವಿಶಿಷ್ಟ ಪದ್ಯ, ಪೊನ್ನನ ಗದ್ಯ, ಪೊನ್ನ–ಅಸಗ, ಪೊನ್ನ–ಕಮಲಭವ, ಪೊನ್ನ ಮತ್ತು

ಛಂದಸ್ಸು, ನಾಗವರ್ಮ-ಪೊನ್ನ, ಶಾಂತಿ ಪುರಾಣದಲ್ಲಿ ವ್ಯಕ್ತವಾದ ರಾಜನೀತಿ ಮೊದಲಾದವುಗಳ ವಿವರಣೆ ಮತ್ತು ನಿರೂಪಣೆಗಳಲ್ಲಿ ಸಂಪಾದಕರ ಅಗಾದ ಪರಿಶ್ರಮ ವ್ಯಕ್ತವಾಗುತ್ತದೆ.

ಇನ್ನು ಪ್ರಸ್ತಾವನೆಯಲ್ಲಿ ಕಂಡುಬರುವ ಭಾಷಿಕ ಅಧ್ಯಯನವೇ ಪ್ರತ್ಯೇಕವಾಗಿ ಗಮನಿಸಬೇಕಾದ ಅಂಶವಾಗಿದೆ. ಸಾಳ್ವ ಭಾರತದಲ್ಲಿ ಪ್ರಯೋಗವಾದ ನೂರಾರು ಶಬ್ದಗಳ ಮೂಲ-ನಿಷ್ಪತ್ತಿ, ಅವುಗಳ ಪ್ರಯೋಗ ವೈಶಿಷ್ಟ್ಯ ಮತ್ತು ಇತರ ಕನ್ನಡ ಕೃತಿಗಳಲ್ಲಿ ಅವುಗಳ ಪ್ರಯೋಗ ಸಂಖ್ಯೆ, ಇವೆಲ್ಲವುಗಳ ಹಿನ್ನೆಲೆಯಲ್ಲಿ ಕಂಡುಬರುವ ಸಾಳ್ವನ ಪದಪ್ರಯೋಗ ಪರಿಣತಿ ವೈಶಿಷ್ಟ್ಯಗಳನ್ನು ಗುರುತಿಸಿದ್ದಾರೆ. ಆತನ ವರ್ಣನಾ ಕೌಶಲವನ್ನು ಎತ್ತಿ ಹೇಳಿ ೩೧ ನಾಣ್ಣುಡಿಗಳನ್ನು ಉದ್ಧರಿಸಿದ್ದಾರೆ. ಪೊನ್ನನ ಶಬ್ದ ಭಂಡಾರ, ಪ್ರಾಚೀನ ಪ್ರಯೋಗ, ಅಪರೂಪ ಪ್ರಯೋಗ, ಸಬಿಂದುಕ —ಅಬಿಂದುಕ ರೂಪಗಳು, ಪೊನ್ನ ಮತ್ತು ಸಂಸ್ಕೃತ, ತತ್ಸಮ-ತದ್ಭವಗಳು—ಇವೇ ಮೊದಲಾದವುಗಳನ್ನು ಪ್ರತ್ಯೇಕ ಶೀರ್ಷಿಕೆಯಡಿಯಲ್ಲಿ ೩೦ ಪುಟಕ್ಕೂ ಮಿಕ್ಕ ಹೇರಳ ಉದ್ಧರಣೆಗಳೊಂದಿಗೆ ಚರ್ಚಿಸಲಾಗಿದೆ.

ಹೀಗೆ ಸುದೀರ್ಘ ಪ್ರಸ್ತಾವನೆಯ ಪುಟ-ಪುಟಗಳಲ್ಲಿ ವ್ಯಕ್ತವಾದ ಸಂಪಾದಕರ ಅಪಾರ ಪರಿಶ್ರಮ, ಸಂಶೋಧನಾ ಪ್ರತಿಭೆ ತಲೆದೂಗಿಸಲುಬಹುದು. ಆದರೆ ಅವರ ಈ ಎಲ್ಲ ಪರಿಶ್ರಮ ಒಂದು ಕ್ರಮಬದ್ಧವಾದ ಶಿಸ್ತಿಗೆ, ವ್ಯವಸ್ಥೆಗೆ ಒಳಪಟ್ಟು ಒಂದು ನಿಶ್ಚಿತ ಧೋರಣೆಗೆ ಬದ್ಧವಾದ ದುಡಿಮೆಯ ಫಲಗಳನ್ನು ನೀಡದಿರುವದು ಮರೆಯಲಾಗದ ಕೊರತೆ. ಎಷ್ಟೋ ಸಲ ಆಗೀಗ ಬರೆದ ಲೇಖನಗಳನ್ನು ಸಂಕಲನ ಗೊಳಿಸಿಕೊಟ್ಟಂತೆ ಕಂಡುಬತ್ತದೆಯೋ ಹೊರತು, ಗ್ರಂಥ ಸಂಪಾದಕರಾಗಿ ಆ ಕವಿ ಕೃತಿಯನ್ನು ಕುರಿತು ಒಂದು ನಿಶ್ಚಿತ ಕಲ್ಪನೆಯನ್ನು, ಧೋರಣೆಯನ್ನು ಮೂರ್ತ ಗೊಳಿಸಿ ಬೆಲೆ ಕಟ್ಟಿಕೊಡುವಲ್ಲಿ ವಿಶೇಷವಾದ ಸಾರ್ಥಕ ಪ್ರಯತ್ನ ಕಂಡುಬರುವದಿಲ್ಲ. ಒಂದು ಕೃತಿಯನ್ನು ಕುರಿತು ಆಗಲೇ ಹಲವಾರು ಗ್ರಂಥಗಳನ್ನು ಬರೆದ ಸಂಪಾದಕ ಇಂಥ ಸಂದರ್ಭದಲ್ಲಿ ಅವೆಲ್ಲವುಗಳನ್ನು ಮುರಿದು, ಹೊಸದು ಹದಗೊಳಿಸಿ ಅದರಲ್ಲಿ ಏಕಸೂತ್ರತೆಯನ್ನು ತರಲು ಹೊಸರಚನೆಗೆ ತೊಡಗಬೇಕಾಗುತ್ತದೆ. ಅಂಥ ಪ್ರತ್ಯೇಕ ವಾದ ಪರಿಶ್ರಮ ಇಲ್ಲಿ ಎದ್ದುಕಾಣದಿರುವದು ಆ ಪ್ರಸ್ತಾವನೆಗಳ ಬಿಗುವನ್ನು ಶಿಥಿಲಗೊಳಿಸಿವೆ. ಇನ್ನು ಯಾವ ವಿಷಯವನ್ನು ಮೂಲದಲ್ಲಿ ತರಬೇಕು, ಯಾವು ದನ್ನು ಅನುಬಂಧದಲ್ಲಿ ಸೇರಿಸಬೇಕು ಎಂಬುದು ಸಂಪಾದಕನ ಔಚಿತ್ಯಪ್ರಜ್ಞೆಗೆ ಸಂಬಂಧಿಸಿದ ವಿಷಯ. ಈ ದಿಶೆಯಲ್ಲಿಯೂ ಹೇಳಿಕೊಳ್ಳುವ ಔಚಿತ್ಯ ಸಂಪಾದಕರಲ್ಲಿ ಕಂಡುಬರುವದಿಲ್ಲ. ಇದರಿಂದಾಗಿ ಒಂದು ಗ್ರಂಥದ ಸಂಪಾದನೆಯಲ್ಲಿ ಒಬ್ಬ ಪ್ರಬುದ್ಧ ವಿದ್ವಾಂಸನ ಪರಿಶ್ರಮ ಕೇವಲ ಪರಿಶ್ರಮದ ಮಟ್ಟಕ್ಕೆ ಹೇಗೆ ನಿಂತುಕೊಳ್ಳುತ್ತದೆ

ಎನ್ನುವದಕ್ಕೆ ಇಲ್ಲಿಯ ಪ್ರಸ್ತಾವನೆಗಳಲ್ಲಿ ಕೆಲವು ಉದಾಹರಣೆಗಳಾಗಿ ನಿಲ್ಲುತ್ತವೆ. ತಾವು ಕಷ್ಟಪಟ್ಟು ಸಂಗ್ರಹಿಸಿದ ವಿಷಯ ಎಲ್ಲಿ ವ್ಯರ್ಥವಾಗುತ್ತದೆಯೋ ಎಂಬ ಆತಂಕದಿಂದಲೆಂಬಂತೇ ಎಲ್ಲವನ್ನೂ ತುಳಿದು ತುಂಬೇನೆಂಬ ಪ್ರವೃತ್ತಿಯೂ ಕಂಡು ಬರುತ್ತದೆ.

ಸಾಳ್ವಭಾರತದಲ್ಲಿ ಬೇರೆ ಬೇರೆ ಷಟ್ಪದಿಗಳ ಸಂಖ್ಯೆಯನ್ನು ನಿರ್ಣಯಿಸಿ ಕೊಟ್ಟಿರುವದು ಸರಿ ಎನ್ನಬಹುದಾದರೂ ಭಾಮಿನಿ ಮತ್ತು ವಾರ್ಧಕ ಷಟ್ಪದಿಗಳ ಲಕ್ಷಣಗಳನ್ನೂ ವಿವರಿಸುವ, 'ಪೊನ್ನನ ವಾಕ್ಯಮಾಣಿಕ್ಯ', 'ಆನೆ ಮತ್ತು ಶಾಂತಿ ಪುರಾಣ'ದಂಥ ವಿಷಯುಗಳನ್ನು ಪ್ರತ್ಯೇಕ ಶೀರ್ಷಿಕೆಯಡಿಯಲ್ಲಿ ಪುಟಗಟ್ಟಲೇ ಉದಾ ಹರಣೆಗಳನ್ನೂ ಉದ್ಧರಿಸುತ್ತ ಹೋಗುವದರ ಮತ್ತು ರತ್ನಾಕರನ ಹಾಡುಗಳಲ್ಲಿ—ಹಾಡುಗಳ ಹಿನ್ನೆಲೆಗಿಂತ ಭರತೇಶ ವೈಭವದ ಬಗೆಗೇ ವಿಸ್ತಾರವಾಗಿ ಪ್ರಸ್ತಾಪಿಸಿರುವದು—ಇವೇ ಮೊದಲಾದವುಗಳ ಔಚಿತ್ಯ ಪ್ರಶ್ನಾರ್ಹ. ಪೊನ್ನನ ಶಾಂತಿಪುರಾಣದಲ್ಲಿ ಉಪಮೆಗಳಾಗಿ ೧೨ ಪದ್ಯಗಳನ್ನು ಉದ್ಧರಿಸುವದರೊಂದಿಗೆ—ಇಡಿ ಕೃತಿಯೇ ಗದ್ಯಾನುವಾದವಾಗಿರುವದರಿಂದ—ಅವುಗಳ ಗದ್ಯಾನುವಾದವನ್ನು ಕೊಟ್ಟಿರುವದು ಅನವಶ್ಯಕ. ಇಡೀ ಕೃತಿಯೇ ಓದುಗರ ಕೈಯಲ್ಲಿರುವದರಿಂದ ಒಂದೊಂದು ವಿಷಯಕ್ಕೆ ೪೦–೫೦ ಪದ್ಯಗಳನ್ನು ಉದ್ಧರಿಸಹೋಗದೆ ಅವುಗಳ ಸಂಧಿ–ಪದ್ಯಗಳ ಸಂಖ್ಯೆಯನ್ನು ಸೂಚಿಸಿದ್ದರೂ ಸಾಕಾಗಿತ್ತು. ತೀರ ಸಾಮಾನ್ಯವೆನ್ನಬಹುದಾದ ಇಂಥ ಅಂಶಗಳನ್ನು ಗಮನಿಸದೇ ಹೋದಕಾರಣ ಪ್ರಸ್ತಾವನೆಗಳೆಲ್ಲ—ವಿಶೇಷವಾಗಿ ಸಾಳ್ವಭಾರತ, ನಾಗಕುಮಾರ ಷಟ್ಪದಿ, ಶಾಂತಿ ಪುರಾಣದ ಪ್ರಸ್ತಾವನೆಗಳು—ಉದಾಹರಣೆ–ಉದ್ಧರಣೆಗಳಿಂದ ಬೊಜ್ಜು ಬೆಳಿಸಿಕೊಂಡಿವೆ. ಹೀಗೆ ಸಂಪಾದಕರ ಅತ್ಯುತ್ಸಾಹದಿಂದ ಒದಗಿರಬಹುದಾದ ದೋಷಗಳೇನೇ ಇರಲಿ, ಆದರೆ ಈ ವಿಪುಲವಾದ ವಿಷಯ ಸಾಮಗ್ರಿಗಳ ಸಂಗ್ರಹದಿಂದ ಆ ಎಲ್ಲ ಪ್ರಸ್ತಾವನೆಗಳು ಆಯಾ ಕವಿ-ಕೃತಿಗಳನ್ನು ಕುರಿತ ಉಪಯುಕ್ತವಾದ ಪುಟ್ಟ ವಿಶ್ವಕೋಶದ ಸಾರ್ಥಕ್ಯ ಪಡೆದಿರುವದನ್ನು ಮರೆಯುವಂತಿಲ್ಲ.

ಒಟ್ಟಿನಲ್ಲಿ ಸಂಪಾದಕರ ಸಂಶೋಧನೆ ಹಾಗೂ ವಿಮರ್ಶೆಯಲ್ಲಿ ಸಾಮರಸ್ಯ, ಹದವಾದ ಪಾಕ ಕಾಣಿಸಿಕೊಳ್ಳದೆ ಹೋಗಿದೆಯಾದರೂ ಹೇರಳ ಉದ್ಧರಣೆಗಳಲ್ಲಿ ಅವರ ಮೂಲಭೂತ ವಿಮರ್ಶಾತ್ಮಕ ಚಿಂತನೆ–ಆಲೋಚನೆಗಳು ಬಹಳಷ್ಟು ಕಡೆ ಮರೆಯಾಗಿ ಹುಸಿಗೊಳ್ಳುತ್ತಿವೆಯಾದರೂ ಅವರ ವಿಮರ್ಶೆಯಲ್ಲಿ ಕಂಡುಬರುವ ಸೌಜನ್ಯ ಮೀರದ ನಿರ್ದಾಕ್ಷಿಣ್ಯತೆ, ನಿಷ್ಪಕ್ಷಪಾತಗಳು ಅವರ ಬರಹಕ್ಕೆ ಶಾಶ್ವತವಾದ ಬೆಲೆಯನ್ನು ತಂದುಕೊಟ್ಟಿವೆ. ಚಂದ್ರಸಾಗರವರ್ಣಿಯ ಬಿಜ್ಜಳರಾಯ ಪುರಾಣ' ಕದಂಬ ಪುರಾಣ, ಮುಲ್ಲಾ ಶಾಸ್ತ್ರದಂಥ ಕೃತಿಗಳು ಹೇಗೆ "ಭದ್ರವಾದ ಜನಜನಿತ

ಕಿಂವದಂತಿಯ ತಳಹದಿಯ ಮೇಲೆ ಕಟ್ಟಿದ ಕಟ್ಟಡಗಳು' ಎಂಬುದನ್ನು ಅವುಗಳ ತಳಬುಡದ ವಿವರಗಳೊಂದಿಗೆ ಮನಗಾಣಿಸಿಕೊಟ್ಟಿದ್ದಾರೆ. ಒಟ್ಟಿನಲ್ಲಿ ಜೈನ ಕವಿಗಳು "ಬಿಜ್ಜಳನನ್ನೇನೋ ಹೋಲಿತ್ತಿದರು ನಿಜ, ಆದರೆ ವಿಭೂತಿಪುರುಷನಾದ ಬಸವಣ್ಣ ನವರನ್ನು ನಿರ್ಲಕ್ಷಿಸಿದರು....ಮತ್ತೆ ಇತಿಹಾಸಕ್ಕೆ ಮಸಿ ಬಳಿದಂತಾಗಿದೆ"[11] ಎನ್ನುವ ಅವರ ಅಭಿಪ್ರಾಯ ಸ್ಮರಣಾರ್ಹ. ರತ್ನಾಕರನ ಹಾಡುಗಳಲ್ಲಿ ಕೆಲವೆಡೆ ವಚನಕಾರರ ಪ್ರಭಾವ, ವಿಶೇಷವಾಗಿ ದಾಸರ ಕೀರ್ತನಗಳ ಪ್ರಭಾವ ಕಂಡುಬರುವದನ್ನು ಎತ್ತಿ ಹೇಳಿ ಅಕ್ಕಮಹಾದೇವಿಯ ಒಂದು ವಚನವನ್ನು, ಕರಸ್ಥಲನಾಗಿದೇವನ ಒಂದು ಹಾಡನ್ನು ಅಂತಿಮ ಅಂಕಿತ ಬದಲಾವಣೆ ಮಾತ್ರದಿಂದ ಬಂದಿರುವದನ್ನು ಉದಾ ಹರಣೆಯೊಂದಿಗೆ ಮನವರಿಕೆ ಮಾಡಿಕೊಟ್ಟಿದ್ದಾರೆ. ರತ್ನಾಕರ ಜೈನಧರ್ಮದ ವಕ್ತಾರನಾಗಿ ಸೋತರೂ ಕವಿಯಾಗಿ ಗೆಲ್ಲುವದನ್ನು, ಚರ್ವಿತ ಚರ್ವಣದಲ್ಲೂ ಜೀವ ತರುವ ಸಾಳ್ವನ ವೈಶಿಷ್ಟ್ಯವನ್ನು ಓದುಗರ ಗಮನಕ್ಕೆ ತಂದಿದ್ದಾರೆ. ಹೀಗೆ ಒಂದೊಂದು ಕೃತಿಯ ಇತಿಮಿತಿಗಳನ್ನು ಯಾವ ಪೂರ್ವಗ್ರಹ ಪೀಡೆಯಿಲ್ಲದೆ ವಿಮರ್ಶೆಯ ನಿಕಷಕ್ಕೆ ಒಳಪಡಿಸಿರುವದು ಅವರ ವಿಮರ್ಶೆಯ ಆರೋಗ್ಯಕ್ಕೆ ನಿದರ್ಶನ.

ಆದರೆ ಇಂಥ ಕೆಲವು ಸಂದರ್ಭದಲ್ಲಿ ಕಂಡುಬರುವ ಅನವಶ್ಯಕ ವಾಕ್ ಚಾತುರ್ಯ, ಉದ್ಗಾರ-ವಾಚಾಳತನದಿಂದಾಗಿ ಅವರ ವಿಮರ್ಶೆಯ ಭಾಷೆ ಆ ವಿಮರ್ಶೆಯ ಗಾಂಭೀರ್ಯವನ್ನು ಸಡಿಲುಗೊಳಿಸುತ್ತದೆ. ಇದರಿಂದಾಗಿ ವಿಮರ್ಶೆ ಸೈದ್ಧಾಂತಿಕತೆಯಿಂದ ವಂಚಿತವಾಗಿ ಪಾಠ ಹೇಳುವ ರಸಿಕ ಶಿಕ್ಷಕನೊಬ್ಬನ ವೇದಿಕೆಯ ಮಾತುಗಳ ಮಟ್ಟಕ್ಕೆ ನಿಲ್ಲುತ್ತದೆ. ಭಾಷೆಯನ್ನು ಸಮೃದ್ಧವಾಗಿ ದುಡಿಸಿಕೊಳ್ಳಬಲ್ಲ ನೈಪುಣ್ಯವಿರುವ ಹಂಪನಾ ಅವರು ಕೇವಲ ಅದರೊಡನೆ ಹುಡುಗಾಟ ಹಾಕುತ್ತ ನಿಲ್ಲುತ್ತಾರೆ. ಅವರ ಇಂಥ ಪ್ರವೃತ್ತಿಯನ್ನು ಮೀರಿಯೂ ಅವರ ಪಾಂಡಿತ್ಯ-ಪರಿಶ್ರಮದಿಂದಾಗಿ ವಿಮರ್ಶೆ ಗೆಲುವನ್ನು ಪಡೆಯುತ್ತದೆ.

ಕಾವ್ಯಾಭ್ಯಾಸಿಗಳಿಗೆ ದಿಕ್ಸೂಚಿಯಾಗುವಂತೆ, ಸಂಶೋಧಕರಿಗೆ ದಾರಿಯಾಗುವಂತೆ ಕೆಲವು ಕೃತಿಗಳಿಗೆ ಪರಿಶ್ರಮದಿಂದ ಸಿದ್ಧಪಡಿಸಿದ ಅನುಬಂಧಗಳಿಂದಾಗಿ ಸಂಪಾದಕ ರಾಗಿ ಹಂಪನಾ ಅವರ ದುಡಿಮೆ ಸಾರ್ಥಕ ರೀತಿಯಲ್ಲಿ ದಪಗಂಡಂತಾಗಿದೆ. ಸಾಳ್ವ ಭಾರತದಲ್ಲಿ ಪದ್ಯಗಳ ಅಕಾರಾದಿ, ಭೂತ-ವರ್ತಮಾನ-ಭವಿಷ್ಯತ್ಕಾಲದ ತೀರ್ಥಂಕರ ಹೆಸರುಗಳನ್ನು ಯಾದಿಗೊಳಿಸಿ ಕೊಟ್ಟಿರುವದಲ್ಲದೆ ೩೭ ಜನ ಜೈನಾಚಾರ್ಯರ ಸ್ಥೂಲ ಪರಿಚಯವನ್ನು ಕೊಟ್ಟು, ಸಾಳ್ವಭಾರತದಲ್ಲಿ ಉಲ್ಲೇಖಗೊಂಡ ಶ್ರೇಷ್ಠ ಜೈನಾ

---

10. ಚಂದ್ರಸಾಗರವರ್ಣಿಯ ಕೃತಿಗಳು, ಪ್ರಸ್ತಾವನೆ, ಪು. XIX

ಚಾರ್ಯರು, ಅದರಲ್ಲೂ ದಿಗಂಬರಾಚಾರ್ಯರು ದಕ್ಷಿಣ ಭಾರತದಲ್ಲಿ ಜನ್ಮ ತಾಳಿದತ್ತ ಓದುಗರ ಗಮನ ಹರಿಸಿದ್ದಾರೆ. ಒಟ್ಟು ೧೩೮ ಪಾರಿಭಾಷಿಕ ಶಬ್ದಗಳಿಗೆ ವಿವರವನ್ನು ಕೊಡಲಾಗಿದೆ. ಸವಣ, ಬಸದಿ ಮೊದಲಾದ ಕೆಲವು ಶಬ್ದಗಳ ರೂಪನಿಷ್ಪತ್ತಿಯನ್ನು ಹೇಳಲಾಗಿದೆ. ಸಾಳ್ವಭಾರತ ಕುರಿತ ಸಾಹಿತ್ಯಸೂಚಿಯಲ್ಲಿ ೨೦ ಗ್ರಂಥಗಳ ಹೆಸರನ್ನು ಸೂಚಿಸಿದ್ದಾರೆ. ನಾಗಕುಮಾರ ಷಟ್ಪದಿಯಲ್ಲಿ ಒಟ್ಟು ೧೫೪ ಪುಟಗಳ ಸಾರ್ಥಕ ಅನುಬಂಧದಲ್ಲಿ ಕವಿ ಸ್ಮರಿಸಿದ ತೀರ್ಥಂಕರರ, ಕಾಮದೇವರ ಹೆಸರುಗಳು ೧೫೪ಕ್ಕೂ ಮಿಕ್ಕ ಪಾರಿಭಾಷಿಕ ಶಬ್ದಗಳ ಸ್ಥೂಲ ವಿವರ, ೫೪ ವ್ಯಕ್ತಿಗಳ ನಾಮಸೂಚಿ ಮತ್ತು ಸ್ಥೂಲ ವಿವರಗಳೊಂದಿಗೆ ೨೧೨ ವ್ಯಕ್ತಿಸ್ಥಳನಾಮಸೂಚಿ, ಪದದ ಅಕಾರಾದಿ, ಅರ್ಥ ಕೋಶ, ನಾಗಕುಮಾರ ಕಥೆಯನ್ನೊಳಗೊಂಡ ಕಾವ್ಯ, ಯಕ್ಷಗಾನ, ಆರತಿ ಹಾಡು ಗಳು ಮತ್ತು ಗ್ರಂಥ ಋಣ—ಮೊದಲಾದವುಗಳ ಮೂಲಕ ಸಮಗ್ರತೆಯನ್ನು ಒದಗಿಸಿದ್ದಾರೆ. ಪೊನ್ನನ 'ಶಾಂತಿಪುರಾಣ'ದಲ್ಲಿ ಒಂದು ಹಸ್ತಪ್ರತಿಯ ಕೊನೆಯಲ್ಲಿ ಅಜ್ಞಾತ ಕರ್ತೃಗಳ ೭ ಪದ್ಯಗಳನ್ನು ಉದ್ಧರಿಸಿ, ಪ್ರಾಚೀನಕಾಲದಲ್ಲಿ ಈ ಕಾವ್ಯ ಹರಡಿಕೊಂಡ ಬಗೆಯನ್ನು ಕಲ್ಪನೆಗೆ ತರಲಾಗಿದೆ. ಪದ್ಯಗಳ ಅಕಾರಾದಿಯಲ್ಲದೆ 'ಉತ್ತರ ಪುರಾಣ'ದಲ್ಲಿಯ ಶಾಂತಿ ತೀರ್ಥಂಕರರ ಚರಿತ್ರೆಯ ಕಥಾಸಾರ ಕೊಟ್ಟಿರು ವದು ತೀರ ಉಪಯುಕ್ತ. ಜೈನ ಪರಿಭಾಷೆ, ಶಬ್ದಕೋಶ ಮತ್ತು ಕೊನೆಯಲ್ಲಿ ೪ ಪುಟಗಳ ಶುದ್ಧ ಪತ್ರವನ್ನೂ ಕೊಡಲಾಗಿದೆ.

ಆದರೆ ಇಂಥ ಶ್ರದ್ಧೆ ಮಿಕ್ಕ ಎಲ್ಲ ಕೃತಿಗಳಲ್ಲಿಯೂ ಒಂದೇ ಬಗೆಯಾಗಿ ಕಾಣಿಸಿ ಕೊಳ್ಳದೆ ತಾರತಮ್ಯ ಕಂಡುಬರುತ್ತದೆ. 'ಚಂದ್ರಸಾಗರ ವರ್ಣಿಯ ಕೃತಿಗಳು', 'ರತ್ನಾಕರನ ಹಾಡುಗಳು', 'ಧನ್ಯಕುಮಾರ ಚರಿತೆ'ಯಂಥ ಕೃತಿಗಳು ಅನುಬಂಧದ ದೃಷ್ಟಿಯಿಂದ ಸಂಪೂರ್ಣ ವಂಚಿತವಾಗಿರುವುದು ದೊಡ್ಡ ಅಪಚಾರ. ಒಟ್ಟಿನಲ್ಲಿ 'ಸಾಳ್ವ ಭಾರತ', 'ನಾಗಕುಮಾರ ಷಟ್ಪದಿ', 'ಶಾಂತಿ ಪುರಾಣ'ಗಳ ಅನುಬಂಧಗಳಲ್ಲಿ ಸಂಪಾದಕರ ಕಾಳಜಿ ಹೆಪ್ಪುಗಟ್ಟಿ ನಿಂತಿದೆ. ಅದರಲ್ಲೂ ಸಾಳ್ವಭಾರತ ಮತ್ತು ನಾಗಕುಮಾರ ಷಟ್ಪದಿಗಳ ಅನುಬಂಧಗಳು ಅವರ ಆರಂಭದ ಹೊಸ ಉತ್ಸಾಹದ ದುಡಿಮೆಯನ್ನು ಪ್ರತಿನಿಧಿಸುವಂತಿವೆ. ಇಷ್ಟಾಗಿಯೂ ಅನುಬಂಧದ ಪುಟಗಳನ್ನು ಒಂದು ಮಿತಿಗೆ ಇಳಿಸಬೇಕಾದ ಅನಿವಾರ್ಯದಿಂದಲೆಂಬಂತೆ ಸಾಳ್ವ ಭಾರತಕ್ಕೆ ಕಠಿಣ ಶಬ್ದಕೋಶವನ್ನು ಕೊಡದೇ ಹೋಗಿರುವುದು ಅಭ್ಯಾಸಿಗಳ ದೃಷ್ಟಿಯಿಂದ ದೊಡ್ಡ ಕೊರತೆ. ಒಟ್ಟಿನಲ್ಲಿ ಕಾವ್ಯಗಳ ಗಾತ್ರ ಹಾಗೂ ಸತ್ವಗಳ ಆಧಾರದ ಹಿನ್ನೆಲೆಯಲ್ಲಿ ಅನುಬಂಧಗಳಿಗೆ ಅವಕಾಶ-ಪ್ರಾಶಸ್ತ್ಯವನ್ನು ಕೊಟ್ಟಂತೆ ಕಂಡುಬರುತ್ತದೆ. ಇದ ರಿಂದಾಗಿ ಅವರ ಸಂಪಾದನಾಕಾರ್ಯದ ಒಟ್ಟು ಫಲದ ತೃಪ್ತಿಯಲ್ಲಿ ಅನಿವಾರ್ಯ ವಾದ ಅರಕೆ ಕಂಡುಬರುತ್ತದೆ.

ಯಾವುದೇ ಒಂದು ಗ್ರಂಥ ಪರಿಷ್ಕಾರಕ್ಕೆ ತೊಡಗಿದ ಸಂಪಾದಕನಿಗೆ ತತ್ಪೂರ್ವದಕೃತಿಗಳ ಗುಣವಿಶೇಷಗಳನ್ನು, ಆಯಾ ಸಂಪಾದಕರ ಪರಿಶ್ರಮವನ್ನು ಉದ್ದೇಶಪೂರ್ವಕವಾಗಿ ಉತ್ಪ್ರೇಕ್ಷಿಸುವ, ಮತ್ತು ಆ ಎಲ್ಲ ಕೃತಿಗಳಿಂದ ತಾನು ಪಡೆದ ಮೂಲಭೂತ ಋಣವನ್ನು ಮರೆತು ಅವುಗಳಲ್ಲಿ ಕಂಡುಬರುವ ಸಹಜ ದೌರ್ಬಲ್ಯಗಳನ್ನೇ ರಾವುಗೊಳಿಸಿ ಎತ್ತಿಹೇಳುವ ಮೂಲಕ ತಾನೇ ಒಂದು ಹೊಸ ವಿಕ್ರಮ ಸ್ಥಾಪಿಸಿದಂತೆ, ಯಾರೂ ಮುರಿಯಲಾರದ ಹೊಸ ದಾಖಲೆಯನ್ನು ನಿರ್ಮಿಸಿದಂತೆ ಭ್ರಮಿಸಿಕೊಂಡು ಬಡಬಡಿಸುವ ಅಪಾಯವಿರುತ್ತದೆ. ಆದರೆ ಹಂಪನಾ ಇಂಥ ಅಪಾಯದಿಂದ ಪಾರುಗೊಂಡಿರುವದು ಗಮನಾರ್ಹ ; ಒಬ್ಬ ಸಂಪಾದಕರಾಗಿ ಆಯಾ ಕೃತಿಗಳ ತತ್ಪೂರ್ವದ ಸಂಪಾದಕರ ಪರಿಶ್ರಮ, ಎದುರಿಸಿದ ಸಮಸ್ಯೆಗಳನ್ನು ಪ್ರಜ್ಞಾಪೂರ್ವಕವಾಗಿ, ಅತ್ಯಂತ ಸಹಾನುಭೂತಿಯಿಂದ ಅರ್ಥ ಮಾಡಿಕೊಂಡು, ಅಂಥ ಆತಂಕಗಳ ಮಧ್ಯದಲ್ಲಿಯೂ ಮೆರೆಯಲಾದ ಅನುಕರಣೀಯ ಗುಣಗಳನ್ನು ಎತ್ತಿಹೇಳುವಲ್ಲಿ, ಮೆಚ್ಚಿಕೊಳ್ಳುವಲ್ಲಿ ಮಿಗಿಲಾದ ಸೌಜನ್ಯವನ್ನು ತೋರಿದ್ದಾರೆ. ೧೯೨೯ರಲ್ಲಿ ಎಂ. ವೆಂಕಟರಾವ್ ಮತ್ತು ಹೆಚ್. ಶೇಷಯ್ಯಂಗಾರ್ ಅವರು ಸಂಯುಕ್ತವಾಗಿ ಸಂಪಾದಿಸಿ ಪ್ರಕಟಿಸಿದ ಶಾಂತಿ ಪುರಾಣವನ್ನು ಮರುಪರಿಷ್ಕರಣಕ್ಕೆ ಮುಖ್ಯ ಆಧಾರವನ್ನಾಗಿ ಇಟ್ಟುಕೊಂಡಿರುವದನ್ನು ಸ್ಪಷ್ಟವಾಗಿ ನಮೂದಿಸಿರುವರಲ್ಲದೆ ಆರ್. ತಾತಾ ಅವರು ಬರೆದ ಸೊಗಸಾದ ವಿದ್ವತ್ಪೂರ್ಣ ಮುನ್ನುಡಿಯನ್ನೂ ಸ್ಮರಿಸಿರುವರು. ಅಲ್ಲಿಯ ಉತ್ತಮ ಮಟ್ಟದ ಸಂಪಾದನೆಯನ್ನು, ೫ ಉಪಯುಕ್ತ ಪರಿಶಿಷ್ಟಗಳನ್ನು ಎತ್ತಿಹೇಳಿ ಮುದ್ದಾಗಿ ಹೊರತಂದಿರುವರೆಂದು ತಮ್ಮ ಮೆಚ್ಚುಗೆಯನ್ನು ವ್ಯಕ್ತಪಡಿಸಿರುವದನ್ನು ಹಂಪನಾ ಅವರ ಸೌಜನ್ಯಕ್ಕೆ ಉದಾಹರಣೆಯಾಗಿ ಸ್ಮರಿಸಬಹುದು. ಇಂಥ ಗುಣವಿಶೇಷಗಳನ್ನು ಎತ್ತಿಹೇಳುವದರೊಂದಿಗೆ ಅಲ್ಲಿ ಬಳಸಿಯಾದ ಹಸ್ತಪ್ರತಿಗಳ ಸ್ವರೂಪ, ಪರಿಷ್ಕರಣದ ಸಂದರ್ಭದಲ್ಲಿ ಉಂಟಾದ ಅಭಾವ ಆತಂಕಗಳಿಂದಾಗಿ ಕಾಣಿಸಿಕೊಂಡ ಕೊರತೆ, ಮುದ್ರಣ ದೋಷ ಇತ್ಯಾದಿಗಳನ್ನು ಎತ್ತಿಹೇಳಿರುವದು, ಒಂದು ಅರ್ಥದಲ್ಲಿ ಒಂದು ಪರಿಷ್ಕೃತ ಗ್ರಂಥದ ಆರೋಗ್ಯಪೂರ್ಣ ವಿಮರ್ಶೆಯೂ ಆಗಿದೆ. ಸಾಳ್ವಭಾರತ, ನಾಗಕುಮಾರ ಷಟ್ಪದಿ, ಶಾಂತಿ ಪುರಾಣ ಮೊದಲಾದ ಗ್ರಂಥಗಳ ಹಿನ್ನೆಲೆಯಲ್ಲಿ ಹೇಳುವದಾದರೆ ಒಂದು ಸಂಸ್ಥೆ ಕೈಕೊಳ್ಳಬಹುದಾದ ಕಾರ್ಯವನ್ನು ಮಾಡಿದ ಶ್ರೇಯಸ್ಸು ಅವರದಾಗಿದೆ. ಇಂಥ ಬೃಹತ್ಕಾವ್ಯಗಳ ಪರಿಷ್ಕರಣೆಗೆ ತೊಡಗಬೇಕಾದಾಗ ಹಲವಾರು ಪಂಡಿತರ, ಸ್ನೇಹಿತರ, ಸಂಸ್ಥೆಗಳ ನೆರವನ್ನು ಪಡೆಯುವದು ತೀರ ಅನಿವಾರ್ಯ. ಅಂಥ ಸಂದರ್ಭಗಳಲ್ಲಿ ತಮಗೆ ಹಸ್ತಪ್ರತಿಗಳನ್ನು ಒದಗಿಸಿದ ವ್ಯಕ್ತಿ — ಸಂಸ್ಥೆಗಳನ್ನು ಮೊದಲುಗೊಂಡು ತಮಗೆ ಮೂಲ ಹಸ್ತಪ್ರತಿಯನ್ನು ನಕಲು ಮಾಡಲು, ಮುದ್ರಣ ಪ್ರತಿಯನ್ನು ಸಿದ್ಧಪಡಿಸಲು, ಅಕಾರಾದಿಯನ್ನು ವ್ಯವಸ್ಥೆಗೊಳಿಸಲು—ಇವೇ ಮೊದಲಾದ ಹಂತಗಳಲ್ಲಿ ನೆರವಾದ ವ್ಯಕ್ತಿಗಳ ಋಣವನ್ನು ಕೃತಜ್ಞತೆಯಿಂದ ಸ್ಮರಿಸಿರುವದು ಅವರ ಸೌಜನ್ಯಕ್ಕೆ,

ಪ್ರಾಮಾಣಿಕತೆಗೆ ಆತ್ಮಸಾಕ್ಷಿ. ಇಂಥ ಪ್ರಮಾಣಿಕತೆ ಮತ್ತು ಸೌಜನ್ಯ ಗ್ರಂಥ
ಸಂಪಾದಕನಲ್ಲಿ ಇರಲೇಬೇಕಾದ, ಆದರೆ ಇಂದಿನ ಎಷ್ಟೋ ಸಂಪಾದಕರಲ್ಲಿ ಇಲ್ಲ
ದಿರುವ ಮಹತ್ವದ ಮೂಲಭೂತ ಗುಣವೂ ಆಗಿದೆ.

ಒಟ್ಟಿನಲ್ಲಿ ಸಾಳ್ವಭಾರತ (ಸಂ-೬೪, ಪ-೩೪೩೭), ನಾಗಕುಮಾರ ಷಟ್ಪದಿ
(೩೭ ಸಂಧಿ, ೨೯೮೮)ಯಂಥ ಬೃಹತ್‌ವರ್ಣಕ ಕಾವ್ಯಗಳನ್ನು ಮತ್ತು ಶಾಂತಿಪುರಾಣ
ದಂಥ ೧೨ ಆಶ್ವಾಸಗಳ ಚಂಪೂ ಕೃತಿಯನ್ನು ಸ್ವತಂತ್ರವಾಗಿ ಪರಿಷ್ಕರಿಸಿಕೊಟ್ಟಿರು
ವದು, ಅದರಲ್ಲೂ ಸಾಳ್ವಭಾರತ, ನಾಗಕುಮಾರ ಷಟ್ಪದಿ, ಚಂದ್ರಸಾಗರವರ್ಣಿಯ
ಕೃತಿಗಳನ್ನು ಮೊದಲಬಾರಿಗೆ ಪರಿಷ್ಕರಿಸಿ ಪ್ರಕಟಿಸಿರುವುದು, ರತ್ನಾಕರನ ಹಾಡು
ಗಳನ್ನು ಮೊದಲಬಾರಿಗೆ ಸಮಗ್ರವಾಗಿ ಸಂಕಲಿಸಿಕೊಟ್ಟಿರುವದು, ಸಾಳ್ವಭಾರತದಂತ
ಬೃಹತ್ಕಾವ್ಯವನ್ನು ಏಕೈಕ ಹಸ್ತಪ್ರತಿಯಿಂದ ಸಂಸ್ಕರಿಸಿಕೊಟ್ಟದ್ದು, ಶಾಂತಿ ಪುರಾಣ,
ಧನ್ಯಕುಮಾರ ಚರಿತೆಗಳನ್ನು ಗದ್ಯಾನುವಾದದೊಂದಿಗೆ ಪರಿಷ್ಕರಿಸಿಕೊಟ್ಟಿರುವದು
ಇವರ ಸಂಪಾದನೆಯ ಮಹತ್ವದ ವೈಶಿಷ್ಟ್ಯಗಳು. ಅಂತಾಗಿ ಹಂಪನಾ ಇಂದು
ಅಭಿನಂದನಾರ್ಹರು.

ಕೆ. ಎಂ. ಮುನಿಕೃಷ್ಣಪ್ಪ

# ಸದಾಶಿವರ ಹನ್ನೆರಡು ಕಥೆಗಳು

ಕನ್ನಡ ಸಾಹಿತ್ಯಕ್ಕೆ ಉತ್ತಮ ಸಣ್ಣ ಕತೆಗಳನ್ನು ಸೇರ್ಪಡೆ ಮಾಡಿರುವವರಲ್ಲಿ ಸದಾಶಿವರೂ ಒಬ್ಬರು. ಶ್ರೀಯುತರು 'ನಲ್ಲಿಯಲ್ಲಿ ನೀರು ಬಂತು', 'ಅಪರಿಚಿತರು' ಕಥಾ ಸಂಕಲನ ಗಳನ್ನು ಪ್ರಕಟಿಸಿದ್ದಾರೆ. ಅವರ ಅಪರಿಚಿತರು ಕಥಾಸಂಕಲ ನಕ್ಕೆ ೧೯೭೭ರ ರಾಜ್ಯ ಸಾಹಿತ್ಯ ಅಕಾದೆಮಿಯ ಪ್ರಶಸ್ತಿ ದೊರ ಕಿದೆ. ಇಂಥ ಒಬ್ಬ ಪ್ರಮುಖ ಬರಹಗಾರರ ಆಯ್ದ ಕಥೆ ಗಳನ್ನು ಪ್ರಕಟಿಸುವುದು ಹೆಮ್ಮೆಯ ಕೆಲಸ ಹೇಗೊ ಹಾಗೆ ಸವಾಲಿನ ಕೆಲಸವೂ ಆಗಿದೆ.

ಒಬ್ಬ ಲೇಖಕ ಎಷ್ಟೇ ದೊಡ್ಡವನಾಗಿರಲಿ ಆತ ಬರೆದಿ ದ್ದೆಲ್ಲವೂ ಅತ್ಯುತ್ತಮ ಎನ್ನಲು ಆಗುವುದಿಲ್ಲ. ಕಾಳಿನ ಜೊತೆ ಜೊತೆಯಲ್ಲಿಯೇ ಜೊಳ್ಳುಗಳೂ ಸೇರಿಬಿಟ್ಟಿರುತ್ತವೆ ಅಲ್ಲವೆ ? ಜೊಳ್ಳನ್ನು ಒತ್ತಟ್ಟಿಗಿಟ್ಟು ಕಾಳನ್ನು ಆಯುವುದು ಸಂಪಾದ ಕನ ಜವಾಬ್ದಾರಿ. ಆದರೂ ಸೀಮಿತ ಸಂಖ್ಯೆಗೆ ಮಿತಿಗೊಳಿಸ ಬೇಕಾಗಿದ್ದರೆ ಕಾಳುಗಳಲ್ಲಿಯೂ ಗಟ್ಟಿ ಕಾಳುಗಳನ್ನು ಆಯು ವುದು ಮತ್ತೂ ಹೆಚ್ಚಿನ ಜವಾಬ್ದಾರಿ ಹೊರಬೇಕಾಗುತ್ತದೆ. ಅಂಥ ಸಂದರ್ಭಗಳಲ್ಲಿ ಸಂಪಾದಕನೊಬ್ಬ ತಾನು ಯಾವ ಒಬ್ಬ ಲೇಖಕನ ಕೃತಿಗಳನ್ನು ಸಂಪಾದಿಸುತ್ತಿರುವನೋ ಆ ಲೇಖಕ ನನ್ನು ಸಂಪೂರ್ಣವಾಗಿ ಅರ್ಥ ಮಾಡಿಕೊಂಡಿರಬೇಕು. ಅವನ ಬಹುಮುಖ್ಯ ಆಶಯಗಳನ್ನು ಬಲ್ಲವನಾಗಿದ್ದು, ಅವು ಕೃತಿ ಯಲ್ಲಿ ಮೈದಾಳಿರುವವುಗಳನ್ನು ಆಯ್ಕೆ ಮಾಡಬೇಕಾಗುತ್ತದೆ. ಈ ಕೆಲಸ ಯಾವಾಗಲೂ ಸಮರ್ಪಕವಾಗಿಯೇ ಇರುತ್ತದೆ ಎನ್ನಲು ಬರುವುದಿಲ್ಲ. ಸಂಪಾದಕನ ಅಭಿರುಚಿ, ವಿವೇಚನಾ ಸಾಮರ್ಥ್ಯದ ಮೇಲೆ ಅದು ಅವಲಂಬಿಸಿರುತ್ತದೆ.

ಪ್ರಸ್ತುತ ಕೆ. ಸದಾಶಿವರ ಕತೆಗಳನ್ನು ಆಯ್ಕೆ ಮಾಡಿ ಸಂಪಾದಿಸಿ ಕೊಟ್ಟಿರುವವರು ಡಾ॥ ಹಂಪ.ನಾಗರಾಜಯ್ಯನವರು. ಹಂಪನಾ ಎಂದೇ ಖ್ಯಾತರಾಗಿರುವ ಶ್ರೀಯುತರು ಭಾಷಾ

ವಿಜ್ಞಾನ, ವಿಮರ್ಶೆ, ಜೀವನಚರಿತ್ರೆ ಕ್ಷೇತ್ರಗಳಲ್ಲಿ ದುಡಿದಿದ್ದಾರೆ. ಎರಡು ಕಾದಂಬರಿಗಳನ್ನೂ ಬರೆದಿದ್ದಾರೆ. ಪಂಪ ಭಾರತ ಸಂಗ್ರಹ, ಭರತೇಶ ವೈಭವ ಕೃತಿಗಳನ್ನು ಸಂಪಾದಿಸಿ ಹೆಸರು ಮಾಡಿದ್ದಾರೆ. ಬಹುಮುಖ ಪ್ರತಿಭೆಯ ಹಂಪನಾ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯವರಿಗಾಗಿ (೧೯೮೫) 'ಸದಾರವರ ಹನ್ನೆರಡು ಕಥೆಗಳು' ಕೃತಿಯನ್ನು ಸಂಪಾದಿಸಿದ್ದಾರೆ. ಇದರಲ್ಲಿ ನೆಲ ಕೊಟ್ಟ ಕೆಂಪು, ರಾಮನ ಸವಾರಿ ಸಂತೆಗೆ ಹೋದದ್ದು, ನೋಡಿದೆಯಾ ಅಮ್ಮ ಅವಳ ಧಿಮಾಕು, ಅಗೆದರೆ ಸಿಕ್ಕುವುದು ಮಣ್ಣಲ್ಲ, ಹಾವು, ನಲ್ಲಿಯಲ್ಲಿ ನೀರು ಬಂದಿತು, ಮತ್ತೆ ಮಳೆ ಹೊಯ್ಯುತಿದೆ, ಎಲ್ಲ ನೆನಪಾಗುತಿದೆ, ಜಾನಿ ಮೆಟ್ಟಲು ಹತ್ತಿದಳು, ಹೆಳವನ ಹೆಗಲ ಮೇಲೆ ಕುರುಡ ಕೂತಿದ್ದಾನೆ, ಒಡ್ಡಿ, ನೆರಳು ಬೆಳಕಿನಾಟದಲ್ಲಿ ಕಂಡದ್ದೇನು, ಹಗಲು-ರಾತ್ರಿ-ಕತೆಗಳನ್ನು ಆಯ್ದು ಸೇರಿಸಿದ್ದಾರೆ.

ಇಲ್ಲಿ ಕಲೆಹಾಕಿರುವ ಕತೆಗಳನ್ನು ಯಾವ ಆಧಾರದ ಮೇಲೆ ಆಯ್ಕೆ ಮಾಡಲಾಗಿದೆ, ಯಾವ ಯಾವ ಸಂಕಲನಗಳಿಂದ ಆಯ್ದುಕೊಳ್ಳಲಾಗಿದೆ, ಸಾಧ್ಯವಾಗುವುದಿದ್ದರೆ ಅವು ಪ್ರಥಮವಾಗಿ ಪ್ರಕಟಗೊಂಡ ಪತ್ರಿಕೆಗಳ ಹೆಸರು ದಾಖಲಿಸಬಹುದಾಗಿತ್ತು. ಇವೆಲ್ಲವುಗಳಿಂದ ಕೃತಿಯ ಮೌಲ್ಯ ಹೆಚ್ಚಿ ಓದುಗರಿಗೆ ಕತೆಗಾರ, ಕತೆ ಹಾಗು ಅವುಗಳಿಗೆ ಸಂಬಂಧಿಸಿದ ಸಂಪೂರ್ಣ ವಿವರ ಒಂದೆಡೆ ದೊರೆಯುತ್ತಿತ್ತು. ಈ ಎಲ್ಲ ಮಿತಿಗಳ ನಡುವೆಯೂ ಸದಾಶಿವರ ಪ್ರಾತಿನಿಧಿಕ ಎನ್ನಬಹುದಾದ ಕತೆಗಳು ಇಲ್ಲಿವೆ. ಆ ಕಾರಣಕ್ಕಾಗಿ ಹಂಪನಾ ಅಭಿನಂದನೀಯರು.

ಇಲ್ಲಿನ ಕತೆಗಳಲ್ಲಿ ಏಕಸೂತ್ರತೆ ಎನ್ನುವುದು ಇಲ್ಲದಿದ್ದರೂ ಸದಾಶಿವರ ಅನುಭವದ ವಿಸ್ತಾರ, ಬರವಣಿಗೆಯ ವೈವಿಧ್ಯ ಕಂಡುಬರುತ್ತದೆ. 'ನೆಲ ಕೊಟ್ಟ ಕೆಂಪು'ವಿನ ಶೆಟ್ಟಿ, 'ಕಾಮನ ಸವಾರಿ'ಯ ರಾಮು, 'ನೋಡಿದೆಯಾ ಅಮ್ಮಾ....'ದ ಪದ್ಮಳಾಗಲಿ, ಗಟ್ಟಿಯಾಗಲಿ ಬದುಕಿನಲ್ಲಿ ಅನಿವಾರ್ಯವಾಗಿ ರೂಪುಗೊಳ್ಳುವ ಕ್ಷುದ್ರತೆಗೆ ಒಳಗಾಗುವುದನ್ನು ನಾವು ಅನುಭವಿಸುವಂತೆ ಬರೆಯಬಲ್ಲ ತಾಖತ್ತನ್ನುಳ್ಳ ಲೇಖಕರು ಇವರು. ಛಿದ್ರಗೊಳ್ಳುವ ಬದುಕನ್ನು ದಾಖಲಿಸುತ್ತಲೇ ಮಾನವೀಯ ಅನುಕಂಪಕ್ಕಾಗಿ ಹಾತೊರೆಯುವ ಕಳಕಳಿ ವ್ಯಕ್ತಪಡಿಸುವುದು ಇಲ್ಲಿನ ಕತೆಗಳ ವೈಶಿಷ್ಟ್ಯ. ಗಂಡ-ಹೆಂಡತಿಯರ ನಡುವಣ ಬಿರುಕಾಗಬಹುದು (ನಲ್ಲಿಯಲ್ಲಿ ನೀರು ಬಂದಿತು) ಸೂಕ್ಷ್ಮದರಲ್ಲಿ ವಿಘಟನೆಗೊಳ್ಳಲಿರುವುದನ್ನು ಒಟ್ಟುಗೂಡಿಸುವುದರಲ್ಲಿ, ಹೊಂದಾಣಿಕೆ ಮಾಡುವುದರಲ್ಲಿ ಮನುಷ್ಯ ಸಂಬಂಧಗಳ ಗಾಢ ಪ್ರೀತಿಯನ್ನು ವ್ಯಕ್ತಪಡಿಸುತ್ತಾರೆ.

'ನಲ್ಲಿಯಲ್ಲಿ ನೀರು ಬಂದಿತು' ಎನ್ನುವುದು ಈ ಸಂಕಲನದಲ್ಲಿ ಸೇರಿರುವ ಕತೆಗಳಲ್ಲಿ ಒಂದು. ಅದು ಪಡೆದುಕೊಂಡಿರುವ ಜನಪ್ರಿಯತೆ, ಬೀರಿರುವ ಪ್ರಭಾವ ಅಸಾಧಾರಣವಾದುದು. ಸದ್ಯದ ಸಂದರ್ಭದಲ್ಲಿ ಸ್ವಲ್ಪ ಅತಿ ಎನ್ನಿಸಬಹುದಾದಷ್ಟು

ಚರ್ಚೆಗೆ ಒಳಗಾಗಿಯೂ ತಮ್ಮ ಆಂತರಿಕ ಸತ್ವಗಳಿಂದಾಗಿ ಉಳಿದುಕೊಂಡವುಗಳಲ್ಲಿ ಒಂದು ; ಲಂಕೇಶರ 'ರೊಟ್ಟಿ' ಮತ್ತೊಂದು, ಸದಾಶಿವರ 'ನಲ್ಲಿಯಲ್ಲಿ ನೀರು ಬಂದಿತು'. ಇದು ನಗರ ನಾಗರಿಕತೆಯ ಒಡಲಿನಲ್ಲಿರುವ ಒಂದು ಪ್ರಕಾರದ ಕತೆ; ಇಬ್ಬರು ಹೆಂಗಸರ ಕತೆ. ಸೀತಮ್ಮ ಮತ್ತು ರಂಗಮ್ಮ ಅಕ್ಕಪಕ್ಕದ ಮನೆಯವರಾದರೂ ಅನ್ಯೋನ್ಯವಾಗಿಯೇ ಇದ್ದರೂ ಒಂದು ಸಣ್ಣ ಕಾರಣ ಇಬ್ಬರ ನಡುವೆ ಬಿರುಕು ಮೂಡಿಸುತ್ತದೆ. ಸ್ವಾಭಿಮಾನ-ಮಾನವೀಯ ಗುಣಗಳ ಸಂಘರ್ಷ ಏರ್ಪಡುತ್ತದೆ. ಕತೆಯಲ್ಲಿ ಕಡೆಗೂ ಜಯ ಸಿಗುವುದು ಮಾನವೀಯ ಗುಣಕ್ಕೇ. ಆ ಕಾರಣಕ್ಕಾಗಿಯೇ ಸದಾಶಿವರು ಓದುಗರ ಮನದಲ್ಲಿ ಬೆಚ್ಚನೆಯ ಅನುಭವ ಮೂಡಿಸುವುದರ ಜೊತೆಗೆ, ಅಲ್ಲಿಯೇ ಮನೆ ಮಾಡಿಕೊಂಡು ಕೂತುಬಿಡುತ್ತಾರೆ.

ಕನ್ನಡದಲ್ಲಿ ಸಣ್ಣ ಕಥಾ ಸಂದರ್ಭದಲ್ಲಿ ಸದಾಶಿವರ ಹೆಸರು ಬಹಳ ದೊಡ್ಡದು. ನವ್ಯದ ಉತ್ತುಂಗ ಕಾಲದಲ್ಲಿ ಅದರ ಎಲ್ಲ ಹರಹು ಹಾಗು ವೈವಿಧ್ಯತೆಗಳನ್ನು ಕೃತಿಗಿಳಿಸಿದ ಕೆಲವೇ ಪ್ರಜ್ಞಾವಂತ ಬರಹಗಾರರಲ್ಲಿ ಇವರೂ ಒಬ್ಬರು ಎನ್ನುವುದು, ಕೇವಲ ಔಪಚಾರಿಕ ಮಾತುಗಳಾಗಿರದೆ ವಾಸ್ತವ ಸಂಗತಿಯೂ ಆಗಿದೆ.

ದಿನಕರನು ಮುಳುಗಿದ ಮೇಲೂ ಪಡುವಣದಲ್ಲಿ ಕೆಂಬಣ್ಣದ ವಿವಿಧ ಆಕೃತಿಗಳನ್ನು ಕಾಣಬಹುದು. ಬೈಗಿನಲ್ಲಿ ಗಿಣಿಗಳು ಹಿಂಡುಹಿಂಡಾಗಿ ಗೂಡುಗಳತ್ತ ತೆರಳುವಾಗ ತಮ್ಮದೇ ಆದ ಭಾಷೆಯಲ್ಲಿ ಸಂಭಾಷಿಸುವುದನ್ನು ಕಾಣಬಹುದು. ಮೇಲೆ ಕಣ್ಣು ಹಾಯಿಸಿದಲ್ಲೆಲ್ಲ ಹೆಸರು ತಿಳಿಯದ ಹಕ್ಕಿಗಳು ವೈವಿಧ್ಯಮಯವಾಗಿ ಹಾರಾಡುವುದನ್ನು ಕಾಣಬಹುದು. ಹಾಗೆಯೇ ಕುತೂಹಲದಿಂದ ನೋಡುವ ಕಣ್ಣುಗಳನ್ನು ಉಪಯೋಗಿಸಿದರೆ ಕಾಣುವುದು ಬೇಕಾದಷ್ಟಿದೆ. ಈ ಮಾತುಗಳು ಸದಾಶಿವ ಹಾಗು ಅವರ ಕತೆಗಳಿಗೂ ಅನ್ವಯಿಸುತ್ತದೆ.

ಡಾ. ಸುಶೀಲಾ ನೆಲ್ಲಿಸರ

# ಸವ್ಯಸಾಚಿ ಪಂಪ

'ಪಂಪ ಮಹಾಕವಿ'ಯನ್ನು ಕುರಿತಂತೆ ವಿಮರ್ಶೆಗಳು, ಸಂಶೋಧನೆಗಳು, ಚರ್ಚೆಗಳು ನಡೆದಿವೆಯಾದರೂ 'ಕಾದಂಬರಿ' ಯೊಂದು ರಚಿತವಾದದ್ದು ಹಂಪನಾ ಅವರದೇ. ಡಾ॥ ತಿಪ್ಪೇ ರುದ್ರಸ್ವಾಮಿಗಳು ವಚನಕಾರರಲ್ಲಿ ಕೆಲವರನ್ನು ಕುರಿತು ಕಾದಂಬರಿಗಳನ್ನು ಪ್ರಕಟಿಸಿದ್ದಾರೆ. ಈ ರೀತಿ ಕಾದಂಬರಿ ಮಾಧ್ಯಮದಲ್ಲಿ ಕವಿಗಳನ್ನು ಪರಿಚಯಿಸಿಕೊಡಬೇಕಾದರೆ ಆಯಾ ಧರ್ಮದಲ್ಲಿ, ಕ್ಷೇತ್ರದಲ್ಲಿ, ಆಳವಾದ ಅನುಭವ ಪಾಂಡಿತ್ಯ ವಿದ್ದಾಗಲೇ ಮಾತ್ರ ಸಾಧ್ಯ. ಇದು ಸಾಮಾಜಿಕ ಕಾದಂಬರಿ ಗಳನ್ನು ಹೊಸೆದು ಹೆಸರು ಮಾಡುವಷ್ಟು ಸುಲಭವಲ್ಲ. ಪಂಪ ನನ್ನು ಅರ್ಥ ಮಾಡಿಕೊಳ್ಳಲು, ಅವನ ಸಾಹಿತ್ಯವನ್ನು ಜನ ಸಾಮಾನ್ಯರು ಓದಿ ಜೀರ್ಣಿಸಿಕೊಳ್ಳಲು ಕಷ್ಟವೆಂಬುದನ್ನು ತಿಳಿದೋ ಏನೋ ಹೊಸ ತಂತ್ರವನ್ನ ಶೈಲಿಯನ್ನ ಅಳವಡಿಸಿ ಕೊಂಡು ಪಂಪನ ಇಡೀ ಜೀವನ ಚಿತ್ರಣವನ್ನೇ ಈ ಕಾದಂಬರಿ ಯಲ್ಲಿ ಹಿಡಿದಿಟ್ಟಿದ್ದಾರೆ.

ಇಪ್ಪತ್ತು ಅಧ್ಯಾಯಗಳ ನೂರತೊಂಬತ್ತು ಪುಟದ ಈ ಹೊತ್ತಿಗೆಯಲ್ಲಿ ಪಂಪನ ತಂದೆ ತಾಯಿ, ಅಜ್ಜ ಅಜ್ಜಿಯರು, ಬಾಳಿ ಬದುಕಿದ ರೀತಿ, ಈತನ ಬಾಲ್ಯ, ಯೌವನ, ಮದುವೆ, ರಾಜಕೀಯ ಏರುಪೇರುಗಳು, ವಿದ್ಯಾಭ್ಯಾಸ, ಗುರುಕುಲವಾಸ, ನಿಸರ್ಗದ ನಿಕಟ ಬಾಂಧವ್ಯ, ರಾಜನೀತಿ, ಸ್ವಾಮಿನಿಷ್ಠೆ, ಕಾವ್ಯ ರಚಿಸಲು ಬಂದ ಕಾಲ ಇತ್ಯಾದಿಯಾಗಿ ಒಂದೊಂದನ್ನೂ ಎಳೆ ಎಳೆಯಾಗಿ ಹಲಸಿನಹಣ್ಣನ್ನು ಕೊಯ್ದು ತೊಳೆಗಳನ್ನು ಬಿಡಿಸಿ ಇಟ್ಟಂತೆ ಓದುಗರ ಮುಂದೆ ಇಡುತ್ತಾ ಸಾಗುವ ಲಲಿತವಾದ ಶೈಲಿ ಕಾದಂಬರಿಯನ್ನು ಇಡಿಯಾಗಿ ಓದಿಸಿಕೊಂಡು ಹೋಗು ವಲ್ಲಿ ಸಫಲವಾಗಿದೆ. ಪಂಪನೇ ಈ ಕಾದಂಬರಿಯ ನಾಯಕ. ಉಳಿದೆಲ್ಲಾ ಪಾತ್ರಗಳು ಗೌಣ. ಜೈನಧರ್ಮದ ಆಚಾರವಿಚಾರ ಗಳನ್ನು ಸಂಪ್ರದಾಯ ನಂಬಿಕೆ, ನಡವಳಿಕೆಗಳನ್ನು ಈ ಪಾತ್ರಗಳ

ಸನ್ನಿವೇಶಗಳ ಮುಖಾಂತರ ಸಂದರ್ಭೋಚಿತವಾಗಿ ಒತಮಿತವಾಗಿ ತಂದಿದ್ದಾರೆ. ಎಲ್ಲಿಯೂ ಅತಿಬಾವುಕತೆಗೆ, ಮತಾಂಧತೆಗೆ ಎಡೆಕೊಟ್ಟಿಲ್ಲ. ಆದರೆ ಪಂಪನ ಹುಟ್ಟು, ಬೆಳವಣಿಗೆ, ವಿದ್ಯಾಭ್ಯಾಸ ಮುಂತಾದ ಕೆಲವು ಪ್ರಸಂಗಗಳಲ್ಲಿ ಪ್ರಾಯಕ್ಕೆ ಮೀರಿದ ಬುದ್ಧಿಯನ್ನ ಗುಣವನ್ನ ಆರೋಪಿಸಿದಂತೆ ತೋರುತ್ತದೆ. ಇದಕ್ಕೆ ಕಾರಣ ಪಂಪನ ಬಗೆಗಿರುವ ಇವರ ಗೌರವಭಾವನೆಗಳೆಂದೇ ಕಾಣುತ್ತದೆ.

ಕಾದಂಬರಿಯ ಆರಂಭವೇ, ತಾತ ಕೊಮರಯ್ಯ ಮುದ್ದುಮುದ್ದಾದ ಪದ್ಮಪ (ಪಂಪ)ನ ಬಾಲಲೀಲೆಗಳನ್ನು ಕಂಡು ಆನಂದಿಸುವುದರೊಡನೆ ಪ್ರಾರಂಭ. ವೇದೋಪನಿಷತ್ತಿನಲ್ಲಿ ಪಾರಂಗತರೂ ವೈದಿಕ ಜ್ಞಾನಿಗಳೂ ಆದ ತಾತ ಮುತ್ತಾತಂದಿರಾದ ಕೊಮರಯ್ಯ ಹಾಗೂ ಅಭಿಮಾನಚಂದ್ರರ ಮನೆತನದಲ್ಲಿ ತಂದೆ ಭೀಮಪ್ಪ ತಾಯಿ ಅಬ್ಬಣಬ್ಬೆಯರ ಮಗನಾಗಿ ಜನಿಸಿದವ ಪಂಪ. ಜೈನಧರ್ಮಕ್ಕೆ ಮತಾಂತರಗೊಂಡವರು ತಂದೆ ಮತ್ತು ತಾಯಿಯ ಕಡೆಯವರಿಬ್ಬರೂ. ಹಾಗಾಗಿ ಪುಲಿಗೆರೆಯಲ್ಲಿ ಇವನ ಬಾಲ್ಯ ಜೀವನ ಆರಂಭವಾದರೂ ಇಮ್ಮಡಿ ನರಸಿಂಹರ ಮಗ ಇಮ್ಮಡಿ ಅರಿಕೇಸರಿ ಮತ್ತು ಪಂಪನ ವಿದ್ಯಾಭ್ಯಾಸ ದೇವೇಂದ್ರ ಮುನಿಗಳ ಬಳಿ ನಡೆಯಿತು. ಅಲ್ಲಿ ಅರಗ, ಶೌರ್ಯ ಸಾಹಸಗಳಲ್ಲಿ ಶಸ್ತ್ರವಿದ್ಯೆಗಳಲ್ಲಿ ಅಭಿರುಚಿಯುಳ್ಳವನಾದರೆ ಪಂಪ ಭಾಸ ಕಾಳಿದಾಸಾದಿಗಳ ನಾಟಕಗಳನ್ನು, ತರ್ಕ ಶಾಸ್ತ್ರಗಳನ್ನು, ಸಂಸ್ಕೃತ ಪ್ರಾಕೃತಗಳನ್ನು ಓದಿ ಪಾಂಡಿತ್ಯ ಗಳಿಸಿದ. ದೇವೇಂದ್ರ ಮುನಿಗಳ ಹಿಂದೆ ಹಸುವಿನ ಹಿಂದೆ ಬಾಲ ಇದ್ದ ಹಾಗೆ ಅವರೆಲ್ಲಿ ಹೋದರೂ ಅವರೊಡನೆಯೇ ಸಂಚಾರ ಕೈಗೊಂಡು ಬನವಾಸಿ, ಬಂಕಾಪುರ, ಪುಲಿಗೆರೆ, ಕುಂದಾದ್ರಿ, ಮೂಡಬಿದ್ರೆ, ಕಣ್ಣಪ್ಪ ಮುಂತಾಗಿ ಕನ್ನಡ ನಾಡಿನ ಮುಖ್ಯ ಪ್ರಕೃತಿ ರಮಣೀಯ ಸ್ಥಳಗಳನ್ನು ಜೈನ ಯಾತ್ರಾಸ್ಥಳಗಳನ್ನೂ ಬಸದಿಗಳನ್ನು ಸಂದರ್ಶಿಸಿ ಕನ್ನಡನಾಡಿನ ಚರಿತ್ರೆಯನ್ನು ಗಮನಿಸಿದ್ದ. ಬೆಳೆಯುವ ಸಸಿ ಮೊಳಕೆಯಲ್ಲೇ ಎಂಬಂತೆ ಚಿಕ್ಕವನಿದ್ದಾಗಲೇ ಕಾಡಾನೆಯೊಂದನ್ನು ಸೋಲಿಸಿ ಪಳಗಿಸಿ ಸವಾರಿ ಮಾಡಿದ್ದ. ಕುಸ್ತಿ, ಬಿಲ್ವಿದ್ಯೆಗಳನ್ನೂ ಕಾಳಗಗಳ ಕಲೆಯನ್ನೂ ಕಲಿತಿದ್ದ.

ದೇವೇಂದ್ರ ಮಹಾಮುನಿಗಳು "ಮಹಾಕವಿ ಒಂದು ದೊಡ್ಡ ಮರವಿದ್ದಂತೆ. ಪ್ರತಿಭೆಯೇ ಅದರ ಬೇರು, ಮನದಾಳದ ಒತ್ತಡ ಹೆಚ್ಚಾದಾಗ ಮಾತ್ರ ಕಾವು ಮೂಡಿಬರಲಿ, ಯಾರದೇ ಒತ್ತಡಕ್ಕೆ–ಹಂಗಿಗೆ ಒಳಗಾಗಿ ಕಾವ್ಯ ರಚನೆಯಾಗಬಾರದೆಂದೇಳಿದಾಗಲೇ ಪಂಪನಿಗೆ ತಾನು ಬರೆದರೆ ಆಚಂದ್ರಾರ್ಕ ಸ್ಥಾಯಿಯಾದ ಮಹಾಕಾವ್ಯವನ್ನೇ ಬರೆಯಬೇಕೆನ್ನಿಸಿತೆಂಬುದನ್ನು ಹೇಳಿಸಿದ್ದಾರೆ. ಇದೆಲ್ಲಾ ಪಂಪನ ಕಾವ್ಯಕೃಷಿಗೆ ಸಂಬಂಧಿಸಿದರೆ, ಇಮ್ಮಡಿ ಅರಿಕೇಸರಿ ಆಸ್ಥಾನಕ್ಕೆ ಪಂಪ ಬಂದ್ಯ ಸ್ನೇಹವಲ್ಲಿ, ಅಧಿಕಾರದಲ್ಲಿ, ರಾಜತಂತ್ರಜ್ಞದಲ್ಲಿ ಯುದ್ಧಾಭಿಷಿಕ್ತದಲ್ಲಿ ಅತುಲ

ಪರಾಕ್ರಮವನ್ನು ಮೆರೆಯುವುದು, ಜಕ್ಕಲೆ ಬಮ್ಮಲೆಯರನ್ನು ಮದುವೆಯಾಗಿ ಸರಸ ದಾಂಪತ್ಯವನ್ನು ನಡೆಸುವುದು, ಕೊನೆಯ ಭಾಗದಲ್ಲಿ ರಾಷ್ಟ್ರಕೂಟದ ಚಕ್ರವರ್ತಿ ಗೋವಿಂದ(ಗೊಜ್ಜಿಗ)ರಿಗೂ ಅರಿಕೇಸರಿಗೂ ನಡೆಯಲಿರುವ ಯುದ್ಧವನ್ನು ತಪ್ಪಿಸಲು ರಾಯಭಾರಿಯಾಗಿ ಹೋಗುವುದು. ಕೊನೆಗೂ ಯುದ್ಧ ನಡೆದು ಅಂಗ ಜಯಶಾಲಿಯಾದರೂ ರಣರಂಗದ ಸಾವು–ನೋವುಗಳನ್ನು ಕಂಡು, ಯಾವ ಪುರುಷಾರ್ಥಕ್ಕಾಗಿ ಈ ಹಿಂಸೆ, ಕ್ರೌರ್ಯ ಎಂದು ಪಂಪ ಜೋಧನ ತಲುಪಿದವನೇ ಕಾವ್ಯ ಬರೆಯುತ್ತಾ ಕುಳಿತುಬಿಟ್ಟು, ಈ ಇಳಾಧಿನಾಥರನ್ನು ಓಲೈಸಿ ಬದುಕುವುದೇ ಕಷ್ಟ ಎಂದು ಆತನ ಬಾಯಲ್ಲಿ ಹೇಳಿಸುವುದು ಮಾರ್ಮಿಕವಾಗಿದೆ. ಹೀಗೆ ಕಾದಂಬರಿ ಹಲವು ಮಜಲುಗಳಲ್ಲಿ ಬಹು ವಿಸ್ತಾರವಾಗಿ ಸಾಗಿ ಪಂಪನೇ ಸಾರ್ವಭೌಮನಾಗಿ ಮೆರೆದಿದ್ದಾನೆ.

ಕನ್ನಡದ ಕಂಪನ್ನು ನಾಡಿನಲ್ಲೆಲ್ಲಾ ಹರಡಲು, ದೈವದ ಮಟ್ಟದಿಂದಾಗಿಯೇ ಬಂದವನು ಪಂಪನೆಂದೂ ಅವನ ಅಸಾಧಾರಣ ಪ್ರತಿಭೆಗೆ, ಶಕ್ತಿ ಸಾಹಸಗಳಿಗೆ ವಂಶ ಪಾರಂಪರ್ಯವಾದ ಗುಣಗಳನ್ನು ಅತಿಯಾಗಿ ಕಾದಂಬರಿಯಲ್ಲಿ ಆರೋಪಿಸುತ್ತಾರೇನೋ ಎನಿಸುತ್ತದೆ. "...ಬೆಳೆದ ಫಲವಾಗಿ ಕೊಮರಯ್ಯನ ಕೆಲವು ಗುಣಗಳು ಮೊಮ್ಮಗ ನಲ್ಲೂ ಮನೆ ಮಾಡಿದವು. ತಾತನಂತೆ ಪಂಪನೂ ಮಿತಭಾಷಿ. ಕೊಮರಯ್ಯ ಸಕಲ ವೇದ ಪಾರಂಗತ, ಪಂಪ ಬಳಿಯಲ್ಲೇ ಇರುತ್ತಿದ್ದರಿಂದ ಎಳೆಯ ಮಿದುಳು ಅದನ್ನೆಲ್ಲ ತನ್ನ ಉಗ್ರಾಣದಲ್ಲಿ ಶೇಖರಿಸಿಕೊಂಡಿತು (ಪು. ೩). ನಮ್ಮದು ಪ್ರತಿಫಲಾಪೇಕ್ಷೆ ಇಲ್ಲದೆ ಕೇವಲ ಲೋಕಕಲ್ಯಾಣಾರ್ಥವಾಗಿ ಕೊಡುವ ಶಿಕ್ಷಣ. ಅರಮನೆಯನ್ನು ಬಿಟ್ಟು ಜ್ಞಾನದಾಹದಿಂದ ಗುರುಮನೆಗೆ ಬಂದು ಕಲಿಯುವುದು ನಿಜವಾದ ಕಲಿಕೆ (ಪು. ೨೨). ಬಿಲ್ವಿದ್ಯೆ, ಖಡ್ಗ ವಿದ್ಯೆಗಳಲ್ಲಿ ಅರಿಗನಷ್ಟೇ ನಿಷ್ಣಾತನಾದ. ಯುದ್ಧ ವಿದ್ಯೆಯನ್ನು ಆಪತ್ಕಾಲದ ರಕ್ಷಾನಿಧಿಯಾಗಿರಲೆಂದಷ್ಟೇ ಕಲಿತ. ಪಂಪ, ಅಭ್ಯಾಸ ಕ್ಕೆಂದು ಕುಸ್ತಿಗೆ ನಿಂತಾಗ ಅವನು ಪಟ್ಟು ಹೊಡೆದು ನಿಂತರೆ ಗುಡ್ಡಗಳು ಹೊಳಲು ಗೊಡುತ್ತಿದ್ದವು. ಸಾಮು ಮಾಡಿ ಉಕ್ಕಿನ ಮಾಂಸಖಂಡಗಳ ಮಾಟದಂತಹ ಮೈಕಟ್ಟು ಈ ವೀರ ಯೋಧನಿಗೆ ಹೇಳಿ ಮಾಡಿಸಿದಂತಿತ್ತು...ಪಂಪ ನೀನು ಈ ವಯಸ್ಸಿಗೆ ವಿಶ್ವಕೋಶವನ್ನು ತಿರುಪಿ ಹಾಕುವಷ್ಟು ತಿಳಿದಿದ್ದೀಯೆ(೭೩). ಲೋಕ ವಿಖ್ಯಾತನಾಗಿ ಬಾಳು, ಆಳು. ಇಲ್ಲಿ ಕಲಿಯುವುದು ಇನ್ನೇನೂ ಉಳಿದಿಲ್ಲ....ನದಿ ಸಮುದ್ರಗಳನ್ನು ಅಲ್ಲೋಲ....ಕಲ್ಲೋಲಗೊಳಿಸುವ ತಿಮಿಂಗಿಲದಂತೆ ಮಹಾ ಕಾವ್ಯಗಳ ಮೇರುಮಂದರದುತ್ತುಂಗ ಶಿಖರಗಳಲ್ಲಿ ಉಡ್ಡೀನ ಮಾಡುವ ಮಹಾ ಕವಿಯಾಗು (ಪು.೭೬). ಗಾಯಗೊಂಡವರಿಗೆ, ರೋಗ ಬಂದವರಿಗೆ ಪಂಪನೇ ವೈದ್ಯ ನಾಗಿಗಿಡಮೂಲಿಕೆ ರಸಗಳಿಂದ ಗುಣಪಡಿಸುತ್ತಿದ್ದ. ಪಂಪ ಜೊತೆಯಲ್ಲಿದ್ದರೆ ಶ್ರುತ ಭಂಡಾರವೇ ಒಡನಿದ್ದಂತೆ ಎಂದು ಗೆಳೆಯರು ತಿಳಿದಿದ್ದರು(ಪು.೮೭). ಹಸೆಮಣೆಯಲ್ಲಿ

ಕದಳೀ ಗರ್ಭಶ್ಯಾಮನಾಗಿ ಪಂಪ ಕುಳಿತಿದ್ದ (ಪು. ೯೪) ಪಂಪ ಪ್ರಭುವಿನ ಅವಿಭಾಜ್ಯ ಅಂಗವಾಗಿದ್ದ. ಅಂತಃಪುರದಲ್ಲೇ ದೊರೆಯೊಡನೆ ಕುಳಿತು ನೆತ್ತವಾಟವಾಡುತ್ತಿದ್ದುದೂ ಸಾಮಾನ್ಯವಾಗತೊಡಗಿತು (ಪು. ೧೩೮). ಮುಂತಾಗಿ ಹೇಳುವ ಮಾತುಗಳಲ್ಲೆಲ್ಲಾ ಮಹಾಭಾರತದ ಕರ್ಣ ದುರ್ಯೋಧನರ ಗಾಢ ಸ್ನೇಹವನ್ನು ನೆನಪಿಗೆ ತರುವಂತೆ ಸನ್ನಿವೇಶ ಸೃಷ್ಟಿ ಮಾಡಿದ್ದಾರೆ. ಪಂಪನ ಮನುಷ್ಯ ಸಹಜವಾದ ದೋಷ ದೌರ್ಬಲ್ಯಗಳನ್ನು ಎಲ್ಲಿಯೂ ತರುವುದಿಲ್ಲ. ಒಂದೇ ಒಂದು ಸಂದರ್ಭ ಅಂದರೆ, 'ಅರಿಕೇಸರಿ' ಸಾಮಂತ ರಾಜನಾದುದರಿಂದ ಅವನಿಂದ ಹೆಚ್ಚಿನ ಲಾಭ ಸಿಗದಿದ್ದರೂ ಸ್ನೇಹವೇ ಮುಖ್ಯವೆಂಬುದನ್ನು–,"....ಚಕ್ರವರ್ತಿಯ ಆಸ್ಥಾನ ಕವಿಯಾಗಿ ಹೋದರೆ ಇಂದಲ್ಲ ನಾಳೆ, ಕವಿ ಚಕ್ರವರ್ತಿ ಬಿರುದು ಬಾವಲಿ : ಸಾಮಂತನಲ್ಲಿ ಅದು ಸಾಧ್ಯವಿಲ್ಲ ...ಛೇ ಎಂಥ ಸ್ವಾರ್ಥ. ನಂಬಿದ ನೇಹಿಗನನ್ನು ಬಿಡುವುದೇ ? ಇಂದು ಚಕ್ರವರ್ತಿ ಎನ್ನಿಸಿಕೊಂಡರೇನು ? ಎಂದೆಂದೂ ಮುಂದಿನ ಜನ ಹಾಗೆನ್ನಬೇಕಲ್ಲವೇ ?" (ಪು. ೧೨೧) ಎಂದು ಅವನ ಬಾಯಲ್ಲಿ ಹೇಳಿಸುವಾಗಲೂ ಕಾದಂಬರಿಕಾರರು ಬಹು ಜಾಣ್ಮೆಯನ್ನು ಮೆರೆದಿದ್ದಾರೆ. ಪಂಪ ಕವಿಯ ಮೇಲಿನ ಎಲ್ಲಾ ಉದಾತ್ತ ಗುಣಗಳೂ ಈ ಒಂದು ಮಾತಿನಲ್ಲಿ ಮೇಳೈಸಿ, ಕೊನೆಗೂ ಹಣಕ್ಕೆ ದಾಸನಾಗದೆ, ಸ್ನೇಹಕ್ಕೆ ವಿಶ್ವಾಸಕ್ಕೆ ಮಹತ್ವ ಕೊಟ್ಟನೆಂಬುದನ್ನು ಸಾರಿದ್ದಾರೆ.

ಪಂಪನ ಬಗೆಗಿನ ಒಲವೇ ಇಲ್ಲಿ ಮುಖ್ಯವಾಗಿ ಕಾಣುವಂತೆ, ಜಿನ ಗುರುಗಳ ಆದರ್ಶ ವ್ಯಕ್ತಿಗಳ ಹಾಗೂ ಜೈನಧರ್ಮದ ಭಕ್ತಿಗೌರವಗಳು ಇಮ್ಮಡಿಯಾಗಿ, ಧರ್ಮ ಗುರುಗಳನ್ನು ಆ ಸಂಪ್ರದಾಯಗಳನ್ನು ಪರಿಪಾಲಿಸದಿದ್ದರೆ ಮೋಕ್ಷ ಸಿಗುವುದಿಲ್ಲವೆಂಬುದನ್ನು, ಅವರ ವಿಶೇಷ ನಂಬಿಕೆಗಳನ್ನು ಸಂದರ್ಭ ಬಂದಾಗಲೆಲ್ಲಾ ಹೇಳಿಸಿದ್ದಾರೆ. "ಸನ್ಯಾಸಿಗಳೆಂದರೆ ಸಾಮಾನ್ಯರಲ್ಲ. ನಮ್ಮ ನಾಡಿನ ಹಿರಿಮೆಗರಿಮೆಗಳೆಲ್ಲ ಅಂತಹ ಗುರುಹಿರಿಯರಿಂದಲೇ ಉಳಿದುಬಂದಿರುವುದು. ಗೃಹಸ್ಥ ಧರ್ಮಕ್ಕಿಂತ ಸನ್ಯಾಸ ಧರ್ಮ ದೊಡ್ಡದು"(ಪು. ೨). "ಭಗವಾನ್...ತಾವು ನಗರದ ಬಳಿಗೆ ಬಂದೂ ನಗರದೊಳಕ್ಕೆ ಕಾಲಿಡದೆ ಹೊರದಾರಿಯಲ್ಲೇ ಸಾಗಿದಿರೆಂದು ತಿಳಿದುಬಂತು...ನೀವು ತಿಳಿದಂತೆ ಹಿಂಸೆಯು ಎಲ್ಲಿ ನಡೆಯುತ್ತದೆಯೋ ಅಲ್ಲಿಗೆ ಜೈನರೂ ಜೈನ ಯತಿಗಳೂ ಹೋಗುವುದಿಲ್ಲ"(ಪು. ೫). ಕೋಪತಾಪಗಳು ಜಿನಮುನಿಗಳಿಗೆಲ್ಲಿಂದ ಬರಬೇಕು ? ...ಜೈನ ಶ್ರಾವಕರ ಬದುಕು ಎಂದೂ ದೇಶಸೇವೆ ಭಾಷಾ ಸೇವೆಗೆ ಮುಡಿಪು. ನೀನು ಸಂಸಾರ ಬಿಟ್ಟು ನಮ್ಮಂತೆ ಸನ್ಯಾಸಿಯಾಗೆಂದು ಎಂದೂ ಹೇಳುವದಿಲ್ಲ. ಗೃಹಸ್ಥಾಶ್ರಮ ಯಾವ ಆಶ್ರಮಕ್ಕೂ ಕಡಿಮೆಯಲ್ಲ. ಇಲ್ಲಿದ್ದೇ ಇಹಪರಗಳಿಗೆ ಸಲ್ಲುವಂತೆ ಬಾಳಬೇಕು (ಪು.೧೬೪) ......ಮಾನವ ಅಳುವುದರಿಂದ ಸತ್ತವರು ಏಳುವ ಪಕ್ಷದಲ್ಲಿ ಅಳುವುದೂ ಆಗಬಹುದು. ಇಲ್ಲವೇ ಅಳುವುದರಿಂದ ಉಳಿದವರಾದರೂ ಮುಂದೆ ಎಂದೆಂದೂ ಸಾಯದೆ ಉಳಿಯುವುದಾದರೆ ಅಳಬಹುದು. ಹುಟ್ಟು ಸಾವು ಬಾಳಿನ

ಎರಡು ಮುಖಗಳು (ಪು.೯೭)…….ನಮ್ಮ ಸರಿಯಾದ ದಾರಿಯನ್ನು ನಾವೇ ಕಂಡು ಕೊಳ್ಳಬೇಕು. ಹೇಡಿಗೆ ಮೇಲ್ಮನೆ ಸಿಗದು. ಶಂದೆತನವನ್ನು ನಿನ್ನ ಬಳಿ ಸುಳಿಯ ಗೊಡದಿರು. ಕನ್ನಡ ನಾಡಿನ ಓಜನಾಗಿ ವಿಜೃಂಬಿಸು (ಪು.೮೭)." ಇಂತಹ ಎಲ್ಲಾ ಮಾತುಗಳನ್ನು ಮುನಿವರೇಣ್ಯರ ಬಾಯಿಂದ ಆಡಿಸಿರುವುದನ್ನು ಕಂಡಾಗ ಜೈನ ಧರ್ಮದ ಆಚಾರ ವಿಚಾರ ಪರಂಪರೆಗಳಲ್ಲಿ ; ಕೆಲವು ಕಠಿಣ ವ್ರತಾಚರಣೆಗಳಿದ್ದರೂ ಕೂಡ ಇದು ಜೀವಗಳ ಉದ್ಧಾರಕ್ಕೆ ಒಳ್ಳೆಯದು, ಮನುಷ್ಯ ಸ್ವಾರ್ಥಿಯಾದರೆ ದೈವಧರ್ಮ ಎಲ್ಲವನ್ನೂ ಮರೆಯುತ್ತಾನೆ. ವ್ಯಾಪಾರ ಸಹಜವೆನಿಸುವ ಮೋಸಕ್ಕೆ ಒಳಗಾಗದೆ ಸತ್ಯದ ಚೌಕಟ್ಟಿನಲ್ಲೇ ಬಾಳಬೇಕೆಂಬುದನ್ನು ಕಾದಂಬರಿಯು ಉದ್ದಕ್ಕೂ ತಿಳಿಸುತ್ತಾರೆ.

ಕಾವ್ಯಶ್ರೇಷ್ಠವಾಗಿ ಉತ್ತಮವಾಗಿ ಹೊರಬರಬೇಕಾದರೆ ಕವಿಯ ಬದುಕು, ಅನುಭವ ಉನ್ನತವಾಗಿರಬೇಕು...ಆ ವಿಚಾರ ಬೇರೆ. ಆದರೆ ಕಾವ್ಯಪ್ರಕಾರದೊಳಕ್ಕೆ ಅವು ಪ್ರವೇಶ ಪಡೆಯುವಾಗ ಮಾತ್ರ ಕಾವ್ಯದ ವೇಷತೊಟ್ಟೇ ಬರಬೇಕು……. ಮಹಾಕವಿ ಒಂದು ದೊಡ್ಡ ಮರವಿದ್ದಂತೆ. ಪ್ರತಿಭೆಯೇ ಅದರ ಬೇರು. ಮಾಧು ರ್ಯಾದಿಗಳು ಅದರ ಎತ್ತರವಾದ ಟೊಂಗೆಗಳು (ಪು. ೭೮). ಒತ್ತಡ ಹೆಚ್ಚಿದಾಗ ಮಾತ್ರ ಕಾವ್ಯ ಹೊರಬರಬೇಕು, ಯಾವುದೋ ಆಸೆ ಆಮಿಷಗಳಿಗೆ ಹೊರಬರುವಂಥ ದ್ದಲ್ಲ. ಪಂಪ ಸ್ವತಃ ಸೇನಾಧಿಪತಿಯಾಗಿ, ಸುತ್ತಲ ಪರಿಸರದಲ್ಲಿ ನಡೆದಾಡಿದವನಾಗಿ, ಅರಿತು ಅನುಭವಿಸಿದ್ದಾದ್ದರಿಂದಲೇ ಕಾವ್ಯ ತನ್ನ ಹೃದಯದಿಂದ ತಾನೇ ತಾನಾಗಿ ಬಂತೆಂಬುದನ್ನು ಕಾದಂಬರಿಯು ಕೊನೆಯಲ್ಲಿ ಅರುಹಿಸಿದ್ದಾರೆ.

ಬ್ರಾಹ್ಮಣ ಜಾತಿಯಿಂದ ಭೀಮ ಜೈನಧರ್ಮಕ್ಕೆ ಮತಾಂತರಗೊಂಡಾಗ ಸುತ್ತಲ ಪರಿಸರದ ಜನ ಆಡಿಕೊಳ್ಳುವುದು, ಜಾತಿಯಿಂದಲೇ ಬಹಿಷ್ಕರಿಸಬೇಕೆನ್ನು ವುದು. ಹಾಗೆಯೇ ಜೈನರಲ್ಲಿಯೂ ಕೂಡ ಅನ್ಯಮತೀಯನನ್ನು ಗುರುಗಳು ಸೇರಿಸಿ ಕೊಂಡದ್ದನ್ನು ಗುಲ್ಲೆಬ್ಬಿಸುವುದು ಮುಂತಾದವೆಲ್ಲಾ ಸಹಜವಾಗಿ ಚಿತ್ರಿತವಾಗಿದೆ. ಗುಣ ಪಕ್ಷಪಾತಿಗಳಿಗೆ ಧರ್ಮ ಎಂದೂ ಅಡ್ಡ ಬರದು. ಪ್ರತಿಭೆಗೆ ಪಾಂಡಿತ್ಯ, ಔನ್ನತ್ಯಗಳು ಗಾಳಿ ಬೆಳಕು ಇದ್ದಂತೆ. ಒಳ್ಳೆಯ ಗಾಳಿ ಬೆಳಕು ಯಾವ ಕಡೆಯಿಂದ ಬಂದರೂ ಸ್ವೀಕರಿಸಬೇಕು. ಸಾಹಿತ್ಯಕ್ಕೆ ಜಾತಿ ಸೂತಕವಿಲ್ಲ. ವಾಲ್ಮೀಕಿ ಬೇಡ. ವ್ಯಾಸ ಬೆಸ್ತ. ಕಾಳಿದಾಸ ಕುರುಬ. ಹಾಗೆಂದು ಅವರ ಮಹಾಪುರುಷತನಕ್ಕೆ ಕುಂದಾ ಯಿತೆ ? ಆತ್ಮನಿಗೆ ಜಾತಿ ಎಲ್ಲಿದೆ ಮಗು ? (ಪು.೮೫) ಎಂದು ಮುನಿಗಳಿಂದ ಹೇಳಿ ಸುವ ಹಂಪನಾ, ವೈಚಾರಿಕ ಮಥನವನ್ನೇ ನಡೆಸಿದ್ದಾರೆ. ಉದಾಹರಣೆಗೆ ಈ ಮಾತು ನೋಡಿ : ತೊರೆ ಹಳ್ಳಗಳು ಕಡಲನ್ನು ಸೇರುತ್ತವೆಯೇ ಹೊರತು. ಕಡಲು ಹಳ್ಳ ಕೊಳ್ಳಗಳನ್ನು ಕೂಡಿಕೊಳ್ಳುವುದಿಲ್ಲ, ಅಲ್ಲವೇ ಚಿಕ್ಕಪ್ಪ ?

"ನಿಜ ಮಗು. ಆದರೆ ಕಡಲ ನೀರನ್ನು ಜನ ಕುಡಿಯಲಾಗುವುದಿಲ್ಲ, ಅಲ್ಲವೇ ?" ಹೇಗೆ ಪ್ರತಿಯೊಂದು ವಿಚಾರವನ್ನು ಸಂಭಾಷಣೆಗಳ ಮುಖಾಂತರ ತರ್ಕವಿತರ್ಕ ಗಳೊಂದಿಗೆ ಚರ್ಚೆಗೆ ಒಳಗು ಮಾಡಿಸಿ, ಪಾತ್ರಗಳಿಂದ ಮಾತನಾಡಿಸಿ, ಯಾವುದು ಒಳ್ಳೆಯದು, ಯಾವುದು ಕೆಟ್ಟದೆಂಬುದನ್ನು ಅವೇ ನಿರ್ಧರಿಸುವಂತೆ ಮಾಡುತ್ತಾರೆ. "ಹಾವಿಗೆ ಮುತ್ತಿಡುವ ಸರಸ ಸರಿಯಲ್ಲ ಮಹಾರಾಜರೆ ?" "ಹಾವಾಡಿಗರಾಗಿ ವಿಷದ ಹಲ್ಲು ಮುರಿದು ಪಳಗಿಸುವುದು ನಮಗೆ ತಿಳಿದಿದೆ." ಆದರೂ ಅದರ ದ್ವೇಷ ಕಟ್ಟಿಕೊಳ್ಳುವುದು ಸೆರಗಿನಲ್ಲಿ ಕೆಂಡ ಕಟ್ಟಿಕೊಂಡಂತೆ. ತಲೆ ತುರಿಸಿತೆಂದು ಕೊಳ್ಳಿಯಲ್ಲಿ ಕೆರೆದುಕೊಳ್ಳುದು ಒಳ್ಳೆಯದಲ್ಲ," ಮಹಾರಾಜರೇ. "ನೀವು ಕೇವಲ ರಾಯಭಾರಿಯಾಗಿ ಈ ಮಾತುಗಳಾಡಿದ್ದರೆ ನಿಮ್ಮ ಒಡಲು ನಮ್ಮ ಹೆಬ್ಬಾಗಿಲಲ್ಲಿ ತೂಗಿರಬೇಕಿತ್ತು. ನಾಡಿನ ಮನ್ನಣೆ ಪಡೆದ ಹಿರಿಯ ವಿದ್ವಾಂಸರೆಂದು ಸಹಿಸಿ ಕೊಂಡು ಬಿಟ್ಟದ್ದೇವೆ" (ಪು.೧೫೦) ಮುಂತಾದ ಸಂಭಾಷಣೆಗಳಲ್ಲಿ ಪಂಪನ ರಾಯ ಭಾರಿತನ, ಚಾಣಾಕ್ಷ ಬುದ್ಧಿ, ರಾಜಕೀಯ ತಂತ್ರ, ಮೇಧಾವಿತನ ಇತ್ಯಾದಿಗಳೆಲ್ಲ ವನ್ನು ಸೂಕ್ಷ್ಮವಾಗಿ ಸಾಮಾನ್ಯ ಓದುಗನೂ ತಿಳಿಯಬಲ್ಲ ರೀತಿಯಲ್ಲಿ ಪಂಪನ ವ್ಯಕ್ತಿತ್ವವನ್ನು ಕಡೆದು ನಿಲ್ಲಿಸಿದ್ದಾರೆ. ಯುದ್ಧಗಳ ವರ್ಣನೆ, ಮಾರುವೇಷದಲ್ಲಿ ಹೋಗಿ ಜನಾಭಿಪ್ರಾಯವನ್ನು ಸೇನಾಧಿಪತಿಗಳೂ, ರಾಜರೂ ತಿಳಿಯುವ ಬಗೆ, ಯುದ್ಧಕ್ಕೆ ಅಣಿಗೊಳಿಸುವ ವಿಧಾನ ಮುಂತಾದವೆಲ್ಲಾ ಅರಿಕೇಸರಿಗಿಂತಲೂ ಪಂಪ ನಿಗೆ ಕರತಲಾಮಲಕವಾಗಿದ್ದವು. ಎಲ್ಲದರಲ್ಲೂ ಸತ್ಯ ಶುದ್ಧ ಕಾರ್ಯ ಮಾಡುವಾತ ಪಂಪ ಎಂಬುದನ್ನು ಬಹು ಹೆಮ್ಮೆಯಿಂದ ಜನಗಳಿಂದ ಹೇಳಿಸುತ್ತಾರೆ.

ಇನ್ನು, ಕಾದಂಬರಿಕಾರರು ಗ್ರಾಮೀಣ ಪರಿಸರದಿಂದ ಬಂದವರಾದ್ದರಿಂದ ಜನಪದ ಭಾಷೆಯನ್ನು ತುಂಬಾ ಶಕ್ತಿಯುತವಾಗಿ ದುಡಿಸಿಕೊಂಡಿದ್ದಾರೆ. ಗಾದೆಗಳು, ನುಡಿಗಟ್ಟುಗಳು, ಸಾಂದರ್ಭಿಕವಾಗಿ ಮೇಲಿಂದ ಮೇಲೆ ಪ್ರಯೋಗಗೊಂಡಿರುವು ದನ್ನು ಈ ಕೆಳಗಿನಂತೆ ಪಟ್ಟಿ ಮಾಡಿದ್ದರೂ ನಾನು ಉದಾಹರಿಸುವುದು ಕೆಲವು ಮಾತ್ರ. "ಆವೇಶದ ಪ್ರವಾಹಕ್ಕೆ ಸಿಕ್ಕಿ ಕೊಚ್ಚಿಹೋಗಬೇಡ, ನೆತ್ತಿ ತಂಪಾಗಿಟ್ಟು ಯೋಚಿಸುವುದು ಲೇಸು. ಒಂದು ಧರ್ಮವನ್ನು ಬಿಟ್ಟು ಇನ್ನೊಂದು ಧರ್ಮವನ್ನು ಸ್ವೀಕರಿಸುವುದು ಬಟ್ಟೆ ಬದಲಾಯಿಸಿದಂತಲ್ಲ(ಪು.೧೫). ತಾನೊಂದು ಬಗೆದರೆ ದೈವ ಮತ್ತೊಂದು ಬಗೆಯುತ್ತದಂತೆ. ಬೆಳೆಯುವ ಎಳೆಯ ಬುದ್ಧಿಯ ಬುಡಕ್ಕೆ ಬೆಂಕಿಯ ನೀರನ್ನೇ ಎರೆದರು. ದೂರಕ್ಕೆ ಅದು ಸುಣ್ಣಗೆ, ಕುಳಿತ ಮೇಲೆ ತಣ್ಣಗೆ. ಪಿಸುಣರ ಮಾತಿಗೆ ಕಿವಿಗೊಡಬೇಡ(ಪು.೨೩). ರೋಗಿಗೆ ಒಳಿತಾಗಲೆಂದು ಪಥ್ಯ ಹೇಳುವರು, ಅದನ್ನು ಆತ ಅರ್ಥ ಮಾಡಿಕೊಂಡರೇ ಸರಿ, ಇಲ್ಲವಾದರೆ ಅವನಿಗೇ ಕೇಡು. ಚನ್ನಾಗಿ ಮಾಗಿದ ಹಣ್ಣು ಮರದಿಂದ ತೊಟ್ಟು ಕಳಚಿಬೀಳುವಂತೆ (ಪು.೨೭). ಭೀಮನ ಹೊಸ ಬಾಳಿನ ಗುದ್ದಲಿ ಪೂಜೆಗೆ ಎಲ್ಲ ಸಿದ್ಧತೆಯೂ ಆಯಿತು. ಹೆಣ್ಣು

ಹೆತ್ತ ಒಡಲು ತಣ್ಣಗಾಯಿತು (೪೧). ಅದಿರಾಜರನ್ನು ಕಡಲೆ ಹುರಿದಂತೆ ಹುರಿದು, ನೀರಿನಲ್ಲಿ ಮೊಸಳೆ ಹಿಡಿದಂತೆ (೫೧) ಸಹವಾಸದಿಂದ ಸನ್ಯಾಸಿ ಕೆಟ್ಟಂತಾಯಿತು. ರಾಜಹಂಸ ಕುರುಕ್ಷೇತ್ರಕ್ಕೆ ಪಯಣಿಸುವುದೇ ?(೫೫) ಹಸುವಿನ ಹಿಂದೆ ಬಾಲ ಎಂಬಂತೆ (೫೯) ಬಾವಿಯಿಂದ ನದಿಗೆ ಬಿಟ್ಟ ಮೀನಾದ, ಬೆಳೆಯುವ ಪೈರು ಮೊಳಕೆಯಲ್ಲಿ (೬೪) ಮೈಯೆಲ್ಲಾ ಬಾಯಾಗಿ ಹೇಳಿದ. ಗೋಡೆಗೆಸೆದ ಕಲ್ಲಿನಂತೆ ಎದೆಯಾಳದಲ್ಲಿ ನಾಟಿತ್ತು(೭೮) ಮೈಯೆಲ್ಲಾ ಕಣ್ಣಾಗಿ ನೋಡಿದ (೮೩) ಪ್ರಭುವಾಗಲಿ ಪ್ರಜೆಯಾಗಲಿ ಇಳಿಗಾಲದಲ್ಲಿ ಮಗನೇ ಊರುಗೋಲು. ನೀವು ಆಡಿದ ನುಡಿಗಳೆಲ್ಲ ಕಲ್ಲಿನ ಮೇಲೆ ಕೊರೆದಂತೆ ನನ್ನೆದೆಯಲ್ಲಿ ಅಚ್ಚೊತ್ತಿಕೊಂಡಿವೆ (೯೧) ಉಗುರಿನಲ್ಲಿ ಚಿವುಟಿಹಾಕದೆ ಬಿಟ್ಟರೆ ಮುಂದೆ ಕೊಡಲಿ ಹಿಡಿದು ನಿಲ್ಲಬೇಕಾಗುತ್ತದೆ (೧೧೬) ಉಪ್ಪು ಉಂಡ ಮನೆಗೆ ಎರಡು ಬಗೆಯಬಾರದು (೧೨೭) ನಾನೇನೂ ದುಡ್ಡಿಗೆ ದಾಸನಾಗುವುದಿಲ್ಲ (೧೨೮) ಬೆಟ್ಟದಂತೆ ಬಂದ ಆಪತ್ತು ಮಂಜಿನಂತೆ ಮರೆಯಾಯ್ತು. ಕಡಲ ಕರೆಯಲ್ಲಿ ತೆರೆಯೆಸೆದ ಕಪ್ಪೆ ಚಿಪ್ಪುಗಳೆಲ್ಲ ಮುತ್ತುಗಳಲ್ಲ (೧೪೪) ಬಂದ ಮಾರಿ ಹಾಗೇ ಹೋಯ್ತು. ಬಿರುಗಾಳಿಗೆ ಸಿಕ್ಕಿ ತರಗೆಲೆಯಾಗಿದ್ದ (೧೫೧) ಹಾಲನ್ನು ನೋಡಿದರೇ ಹೊರತು ಬಡಗಿಯನ್ನಲ್ಲ. ಉರಿ ಸೋಕಿದ ಹತ್ತಿಯಂತೆ ಅಂಬರ ಉರಿಯಿತು(೧೫೪). ಈ ಇಳಾಧಿನಾತರನ್ನು ಓಲಯಿಸಿ ಬಾಳುವುದೇ ಕಷ್ಟ. ಗಂಧದ ಒಡನಾಟವಿದು (೧೭೩) ಪ್ರೇಮ, ಕೆಮ್ಮು, ಹಣ, ಹೊಗೆ ಇವನ್ನು ಬಹಳ ದಿನ ಬಚ್ಚಿಡಲು ಸಾಧ್ಯವಿಲ್ಲ (೧೮೧).

ಇತ್ಯಾದಿ ನೂರಾರು ಗಾದೆ ಮಾತುಗಳನ್ನು ಪ್ರತಿಯೊಂದು ಪಾತ್ರಗಳ ಚಿತ್ರಣದಲ್ಲೂ ಕಾದಂಬರಿಕಾರರು ನಿರಾಯಾಸವಾಗಿ ಬಳಸಿದ್ದಾರೆ. ಇಂತಹ ಭಾಷೆಯಿಂದಾಗಿ ಆಯಾ ಸನ್ನಿವೇಶ ಜೀವಂತವಾಗಿ ಓದುಗನ ಮುಂದೆ ನಿಲ್ಲಲು ಮತ್ತು ಐತಿಹಾಸಿಕ ವ್ಯಕ್ತಿಗಳನ್ನೂ ಸುಲಭವಾಗಿ ಅರ್ಥ ಮಾಡಿಕೊಳ್ಳಲು, ಕಾದಂಬರಿ ತಾನೇ ತಾನಾಗಿ ಓದಿಸಿಕೊಂಡು ಹೋಗಲು ಸಹಕಾರಿಯಾಗಿದೆ.

ಹಂಪನಾ ಅವರ ಕಾದಂಬರಿಯಲ್ಲಿನ ರಸಿಕ ಜೀವನದ ಸರಸಮಯ ಸಲ್ಲಾಪಗಳು, ಅನುಭವಗಳು ಹಸಿಯಾಗಿರದೆ ಲಲಿತಮಾಧುರ್ಯದಿಂದ ಕೂಡಿ, ಸಂಭಾಷಣೆಗಳು ಪ್ರೇಮಪೂರಿತ ಮೃದುಮಧುರವಾಗಿವೆ. ಉದಾಹರಣೆಗೆ,—ಪಂಪ, ಆತನ ಇಬ್ಬರು ಮಡದಿಯರೊಂದಿಗೆ ಕೂಡುವ, ಆಡುವ, ಸರಸವಾಡುವ ಸನ್ನಿವೇಶಗಳೆಲ್ಲಾ 'ಗಂಡ ಹೆಂಡಿರೆಂದರೆ' ಹೇಗಿರಬೇಕು, ಬದುಕಿನ ಸಮ್ಮಿಲನದಲ್ಲಿ ಸ್ವರ್ಗಸೋಪಾನವೇ ಇದೆ ಎಂಬುದನ್ನು ಸಾರುತ್ತಾ ಹೋಗುತ್ತಾರೆ. "ನೋಡಿ ನೀವು ನನಗೆ ದೇವರಿತ್ತ ಜೋಡಿ ಕಿನ್ನರಿ.......

"ನೀವು ಹೇಳಿದುದೆಲ್ಲಾ ಸರಿಯಲ್ಲ"
"ಇನ್ನೇನು ಹೇಳಬೇಕಿತ್ತೊ !"

ಎಲ್ಲರೂ ಕಳ್ವಪ್ಪು ತುಳುಕಿದಂತೆ ನಕ್ಕರು. "ಏನು ಹಾಗೆ ನುಂಗಿ ಹಾಕೊ ಹಾಗೆ ನೋಡ್ತೀರಿ"..."ನಾನು ಹೊಗಳ್ತಾ ಇಲ್ಲಾ ನಿಜ ಹೇಳ್ತಿದ್ದೀನಿ—ನಿನ್ನ ಅಂಗಾಂಗ ಗಳಲ್ಲಿ ಅಮೃತಧಾರೆ ಸುರೀತಿದೆ." "ಸರಿ ಸರಿ ಕೊಪ್ಪರಿಗೆ ತನ್ನಿ ನಾನು ಅದರಲ್ಲಿ ನಿಂತ್ಕೊತೀನಿ ಅಮೃತಧಾರೆಯಿಂದ ತುಂಬುತ್ತೆ." "ಅದನ್ನು ತುಂಬಿಸ್ಕೊಳ್ಳೋದು ಹಾಗಲ್ಲ ಹೀಗೆ"—ಎಂದವನೇ ಅವಳನ್ನು ಬರಸೆಳೆದು ತೋಳುಗಳಲ್ಲಿ ಉಯ್ಯಾಲೆ ಯಾಡಿಸಿದ"—(೧೦೨).

" ....ಇಷ್ಟೆ ನೀವು ಹೆಣ್ಣನ್ನು ಅರಿತಿರುವುದು. ಹೆಣ್ಣು ಬಯಸುವುದು ಆಭರಣಗಳನ್ನಲ್ಲ, ಪರಾಕ್ರಮಶಾಲಿಯಾದ ಗಂಡಸನ್ನು. ನೀವು ಚೆನ್ನಾಗಿ ಉಂಡು ವಜ್ರದ ಮೈಕಟ್ಟು ಪಡೆದಿರುವುದೇ ನಮಗಿಬ್ಬರಿಗೂ ಹಬ್ಬ......ಭಲೆ ಭಲೆ, ಭಮ್ಮಲೆ ಇಷ್ಟು ದಿನ ನೀನು ಮೂಗ್ದೇವಿಯಂತಿದ್ದೆ. ಈಗ ಒಮ್ಮೆಲೇ ವಾಗ್ದೇವಿಯಂತೆ ನುಡಿಯತೊಡಗಿದ್ದೀಯಲ್ಲಾ"(೧೦೫) "...ನೋಡಿ ಹುಲಿ ಹುಲಿ" ಎಂದು ಕೂಗಿದ. ಮಡದಿಯರಿಬ್ಬರೂ ಹೌಹಾರಿ ಪಂಪನನ್ನು ಬಾಚಿ ತಬ್ಬಿದರು. ಶ್ರೀಗಂಧ ಸೀಮೆಯ ತಂಗಾಳಿ ಹಿತವಾಗಿ ಬೀಸಿತು. ಶೃಂಗಾರ ಕಾವ್ಯಗಳ ರಸಲೀಲೆಯಂತೆ ಕಾದಲೆಯ ರೊಡನೆ ವನ್ಯಶ್ರೀಯಲ್ಲಿ ವಿಹರಿಸಿದ,"(೧೦೯) "ನೀವು ಕವಿ, ನಾವು ಕಿವಿ" ಎಂದು ಎಂದು ಭಮ್ಮಲೆ ಕಿಲಕಿಲನಾಡಿದಳು. ಮಡದಿಯರಿಬ್ಬರೂ ಗಂಡನ ರಸಿಕತೆಯಲ್ಲಿ ತೇಲಿಹೋದರು. ಬದುಕು ಹೂ ಎತ್ತಿದಂತೆನಿಸಿತು. ತಮ್ಮ ತವರೂರನ್ನೇ ಮರೆಯಿ ಸಿದ ಪತಿಯ ಒಲವಿನಲಿ ಮಿಂದರು. ಒಬ್ಬರ ಉಸಿರಿನಲಿ ಮತ್ತೊಬ್ಬರು ಬೆರೆತ ದಂಪತಿಗಳಿಗೆ ದಿನವೂ ಅನುರಾಗದ ಹೋಳಿಯಲ್ಲಿ ಜಲ ಕೇಳಿ, ನಿತ್ಯೋತ್ಸವ. ರತ್ಯೋತ್ಸವ.. .ಹೊಗೆಯಾಡುವ ಬಾದಾಮಿ ಹಾಲು ಹಿಡಿದು ಬಂದ ಭಮ್ಮಲೆ ಗಂಡನನ್ನು ಎಳಿಸಿದಳು—"ರವಿ ಉದಯಿಸಿದ್ದಾಯಿತು, ಕವಿ ಇನ್ನೂ ಉದಯಿ ಸಿಲ್ಲವಲ್ಲಾ" "ತೃಣಮಪಿ ನ ಚಲತಿ ತೇನ ವಿನಾ ಎಂದು ಹೆಂಡತಿಗೆ ಒಲವಿನುಡುಗೊರೆ ಕೊಟ್ಟ" (೧೩೫).

ಪಂಪನಿಗೆ ಸಂಸಾರ ಎಂದೂ ಸಾಕೆನಿಸಿರಲಿಲ್ಲ. ಸವಿದಷ್ಟೂ ಮುಗಿಯದ ಸಕ್ಕರೆಗಟ್ಟಿಯಾಗಿತ್ತು.......ಹೆಣ್ಣು ಮೈಸೆರೆದು ಬಂದರೆ ಸಾಲದು, ಅವಳು ಮನ ನೆರೆದೂ ಬರಬೇಕು. ಆಗಲೇ ಆಕೆ ಮನೆ ತುಂಬುವುದರ ಜೊತೆಗೆ ಮನವನ್ನೂ ತುಂಬುತ್ತಾಳೆ. ಅದರಂತೆ ಬದುಕು ಇನಿದಾದ ಹಾಲುಗಡಲಾಗುತ್ತದೆಂದು ಹೇಳು ವಾಗ, ಕಾದಂಬರಿಕಾರರು ಹೆಣ್ಣನ್ನು ಬರಿಯ ಭೋಗದ ವಸ್ತುವೆಂದು ಕಾಣದೆ, ವಾಚನಕಾರರು ಹೇಳಿದಂತೆ ಹೆಣ್ಣು ಸಾಕ್ಷಾತ್ 'ಕಪಿಲಸಿದ್ಧ ಮಲ್ಲಿಕಾರ್ಜುನಾ' ಎಂದು

ಅವಳಲ್ಲಿ ದೈವತ್ವವನ್ನು ಕಾಣುವಂತೆ ಮಾಡಿದ್ದಾರೆ. ಹೆಣ್ಣಿನ ಪ್ರೀತಿವಾತ್ಸಲ್ಯ ಸರಸ ದಾಂಪತ್ಯವೆಲ್ಲಿರುತ್ತದೆಯೋ ಆ ಮನೆ ನಂದನವನವಾಗಿರುತ್ತದೆ. ಆ ಪುರುಷನೂ ಮಹಾಪುರುಷನಾಗುತ್ತಾನೆಂಬುದನ್ನು ಸೂಚ್ಯವಾಗಿ ಪಂಪನಿಂದ ಹೇಳಿಸುತ್ತಾರೆ.

ಕಾದಂಬರಿಯ ಪೂರ್ವದಲ್ಲಿ ಪಂಪನ ಬೆಳವಣಿಗೆಗೆ ಬೇಕಾದ ಪೋಷಕಾಂಶಗಳನ್ನು ಅಂದರೆ ಅಜ್ಜ, ಅಪ್ಪಂದಿರು ಜೈನಧರ್ಮದ ಬಗೆಗೆ ಹೊಂದಿದ್ದ ಭಾವನೆಗಳು ಮತಾಂತರಗೊಂಡಿದ್ದು ಇತ್ಯಾದಿಗಳನ್ನು ಹೇಳುವಾಗ ಐತಿಹಾಸಿಕವಾಗಿರುವ ಸ್ಥಳನಾಮಗಳು ಕವಿಗಳ ಹೆಸರುಗಳು ಮೂಲದಲ್ಲಿದ್ದಂತವನ್ನೇ ಯಥಾವತ್ತಾಗಿ ಬಳಸಿದ್ದಾರೆ. ಕಾದಂಬರಿಯುದ್ದಕ್ಕೂ ಪಂಪ ಗುರುಹಿರಿಯರಿಗೆ ವಿನಯಶೀಲನಾಗಿ, ನಂಬಿದ ಸಾಮಂತನಿಗೆ ಸ್ವಾಮಿನಿಷ್ಠನಾಗಿ, ಕೈಹಿಡಿದ ಹೆಂಡಂದಿರಿಗೆ ರಸಿಕಶಿರೋಮಣಿಯಾಗಿ ತಾಯಿತಂದೆಯರಿಗೆ ಅಚ್ಚುಮೆಚ್ಚಿನ ಮಗನಾಗಿ ಚಿತ್ರಿಸಿರುವುದರಿಂದ ಓದಿದವರ ಮನಸ್ಸಿನಲ್ಲಿ ಪಂಪನ ಸೊಗಸಾದ ಮೂರ್ತಿ ಸದಾಕಾಲ ಅಚ್ಚಳಿಯದೆ ನಿಲ್ಲುವಂತಾಗಿದೆ. ಎಲ್ಲಾ ಪಾತ್ರಗಳು ಸಮಾಜದ ಒಂದು ಅಂಗವಾಗಿ ಮೂಡಿಬರುತ್ತವಲ್ಲದೆ, ಸಾಮಾಜಿಕ ಪ್ರಜ್ಞೆಯನ್ನೂ ಸಮಕಾಲೀನ ಜೀವನವನ್ನೂ ಪ್ರತಿನಿಧಿಸುತ್ತವೆ.

ಜೈನಧರ್ಮದ ಬಗ್ಗೆ, ಜಿನಮುನಿಗಳ ಬಗ್ಗೆ ಭಾವುಕತೆಯಿಂದ ಮಾತಾಡುವುದು ಕೆಲವೆಡೆ ಕಂಡುಬಂದರೂ ಇದೇ ಸರ್ವಶ್ರೇಷ್ಠ ಧರ್ಮ, ಮಿಕ್ಕ ಧರ್ಮಗಳೆಲ್ಲಾ ಹೀನಾಯವಾದವೆಂದು ಹೇಳುವುದಿಲ್ಲ. ಮನುಷ್ಯನಿಗೆ ಧರ್ಮದ ನ್ಯಾಯದ ಭಯವಿದ್ದಾಗಲೇ ಸನ್ಮಾರ್ಗದಲ್ಲಿ ನಡೆಯಲು ಸಾಧ್ಯವಾಗುವುದು. ಆ ಜಾತಿ ಈ ಜಾತಿ ಎಂದು ಭೇದವೆಣಿಸಬಾರದು. ಮಹಾಕವಿಯಾದವನು ಯಾವ ಜಾತಿಯಾದರೇನು? ಮುಂತಾಗಿ ಸಂಭಾಷಣೆಗಳಲ್ಲಿ, ಚರ್ಚೆಗಳಲ್ಲಿ, ವಾದವಿವಾದಗಳಲ್ಲಿ ಸರಿತಪ್ಪುಗಳನ್ನು ಜನತೆಯ ಮುಂದಿಡುತ್ತಾರೆ. ಸನ್ನಿವೇಶ ನಿರ್ಮಾಣ, ಸಂಗತಿಗಳ ಆಯ್ಕೆ ಮತ್ತು ಘಟನೆಗಳ ಸಂಬಂಧವೆಲ್ಲವೂ ಒಂದಕ್ಕೊಂದು ಪೂರಕವಾಗಿ ಬರುತ್ತವೆ. ಹಂಪನಾ ಅವರಿಗಿರುವ ಜೈನ ಸಾಹಿತ್ಯದ ವಿಸ್ತಾರವಾದ ಓದಿನಿಂದಾಗಿ, ಪಂಪನಂಥ ಮಹಾಕವಿಯ ಜೀವನ ವೃತ್ತಾಂತವನ್ನು ಮತ್ತು ಆ ಪರಿಸರದ ಬ್ರಹ್ಮಾಂಡ ಸಾಮಗ್ರಿಯನ್ನು, ಸಮಗ್ರವಾಗಿ ಕಾದಂಬರಿ ರೂಪದಲ್ಲಿ ಓದುಗರಿಗೆ ಉಣಬಡಿಸಲು ಸಾಧ್ಯವಾದದ್ದು. ಕಾದಂಬರಿ ಒಂದು ಜನಪ್ರಿಯ ಮಾಧ್ಯಮ. ಕೆಲವೇ ಪಂಡಿತಮಾನ್ಯರು ಪಂಪನನ್ನು ಅಧ್ಯಯನ ಮಾಡುವುದಕ್ಕಿಂತ, ಜೈನಧರ್ಮದಲ್ಲಿ ಬೆಳೆದವನಾಗಿ ಸಾಮಾನ್ಯ ಜನರೂ 'ಪಂಪ'ನ ಪರಿಚಯ ಮಾಡಿಕೊಳ್ಳಬೇಕಾದರೆ ಕಾದಂಬರಿ ಅತ್ಯುತ್ತಮ ಮಾರ್ಗವೆಂದು ಮನನ ಮಾಡಿಕೊಂಡು 'ಸವ್ಯಸಾಚಿ ಪಂಪ' ಎಂಬ ಈ ಕೃತಿಯನ್ನು ಕನ್ನಡಿಗರಿಗಿತ್ತು ಉಪಕೃತರಾಗಿದ್ದಾರೆ.

**ರಂಗಾರೆಡ್ಡಿ ಕೋಡಿರಾಂಪುರ**

## ಹೆಸರಿನ ಸೊಗಸು

ಡಾ. ಹಂಪ. ನಾಗರಾಜಯ್ಯನವರ 'ಹೆಸರಿನ ಸೊಗಸು' ಪುಸ್ತಕ ಹದಿಮೂರು ಪ್ರಬಂಧಗಳನ್ನು ಒಳಗೊಂಡ ಒಂದು ಸಂಕಲನ. ಇವು ಹೆಸರಿಗೆ ಪ್ರಬಂಧಗಳಾದರೂ ಪ್ರಬಂಧದ ವ್ಯಾಪ್ತಿಯನ್ನು ಮೀರಿದ ಗುಣ ಇಲ್ಲಿನ ಅನೇಕ ಲೇಖನಗಳಲ್ಲಿದೆ. ಕೆಲವು ತಿಳಿಹಾಸ್ಯದ ಲಲಿತ ಪ್ರಬಂಧಗಳಾದರೆ ಇನ್ನು ಕೆಲವು ಸಂಶೋಧನಾತ್ಮಕ ಅಂಶವನ್ನು ಲೇಪಿಸಿಕೊಂಡಿವೆ. ಇನ್ನು ಕೆಲವು ಸೃಜನಶೀಲತೆಯ ಅಂಶಗಳನ್ನು ಒಳಗೊಂಡಿರುವುದರಿಂದ ಅವರ ಅನೇಕ ಕೃತಿಗಳಲ್ಲಿ ಎದ್ದು ಕಾಣುವ ಸಂಕಲನವಾಗಿದೆ ಈ ಪುಸ್ತಕ.

'ಮನೆಯ ಮುಂದೆ ಬಂದು ಮಾರುವವರು' ಮತ್ತು 'ರಿಪೇರಿ' ಎಂಬ ಎರಡು ಪ್ರಬಂಧಗಳಲ್ಲಿ ದುಡಿಯುವವರ ಬಗ್ಗೆ ಮಾನವೀಯ ನೆಲೆಯಿಂದ ನೋಡಿದ ನೋಟವಿದೆ. ಮನೆ ಮನೆ ಹತ್ತಿರ ಹೂವು, ಹಾಲು, ಬೆಣ್ಣೆ, ಮೊಸರು ಮುಂತಾದು ವನ್ನು ಹೊತ್ತು ತಂದಾಗ ಕೊಳ್ಳುವವರು ಮಾಡುವ ಚೌಕಾಸಿ ಅದಕ್ಕೆ ಮಾರುವವರು ನೀಡುವ ಮಾಲಿನ ಯೋಗ್ಯತೆಯ ವೈಖರಿ ಇವುಗಳನ್ನು ತುಂಬಾ ಚನ್ನಾಗಿ ವಿವರಿಸಿದ್ದಾರೆ. 'ರಿಪೇರಿ' ಪ್ರಬಂಧ ಅದನ್ನು ಮಾಡುವವರ ಜಾಣ್ಮೆಯನ್ನು, ಅಂಥ ಜಾಣ್ಮೆಗೆ ತಕ್ಕ ಪ್ರೋತ್ಸಾಹ ಇಲ್ಲದಿರುವುದನ್ನೂ ಜೊತೆಗೆ ಅವರ ಬದುಕು ರಿಪೇರಿ ಕೆಲಸದಲ್ಲೇ ಪರ್ಯವಸನವಾಗಬೇಕಾ ಗಿರುವ ದುರಂತವನ್ನೂ ಕಣ್ಣು ಮುಂದಿಡುತ್ತದೆ. ರಿಪೇರಿ ಯವರನ್ನು ವರ್ಣಿಸಿರುವ ಪರಿ ಹೀಗಿದೆ : "ರಿಪೇರಿ... ರಿಪೇರಿ.... ಅಂತ ನಮ್ಮ ಮನೆ ಬೀದಿಯಲ್ಲಿ ಜೋರಾಗಿ ಕೂಗಿದ್ದು ಕೇಳಿ ನನ್ನ ವ್ಯಾಸಂಗ ಕೋಣೆಯಿಂದ ಹೊರಬಂದೆ. ಆ ಗಟ್ಟಿ ಕೂಗಿನ ಆಸಾಮಿಯನ್ನ ನೋಡಿದೆ, ಆತ ತನ್ನ ಬೆನ್ನಲ್ಲಿ ತನ್ನ ಒಟ್ಟು ಕುಟುಂಬವನ್ನೇ ಗಂಟುಕಟ್ಟಿ ಇಳಿಬಿಟ್ಟಿದ್ದ." ಈ ಸಾಲು ಗಳಲ್ಲಿರುವ ವಾಸ್ತವ ನಿರೂಪಣೆಯಲ್ಲಿ ಇಡೀ ರಿಪೇರಿಯವರು

ಎರಡು ಹೊತ್ತಿನ ಊಟಕ್ಕಾಗಿ ಪಡುವ ಕಷ್ಟ ಕೋಟಲೆಗಳನ್ನು ಧ್ವನಿಪೂರ್ಣವಾಗಿ ಹಿಡಿದಿಟ್ಟಿದ್ದಾರೆ. ಪ್ರಬಂಧ ಹಾಗೇ ನವಿರಾದ ಹಾಸ್ಯದೊಂದಿಗೆ ಮುಂದುವರೆದು ಕೊನೆ ಕೊನೆಗೆ ತಾತ್ವಿಕ ಚರ್ಚೆಯಲ್ಲಿ ಕೊನೆಗೊಳ್ಳುತ್ತದೆ. "ಬದುಕು ರಿಪೇರಿಯನ್ನು ಬಯಸುತ್ತಲೇ ಇರುತ್ತದೆ. ರಿಪೇರಿಯಿಲ್ಲದೆ ನಡೆಯುವ ಯಂತ್ರ ಅದು ವಿದ್ಯುತ್ ಚಾಲಿತವೇ ಆಗಿದ್ದರೂ ಅಪರೂಪ. ಗಡಿಯಾರ ನಿಂತಾಗ ಕೀ ಕೊಡುತ್ತೇವೆ. ಕೆಟ್ಟಾಗ ರಿಪೇರಿ ಮಾಡಿಸುತ್ತೇವೆ. ಈ ದೇಹಯಂತ್ರವೂ ಅಷ್ಟೆ. ಕೆಲವೊಮ್ಮೆ ದೌರ್ಜನ್ಯದ ದಾಳಿ ದಬ್ಬಾಳಿಕೆಗಳನ್ನು ಸಹಿಸಿಕೊಳ್ಳಲಾರದೆ ಸೊರಗಿದ ದೇಹಕ್ಕೆ ಪ್ರೀತಿ ವಾತ್ಸಲ್ಯ ವಿಶ್ವಾಸ ಆತ್ಮೀಯತೆಗಳ ರಿಪೇರಿ ಹಿತಸ್ಪರ್ಶದ ಅಗತ್ಯವಿರುತ್ತವೆ." ಸಾಧಾರಣ ಕೊಡೆ ರಿಪೇರಿ ಮಾಡಲು ಮನೆ ಮುಂದೆ ಬಂದ ರಿಪೇರಿಯವರ ಕಾಯಕ ಲೇಖಕರಿಗೆ ಬದುಕಿನ ಅನೇಕ ಹೊಸ ಸತ್ಯಗಳನ್ನು, ತತ್ವಗಳನ್ನು ಹೊಳೆಯಿಸಿ ಬಿಡುತ್ತದೆ. ಇಂಥ ಕಡೆ ಬರುವ ತಾತ್ವಿಕ ಚರ್ಚೆ ಒಟ್ಟು ಪ್ರಬಂಧ ಧ್ವನಿಗೆ ಪೂರಕ ವಾಗಿ ನಿಲ್ಲುತ್ತದೆ.

ಆದರೆ ಇಂಥ ತಾತ್ವಿಕ ಚರ್ಚೆ 'ಹೆಸರಿನ ಸೊಗಸು' ಎಂಬ ಪ್ರಬಂಧದಲ್ಲಿ ಭಾರವಾಗಿ ನಿಲ್ಲುತ್ತದೆ. ಇಡೀ ಸಂಕಲನಕ್ಕೆ ಹೆಸರು ಕೊಟ್ಟ ಪ್ರಬಂಧ ಇದಾದರೂ ಇತರೆ ಪ್ರಬಂಧಗಳಲ್ಲಿರುವ ಲವಲವಿಕೆಯ ಗುಣ, ನವಿರಾದ ಹಾಸ್ಯ ಈ ಪ್ರಬಂಧದಲ್ಲಿ ಇಲ್ಲ. ಜೊತೆಗೆ ಹೆಸರು ಉಳಿಸುವ ತಾತ್ವಿಕ ಚರ್ಚೆಯೂ ಪ್ರಬಂಧ ಧ್ವನಿಗೆ ಪೂರಕವಾಗಿಲ್ಲ.

'ಘಾಟಿ ಹುಡುಗರು' ಪ್ರಬಂಧದಲ್ಲಿ ಹೊಸದಾಗಿ ಆಯ್ಕೆಯಾಗಿ ಬಂದ ಇಲ್ಲವೆ ಆ ಊರಿಗೆ ವರ್ಗವಾಗಿ ಬಂದ ಅಧ್ಯಾಪಕರುಗಳು ಪಡುವ ಕಷ್ಟ, ಹುಡುಗರು ತಮಾಷೆ ಮಾಡಿ ಗೋಳು ಹೊಯ್ದುಕೊಳ್ಳುವ ರೀತಿ ಇವನ್ನೆಲ್ಲ ವಿವರಿಸಲಾಗಿದೆ. ಸಂದಿಗ್ಧದ ಸಮಯದಲ್ಲಿ ಉಪಾಧ್ಯಾಯರು ಜಾಣತನದಿಂದ ವರ್ತಿಸಿ ವಿದ್ಯಾರ್ಥಿ ಗಳನ್ನು ತಬ್ಬಿಬ್ಬುಗೊಳಿಸುವ ಘಟನೆಗಳು ಇಲ್ಲಿ ಚೇತೋಹಾರಿಯಾಗಿವೆ. ಒಮ್ಮೆ ಗುರುಗಳೊಬ್ಬರು ಗಲಾಟೆ ಮಾಡುವ ಹುಡುಗರ ತರಗತಿಗೆ ಹೋಗಬೇಕಿತ್ತು. ಅವರು ಹಳೆಯ ಕಾಲದ ಕಚ್ಚೆ, ಪೇಟ, ಕೋಟು ಹಾಕಿಕೊಂಡು ತರಗತಿ ಪ್ರವೇಶಿಸಿದ ಕೂಡಲೇ ಹುಡುಗರು "ಬನ್ನಿ ಶಾನುಭೋಗರೇ ದಯಮಾಡಿಸಿ ಜಮಾಬಂದಿಗೆ" ಎಂದು ಜೋರಾಗಿ ಚಪ್ಪಾಳೆ ತಟ್ಟಿದರು. ಆಗ ತಬ್ಬಿಬ್ಬಾದ ಗುರುಗಳು ಅಧೀರ ರಾಗದೆ ತಕ್ಷಣ ಚೇತರಿಸಿಕೊಂಡು "ಹೋ ತೋಟಿ ತಳವಾರ ಎಲ್ಲಾ ಇಲ್ಲೇ ಇದ್ದಾರೆ ಚಾವಡಿಗೆ ಬಂದಹಾಗೇ ಆಯಿತು ಪರವಾಗಿಲ್ಲ" ಎಂದರಂತೆ. ಇಂಥ ಘಟನೆಗಳು ಪ್ರತಿಯೊಬ್ಬ ಅಧ್ಯಾಪಕನ ಜೀವನದಲ್ಲೂ ರಾಶಿಗಟ್ಟಲೆ ಇರಬಹುದು. ಈ ಪ್ರಬಂಧದಲ್ಲಿ ಅಂಥ ಒಂದೆರಡನ್ನು ಹಿತಮಿತವಾಗಿ ಸ್ವತಃ ಅಧ್ಯಾಪಕರಾದ ಹಂಪನಾ ವಿವರಿಸಿದ್ದಾರೆ.

'ಸಭಾಕಂಪ' ಹಾಗೂ 'ಶಾಸ್ತ್ರಿಯ ಇಂಗ್ಲೀಷ್ ಪ್ರೇಮ'ಗಳಲ್ಲಿ ಅವರ ಅಚ್ಚು ಮೆಚ್ಚಿನ ವಿದ್ಯಾರ್ಥಿ ಶಾಸ್ತ್ರಿ ನಾಯಕನಾಗಿದ್ದಾನೆ. ಶಾಸ್ತ್ರಿಯ ಇಂಗ್ಲೀಷ್ ವ್ಯಾಮೋಹ ಕನ್ನಡ ವಾಕ್ಯಗಳನ್ನು ಇರುವ ಹಾಗೆಯೇ ಇಂಗ್ಲಿಷ್‌ಗೆ ತರ್ಜುಮೆ ಮಾಡುವ ವೈಖರಿ ಇವುಗಳನ್ನು ಪ್ರಸಂಗಗಳ ಮೂಲಕ ವರ್ಣಿಸಿದ್ದಾರೆ. ಒಮ್ಮೆ ಭೌತಶಾಸ್ತ್ರದ ಅಧ್ಯಾಪಕರು ಶಾಸ್ತ್ರಿಯನ್ನು What is vacuum ಎಂದು ಕೇಳಿದರಂತೆ. ಶಾಸ್ತ್ರಿಗೆ ಅದು ತನಗೆ ಗೊತ್ತಿದ್ದರೂ ಸದ್ಯಕ್ಕೆ ನೆನಪಾಗುತ್ತಿಲ್ಲವೆಂದು ಹೇಳುವುದನ್ನು ಇಂಗ್ಲಿಷಿನಲ್ಲೇ ತಿಳಿಸುವ ಪ್ರೇರಣೆಯಾಯಿತು. Sir that vacuum is in my head. I remember it Sir ಎಂದನಂತೆ. ಇಂಥ ಹತ್ತಾರು ಪ್ರಸಂಗಗಳ ನಾಯಕನಾದ ಶಾಸ್ತ್ರಿ ಹಾಗೂ ಹೀಗೂ ಪದವಿ ಮುಗಿಸಿ ಕಾಶಿಯಿಂದ ಬಾಹ್ಯ ಶಿಕ್ಷಣ ವ್ಯವಸ್ಥೆಯಲ್ಲಿ ಪಟ್ಟುಹಿಡಿದು ಇತಿಹಾಸದ ವಿಷಯದಲ್ಲಿ ಸ್ನಾತಕೋತ್ತರ ಪದವಿ ಪಡೆದು ಸುಳ್ಳು ವಯಸ್ಸು ಕೊಟ್ಟು ಕಾಲೇಜು ಅಧ್ಯಾಪಕನಾಗೇಬಿಟ್ಟನಂತೆ. ಒಮ್ಮೆ ಅವನ ಕಾಲೇಜಿಗೆ ವಿದೇಶಿ ತಜ್ಞರ ಸಂದರ್ಶನ ತಂಡ ಬಂದಿತ್ತಂತೆ. ಪ್ರಿನ್ಸಿಪಾಲರು ಸಹೋದ್ಯೋಗಿಗಳನ್ನು ಪರಿಚಯಿಸುತ್ತಿರುವಾಗ ಶಾಸ್ತ್ರಿಯ ಸರದಿ ಬಂದಾಗ He is a good student of history ಎಂದರಂತೆ. ಕೂಡಲೇ ಶಾಸ್ತ್ರಿ ಎದ್ದು ನಿಂತು No friends I am not a student I am a Lecture of history ಎಂದು ಹೇಳಿಬಿಟ್ಟನಂತೆ. ಇನ್ನೊಂದು ಪ್ರಬಂಧ 'ಸಭಾಕಂಪ'ದಲ್ಲಿ ಲೇಖಕರ ಅಚ್ಚುಮೆಚ್ಚಿನ ವಿದ್ಯಾರ್ಥಿ, ಶಾಸ್ತ್ರಿ ಚರ್ಚಾಸ್ಪರ್ಧೆಯಲ್ಲಿ ಭಾಗವಹಿಸುವ ಸಂದರ್ಭ ಬಂದಾಗ ಸಭಾಕಂಪನಕ್ಕೆ ಒಳಗಾಗಿ ತೀವ್ರ ಕಾಯಿಲೆ ಬಿದ್ದು ಕೊನೆಗೆ ಯಂತ್ರ ಮಂತ್ರ ತಾಯತ ಎಲ್ಲ ಮಾಡಿಸಿಕೊಂಡನಂತೆ. ಈ ಎರಡು ಪ್ರಬಂಧಗಳಲ್ಲೂ ಇಂದಿನ ವಿದ್ಯಾರ್ಥಿಗಳ ವಿದ್ಯಾಭ್ಯಾಸದ ಮಟ್ಟ. ಕಲಿಯುವುದರ ಬಗ್ಗೆ ಅವರಿಗಿರುವ ಅಸಡ್ಡೆ, ಬೊಗಳೆ ಸ್ವಭಾವ, ಒಣಜಂಭ ಇತ್ಯಾದಿಗಳನ್ನು ನವಿರಾಗಿ ನಿರೂಪಿಸಿದ್ದಾರೆ.

'ಕವಿಯ ಹೆಂಡತಿ' ಮತ್ತು 'ಪುಸ್ತಕ ಜೀವಿ' ಎಂಬ ಪ್ರಬಂಧಗಳು ಲಲಿತ ಪ್ರಬಂಧಗಳ ವ್ಯಾಪ್ತಿಯನ್ನು ಮೀರಿವೆ. ಅಂದರೆ ಗಂಭೀರ ಸಂಶೋಧನ ಪ್ರಬಂಧ ಗಳೆಂದೇನೂ ಅಲ್ಲ. ತಿಳಿಹಾಸ್ಯದ ಲೇಪನದಲ್ಲಿಯೇ ಹಳಗನ್ನಡದ ಕವಿಗಳ ಹೆಂಡತಿ ಯರು ಅನುಭವಿಸುತ್ತಿದ್ದ ಕೇಳುವ ಹಿಂಸೆಯನ್ನು ಹಳಗನ್ನಡದ ಪದ್ಯಗಳನ್ನು ಉದಾಹರಿಸುವ ಮೂಲಕ ವಿವರಿಸಿದ್ದಾರೆ. 'ಸರಸತಿಯನಬಲೆಯಂ' ಎಂಬ ರನ್ನನ ಪದ್ಯವನ್ನು ಅವರು ವಿವರಿಸುವುದು ಹೀಗೆ: ಸರಸ್ವತಿಯನ್ನೂ ಹಾಗೆಯೇ ಅಬಲೆ ಯನ್ನು—ಎಂದು ಪದ್ಯವನ್ನು ಬಿಡಿಸಿಕೊಂಡು ಈ ಅಬಲೆ ಕವಿಯ ಹೆಂಡತಿ ಎಂದು ಅನ್ವಯಿಸಿಕೊಂಡರೆ ಆಕೆ ಪಟ್ಟಿರುವ ಕಷ್ಟ ಈ ಪದ್ಯದಲ್ಲಿ ಅರ್ಥವಾಗುತ್ತದಂತೆ. ಇದು ಗಂಭೀರ ಸಂಶೋಧನೆಯೆಂದು ನಾವು ಪರಿಗಣಿಸಬೇಕಾದ್ದಿಲ್ಲ. ಲಲಿತ ಪ್ರಬಂಧಗಳ ವ್ಯಾಪ್ತಿಯಲ್ಲಿಯೇ ತಿಳಿಹಾಸ್ಯದ ಲೇಪನದಲ್ಲಿ ಹಳಗನ್ನಡದ ಪದ್ಯಗಳನ್ನು ಬೇರೆರೀತಿ ವ್ಯಾಖ್ಯಾನಿಸಲು ಸಾಧ್ಯವೆಂಬುದು ಇದರಿಂದ ಗೊತ್ತಾಗುತ್ತದೆ. ಕವಿಗಳ

ಪೆಂಡತಿಯರು ಸರಿಯಾಗಿಲ್ಲದಿದ್ದರೆ ಏನಾಗುತ್ತದೆ ಎಂಬುದಕ್ಕೆ ಡಾ. ಜಿ. ಎಸ್. ಶಿವರುದ್ರಪ್ಪನವರ ಒಂದು ಒಳ್ಳೆಯ ಕವಿತೆಯನ್ನು ಉದಾಹರಿಸುವುದರ ಮೂಲಕ ಪ್ರಬಂಧಕ್ಕೆ ಒಂದು ಮೌಲಿಕತೆಯನ್ನು ತಂದುಕೊಟ್ಟಿದ್ದಾರೆ.

'ಸಾಲಾವತಾರ' ಮತ್ತು 'ಧಿಮಾಕಿನ ಚೀಲ' ಈ ಸಂಕಲನದ ಇನ್ನೆರಡು ಒಳ್ಳೆಯ ಪ್ರಬಂಧಗಳು. ಸಾಲದ ಬಹುಮುಖ ದರ್ಶನ ಈ ಪ್ರಬಂಧದಲ್ಲಿ ನಮಗಾಗುತ್ತದೆ. ಈಗಾಗಲೇ ರೂಢಿಯಲ್ಲಿರುವ ಎಲ್ಲ ಸಾಲಗಳ ಪ್ರಯೋಜನ ತಿಳಿಸಿ ಜಾರಿಗೆ ಬಂದಿಲ್ಲದ ಕೆಲವು ಸಾಲಗಳನ್ನು ತಿಳಿಸಿದ್ದಾರೆ. ಇವರ ಅಚ್ಚುಮೆಚ್ಚಿನ ವಿದ್ಯಾರ್ಥಿ ಶಾಸ್ತ್ರಿ ಒಂದು ಸಲ ಕೆಲಸ ಹುಡುಕಿಕೊಂಡು ಹೊರಟಾಗ "ಪದವೀಧರನಾಗಿದ್ದರೆ ಮಾತ್ರ ಕೆಲಸ ಕೊಡುತ್ತೇನೆ" ಎಂಬ ಉತ್ತರ ದೊರೆಯಿತಂತೆ. ಆಗ "ನಾನಂತೂ ಪದವೀಧರನಾಗಲಿಲ್ಲ. ಬೇರೆ ಯಾರಾದರೂ ಪದವಿಯುಳ್ಳವರು ತಮ್ಮ ಪದವಿಯನ್ನು ಸಾಲ ಕೊಡುವಂತಿದ್ದರೆ ಎಷ್ಟು ಚೆನ್ನಾಗಿರುತ್ತಿತ್ತು" ಎಂದು ನಿಟ್ಟುಸಿರುಬಿಟ್ಟನಂತೆ. ರಾಗಗಳನ್ನು ಒತ್ತೆ ಇಟ್ಟು ಸಾಲ ತಂದ ಸಂಗೀತಗಾರರಿದ್ದಾರೆ. ರುದ್ರಭಟ್ಟ ಎಂಬ ಸಾಹಿತಿ ತನ್ನ ಬಳಿ ಏನೂ ಇಲ್ಲದಾಗ ತನ್ನ ಹೆಸರಿನ ನಾಲ್ಕು ಅಕ್ಷರಗಳಲ್ಲಿ 'ಭ' ಒಂದಕ್ಷರವನ್ನು ಒತ್ತೆಯಿಟ್ಟು ಸಾಲ ತಂದನಂತೆ. ಅಂದಿನಿಂದ ಅವನು ರುದ್ರಟ ಆದನಂತೆ. ಇಂಥ ಸಾಲಗಳ ಜೊತೆಗೆ ಈಗ ಪದವಿಯನ್ನು ಒತ್ತೆ ಇಟ್ಟು ಸಾಲ ತರುವ ಪರಿಪಾಠವೂ ಬೆಳೆಯಬಹುದು ಎಂಬುದನ್ನು ತಮಾಷೆಯಾಗಿ ಹೇಳಿದ್ದಾರೆ. 'ಧಿಮಾಕಿನ ಚೀಲ'ದ ಬಗ್ಗೆ ಬರೆಯುವಾಗ ಹಳ್ಳಿಯ ಹೆಂಗಸರ ಅಡಿಕೆಲೆ ಚೀಲವನ್ನು ಗಮನಿಸಿದ್ದಾರೆ. ಧಿಮಾಕಿಗೂ ಸ್ತ್ರೀಯರಿಗೂ ಇರುವ ಪರಸ್ಪರ ಸಂಬಂಧವನ್ನು ಹೀಗೆ ವರ್ಣಿಸುತ್ತಾರೆ: "ಧಿಮಾಕೆಂದರೆ ಅದೊಂದು ಮೋಹ ಬೆಡಗು. ಬೆಡಗಿಲ್ಲದ ಹುಡುಗಿ ಬೇಡವೇ ಬೇಡ. ಬೆಡಗು ದೂಷ್ಯವಲ್ಲ ಭೂಷಣ. ಮೋಹವಿಲ್ಲದವಳನ್ನು ಮೋಹಿಸುವುದಾದರೂ ಹೇಗೆ? ಆದ್ದರಿಂದ ಈ ಬೆಡಗನ್ನು ಮೋಹವನ್ನು ಚಿಮುಕಿಸುವ ಚೀಲ ಧಿಮಾಕಿನ ಚೀಲ" ಹೀಗೆ ಧಿಮಾಕನ್ನು ಪ್ರದರ್ಶಿಸುವ ಇಂಗ್ಲಿಷಿನ ವ್ಯಾನಿಟಿ ಶಬ್ದದ ನಿಷ್ಪತ್ತಿ ತಿಳಿಸಿ ನಿಘಂಟುಕಾರರು ಅದಕ್ಕೆ ಹೇಳಿರುವ ಅರ್ಥಗಳನ್ನು ಸೂಚಿಸಿ ಅವನ್ನೆಲ್ಲ ಈಗಿನ ಧಿಮಾಕಿನ ಚೀಲಕ್ಕೆ ಬಳಸಿದರೆ ಸೂಕ್ತವಾಗುವುದಿಲ್ಲ ಎಂಬುದನ್ನು ತಿಳಿ ಹಾಸ್ಯದೊಂದಿಗೆ ವಿವರಿಸಿದ್ದಾರೆ.

ಒಟ್ಟಾರೆ ಸೃಜನಶೀಲತೆಯ ಅಂಶಗಳ ಜೊತೆಗೆ ತೀರ ಗಂಭೀರವಲ್ಲದ ಸಂಶೋಧನಾತ್ಮಕ ಸಾಮಗ್ರಿಯನ್ನು ಒಳಗೊಂಡ ಇಲ್ಲಿನ ಪ್ರಬಂಧಗಳು ಓದಿಸಿಕೊಂಡು ಹೋಗುವ ಗುಣವನ್ನು ಪಡೆದಿವೆ. ಹಂಪನಾ ಅವರ ಲವಲವಿಕೆಯ ಗದ್ಯದ ಪರಿಚಯವನ್ನು ಇಲ್ಲಿನ ಪ್ರಬಂಧಗಳು ಮಾಡಿಕೊಡುತ್ತವೆ.

ನೀಲಮ್ಮ ಕತ್ನಳ್ಳಿ

## ಪೈಯವರ ಮೂರು ನಾಟಕಗಳು

ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾಗಿ ಕಳೆದ ಏಳು ವರ್ಷಗಳ ಅವಧಿಯಲ್ಲಿ ಶಕ್ತಿ ಮೀರಿ ಶ್ರಮಿಸಿ, ಅಭೂತಪೂರ್ವಕ ವಾದ ಸೇವೆಯನ್ನು ಕನ್ನಡ ಸಾಹಿತ್ಯ ಪರಿಷತ್ತಿನ ಮೂಲಕ ಕನ್ನಡ ನಾಡು ನುಡಿಗೆ ಸಲ್ಲಿಸಿ, ಕನ್ನಡನಾಡಿನ ಜನರ ಮನವನ್ನು ಗೆದ್ದ ಶ್ರೀಯುತ 'ಹಂಪನಾ' ಅವರು ಬಹುಮುಖ ವ್ಯಕ್ತಿತ್ವ ವನ್ನು ಹೊಂದಿದವರು. ಶ್ರೀಯುತರು ಹಿರಿಯ ಸಾಹಿತಿಗಳು, ಒಳ್ಳೆಯ ವಿಮರ್ಶಕರು, ಶ್ರೇಷ್ಠ ವಾಗ್ಮಿಗಳು, ಒಳ್ಳೆಯ ಕಾರ್ಯ ಕರ್ತರು. ಎಲ್ಲಕ್ಕೂ ಮಿಗಿಲಾಗಿ ಸಹೃದಯಿಗಳು, ಹಸನ್ಮುಖಿ ಗಳು. ಇಂಥವರನ್ನು ಗೌರವಿಸಿ ಅಭಿನಂದನಾ ಗ್ರಂಥವೊಂದನ್ನು ಅರ್ಪಿಸುತ್ತಿರುವುದು ಸಂತೋಷದ ವಿಷಯ.

ರಾಷ್ಟ್ರಕವಿ ಗೋವಿಂದ ಪೈಯವರು ಬರೆದ 'ತಾಯಿ', 'ಹೆಬ್ಬೆರಳು' ಮತ್ತು 'ಚಿತ್ರಭಾನು'ಗಳೆಂಬ ಮೂರು ನಾಟಕ ಗಳನ್ನು ಹಂಪನಾ ಅವರು ಆಳವಾಗಿ ಅಭ್ಯಸಿಸಿ, ಪೈ ಅವರ ಸ್ಮಾರಕೋತ್ಸವದಂದು ಅವರು ಮಾಡಿದ ವಿಮರ್ಶಾತ್ಮಕ ಭಾಷಣವನ್ನು ಕಿರು ಹೊತ್ತಗೆಯ ರೂಪದಲ್ಲಿ 'ಪೈ ಸ್ಮಾರಕ ಪ್ರಕಾಶನ ಕೇಂದ್ರ'ದಿಂದ ಪ್ರಕಟಿಸಿದ್ದಾರೆ.

'ತಾಯಿ' ನಾಟಕ ಸ್ವತಂತ್ರ ಕೃತಿಯಲ್ಲ – ಅನುವಾದ ನಾಟಕ. ಅಕ್ಕ–ತಂಗಿ–ತಂಗಿಯ ಗಂಡು ಮಗು ಈ ಮೂರೇ ಪಾತ್ರಗಳನ್ನೊಳಗೊಂಡ ತಾಯಿ ನಾಟಕ ತೀರ ಚಿಕ್ಕದು. ೯ ಪುಟಗಳದ್ದು. ಅಕ್ಕ ಮಲ್ಲಿಗೆ, ತಂಗಿ ಸಂಪಗೆ. ತದ್ವಿರುದ್ಧ ಸ್ವಭಾವದವರು. ಅಕ್ಕ ಮಲ್ಲಿಗೆ ತಂಗಿಗಾಗಿ ತನ್ನ ಬಾಳನ್ನೇ ಮುಡಿಪಾಗಿಟ್ಟ ಮಹಾತ್ಯಾಗಿ. ತಾನು ಪ್ರೀತಿಸಿದವನು ತನ್ನ ತಂಗಿಯನ್ನೇ ಮದುವೆಯಾದರೂ ಮೌನವಾಗಿ ನೋವನ್ನು ನುಂಗಿದವಳು. ತನ್ನ ಅಂತರಂಗದ ತೊಳಲಾಟವನ್ನು ಒಮ್ಮೆಯೂ ಬಾಯಿ ಬಿಟ್ಟಾಡದೇ ತಂಗಿಯ ಸಂಸಾರ ಸುಖವಾಗಿ ಸಾಗಲೆಂದು

ಹಾರೈಸಿದ ಹಿರಿಯ ಜೀವಿ. ಇದಕ್ಕೆ ವಿರುದ್ಧವಾಗಿ ತಂಗಿ ಸಂಪಗೆ ಸದಾ ಪ್ರಫುಲ್ಲೆ, ಸುಂದರಿ. ಆದರೆ ಪ್ರೇಮವಿಲ್ಲದ ಪತ್ನಿ, ಮಮತೆಯಿಲ್ಲದ ತಾಯಿ. ಈ ಮಧ್ಯೆ ಸಂಪಗೆ ವಿಧವೆಯಾದರೂ ಅದನ್ನು ಅಷ್ಟಾಗಿ ಅವಳು ಅನುಭವಿಸುವುದಿಲ್ಲ. ಅತಿ ಜ್ವರದಿಂದ ನರಳುತ್ತಿರುವ ಮಗ ತುಂಬಿಯನ್ನು ತನ್ನ ಅಕ್ಕನಿಗೆ ನೋಡಿಕೊಳ್ಳಲು ಹೇಳಿ, ವರ್ಷಕ್ಕೊಮ್ಮೆ ಬರುವ ಜಾತ್ರೆಯ ವಿನೋದ ನೋಡಲು ಹೋಗುತ್ತಾಳೆ. ಆಗ ಅವಳ ಅಕ್ಕ ಮಲ್ಲಿಗೆ ತಬ್ಬಲಿ ಶಿಶುವಿಗೆ ತಕ್ಕ ಆರೈಕೆ ಮಾಡಿದರೂ ಅದು ಮರಣದ ಮಹಾಮನೆಗೆ ಅತಿಥಿಯಾಗಿ ಹೋಯಿತು. ಸಂಪಗೆ ಜಾತ್ರೆಯಲ್ಲಿ ಮಗನಿಗಾಗಿ ಬಗೆ ಬಗೆಯ ಆಟಿಕೆಗಳನ್ನು ಕೊಂಡು ಆತುರವಾಗಿ ಹಿಂದಿರುಗುತ್ತಾಳೆ. ಅಲ್ಲಿಗೆ ನಾಟಕ ಮುಗಿಯುತ್ತದೆ.

ಲೋಕದಲ್ಲಿ ತಾಯಿ ಯಾರು ? ಹೆತ್ತವಳೇ ತಾಯಿಯೇ ? ಕೇವಲ ಹಡೆದ ಮಾತ್ರಕ್ಕೆ ತಾಯಿಯ ಕರ್ತವ್ಯ ತೀರಿತೆ ? ಮಕ್ಕಳನ್ನು ತಾಯಿಯಲ್ಲದ ಇತರರೂ ಪ್ರೀತಿಸಲಾರರೇ ? ಎಂಬ ಹಲವು ಪ್ರಶ್ನೆಗಳಿಗೆ ತಾಯಿ ನಾಟಕ ಉತ್ತರಿಸುತ್ತದೆ. ತುಂಬಿಗೆ ನಿಜವಾದ ತಾಯಿ ಯಾರು ? ಹೆತ್ತ ಸಂಪಗೆಯೆ ? ಅಥವಾ ನಿಜವಾದ ತಾಯಿಯ ಮಮತೆಯನ್ನು ನೀಡಿದ ಮಲ್ಲಿಗೆಯ ? ಇಲ್ಲಿ ಮಲ್ಲಿಗೆಯ ಪಾತ್ರ ಓದುಗರ ಗಮನ ಸೆಳೆಯುತ್ತದೆ. ಮಲ್ಲಿಗೆ ಆ ಹೆಸರಿನ ಹೂವಿನಷ್ಟೇ ಕೋಮಲ—ಕಮನೀಯ, ಪರೋಪಕಾರಿ—ಅಷ್ಟೇ ಆಕರ್ಷಕ ವ್ಯಕ್ತಿತ್ವ ಉಳ್ಳವಳು. ತಾಯಿಯ ಮಮತೆ ತಪ್ಪಿದ, ತಂದೆಯಿಲ್ಲದ ತಬ್ಬಲಿ ಮಗು 'ತುಂಬಿ'ಗೆ ಮಲ್ಲಿಗೆ ತಾನೇ ತಾಯಿಯಾಗುವಳು. ಆ ಮಗು ಹೆಸರು ತಾಯಿ. ಇಲ್ಲಿ ಸಂಪಗೆಯ ಸ್ವಭಾವ ತೀರ ವಿಚಿತ್ರವೆನಿಸುತ್ತದೆ. ಸಾಮಾನ್ಯವಾಗಿ ಭಾರತೀಯ ತಾಯಿ ಹೀಗಿರಲಾರಳು. ಜೀವನದ ವಿಪರ್ಯಾಸ ! ಒಂದಿದ್ದರೆ ಮತ್ತೊಂದಿಲ್ಲ. ಮಲ್ಲಿಗೆಯಲ್ಲಿ ಪ್ರೀತಿಸುವ ಹೃದಯ ಇದೆ. ಆದರೆ ತನ್ನದಾದ ಪತಿ, ಮಕ್ಕಳಿಲ್ಲ. ಆದರೆ ಸಂಪಗೆಗೆ ಗಂಡ–ಮಕ್ಕಳಿದ್ದರೂ ಪ್ರೀತಿಸುವ ಹೃದಯವಿಲ್ಲ. ಪ್ರೀತಿಯ ಬೆಲೆ ಗೊತ್ತಿಲ್ಲ.

ಹೀಗೆ 'ತಾಯಿ' ನಾಟಕ ಚಿಕ್ಕದಾದರೂ ಚೊಕ್ಕವಾಗಿದ್ದು ಬೋಧಪ್ರದವಾಗಿದೆ.

ಇನ್ನು ಎರಡನೆಯ ನಾಟಕ 'ಹೆಬ್ಬೆರಳು' ಪೌರಾಣಿಕ ನಾಟಕ. ೬೨ ಪುಟಗಳದ್ದು. ಇಲ್ಲಿ ನಾಲ್ಕು ಪಾತ್ರಗಳು ಮತ್ತು ಗೊಂದಳದವರು ಬರುತ್ತಾರೆ. ತಾಯಿ ನಾಟಕದ ಭಾಷೆ ಹೊಸಗನ್ನಡವಾದರೆ ಇದರ ಭಾಷೆ ಹಳಗನ್ನಡ. ಅದು ಅನುವಾದ ಕೃತಿ, ಇದು ಸ್ವತಂತ್ರ ಕೃತಿ.

'ಹೆಬ್ಬೆರಳು' ನಾಟಕದ ವಸ್ತು ಮಹಾಭಾರತದ ೧೪೨ನೆಯ ಅಧ್ಯಾಯದಿಂದ ಎತ್ತಿಕೊಂಡದ್ದು. ಆದರ್ಶ ಶಿಷ್ಯನೆಂದು ಹೆಸರಾದ ಏಕಲವ್ಯನ ಕಥೆ ಬರುತ್ತದೆ.

'ಕುರುಕುಲದರಸರ ನಗರವಾದ ಹಸ್ತಿನಾವತಿಯಿಂದ ಸುಮಾರು ಹತ್ತು ಗ್ರಾಮದ ದೂರದ ಗಂಗೆಯ ತಡಿಯಲ್ಲಿನ, ಭಿಲ್ಲರ ಹಳ್ಳಿಗಾಡಿನ, ಚಿಕ್ಕ ವಯಸ್ಸಿನ ಏಕಲವ್ಯ ತನ್ನ ಸಾಕು ತಂದೆಯಾದ ಹಿರಣ್ಯಧನುವಿನಲ್ಲಿ, ಬಿಲ್ಲೋಜನಾದ ದ್ರೋಣರ ಬಳಿ ಹೋಗಿ ವಿದ್ಯೆ ಕಲಿತು ಬರಲು ಅಪ್ಪಣೆ ಕೇಳುತ್ತಾನೆ. ಆರ್ಯರಾದ ಅವರು ಅನಾರ್ಯ ರಾದ ನಮಗೆ ವಿದ್ಯೆ ಕಲಿಸಲು ಒಪ್ಪಲಿಕ್ಕಿಲ್ಲ. ಹೋಗಿ ಅವಮಾನಿತನಾಗಿ ಬರುವುದು ಬೇಡವೆಂದು ಹೇಳಿದರೂ ಕೇಳದೆ ಹಟ ಮಾಡಿ ಕಾಡಿ–ಬೇಡಿ ಅಪ್ಪಣೆ ಪಡೆದು, ದ್ರೋಣರಲ್ಲಿಗೆ ಏಕಲವ್ಯ ಹೋಗುತ್ತಾನೆ. ಆದರೆ ದ್ರೋಣಾಚಾರ್ಯರು ಏಕಲವ್ಯನಿಗೆ ವಿದ್ಯಾದಾನ ಮಾಡಲು ಹಿಂಜರಿಯುವರು. ಆದರೂ ಏಕಲವ್ಯನ ಒತ್ತಾಯಕ್ಕೆ, ಆತನಲ್ಲಿರುವ ಕಲಿಯುವ ಹಂಬಲಕ್ಕೆ ಕಟ್ಟುಬಿದ್ದು, 'ಅವನ ಇಷ್ಟ ಸಿದ್ಧಿಸಲೆಂದು' ಆಶೀರ್ವಾದ ಮಾಡಿ ಕಳಿಸುತ್ತಾರೆ. ಏಕಲವ್ಯ ಅಷ್ಟರಿಂದಲೇ ಸಂತುಷ್ಟನಾಗಿ, ತನ್ನ ಊರಿಗೆ ಬಂದು, ದ್ರೋಣರ ಬೊಂಬೆ ಮಾಡಿಟ್ಟುಕೊಂಡು, ಬಿಲ್ಲ ಬಿಲ್ವಿದ್ಯೆಯಲ್ಲಿಯೂ ಪರಿಣತನಾಗುವನು. ಗುರುಕಾಣಿಕೆ ನೀಡಲು ತಾನೇ ಹೋಗಬೇಕೆನ್ನುವಷ್ಟರಲ್ಲಿ ಗುರುಗಳೇ ತಮ್ಮ ಶಿಷ್ಯರೊಂದಿಗೆ ಭಿಲ್ಲರ ಬೀಡಿಗೆ ಬರುವರು. ಏಕಲವ್ಯನ ಕೌಶಲ ಕಂಡು ದ್ರೋಣರ ನೆಚ್ಚಿನ ಶಿಷ್ಯ ಅರ್ಜುನ ಕರುಬುವನು–ಗುರುವಿನೊಡನೆ ದೂರು ವನು. ದ್ರೋಣರು ಏಕಲವ್ಯನ ಬಳಿ ಮಾತನಾಡಿ ಆತನ ಹೆಬ್ಬೆರಳನ್ನು ಗುರುದಕ್ಷಿಣೆ ಯಾಗಿ ಬೇಡುವರು. ದ್ರೋಣರ ಮಾತು ಮುಗಿಯುತ್ತಿದ್ದಂತೆಯೇ ಮುಗ್ಧ ಮನಸ್ಸಿನ ಏಕಲವ್ಯ ತನ್ನ ಬಲಗಯ್ಯ ಹೆಬ್ಬೆರಳನ್ನು ಕಡಿದು, ಗುರುವಿನಡಿಯಲ್ಲಿಡು ವನು. ಎಲ್ಲರೂ ವಿಸ್ಮಯದಿಂದ ಮರವಟ್ಟು ನಿಲ್ಲುವರು. ಅಲ್ಲಿಗೆ ನಾಟಕ ಮುಕ್ತಾಯ ಗೊಳ್ಳುವುದು.

ಏಕಲವ್ಯನೇ ಈ ನಾಟಕದ ನಾಯಕ—ಅವನಿನ್ನೂ ಚಿಕ್ಕವನಾದರೂ ಶೂರ— ಮರಣಕ್ಕೆ ಅಂಜದ ವೀರ. ಅವನಿಗಿರುವ ಒಂದೇ ಬಯಕೆಯೆಂದರೆ ಇನ್ನೂ ಹೆಚ್ಚಿನ ಬಿಲ್ವಿದ್ಯೆ ಕಲಿಯಬೇಕೆಂಬ ವಿದ್ಯಾದಾಹ. ಭಿಲ್ಲರ ಪಾಳಯದಲ್ಲಿ ಎಲ್ಲರಿಗಿಂತ ಬಲ್ಲಿದ ನಾದರೂ ಅವನಿಗೆ ಅಹಂಕಾರವಾಗಲೀ, ಇನ್ನೇನೂ ಕಲಿಯುವುದೇ ಇಲ್ಲವೆಂಬ ಅಲ್ಪತೃಪ್ತಿಯಾಗಲೀ ಇಲ್ಲ. ಹಿರಿಯರಲ್ಲಿ ವಿನಯವಿದೆ. ಆದರೆ ಅವನಿಗೆ ಎಳ್ಳಷ್ಟೂ ಭಯವಿಲ್ಲ. 'ಅನಾರ್ಯನಾದ ನಿನಗೆ ವಿದ್ಯೆ ಕಲಿಸಲಾರೆ'ನೆಂದು ದ್ರೋಣರು ಹೇಳಿ ದಾಗ ಪ್ರತಿಯಾಗಿ ಏಕಲವ್ಯ 'ಅನಾರ್ಯರು ಮನುಷ್ಯರಲ್ಲವೇ ಜೀಯ ?' ಎಂದು ನಮ್ರತನದಿಂದ ಕೇಳುತ್ತಾನೆ.

ಅಷ್ಟಕ್ಕೂ ಏಕಲವ್ಯ ಬೇಸರಪಡದೆ, ನಿರಾಶನಾಗದೆ, 'ತಾವೆನಗೆ ಕಲಿಸದಿರಿ, ತಮ್ಮ ಅಡಿಯೂಳಿಗದೊಳೆಡೆ ಇತ್ತರದೇ ಸಾಕು !' ಎಂದು ದೈನ್ಯನಾಗಿ ಯಾಚಿ ಸುವನು. "ಗುರುವನು ನೆನೆದರೆ ಮನಸೇ ಗುರು ತಾನಾಗುವುದು" ಎಂದು ಸಮಾ ಧಾನ ಪಡುವನು.

ಏಕಲವ್ಯನದು ಏಕನಿಷ್ಠೆ, ಅವನು ಆದರ್ಶ ಶಿಷ್ಯ. ಅವನು ತೋರಿದ ಅವ್ಯಾಜವಾದ, ಅಹೇತುಕವಾದ ಗುರುಭಕ್ತಿ, ನಿಸ್ವಾರ್ಥ ತ್ಯಾಗ, ಅನಂತ ಕಾಲ ನಿಲ್ಲುವ ದಿವ್ಯ ಸಂದೇಶ. ಉತ್ತಮ ಶಿಷ್ಯನಾದ ಏಕಲವ್ಯ, ಶಿಷ್ಯರು ಗುರುವಿನೊಡನೆ ಇಟ್ಟುಕೊಳ್ಳಬೇಕಾದ ಆದರ್ಶ ಬಾಂಧವ್ಯಕ್ಕೊಡ್ಡಿದ ಮಹಾ ಪ್ರತಿಮೆ. ಅವನ ಬದುಕು ಇಂದಿನ ತರುಣ ಜನಾಂಗಕ್ಕೆ ದಾರಿದೀಪವಾಗಿದೆ.

'ಚಿತ್ರಭಾನು' ಎಂಬ ನಾಟಕ ಒಂದು ದಿನದಲ್ಲಿ, ಸುಮಾರು ಐದು ಗಂಟೆಯ ಅವಧಿಯಲ್ಲಿ ನಡೆಯುವ ದುರಂತ ನಾಟಕ. ಭಾರತದ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಹೋರಾಡಿ, ತನ್ನನ್ನೇ ಬಲಿ ಕೊಟ್ಟ ಮಹಾತ್ಮನೊಬ್ಬನ ಕಥೆಯಿದು.

ಈ ನಾಟಕದ ನಾಯಕ ವೇಣುಗೋಪಾಲ ತರುಣ, ಸಾಹಸಿ, ಪರೋಪಕಾರಿ, ಆಪದ್ರಕ್ಷಕ, ಉದಾರಿ, ದೇಶಪ್ರೇಮಿ, ತ್ಯಾಗಜೀವಿ.

ವೇಣುವಿನ ದೃಷ್ಟಿಯಲ್ಲಿ ತನ್ನ ಹೆತ್ತತಾಯಿಗಿಂತಲೂ ಹೊತ್ತ ಭೂತಾಯಿ ದೊಡ್ಡವಳು, ತನ್ನ ಮುದಿ ತಾಯಿಯನ್ನು ವಿಧಿಯಿಲ್ಲದೆ ಮರೆತು ದೇಶಕ್ಕಾಗಿ ದೇಹವನ್ನು ದಾನ ಮಾಡಿದ್ದಾನೆ. ತಾನು ಪ್ರೀತಿಸಿದ ಒಲವಿನ ರಾಣಿ ಜಾಹ್ನವಿ, ಮುದ್ದು ಜಾನುವನ್ನು ಬಿಟ್ಟು, ನಾಡಿಗಾಗಿ ಕಂಕಣಬದ್ಧನಾಗಿದ್ದಾನೆ. ಸ್ವಾತಂತ್ರ್ಯ ಸಂಗ್ರಾಮದಲ್ಲಿ ವೇಣುವಿಗೆ ಪ್ರಾಣ ತೃಣ ಸಮಾನವಾಗಿದೆ. ಅವನಿಗೆ ಸಾವಿನಲ್ಲೂ ಸರಸ. ತನ್ನನ್ನು ಕೊಲ್ಲಲು 'ಕೊತ್ತವಾಲನು' ಮುತ್ತಿಗೆ ಹಾಕಿದಾಗ, ವೇಣು ಚಲಿತನಾಗದೆ, ನಿರ್ಲಿಪ್ತನಾಗಿ ನುಡಿಯುತ್ತಾನೆ. 'ಇದೋ ! ತಾಯಿ ದಿಬ್ಬಣ ಬಂತು !' ವೇಣು ನಗುನಗುತ್ತಲೇ ಸಮಾಧಾನಚಿತ್ತದಿಂದ ಸಾವನ್ನು ಆಹ್ವಾನಿಸಿ ವೀರ ಅಭಿಮನ್ಯುವಿನಂತೆ, ತುಂಬು ತಾರುಣ್ಯದಲ್ಲಿಯೇ ಸ್ವಾತಂತ್ರ್ಯ ಸಮರದಲ್ಲಿ ಸಾಯುವನು. ವೇಣುವಿನ ಶವವನ್ನು ಅವನ ತಾಯಿ ಯಶೋಧೆ ಜಾಹ್ನವಿಗೆ ತೋರಿಸುತ್ತ ಹೇಳುವಳು. 'ನೋಡು ಜಾನು, ವೀರ ಅಭಿಮನ್ಯುವಿನಂತೆ ಮಲಗಿದ್ದಾನೆ ನಮ್ಮ ವೇಣು, ಏನು ವೀರ ಠೀವಿ !" ವೀರ ಮಾತೆಯಾದ ಯಶೋಧೆ ಮಗನ ಸಾವಿಗಾಗಿ ದುಃಖಿಸಲಾರಳು.

ವೃದ್ಧಾಪ್ಯದಲ್ಲಿ ತನಗೆ ಆಸರೆಯಾಗಿ, ಊರೆಗೋಲಾಗಿ, ಇರಬೇಕಾದ ಒಬ್ಬನೇ ಮಗ ಬಿಡುಗಡೆಯ ಹೋರಾಟದಲ್ಲಿ ಕೊನೆಯುಸಿರೆಳೆದರೂ "ವೀರಸ್ವರ್ಗವನ್ನು ಸೇರುವವರಿಗೆ ಅಳಲಾಗದು !" ಎಂದು ದುಃಖವನ್ನು ನುಂಗುತ್ತಾಳೆ. ಎಂಥ ಪಕ್ವ ಹೃದಯ ! 'ಮರುಬಂಧನದಲ್ಲಿಯೂ ನನ್ನ ವೇಣುವನ್ನು ನನ್ನ ಹೊಟ್ಟೆಯಲ್ಲೇ ಹುಟ್ಟಿಸು. ಆದರೆ ಹೀಗೆ ಮುಗುಳಲ್ಲಿ ಮಾತ್ರ ಉದುರಿಸಬೇಡ.' ಎನ್ನುವುದಷ್ಟೇ ಅವಳ ಅಂತಿಮ ಆಸೆ.

ನೀನು ಒಬ್ಬಳೇ ಆದಿಯಲ್ಲ ತಾಯಿ, ನಿನಗಿನ್ನು ಯಾರಿದ್ದಾರೆ ? ಎಂದು ಕೇಳಿದರೆ, 'ಏಕಪ್ಪಾ ! ಹಾಗೆ ಅಂತೀರಿ ? ದೇವರಿಲ್ಲವೇ ? ನನ್ನ ಜೊತೆಗೆ ? ಎನ್ನುತ್ತಾಳೆ. ಇದು ಅವಳ ದೈವನಿಷ್ಠೆ.

ಜಾಹ್ನವಿ ಲೋಕದ ಅನುಭವವಿಲ್ಲದ ಹಸುಗೂಸಿನಂಥವಳು. ಹುಟ್ಟುತ್ತಲೇ ತಂದೆ-ತಾಯಿಯರನ್ನು ಕಳೆದುಕೊಂಡು ತಬ್ಬಲಿಯಾಗಿ ಬೆಳೆದ ನಿರ್ಭಾಗ್ಯೆ. ಮಾಧವನನ್ನು ರಾಧ ಮೋಹಿಸಿದಂತೆ ಜಾಹ್ನವಿ ವೇಣುವನ್ನು ಪ್ರೀತಿಸಿದ್ದಾಳೆ, ವೇಣುವಿನೊಡನೆ ಅವಳಿಗೆ ಇನ್ನೂ ವಿವಾಹವಾಗಿಲ್ಲದಿದ್ದರೂ ಅವನನ್ನು ಅಂತಃಸಾಕ್ಷಿಯಾಗಿ ತನ್ನ ಪತಿಯೆಂದೇ ತಿಳಿದಿದ್ದಾಳೆ. 'ನನ್ನ ವೇಣು ದೇವರು' ಎಂದು ಹೇಳುವಳು. ವೇಣು ಇಲ್ಲದೆ ಅವಳು ಜೀವಿಸಲಾರಳು, ವೇಣುವಿನ ಸಾವನ್ನು ಸಹಿಸದೆ, ಮನೆಯ ಹಿಂದಿರುವ ಬಾವಿಗೆ ಹಾರಿ ಪ್ರಾಣ ಬಿಡುವಳು. ವೇಣುವಿನ ಶವದ ಜೊತೆ ಜಾಹ್ನವಿಯ ಶವವನ್ನು ಮಲಗಿಸುವರು. ಯಶೋಧೆಯ ಕಣ್ಣಿಗೆ ಆ ದೃಶ್ಯ - 'ನೀವೀಗೆ ಮದುವೆಯಾದ ಹೊಸ ವಧೂವರರಂತೆ ಏನು ಸೊಗಸಾಗಿ ಜತೆಯಲ್ಲಿ ಮಲಗಿದ್ದೀರಿ !' ಎಂದು ಉದ್ಗರಿಸುತ್ತಾಳೆ. ಹೀಗೆ ನಾಟಕ ಮುಕ್ತಾಯವಾಗುತ್ತದೆ.

ಹೀಗೆ ಪೈ ಆವರ ಮೂರು ಸುಂದರ ನಾಟಕಗಳ ವಿಮರ್ಶೆ ಇಲ್ಲಿದೆ. ಹಂಪನಾ ಅವರ ವಿಮರ್ಶನ ಶಕ್ತಿಗೆ ಇದೊಂದು ಉತ್ತಮ ನಿದರ್ಶನವಾಗಿದೆ. ಅವರು ಒಳ್ಳೆಯ ವಿಮರ್ಶಕರೆಂದು ನಿರ್ಧರಿಸಲು ಇದೊಂದೆ ಕೃತಿ ಸಾಕು. ಕಿರಿಯ ವಿಮರ್ಶಕರಿಗೆ ಇದು ಮಾರ್ಗದರ್ಶನವಾಗಿದೆ.

ಎಚ್. ವಿ. ನಾಗೇಶ್

# ವಿ. ಕೃ. ಗೋಕಾಕ್

ಪ್ರೊ. ಹಂಪ. ನಾಗರಾಜಯ್ಯನವರು ಬರೆದ 'ವಿ. ಕೃ. ಗೋಕಾಕ್' ಎಂಬ ಚಿಕ್ಕ ಹೊತ್ತಿಗೆ ಬೆಂಗಳೂರು ವಿಶ್ವವಿದ್ಯಾಲಯದ ಪ್ರಸಾರಾಂಗದಿಂದ ೧೯೮೪ರಲ್ಲಿ ಪ್ರಕಟವಾಗಿದೆ. ಅದು ಪ್ರಸಾರಾಂಗಕ್ಕಾಗಿ ಹಂಪನಾ ಅವರು ಮಾಡಿದ ದೀರ್ಘ ಉಪನ್ಯಾಸವೊಂದರ ಸಾರ. 'ಸಾಮಾನ್ಯ ಜನತೆಯಲ್ಲಿ ಅರಿವಿನ ಸಿರಿಯನ್ನು ಹಂಚುವ' ಉದ್ದೇಶದಿಂದ ಉಪನ್ಯಾಸ ಏರ್ಪಾಟಾಗಿತ್ತು. ಉಪನ್ಯಾಸದ ವಸ್ತು ವಿ. ಕೃ. ಗೋಕಾಕ್ ಅವರ ಕವಿಕಾವ್ಯ ಚಿಂತನೆ.

'ವಿ. ಕೃ. ಗೋಕಾಕ್' ಒಂದು ಸಂಕ್ಷಿಪ್ತ ಜೀವನ ಚರಿತ್ರೆಯಲ್ಲ. ಹಾಗೆ ಜೀವನಚರಿತ್ರೆಯಾಗಿದ್ದರೆ ಗೋಕಾಕರನ್ನು ಹತ್ತಿರದಿಂದ ಬಲ್ಲ ಹಂಪನಾ ತಮ್ಮ ಚುರುಕು ಶೈಲಿಯಿಂದ ಒಂದು ಅತ್ಯುತ್ತಮ ಚರಿತ್ರೆಯನ್ನು ಬರೆಯಬಹುದಿತ್ತು. ಈ ಹೊತ್ತಿಗೆಯಲ್ಲಿರುವುದು 'ವಿನಾಯಕ' ಎಂಬ ಕಾವ್ಯನಾಮದಿಂದ ಖ್ಯಾತರಾದ ಗೋಕಾಕರ ಕವಿಕಾವ್ಯ ಚಿಂತನೆ. ನಮ್ಮ ಒಬ್ಬ ಮಹತ್ವದ ಕವಿಯ ಕೃತಿಗಳನ್ನು ಕುರಿತು ಸಂಕ್ಷಿಪ್ತವಾದ ಪರಿಚಯ. ಹೀಗಾಗಿ ವಿನಾಯಕ ಗೋಕಾಕರ ಹೋರಾಟದ ಬದುಕು, ಶಿಕ್ಷಕರಾಗಿ ಅವರು ಸಾವಿರ ಸಾವಿರ ವಿದ್ಯಾರ್ಥಿಗಳ ಮೇಲೆ ಹಾಕಿದ ಮೋಡಿ, ಊರಿಂದೂರಿಗೆ ಅಲೆತ, ಗೆಳೆಯರ ಗುಂಪಿನ ಸಾಧನೆ, ಬೇಂದ್ರೆ ಸಖ್ಯ, ಬಾಳೆಕುಂದ್ರಿ ಮಹಾರಾಜರು — ಅರವಿಂದರು — ಮಾತೆ—ಸಾಯಿಬಾಬಾ—ಹೀಗೆ 'ದೇವ ಮನುಷ್ಯರ' ಶೋಧ, ಅಧ್ಯಾತ್ಮಿಕತೆಯ ಕಡೆಗೆ ಒಲವು, ತೆರೆ ಯೇರಿ ತೆರೆಯಿಳಿಯುವಂತೆ ಭೋರ್ಗರೆವ ಭಾಷಣದ ವೈಖರಿ, ಇಂಗ್ಲಿಷ್ ಸಾಹಿತ್ಯದಲ್ಲಿ ಮಾಡಿದ ಗೆಯ್ಮೆ, ಗೋಕಾಕ್ ವರದಿ ಬರೆದು ಕನ್ನಡಿಗರ ಕನ್ನಡತ್ವವನ್ನು ಜಾಗೃತಗೊಳಿಸಿದ ಕೆಚ್ಚು — ಹೀಗೆ ಹಲವು ಮೈಲುಗಳುಳ್ಳ ಅವರ ವ್ಯಕ್ತಿತ್ವದ ಪೂರ್ಣ ಪರಿಚಯ ಸಿಗುವುದಿಲ್ಲ. ಹಾಗೆ ಪರಿಚಯಿಸುವುದು ಈ ಹೊತ್ತಿ

ಗೆಯ ಉದ್ದೇಶವೂ ಅಲ್ಲ. ಹಂಪನಾ 'ನನ್ನ ನುಡಿ'ಯಲ್ಲಿ ಹೇಳುವಂತೆ 'ಇಲ್ಲಿ (ಕವಿ ಕಾವ್ಯ ಚಿಂತನೆಯ) ಪರಿಚಯವೇ ಪ್ರಧಾನ.'

'ಬದುಕು ಬಂದ ಬಗೆ' ಎಂಬ ಮೊದಲ ಕೆಲವು ಪುಟಗಳಲ್ಲಿ ಹಂಪನಾ ಗೋಕಾಕರ ಬದುಕನ್ನು ಸಂಕ್ಷಿಪ್ತವಾಗಿ ವರ್ಣಿಸುತ್ತಾರೆ. ಈ ವರ್ಣನೆ ಪ್ರಾರಂಭ ವಾಗುವುದು ಹೀಗೆ: 'ವಿನಾಯಕರು ಆರಡಿ ಅಜಾನುಬಾಹು. ಎತ್ತರದ ವ್ಯಕ್ತಿ, ವ್ಯಕ್ತಿತ್ವ, ಸದೃಢಕಾಯ. ಚುರುಕುಗಣ್ಣಿನ ಮುಖ ನಗೆಯ ಬೊಗಸೆ. ಕನ್ನಡಕ ದೊಳಗಿಂದ ಪ್ರೀತಿ ತುಳುಕುವ ಆತ್ಮೀಯ ನೋಟ. ಬ್ರಹ್ಮ ಬಹಳ ಬರೆಯಲು ತೆರಪಾಗಿರುವ ಅಗಲವಾದ ಹಣೆ. ಧ್ವನಿ ಮಂಡಲ ಕಡಲ ಮೊರೆತ — ದುಂದುಭಿ ಗಂಭೀರ ನಿನದಂ...' ಗೋಕಾಕರ ಪರಿಚಯ ಇರುವ ಯಾರೇ ಆಗಲಿ ಕ್ಷಣಾರ್ಧದಲ್ಲಿ ಅವರ ನೆನಪನ್ನು ಮೆಲುಕು ಹಾಕುವಂತಿದೆ ಈ ವರ್ಣನೆ. ಮುಂದೆ ಗೋಕಾಕರ ಮಾತುಗಳನ್ನೇ ಆಯ್ದುಕೊಂಡು ಅವರ ಪ್ರಾರಂಭಿಕ ಜೀವನದ ಪರಿಚಯ ಮಾಡಿ ಕೊಟ್ಟು ನಂತರದ ಎರಡು–ಮೂರು ಚಿಕ್ಕ ಪುಟಗಳಲ್ಲಿ ಅವರ ತುಂಬುಜೀವನದ ಸಂಕ್ಷಿಪ್ತ ಪರಿಚಯ ಕೊಡಲಾಗಿದೆ. ಆನಂತರದ ಅಂಗೈ ಆಕಾರದ ಐವತ್ತು ಪುಟ ಗಳಲ್ಲಿ ಗೋಕಾಕರ ಸುಮಾರು ಇಪ್ಪತ್ತು ಕೃತಿಗಳ ಸಂಕ್ಷಿಪ್ತ ಪರಿಚಯವಿದೆ.

ವಿನಾಯಕರ ಕಾವ್ಯಗಳಲ್ಲಿ ಅವರು ಇತ್ತೀಚೆಗೆ ಬರೆದು ಮುಗಿಸಿದ 'ಭಾರತ ಸಿಂಧುರಶ್ಮಿ' ಮಹತ್ವಾಕಾಂಕ್ಷೆಯ ಕಾವ್ಯ. ೧೩೩೫ ಪುಟಗಳ ಈ ಬೃಹತ್‌ಕಾವ್ಯದಲ್ಲಿ ಋಗ್ವೇದ ಕಾಲದ ವಸ್ತುವಿದೆ. ವಿನಾಯಕರ ಕಾವ್ಯ ಸಾಧನೆಯಲ್ಲಿ ಈ ಕಾವ್ಯವೇ ಶ್ರೇಷ್ಠಫಲ, ಉಳಿದೆಲ್ಲವೂ ಕೇವಲ ಸಿದ್ಧತೆಗಳು ಎನ್ನುವ ವಿಮರ್ಶಕರಿದ್ದಾರೆ. 'ಭಾರತ ಸಿಂಧು ರಶ್ಮಿ'ಯ ಬಗ್ಗೆ ಹಂಪನಾ ಅವರಿಗೆ ಗೌರವವಿದೆ, ಆದರೆ ಪ್ರೀತಿಯಿಲ್ಲ. ಆ ಪ್ರೀತಿ, ಆ ಪ್ರಾಶಸ್ತ್ಯವನ್ನು ಅವರು ವಿನಾಯಕರ 'ಸಮುದ್ರ ಗೀತೆಗಳು' (೧೯೪೦) ಕಾವ್ಯಕ್ಕೆ ಕೊಡುತ್ತಾರೆ. ಕಾವ್ಯಪ್ರೇಮಿಗಳಾದ ಕನ್ನಡಿಗರು, ನಮ್ಮ ನಿಮ್ಮಂಥವರು, ಸಮುದ್ರ ಗೀತಗಳನ್ನು ಮೆಚ್ಚಿಕೊಂಡಂತೆ ಭಾರತಸಿಂಧುರಶ್ಮಿಯನ್ನು ಮೆಚ್ಚಿಕೊಂಡಿಲ್ಲ ಎಂಬ ಅಂತರಂಗದ ಮಾತು ಇಲ್ಲಿ ಬಹಿರಂಗವಾಗಿದೆ.

'ಸಮುದ್ರ ಗೀತಗಳು' ಕನ್ನಡದಲ್ಲಿ ಹೊಸತನ್ನು ಹುಟ್ಟುಹಾಕಿದ ಕಾವ್ಯ. ಅದು ನವ್ಯ (ಅತಿನವ್ಯ ಅಲ್ಲ) ಕಾವ್ಯಮಾರ್ಗದ ಹೆಬ್ಬಾಗಿಲನ್ನು ತೆರೆಯಿತು. ಹೊಸ ಛಂದೋ ಪ್ರಕಾರ ಇಲ್ಲಿ ಕಾಣಿಸಿಕೊಂಡಿದೆ. ೧೯೩೬ರಲ್ಲಿ ಗೋಕಾಕರು ಆಕ್ಸ್‌ಫರ್ಡಿಗೆ ಹಡಗಿನಲ್ಲಿ ಹೊರಟಾಗ ಹಡಗು ಓಲಾಡುತ್ತ ತೂಗಾಡುತ್ತ ತೆರೆಗಳ ಮೇಲೆ ಮುಂದು ವರಿಯುತ್ತಿದ್ದಾಗ ಆ ಲಯವನ್ನು ಅನುಕರಿಸುವ ಹೊಸ ಬಗೆಯ ಲಯ ಸೃಷ್ಟಿ ಯಾಯಿತು ಎಂದು ಹೇಳುತ್ತಾರೆ. ಸಮುದ್ರ ಗೀತಗಳ ಗುಣ ಹಾಗೂ ಆ ಗೀತಗಳು ಮಾಡಿದ ಕೆಲಸದ ಬಗ್ಗೆ ಹಂಪನಾ ಹೀಗೆ ಹೇಳುತ್ತಾರೆ :

'ಕನ್ನಡದಲ್ಲಿ ಹಳಗನ್ನಡ ಕವಿಗಳಿಂದ ಇಂದಿನ ಕವಿಗಳವರೆಗೆ ಕಡಲನ್ನು ಕುರಿತು ರಚನೆ ಆಗಿದೆ. ನಿಚ್ಚಂ ಪೊಸತು ಅರ್ಣವಂಬೊಲತಿಗಂಭೀರಂ ಎಂಬ ಪಂಪನ ಸಾಲು, ಅಬ್ಬ ಬ ತೆರೆ ಎಂದು ಆರಂಭವಾಗುವ ರತ್ನಾಕರವರ್ಣಿಯ ಪದ್ಯ, ಕನ್ನಡ ಸಾಹಿತ್ಯದ ವಿದ್ಯಾರ್ಥಿಗಳಿಗೆ ಚಿರಪರಿಚಿತ. ಆದರೆ ಅವರಾಗಲಿ, ಇತರರಾಗಲಿ ಒಂದು ಇಡೀ ಕಾವ್ಯವನ್ನು ಸಾಗರದ ಆಗರವನ್ನಾಗಿಸಲಿಲ್ಲ. ಹತ್ತರಲ್ಲಿ ಒಂದು ಎಂಬಂತೆ ಪ್ರಾಸಂಗಿಕವಾಗಿ ಸಮುದ್ರ-ನದಿ ಕುರಿತು ಪದ್ಯ ಬರೆದರು. ವಿನಾಯಕರು (ಇಲ್ಲಿ) ಮೊದಲಿಗರು—ಸ್ವತಂತ್ರ ಸಮಗ್ರ ಕಾವ್ಯ ಬರೆದವರು. ಇಲ್ಲಿಯೂ ಅವರು "ಕೊಡದಿರು ಶರಧಿಗೆ ಪಟ್ಟದಿಯ ದೀಕ್ಷೆಯನು" ಎಂಬ ನವ್ಯದ ದಿವ್ಯ ಮಂತ್ರವನ್ನು ಉಚ್ಚರಿಸಿದರು. ಹೊಸ ಹಾದಿ ತುಳಿದರು, ನವ್ಯದ ಹರಿಕಾರರಾದರು. ನೆಲದ ನಂಟು ಹರಿದು, ಕಡಲ ಗಂಟು ಬಿರಿದಾಗ ಅರಳಿದ ಕಾವ್ಯ ಸಮುದ್ರ ಗೀತಗಳು.'

'.........ನವನವೋನ್ಮೇಷಶಾಲಿನಿಯಾದ ಸಾಗರವನ್ನು ಸೆರೆಹಿಡಿದ ಕವಿಯ ಪ್ರಯತ್ನದ ಸಾಫಲ್ಯದಂತೆ, ಅದಕ್ಕೆ ಸ್ವಚ್ಛಂದ ಛಂದದ ಆಕಾರ ಕೊಟ್ಟಿರುವುದೂ ಆ ಕಾಲಕ್ಕೆ ದೊಡ್ಡ ಸಾಧನೆ. ಬೆಳಕಿನಲ್ಲಿ, ಬೆಳುದಿಂಗಳಲ್ಲಿ, ಕತ್ತಲಲ್ಲಿ, ಬೆಳಕು ಬೈಗುಗಳಲ್ಲಿ, ನಡು ಹಗಲು, ನಡು ಇರುಳಿನಲ್ಲಿ, ಕಡಲನ್ನು ಕಂಡು, ಕನಸು ಮನಸುಗಳಲ್ಲಿ ತುಂಬಿಕೊಂಡ ಕವಿ ಪಟ್ಟ ಸಂಭ್ರಮ, ಪಡೆದ ವಿಸ್ಮಯ, ವಿನೂತನ ಅನುಭವ ನೂರು ವಿಧ ನೂರು ಮುದ.

'ಸನಾತನ ಸಮುದ್ರರಾಜ ಕವಿಗೆ ದರ್ಶನ ಕೊಡುವುದು ಒಮ್ಮೆ ಕಿನ್ನರ ಕಿಂಪುರುಷ ನೌಕೆಗಳಂತೆ, ಇನ್ನೊಮ್ಮೆ ಕಾಳ ರಕ್ಕಸರ ಕೋರೆಹಲ್ಲುಗಳಂತೆ, ಮತ್ತೊಮ್ಮೆ ಗೋಪುರಗಳ ಕಟ್ಟಿ ಗೋಪುರಗಳನಳಿಸುವ ರುದ್ರಪುರುಷನಾಗಿ, ಮಗದೊಮ್ಮೆ ಅರುಣನ ಕುದುರೆಯಂತೆ—ಮತ್ತಗಜದಂತೆ ಹೆಡೆಯಲ್ಲಿ ಪುಷ್ಪರಾಗವಿಹ ಕಾಳಸರ್ಪಗಳಂತೆ ಹೀಗೆ ಪುರಾಣ ಪ್ರಜ್ಞೆಯ ಬೆಳಕಿನಲ್ಲಿ ಸುರುಳಿ ಉರುಳಿಸಿದಂತೆ ಅರಳಿ ನಿಲ್ಲುವ ಸಂಕೇತಗಳು, ಪ್ರತಿಮೆಗಳು ಓದುಗನ ಮನಸೆಳೆಯುತ್ತವೆ.'

ಮೇಲಿನ ವಾಕ್ಯವೃಂದಗಳು ಹಂಪನಾ ಉಪನ್ಯಾಸದ ಅವತರಣಿಕೆಗಳು ಎಂಬುದನ್ನು ನೆನಪಿಡಬೇಕು. ವಿನಾಯಕರ ಗೀತಗಳಲ್ಲಿ ಕಡಲು ಕಾವ್ಯವಾದುದನ್ನು ಹೇಳುತ್ತ ಹಂಪನಾ ತಾವೂ ಕಾವ್ಯಮಯವಾಗಿದ್ದಾರೆ (ಹಂಪನಾ ಒಬ್ಬರು ಮಾತ್ರ ಹೀಗೆ ಕಾವ್ಯಮಯವಾಗಿ ಮಾತಾಡಿ ಪಾರಾಗಬಲ್ಲರು. ಅವರ ವಾಗ್ಮಿಯತೆಯ ಪರಿಯೇ ಹಾಗೆ!). ಕೊನೆಗೆ ತಮಗೆ ಅತ್ಯಂತ ಪ್ರಿಯವಾದ ಈ ಕಾವ್ಯಕೃತಿಯನ್ನು ಕುರಿತು ಹಂಪನಾ ಹೀಗೆ ಗುಣ ವಿಮರ್ಶೆ ಮಾಡುತ್ತಾರೆ : 'ಭಾವಗೀತಾತ್ಮಕ ಹಾಗೂ ಗೇಯಾತ್ಮಕ ಗುಣಮಿಶ್ರಣದಿಂದ ಬಳಕುವ ಆಡುಮಾತಿನ ಲಯಗಾರಿಕೆಯಿಂದ, ಸಂಕೀರ್ಣ ಅಭಿವ್ಯಕ್ತಿಯಿಂದ ಸಮುದ್ರ ಗೀತಗಳು ಕನ್ನಡದ ಸಂದರ್ಭದಲ್ಲಿ ಇಂದಿಗೂ

ಅನನ್ಯ ಕಾವ್ಯ. ಕಣ್ಣು ಕುಕ್ಕಿಸುವ, ಭಾವ ಉಕ್ಕಿಸುವ, ಕಡಲ ವೈಭವ ಇದೇ ಮೊದಲ ಬಾರಿಗೆ ಕಾವ್ಯರೂಪದಲ್ಲಿ ಕನ್ನಡ ಭಂಡಾರದಲ್ಲಿ ಪ್ರತಿಷ್ಠಿತವಾಯಿತು.' ವಿಶ್ವ ಕನ್ನಡ ಸಮ್ಮೇಳನದ ಸವಿನೆನಪಿಗೆ ವಿನಾಯಕರ ಪ್ರಾತಿನಿಧಿಕ ಕೃತಿಯನ್ನು ಆರಿಸುವಾಗ ಆಯ್ಕೆ ಸಮಿತಿಯಲ್ಲಿದ್ದ ಹಂಪನಾ ಸಮುದ್ರ ಗೀತಗಳನ್ನೇ ಆಯ್ದು ಕೊಂಡದ್ದರಲ್ಲಿ ಆಶ್ಚರ್ಯವಿಲ್ಲ.

ವಿನಾಯಕರ ಇನ್ನೊಂದು ಮಹತ್ವದ ಕಾವ್ಯಕೃತಿ 'ದ್ಯಾವಾ ಪೃಥಿವಿ' (೧೯೫೭). ಇದರಲ್ಲಿ ನೀರದ ಮತ್ತು ಇಳಾಗೀತ ಎಂಬ ಎರಡು ಪರಸ್ಪರ ಪೂರಕ ಭಾಗಗಳಿದ್ದು ಇಲ್ಲಿ 'ಕಡಲನ್ನು ಕಂಡು ವಿಸ್ಮಯಗೊಂಡು ರಸಪರವಶನಾದ ಕವಿ ಜಲದಿಂದ ನೆಲಕ್ಕೆ, ಭೂಮಿ ಆಕಾಶಗಳನ್ನು ಒಂದುಗೂಡಿಸುವ ಸಾಹಸಕ್ಕೆ ಕೈಹಾಕಿದ್ದಾನೆ.' ಮೊದಲ ಭಾಗವಾದ 'ನೀರದ'ದಲ್ಲಿ ವಿನಾಯಕರು ಮೋಡದ ನಾಡನ್ನು ತೋರಿಸುತ್ತಾರೆ. ಅಲ್ಲಿಯ ಒಂದು ಚಿತ್ರಮಾಲೆ :

ಬಾಂಬೊಲದಲಿ ಹುಂಬ ಗಾಳಿಗುರುಬ
ತರುಬಿದುಣ್ಣು ಕುರಿಮರಿಗಳ ಕಿರಿ ಹಿಂಡು :
ಇದೂ ಒಂದು ಸೋಂಗು
ಮಲೆನಾಡಿನ ದಟ್ಟಡವಿಯ ಒಡಲಿನಲಿ
ಮತ್ತ-ಗಜ-ಸಮೂಹ ;
ದಾಳಿಯಿಟ್ಟ ದುರ್ಗದ ಬುರುಜಿನ ಮೇಲೆ
ಕೊತ್ತಳದಳತೆಯ ತೊತ್ತುಳಿಯುವ ಗುಲ
ಗಂಜಿಗಣ್ಣಿನಾ ಬೇಡರ ಪಡೆ, ಆಹ !

ಹಂಪನಾ ಹೇಳುವಂತೆ ಇಂಥ ಪ್ರತೀಕಗಳ ಮೂಲಕ ಕವಿ ಜೀವನ ರಹಸ್ಯವನ್ನು ಪ್ರತೀತಗೊಳಿಸುತ್ತಾರೆ. ಜೀವನವೊಂದೇ ಜೀವಿತದ ಗುರಿಯು ಎಂಬುದು ಕವಿಯ ಸಂದೇಶ. ನೆಲದಲ್ಲಿ ನಿಂತು ಆಕಾಶದೆಡೆಗೆ ನೋಡುತ್ತ ಪ್ರತಿಕ್ಷಣ ಪರಿವರ್ತನೆ ಪಡೆಯುವ ಮೋಡಗಳನ್ನು ಕಂಡು ಕವಿ ಪರಿವರ್ತನೆಯೊಂದೇ ಸತ್ಯ, ಮರಣ ಎಂಬುದು ಮಾಯೆ ಎಂಬ ನಿರ್ಣಯಕ್ಕೆ ಬರುತ್ತಾರೆ. ದೇವಕರುಣೆಯಿಂದ, ಸಂಕಲ್ಪ ದಿಂದ ಶುಕ್ರೋದಯ ಸಂಭವಿಸಬಹುದು ಎಂದು ಕವಿ ಹಾರೈಸುತ್ತಾರೆ. ಎರಡನೆಯ ಭಾಗವಾದ ಇಳಾಗೀತದಲ್ಲಿ 'ಮರ್ತ್ಯದಲ್ಲಿ ನಿಂತು ಗೆಲ್ಲು ಮರ್ತ್ಯವೆ ಒರೆಗಲ್ಲು : ನೆಲವೆ ಆಧಾರಾ, ನೆಲವೆ ಆ-ಧಾರ!' ಎಂದು ಸಾರುತ್ತಾರೆ. ಹಂಪನಾ ಹೇಳುವಂತೆ ಇದು 'ಮಣ್ಣಿನ ಹಾಡು'. ಕಾವ್ಯ ಒಟ್ಟಂದದಲ್ಲಿ ತೃಪ್ತಿಕೊಡುತ್ತದೆಯಾದರೂ ಹಂಪನಾ ದೃಷ್ಟಿಯಲ್ಲಿ ಸಮುದ್ರ ಗೀತಗಳಿಗೆ ಸರಿಸಾಟಿಯಾಗಿಲ್ಲ. ಇಲ್ಲಿ ಹೊಳೆಯುತ್ತ

ಧಾವಿಸುವ ಮಿಂಚಿದೆ; ಆದರೆ ಸಮುದ್ರ ಗೀತಗಳು ಉಂಟುಮಾಡುವ ತನ್ಮಯತೆಯಿಲ್ಲ.

'ಕಲೋಪಾಸಕ', 'ಪಯಣ', 'ಅಭ್ಯುದಯ', 'ತ್ರಿವಿಕ್ರಮರ ಆಕಾಶಗಂಗೆ' ಮೊದಲಾದ ಸಂಕಲನಗಳೆಲ್ಲ ನವ್ಯಮಾರ್ಗಕ್ಕೆ, ಹೊಸ ಛಂದೋರೂಪಗಳಿಗೆ, ಆಧ್ಯಾತ್ಮ ಮಾರ್ಗ ಪ್ರವೇಶಕ್ಕೆ ವಿನಾಯಕರು ಮಾಡಿದ ಪ್ರಯೋಗಗಳೆಂದು ಹಂಪನಾ ಭಾವಿಸಿದ್ದಾರೆ. ಆ ನಂತರ ಬಂದ 'ಉಗಮ', ಬಾಳದೇಗುಲದಲ್ಲಿ' ಆಧ್ಯಾತ್ಮಕ್ಕೆ ನಡೆಸಿದ ಮತ್ತಷ್ಟು ಸಿದ್ಧತೆಗಳು. ೧೯೭೫ ರಲ್ಲಿ ಪ್ರಕಟವಾದ 'ಇಂದಿಲ್ಲ ನಾಳೆ' ಹೊಸ ಬಗೆಯ ಕಾವ್ಯ ಗದ್ಯಪದ್ಯ ಸಂಮಿಶ್ರವಾದುದರಿಂದ ಚಂಪೂ ಎನ್ನೋಣ. ಅಮೆರಿಕೆಯ ಸಂಯುಕ್ತ ಸಂಸ್ಥಾನಗಳಲ್ಲಿ ಪ್ರವಾಸ ಮಾಡುವಾಗ ಪಡುವಣದ ಜನರನ್ನು ಕಂಡು, ಅವರ ನಗರಗಳನ್ನು, ರಸ್ತೆಗಳನ್ನು, ವಸ್ತುಸಂಗ್ರಹಾಲಯಗಳನ್ನು, ಸಾಲಾಗಿ ಹೋಗುವ ವಾಹನಗಳನ್ನು, ಅವಶೇಷಗಳನ್ನು, ವೀಕೆಂಡ್ ಮೋಜುಗಳನ್ನು, ವಿಶ್ವಸಂಸ್ಥೆಯನ್ನು, ಆದಿವಾಸಿಗಳನ್ನು, ಪಾದ್ರಿಗಳನ್ನು--ಇಂಥ ನೂರಾರು ವಸ್ತು ವಿಷಯಗಳನ್ನು ಕಂಡು ಕವಿ ಕಾವ್ಯರೂಪದಲ್ಲಿ ಪ್ರತಿಕ್ರಯಿಸುತ್ತಾರೆ.

ವಿನಾಯಕರ ಕಾವ್ಯಗಳಲ್ಲಿ ಗಾತ್ರದಲ್ಲಿಯೂ ವೈಚಾರಿಕತೆಯಲ್ಲೂ ಮಹತ್ವಾಕಾಂಕ್ಷೆಯಲ್ಲೂ ಗಮನ ಸೆಳೆಯುವ ಕೃತಿ 'ಭಾರತಸಿಂಧುರಶ್ಮಿ'. ವಿನಾಯಕರೇ ಅಪ್ರತ್ಯಕ್ಷವಾಗಿ ಹೇಳುವಂತೆ ಹಾಗೂ ಹಂಪನಾ ನೇರವಾಗಿ ಸೂಚಿಸುವಂತೆ, ವಿನಾಯಕರ ಹಿಂದಿನ ಅನೇಕ ಕೃತಿಗಳು ಈ ನವೀನ ಕಾವ್ಯಕ್ಕೆ ನಡೆಸಿದ ಸಿದ್ಧತೆಗಳಂತಿವೆ. ಇಲ್ಲಿ ವೇದಕಾಲದ ವ್ಯಕ್ತಿಗಳು ಪಾತ್ರಧಾರಿಗಳು. ಅವರ ಸಂಖ್ಯೆ ಇನ್ನೂರಕ್ಕೆ ಕಡಿಮೆಯಿಲ್ಲ. ಮನುಷ್ಯ, ಕಾಲ, ನಾಗರಿಕತೆಗಳು, ರಾಗದ್ವೇಷಗಳು, ಸುಖಲಾಲಸೆ, ಸಾಮ್ರಾಜ್ಯ ಕನಸುಗಳು ಇವೆಲ್ಲ ಇಲ್ಲಿಯ ಕಾವ್ಯವಸ್ತು. ಹಂಪನಾ ಹೇಳುವಂತೆ ಇಲ್ಲಿ ವಿಸ್ತಾರವಾದ ಓದಿನಿಂದ ಹದಗೊಂಡ ಬ್ರಹ್ಮಾಂಡ ಸಾಮಗ್ರಿ ಇದೆ. ಘಟನೆ ಸಂಕೇತಗಳನ್ನು ಪರಿಣಾಮಕಾರಿಯಾಗಿ ಬಳಸಿಕೊಳ್ಳಲಾಗಿದೆ. ಭಾರತೀಯ ಸಂಸ್ಕೃತಿಯ ಸಮಗ್ರ ಅನುಭವ ಕವಿಯಲ್ಲಿದೆ, ಆದರೆ ಹಂಪನಾ ದೃಷ್ಟಿಯಲ್ಲಿ "ಇಷ್ಟಾಗಿಯೂ ಈ ಕಾವ್ಯ ನಮ್ಮ ವಿಶಿಷ್ಟ ಅನುಭವ ಪ್ರಕ್ರಿಯೆಗೆ ದೂರವಾಗಿಯೇ ಉಳಿಯುತ್ತದೆ......ಭಾರತ ಸಿಂಧುರಶ್ಮಿಯನ್ನು ಓದುತ್ತಾ ಹಲವು ಸಲ ಚಕಿತಗೊಳ್ಳುತ್ತೇವೆ ಎಂಬುದು ನಿಜ. ಆದರೆ ಒಂದು ಶ್ರೇಷ್ಠ ಕಾವ್ಯದಿಂದ ದಕ್ಕುವ ಅಪರೂಪ ಮತ್ತು ಅನನ್ಯವೆನಿಸುವ ಅನುಭವ ಇಲ್ಲಿ ನಮ್ಮನ್ನು ಆವರಿಸಿಕೊಳ್ಳುವುದಿಲ್ಲ, ಬಹುಕಾಲ ನಮ್ಮನ್ನು ಗಾಢವಾಗಿ ಕಾಡುವಲ್ಲಿ, ಕನಸುಮನಸುಗಳನ್ನು ಆವರಿಸಿಕೊಂಡು ಕಲಕುವಲ್ಲಿ ಈ ಕಾವ್ಯ ವಿಫಲವಾದಂತೆ ತೋರುತ್ತದೆ." ಅಂದರೆ ಇತರ ಮಹಾಕಾವ್ಯಗಳಂತೆ ಈ ಕಾವ್ಯ ಆವರಿಸಿಕೊಳ್ಳುವುದಿಲ್ಲ, ಕಾಡುವುದಿಲ್ಲ, ಕಲಕುವುದಿಲ್ಲ.

ಈ ಚಿಕ್ಕ ಪರಿಚಯ ಗ್ರಂಥದಲ್ಲಿ ಹಂಪನಾ ಗೋಕಾಕರ 'ಕವಿ. ಕಾವ್ಯ, ಮಹೋನ್ನತಿ' (೧೯೩೫), 'ಇಂದಿನ ಕನ್ನಡ ಸಾಹಿತ್ಯದ ಗೊತ್ತುಗುರಿಗಳು' (೧೯೪೬), 'ನವ್ಯತೆ ಹಾಗೂ ಕಾವ್ಯಜೀವನ' (೧೯೫೫), 'ಸೌಂದರ್ಯ ಮೀಮಾಂಸೆ' (೧೯೭೩) ಈ ಮೂರು ವಿಮರ್ಶಾ ಗ್ರಂಥಗಳ ಬಗೆಗೂ, 'ಸಮುದ್ರದಾಚೆಯಿಂದ' ಮತ್ತು ಜೀವನ ಪಾಠಗಳು' ಎಂಬ ಪತ್ರ ಪ್ರಬಂಧ ಸಂಕಲನಗಳ ಬಗೆಗೂ ಕಿರು ಪರಿಚಯ ಕೊಟ್ಟಿದ್ದಾರೆ. ಗೋಕಾಕರ 'ಇಜ್ಜೋಡು' ಅನೇಕ ಭಾಗಗಳಾಗಿ ಬೆಳೆದು ಕೊನೆಗೆ 'ಸಮರಸವೇ ಜೀವನ' ಎಂಬ ೧೨೬೮ ಪುಟಗಳಷ್ಟು ದೊಡ್ಡ ಕಾದಂಬರಿ ಯಾಯಿತು. ಇದನ್ನು ಮೆಚ್ಚಿಕೊಂಡವರು ಇಲ್ಲಿ ಜೀವನಾನುಭವ ದರ್ಶನಗಳನ್ನು ಕಂಡಿದ್ದಾರೆ: ಸ್ಥಾನಿಕತೆಯಿಂದ ಸಾರ್ವಭೌಮಿಕತೆಯತ್ತ ಇದು ತಿರುಗುವುದನ್ನು ಗುರುತಿಸಿದ್ದಾರೆ. ಪೂರ್ಣ ದೃಷ್ಟಿಯ ನಿದರ್ಶನ ಎಂದೂ ಪ್ರಶಂಸಿಸಿದ್ದಾರೆ. ಈ ಮಾತುಗಳ ಒಟ್ಟಾರೆ ಅಭಿಪ್ರಾಯಗಳನ್ನು ಪರಿಭಾವಿಸಿದರೂ ಹಂಪನಾ 'ಕಾದಂಬರಿ ಕಾರರ ಭಿತ್ತಿ ವಿಶಾಲವಾಗಿದೆ. ಅದರ ಮೇಲೆ ಕೆತ್ತಿರುವ ಚಿತ್ರ ಸಾಧಾರಣವಾದುದು, ಬಿಡಿಸಿರುವ ಪಾತ್ರ ಸಾಮಾನ್ಯವಾದುದು, ಬಂಧ ಸಡಿಲವಾದುದು' ಎಂಬ ಅಭಿ ಪ್ರಾಯಕ್ಕೆ ಬಂದಿದ್ದಾರೆ. ಒಟ್ಟಿನಲ್ಲಿ ಈ ಕಾದಂಬರಿ ಬೃಹತ್ ಇದ್ದರೂ ಮಹಾನ್ ಅಲ್ಲ, 'ಕಿಂಚಿದೂನ.'

ಹಂಪನಾ ವಿನಾಯಕರ ಗದ್ಯಪದ್ಯ ಗ್ರಂಥಗಳಲ್ಲಿ ಮುಖ್ಯವಾದ ಕೆಲವನ್ನು ತಮ್ಮ ಸಮೀಕ್ಷೆಗೆ ಒಳಪಡಿಸಿದ್ದರೂ ಅವರ ನಾಟಕಗಳ ಬಗ್ಗೆ ಪ್ರಸ್ತಾಪ ಮಾಡಿಲ್ಲ. ಜನನಾಯಕ (೧೯೩೯), ವಿಮರ್ಶಕ ವೈದ್ಯ (೧೯೪೭), ಯುಗಾಂತರ (೧೯೪೭), ಮುನಿದ ಮಾರಿ (೧೯೭೦) ಎಂಬ ನಾಲ್ಕು ನಾಟಕಗಳನ್ನು ಅವರು ಬರೆದಿದ್ದರೂ 'ವಿಮರ್ಶಕ ವೈದ್ಯ'ವೊಂದನ್ನು ಬಿಟ್ಟರೆ ಓದುಗರ, ಪ್ರೇಕ್ಷಕರ ಗಮನ ಸೆಳೆಯಲು ಅವು ಅಶಕ್ತವಾಗಿವೆ ಎಂಬ ಅಭಿಪ್ರಾಯವಿದೆ. ಕವಿ ವಿನಾಯಕರ ಸಿದ್ಧಿಯಿರುವುದು ಕಾವ್ಯ ಮತ್ತು ವಿಮರ್ಶೆಯಲ್ಲಿ. ಹೀಗಾಗಿ ಹಂಪನಾ ಗೋಕಾಕರ ಗೊಡವೆಗೆ ಹೋಗ ಲಿಲ್ಲವೆಂದು ಕಾಣುತ್ತದೆ.

ಹೊತ್ತಿಗೆಯ ಕೊನೆಗೆ ಹಂಪನಾ ತಮ್ಮ ವಿಶಿಷ್ಟವಾದ ಶೈಲಿಯಲ್ಲಿ ವಿನಾಯಕರ ಕಾವ್ಯಸಾಧನೆಯನ್ನೂ ಸ್ಥಾನವನ್ನೂ ಸಂಗ್ರಹ ರೂಪದಲ್ಲಿ ಹೇಳಿದ್ದಾರೆ. ಆ ಇಡಿಯ ಪ್ಯಾರಾ ಹೀಗಿದೆ:

"'ಶ್ರೀ'ಯವರ ತರುವಾಯ, ಅವರಿಗಿಂತ ಸಮರ್ಥ ರೀತಿಯಿಂದ, ಕನ್ನಡ ಸಾಹಿತ್ಯದ ಕ್ಷಿತಿಜವನ್ನು ವಿವರಿಸಿದ ಇಂಗ್ಲಿಷ್ ಪ್ರಾಧ್ಯಾಪಕರಲ್ಲಿ ವಿನಾಯಕರು ಅಗ್ರಗಣ್ಯರು. ನವೋದಯ–ನವ್ಯ ಹಾಗೂ ನವ್ಯೋತ್ತರ ಎಂಬ ಸಾಹಿತ್ಯ ಚರ್ಚೆ ನಡೆಯುತ್ತಲೇ ಇದೆ, ಆ ಚರ್ಚೆ ಇನ್ನೂ ಕೆಲವು ಕಾಲ ನಡೆಯುತ್ತಿರುತ್ತದೆ. ಆದರೆ

ಇಷ್ಟು ನಿಜ, ಬೇಂದ್ರೆ-ಕುವೆಂಪು ತರುವಾಯದ ಸಾಹಿತಿಗಳ ಸಾಲಿನಲ್ಲಿ ಪ್ರತಿನ-ವಿನಾಯಕ ನಿಲ್ಲುತ್ತಾರೆ. ವಿನಾಯಕರಿಗೂ ಮಿತಿಗಳಿವೆ; ಅತಿ ಪ್ರಾಸಪ್ರಿಯತೆ, ಪಾಚಾಳಿತನ, ಅತಿ ವಾಚ್ಯವಾಗುವಿಕೆ, ಕವಿತೆ, ಕವಿತೆ ಒಂದೆ ಬಿದ್ದು ಗದ್ಯವಾಗುವಿಕೆ, ಸಂಕ್ಷಿಪ್ತತೆ-ಸಂಕೀರ್ಣತೆಗಿಂತ ವಿಸ್ತಾರದತ್ತ ಒಲವು. ಆದರೆ ಈ ಬಗೆಯ ದೋಷಗಳನ್ನು ಜೀರ್ಣಿಸಿಕೊಂಡು ಭವ್ಯವಾಗಿ ಬೆಳೆದು ನಿಂತಿರುವ ಅವರ ಸಾಹಿತ್ಯ ಗೌರವದ ಗೌರಿಶಂಕರವಾಗಿದೆ. ಅಲ್ಲದೆ ಮಿತಿಗಳೂ ಇರಬೇಕು. ಮಿತಿಗಳೇ ಇಲ್ಲದ ಲೇಖಕರು ಯಾರು? ಮಿತಿಗಳಿದ್ದೂ ದೊಡ್ಡವರಾದ ಲೇಖಕರಿದ್ದಾರೆ. ವಿನಾಯಕರು ಅಂತಹ ಹಿರಿಯ ಲೇಖಕರಲ್ಲಿ ಒಬ್ಬರು. ಕನ್ನಡ-ಕರ್ನಾಟಕ ಅವರ ಮೂಲಕ ರಾಷ್ಟ್ರ ವೇದಿಕೆಯೇರಿದೆ. ಶ್ರೀಯವರು ಕರ್ನಾಟಕಕ್ಕೆ ಸೀಮಿತರಾದರು. ಆದರೆ ವಿನಾಯಕರು ಸಂಕುಚಿತ ಸೀಮಾ ರೇಖೆಗಳನ್ನು ತಮ್ಮ ಘನ ಸರ್ವಂಕಷ, ಸಾಕಲ್ಯ ವ್ಯಕ್ತಿತ್ವದಿಂದ ಸೀಮೋಲ್ಲಂಘನೆ ಮಾಡಿ ಸೀಮಾಪುರುಷರಾದರು, ರಾಷ್ಟ್ರಕವಿಯಾದರು, ಅವರ ಬರವಣಿಗೆಯ ವಿಪುಲತೆ. ವಿವಿಧತೆ, ಸತ್ವ ಯಾವುದೇ ಲೇಖಕನಿಗೆ ಸಮಾಧಾನ ಗೌರವ ತಂದುಕೊಡುತ್ತದೆ."

ಒಟ್ಟಿಗೆ ಈ ಚಿಕ್ಕ ಹೊತ್ತಿಗೆ ನಮ್ಮ ಒಬ್ಬ ಮಹತ್ವದ ಕವಿಗಳ ಸಾಹಿತ್ಯ ಕೃಷಿಯ ಸಮರ್ಥ ಪರಿಚಯ ಕೊಡುತ್ತದೆ.

ಎಚ್. ಶ್ರೀಶೈಲ ಆರಾಧ್ಯ

# ಯಕ್ಷ ಯಕ್ಷಿಯರು

ಕನ್ನಡ ವಾಙ್ಮಯಕ್ಕೆ ಹಲವು ಹತ್ತು ರೀತಿಯ ಸೇವೆ ಮಾಡಿದವರು ಹಂಪನಾ. ಅವರ 'ಯಕ್ಷ ಯಕ್ಷಿಯರು' ಒಂದು ಸಂಶೋಧನಾತ್ಮಕ ಕೃತಿ. ಜೈನ ಧರ್ಮದಲ್ಲಿ ಈ ಯಕ್ಷ ಯಕ್ಷಿಯರದು ಒಂದು ವಿಶಿಷ್ಟ ಸ್ಥಾನ. ಈ ಬಗೆಗೆ ಶ್ರೀಯುತರು ಮಾಡಿದ ಚಿಂತನೆ, ವಿಶ್ಲೇಷಣೆಯ ಫಲವೇ ಪ್ರಸ್ತುತ ಗ್ರಂಥ. ಇದು ಎತ್ತಿಕೊಂಡಿರುವ ವಿಷಯದ ಬಗೆಗೆ ಸಮಗ್ರ ಮಾಹಿತಿಯನ್ನು ಒದಗಿಸಿ ಕೊಡದಿದ್ದರೂ ಆ ದಿಕ್ಕಿನಲ್ಲಿ ಸಂಶೋಧನೆ, ಅನುಶೀಲನೆಯಲ್ಲಿ ತೊಡಗಿದವರಿಗೆ ದಿಕ್ಸೂಚಿಯಾಗಬಲ್ಲದು. ಯಾರೂ ಅಷ್ಟಾಗಿ ಗಮನಿಸದಿರುವ ವಿಷಯವನ್ನು ಹಿಡಿದು ಕೊಂಡು, ಅದನ್ನು ಕುರಿತಂತೆ ಆಕರಗಳನ್ನು ಅಭ್ಯಸಿಸಿದ ಶ್ರೀಯುತರು ತಮಗೆ ಸಾಧ್ಯವಾದಷ್ಟು ಕೆಲಸ ಮಾಡಿದ್ದಾರೆ.

ಕೃತಿಯ ಆರಂಭದ ಅಧ್ಯಾಯವಾಗಿರುವ 'ಹಿನ್ನೆಲೆ' ಮಹತ್ವಪೂರ್ಣವಾದುದು. ವಿಷಯದ ವ್ಯಾಪ್ತಿಯನ್ನು ಗಮನಿಸಿದಾಗ ಈ ಅಧ್ಯಾಯ ಇನ್ನಷ್ಟು ವಿಸ್ತಾರವೂ ಆಳವೂ ಆಗಬಹುದಾಗಿತ್ತೆನಿಸೀತು. ಯಕ್ಷರು ಹಿಂದೂ ಧರ್ಮದಲ್ಲಿ, ಆರ್ಯ ವಾಙ್ಮಯದಲ್ಲಿ ಕಂಡು ಬರುವ ಒಂದು ವರ್ಗ, ಜನಾಂಗ. "ಋಗ್ವೇದದಲ್ಲಿ ಯಕ್ಷರ ಬಗ್ಗೆ ಭೀತಿ, ಉಪೇಕ್ಷೆ ವ್ಯಕ್ತವಾಗಿದೆ" ಎಂಬ ಶ್ರೀಯುತರ ಅಭಿಪ್ರಾಯ ಶಂಕಾಸ್ಪದವಾದುದು. ಇವರು ದೇವ, ದಾನವ, ನರ, ಗಂಧರ್ವ, ಕಿನ್ನರ, ನಾಗ, ಕಿಂಪುರುಷ, ವಿದ್ಯಾಧರ ಎಂಬ ಪ್ರಭೇದಗಳಲ್ಲಿ ಒಂದು ವರ್ಗದವರು. ಈ ವರ್ಗಗಳಲ್ಲಿ ಸುರ, ಅಸುರ ಮತ್ತು ನರರು ಗಣನೀಯರು, ಉಳಿದವರುಗಳದೇನಿದ್ದರೂ 'ಛಾಯಾ' ರೀತಿ, ಇದಕ್ಕೆ ಯಕ್ಷರೇನೂ ಹೊರಗಲ್ಲ–ಮೇಲೆ ಹೇಳುವ ಮೂರು ವರ್ಗದವರನ್ನು ಭಯ ಪಡಿಸುವಷ್ಟು ಪ್ರಬಲರಲ್ಲದ ಯಕ್ಷರು ಸಂದರ್ಭೋಚಿತವಾಗಿ ಅನ್ಯ ವರ್ಗದವರು ದುರ್ಬಲ

ರಾಗಿದ್ದಾಗ ಮಾತ್ರ ತಮ್ಮ ಶಕ್ತಿ ವಿಶೇಷಗಳನ್ನು ಮರೆದಿರಲು ಸಾಕು. ಇಂತಹ ನಗಣ್ಯ ಪ್ರಸಂಗಗಳ ಆಧಾರಗಳಿಂದ ಯಕ್ಷರ ಬಗೆಗೆ ಉಳಿದವರಿಗೆ ಭೀತಿ, ಉಪೇಕ್ಷೆ ಇದ್ದಿತೆಂದು ತೀರ್ಮಾನಿಸುವುದು ಕಷ್ಟ.

ಯಕ್ಷರಿಗೆ ಕುಬೇರನು ಅಧಿರಾಜ, ಇವನ ರಾಜಧಾನಿ ಅಲಕಾವತಿ. ಈ ಯಕ್ಷರು ವನವಿಹಾರಿಗಳು,ಗಿರಿಗಹ್ವರ ತಟಾಕಗಳಲ್ಲಿ ಇವರ ಸುಳಿದಾಟ. ಕುಬೇರನು ಧನಾಧಿಪತಿಯಾದುದರಿಂದ ಆತನ ಪ್ರಜೆಗಳಾದ ಯಕ್ಷರು ಕೂಡಾ ಧನ, ಧಾನ್ಯ, ವಜ್ರ, ವೈಡೂರ್ಯ, ನಿಧಿ ನಿಕ್ಷೇಪಗಳ ರಕ್ಷಕರೆಂದಾದರು. ಸಹಜವಾಗಿ ಜನತೆ ಇವರನ್ನು ಪ್ರಸನ್ನಗೊಳಿಸಲು ಪ್ರಯತ್ನಿಸತೊಡಗಿದರೆನ್ನುವ ಲೇಖಕರ ಮಾತುಗಳು ಯಕ್ಷರ ಆರಾಧನೆಯಂತಹ ಮುಖ್ಯ ಅಂಶದ ಕಡೆ ನಮ್ಮ ಗಮನ ಸೆಳೆಯುತ್ತದೆ. ಯಕ್ಷರ ಇಚ್ಛಾನುರೂಪಧಾರಣ ಸಾಮರ್ಥ್ಯ, ಅತಿಮಾನುಷ ಶಕ್ತಿ, ಕ್ರೀಡಾಸಕ್ತಿ ವನವೃಕ್ಷವಾಸ ಮುಂತಾದ ವಿವರಗಳನ್ನು ಈ ಕೃತಿಗಳಲ್ಲಿ ಸಾಧಾರವಾಗಿ ಕೊಡಲಾಗಿದೆ. ಬಹುಶಃ ಬೇರೆ ಬೇರೆ ಮತಧರ್ಮಗಳಲ್ಲಿ ಯಕ್ಷರು ಸ್ಥಾನಮಾನವನ್ನು ಪಡೆಯಲು ಕಾರಣವಾದ ನಿಧಿ ಸಂರಕ್ಷಣೆ, ಅದೃಶ್ಯಶಕ್ತಿ ಕಾಮರೂಪತ್ವ ಮೊದಲಾದ ಅವರ ಗುಣ ಸ್ವಭಾವಗಳನ್ನು ಲೇಖಕರು ಸರಿಯಾಗಿ ಅವಲೋಕಿಸಿದ್ದಾರೆ. ಆರ್ಯರಲ್ಲಿ ಈ ಯಕ್ಷರು ಬಹುಮಟ್ಟಿಗೆ ದೇವತೆಗಳ ಪರ, ಕುಬೇರನು ಅಷ್ಟದಿಕ್ಪಾಲಕರಲ್ಲೊಬ್ಬ. ದೇವ ವೃಂದಕ್ಕೆ ಒಡೆಯನಾದ ಇಂದ್ರನ ಪ್ರಜೆಗಳಲ್ಲಿ ಇವನೂ ಸೇರುತ್ತಾನೆ. ಈ ಸಂಬಂಧಗಳನ್ನು ನೋಡಿದಾಗ ಯಕ್ಷರು ದಾನವರಿಗಿಂತ ದೇವತೆಗಳ ಬಗೆಗೆ ಒಲಿಯುವುದೇ ಹೆಚ್ಚು, ಆದರೂ ಆರ್ಯರಲ್ಲಿ ಯಕ್ಷರನ್ನು ಪೂಜಾ ಸ್ಥಾನಕ್ಕೆ ಏರಿಸಿದಂತೆ ಕಾಣುವುದಿಲ್ಲ.

ಜೈನ ಧರ್ಮದಲ್ಲಿ ಇವರು ಉಪದೇವತೆಗಳ ಸ್ಥಾನದಲ್ಲಿದ್ದಾರೆ. ಅಂದರೆ ತೀರ್ಥಂಕರರು, ಪಂಚ ಪರಮೇಷ್ಠಿಗಳು, ವಿದ್ಯಾದೇವತೆಗಳ ಅನಂತರದ ಸ್ಥಾನವಿದು. ಯಕ್ಷ ಮತ್ತು ಒಬ್ಬ ಯಕ್ಷಿ ಶಾಸನಗಳಾಗಿರುತ್ತಾರೆಂಬ ನಂಬಿಕೆಯೇನಿದ್ದರೂ ಕ್ರಿಸ್ತ ಶಕದಿಂದೀಚಿನ ಬೆಳವಣಿಗೆ ಎಂಬ ಲೇಖಕರ ಮಾತು ಉಚಿತವಾದುದು. ಅಂದರೆ ಇವರು ದೇವತೆ ಅಥವಾ ಉಪದೇವತೆಯೇನಾದರೂ ಆಗಿರಲಿ, ಅಂತೂ ಜೈನ ಧರ್ಮದ ಆರಂಭದಲ್ಲಿ, ಅಂದರೆ ಅದರ ಹುಟ್ಟಿನೊಂದಿಗೆ ಬಂದವರೇನಲ್ಲ. ಕಾಲ, ಪರಿಸ್ಥಿತಿ, ಉಪಯೋಗಗಳ ಅನಿವಾರ್ಯ ಒತ್ತಡದ ಫಲವಾಗಿ ಇವರು ಜೈನ ಧಾರ್ಮಿಕ ಪರಂಪರೆಯುಲ್ಲಿ ನುಗ್ಗಿ ಬಂದವರು. ಆರ್ಯ ಧರ್ಮದಲ್ಲಿ ಮಾತ್ರ ವೇದಗಳ ಕಾಲದಿಂದಲೂ ಇವರು ಇದ್ದುದು ಸ್ಪಷ್ಟವಾಗುತ್ತದೆ.

ಯಕ್ಷರ ಜಾತಿ, ಸ್ವಭಾವ, ಹುಟ್ಟಿನ ಬಗೆಗೆ ಲೇಖಕರು ಕೆಲವು ರೋಚಕ ಸಂಗತಿಗಳನ್ನು ಹೇಳುತ್ತಾರೆ. ಅಂತಹವುಗಳಲ್ಲಿ ಮಹಾಭಾರತದ ಪ್ರಸಂಗ ಒಂದು. ಪ್ರತಿಯೊಬ್ಬ ಕನ್ಯೆಗೂ ಪಂಚ ಪತಿಯರಿರುತ್ತಾರೆಂದು ಆ ಕಾಲದ ನಂಬಿಕೆಯಂತೆ.

ಇದನ್ನು ಒಪ್ಪಿದರೆ ವಿವಾಹವಾಗುತ್ತಿರುವವನು ಐದನೆಯವನಾಗುತ್ತಾನೆ. ಅಂದರೆ ಆ ಪಂಚಪತಿಯರು ಯಕ್ಷರೆಂದೇ ಅರ್ಥ. ಆದರೆ ಈ ನಂಬಿಕೆ ಸಾರ್ವತ್ರಿಕವಾದುದೇ ? ಕನ್ಯೆಗೆ ಯಕ್ಷರು ಪತಿಗಳೆಂಬ ಹೇಳಿಕೆ ಇನ್ನೆಲ್ಲೂ ಇರುವಂತೆ ಕಾಣದು. ಆದುದರಿಂದ ಈ ಬಿಡಿ ಪ್ರಸಂಗವೊಂದನ್ನೆತ್ತಿಕೊಂಡು ಇದೇ ಸಾರ್ವತ್ರಿಕ ಧರ್ಮ, ಸಂಪ್ರದಾಯ ಎನ್ನುವ ಶ್ರೀಯುತರ ಅಭಿಪ್ರಾಯವನ್ನು ಒಪ್ಪಿಕೊಳ್ಳುವುದು ಕಷ್ಟವಾಗುತ್ತದೆ. ಯಕ್ಷರಿಗೂ ನಾಗರಿಗೂ ಯಾವ ಸಂಬಂಧವೂ ಇಲ್ಲ. ಇವರಿಬ್ಬರೂ ಬೇರೆ ಬೇರೆ ಪ್ರಭೇದಗಳು. ಹೀಗಿರುವಾಗ ನಾಗರೂ ಕೂಡ ಯಕ್ಷ ಜಾತಿಗೆ ಸೇರಿದವರೆಂದು ಲೇಖಕರು ಭಾವಿಸಿದ್ದಾರೆ. ವಿಷ್ಣು ಭೋಗಿ ಶಯನ, ಶಿವ ನಾಗಭೂಷಣ, ಮುಚಲಿಂದ ಬುದ್ಧ ಮೂರ್ತಿಯು, ಜೈನರ ೨೩ನೇ ತೀರ್ಥಂಕರ ಪಾರ್ಶ್ವನಾಥಸ್ವಾಮಿಯ ತಲೆಯ ಮೇಲೆ ಏಳು ಹೆಡೆಯ ಸರ್ಪವಿದೆ. ಈ ತೀರ್ಥಂಕರನ ಯಕ್ಷನಾದ ಧರಣೇಂದ್ರನಂತೂ ಫಣಿರಾಜ ಅಥವಾ ನಾಗರಾಜನೇ ಆಗಿದ್ದಾನೆಯೆಂಬ ಲೇಖಕರ ಹೇಳಿಕೆಯೇ ಯಕ್ಷ ಮತ್ತು ನಾಗರು ವಿಭಿನ್ನವೆಂದು ಸಿದ್ಧಪಡಿಸಿದೆ. ಹೀಗಿದ್ದೂ ಇವರನ್ನು ಒಂದೇ ಎಂಬಂತೆ ತಳುಕು ಹಾಕಿರುವುದು ಉಚಿತವೆನ್ನಿಸುವುದಿಲ್ಲ. ಶಿವ ಮತ್ತು ವಿಷ್ಣು ದೇವತೆಗಳ ಮತ್ತು ಅವರಿಗಿರುವ ನಾಗ ಸಂಬಂಧ – ನಾಗ, ಯಕ್ಷರು ಬೇರೆ ಬೇರೆ ಎಂದೇ ಪ್ರತಿಪಾದಿಸುತ್ತದೆ, ಮೇಲಾಗಿ ಒಂದೂಗಳಲ್ಲಿ ಯಕ್ಷರದೇ ಒಂದು ಪ್ರತ್ಯೇಕ ಪ್ರಭೇದ, ಜೈನರ ತೀರ್ಥಂಕರನ ಒಬ್ಬ ಯಕ್ಷ ನಾಗರಾಜ ಎಂಬಷ್ಟೇ ಆಧಾರದಿಂದ ಯಕ್ಷ ನಾಗರ ಏಕಮೇವಾದ್ವಿತೀಯತೆಯನ್ನು ಒಪ್ಪಿಕೊಳ್ಳಲು ಸಾಧ್ಯವಾಗುವುದಿಲ್ಲ. ಯಕ್ಷರ ರೂಪದ ಆಧಾರದಿಂದ ಅವರ ನೆಲೆಯನ್ನೂ ಮೂಲವನ್ನು ಹುಡುಕುವ ಪ್ರಯತ್ನ ನಡೆಸಿರುವ ಲೇಖಕರು "ಇವರು ಓಡಿಯಾಡಿದರೆ ಹೆಜ್ಜೆಯ ಸಪ್ಪಳವು ಕೇಳುವುದು, ನೆರಳು ಬೀಳದು, ಇವರು ಅತಿ ವಿಶಾಲ ಶರೀರಿಗಳು, ನಿರ್ದಯಿ ಸ್ವಭಾವದವರು," "ಬುದ್ಧನು ೨೫೦೦ ಯಕ್ಷರನ್ನು ಶಾಂತಿಗೊಳಿಸಿದನಂತೆ," "ಬುದ್ಧನ ಕುಲದವನಾದ ಅಂಗುಲಿಮಾಲನು ಮೊದಲು ಯಕ್ಷನಾಗಿದ್ದು, ವೃಕ್ಷವಾಸಿ ನರಭಕ್ಷನಾಗಿದ್ದನೆಂದು ಹೇಳಿಕೆಯಿದೆ." "ಮರುದೇವ ಯಕ್ಷ ತನ್ನ ವಾಸಸ್ಥಳಕ್ಕೆ ಬಂದವರನ್ನು ನುಂಗಿ ಹಾಕುತ್ತಿತ್ತು." (ಜಾತಕ ಕಥೆಗಳು) ಜೈನ ಸಾಹಿತ್ಯದಲ್ಲಿ ಯಕ್ಷರ ಉಲ್ಲೇಖವನ್ನು ಹೇಳುತ್ತಾ "ವರ್ಧಮಾನ ನಗರವನ್ನು ಒಬ್ಬ ಯಕ್ಷನು ಮಹಾ ಮಾರಿಗೆ ತುತ್ತು ಮಾಡಿದ್ದರಿಂದ ಆ ನಗರದಲ್ಲಿ ಎಲ್ಲಿ ನೋಡಿದರೂ ಮೂಳೆ, ಅಸ್ಥಿಪಂಜರ ರಾಶಿಯಾಗಿ ಬಿದ್ದಿತು," ಒಬ್ಬ ಯಕ್ಷನು (ಶೂಲಪಾಣಿ) ವಾರ್ಷಿಕ ಮೇಳಗಳಲ್ಲಿ ಬಣ್ಣ ಬಳಿದುಕೊಳ್ಳುವರನ್ನು ಕೊಲ್ಲುತ್ತಿದ್ದನು" ಎಂದು ವಿಶದಪಡಿಸಿದ್ದಾರೆ. ಇವೆಲ್ಲ ವರ್ಣನೆಗಳನ್ನು ಗಮನಿಸಿದಾಗ ಯಕ್ಷರು ನರಭಕ್ಷಕರೆಂತಲೂ ಜನ ಪೀಡಕರೆಂತಲೂ ಸ್ಪಷ್ಟವಾಗುತ್ತದೆ. ಯಕ್ಷರಿಗ ಕೆಂಪು ಕಣ್ಣು, ಕಪ್ಪು ದೇಹ ಎಂಬಂತಹ ರವಿಷೇಣನ ಪದ್ಮ ಪುರಾಣದ ವರ್ಣನೆಯ ಆಧಾರದಿಂದ ಲೇಖಕರು ಯಕ್ಷರನ್ನು ದ್ರಾವಿಡ ಜನಾಂಗಕ್ಕೆ ಸೇರಿದ್ದಾರೆ. ಆದರೆ ಇದು ಐತಿಹಾಸಿಕ ಗ್ರಂಥವೇನಲ್ಲ. ಆರ್ಯ ದ್ರಾವಿಡ ಸಂಘರ್ಷ ಕಾಲಕ್ಕೆ

ಸೇರಿದ್ದಂತೂ ಅಲ್ಲವೇ ಅಲ್ಲ. ಇಲ್ಲಿನ ಯಕ್ಷರು ಕೇವಲ ಕಾಲ್ಪನಿಕರು, ಅವರಿಗೂ ದ್ರಾವಿಡರಿಗೂ ಯಾವ ಸಂಬಂಧವೂ ಇರುವಂತೆ ಕಾಣದು, "ರಾಮಾಯಣ ದಲ್ಲಿಯೂ ಯಕ್ಷ ದೊರೆಯಾದ ರಾವಣನು ಇನ್ನೊಬ್ಬ ಯಕ್ಷ ದೊರೆಯಾದ ಕುಬೇರ ನನ್ನು ಸಿಂಹಾಸನ ಚ್ಯುತನನ್ನಾಗಿಸಿ" ....ಎನ್ನುವ ಲೇಖಕರ ಮಾತನ್ನು ಸೂಕ್ಷ್ಮವಾಗಿ ನೋಡಿದಾಗ ರಾವಣ ಮತ್ತು ಕುಬೇರನ ತಂದೆ ಒಬ್ಬ ಬ್ರಾಹ್ಮಣ ಮಹರ್ಷಿ. ಇವರು ಯಕ್ಷರಲ್ಲ, ಕುಬೇರ ಅಲಕಾವತಿಗೆ ಹೋದ ಅನಂತರ ಯಕ್ಷರಿಗೆ ಅಧಿರಾಜನು, ದಿಕ್ಪಾಲಕನು, ಧನಾಧಿಪತಿಯೂ ಆಗುತ್ತಾನೆ. ಹೀಗಾಗಿ ಆತನಿಗೆ ರಾಜತ್ವ ಬರುವುದು ಅಲಕಾವತಿಗೆ ಬಂದ ಮೇಲೆ ಎಂಬುದು ಸ್ಪಷ್ಟವಾಗುತ್ತದೆ. ಈ ಅಂಶಗಳ ಆಧಾರ ದಿಂದ ಯಕ್ಷರ ವಾಸಸ್ಥಳ ಉತ್ತರ ಭಾಗವೆಂದೇ ಸ್ಪಷ್ಟವಾಗುತ್ತದೆ. ಯಕ್ಷರು ಇರುಳಿನಲ್ಲಿ ಕಾರ್ಯೋನ್ಮುಖರಾಗಿರುವಂತೆ ಕಾಣುತ್ತದೆಯೆಂದು ಲೇಖಕರು ಪ್ರಯಾಸ ಪೂರ್ವಕವಾಗಿ ಯಕ್ಷರನ್ನು (ದ್ರಾವಿಡರೆಂದೇ, ದಕ್ಷಿಣ ಕನ್ನಡದ ಕಡೆಯವರೆಂದೇ ಸಾಧಿಸಲು ಹೊರಟಿರುವುದು ಸಾಹಸವೇ ಸರಿ. ಮೊಹೆಂಜೊದಾರೂ ಸಂಸ್ಕೃತಿಯು ದ್ರಾವಿಡ ಸಂಸ್ಕೃತಿಯೆಂದು ಹೇಳುವುದುಂಟು, ಅಲ್ಲಿ ವೃಷಭನ ಚಿತ್ರ ಕಂಡು ಬಂದಿದೆ. ಗೋವುಗಳು ಮೂಲತಃ ಆರ್ಯ ಸಂಸ್ಕೃತಿಯ ಅಂಗವಾಗಿರುವಂತೆ ಎಮ್ಮೆ ದ್ರಾವಿಡ ಜೀವನದ ಭಾಗವೆಂದು ಹೇಳುವ ಲೇಖಕರು ಮೊಹೆಂಜೊದಾರೂ ಸಂಸ್ಕೃತಿ ಯನ್ನು ಆಧಾರವಾಗಿ ಬಳಸಿಕೊಳ್ಳುವಾಗ ಅಲ್ಲಿನ ಜಟಿಲತೆಯನ್ನು ಗಮನಿಸಿಲ್ಲ.

ಹಂಪನಾ ಅವರು ಜೈನ ಧರ್ಮದಲ್ಲಿ ಯಕ್ಷರ ಪ್ರವೇಶವನ್ನು ಕುರಿತು ಮಾಡಿ ರುವ ಸಂಶೋಧನೆ ಉಲ್ಲೇಖನೀಯವಾದುದು. ಇದು ಜೈನ ಧರ್ಮೀಯರಿಗೆ, ಜೈನರಲ್ಲದ ಸಾಹಿತ್ಯಾಸಕ್ತರಿಗೆ ಮತ್ತು ಸಂಶೋಧಕರಿಗೆ ಮಹತ್ವದ್ದಾಗಿದೆ. ಜೈನರಿಗೆ ತಮ್ಮ ಧರ್ಮದ ಉಪ ದೇವತೆಗಳಾದ ಯಕ್ಷ ಯಕ್ಷಿಯರ ಬಗ್ಗೆ ತಿಳುವಳಿಕೆ ನೀಡಿ ದರೆ, ಸಾಹಿತ್ಯಾಸಕ್ತರು, ಈ ಯಕ್ಷ ಯಕ್ಷಿಯರನ್ನು ಜೈನ ಕವಿಗಳು ಹೇಗೆ ಚಿತ್ರಿ ಸಿದ್ದಾರೆ. ಈ ಉಪದೇವತೆಗಳನ್ನು ಅಪೇಕ್ಷಣೀಯ ಪೀಠದಲ್ಲಿ ಹೇಗೆ ಕುಳ್ಳಿರಿಸಿದರು ಎಂಬ ಸಂಗತಿಗಳೊಡನೆ ಇವರ ಆರಾಧನೆಗೆ ವಿರೋಧವಿತ್ತೆಂಬುದು, ಜಿನೇಂದ್ರನನ್ನು ಮತ್ತು ವ್ಯಂತರಾದಿ ದೇವತೆಗಳನ್ನು ಯಾರು ಪೂಜಾ ವಿಧಾನದಿಂದ ಸಮಾನವಾಗಿ ಪರಿಗಣಿಸಿ ನೋಡುತ್ತಾರೊ ಅಂತಹವರು ನರಕಕ್ಕೆ ಹೋಗುತ್ತಾರೆ (ಸೋಮದೇವ ಸೂರಿ), ಲೆಕ್ಕಿ ಗಿಡವನ್ನು ಶ್ರಾವಕಿಯರು ಪೂಜಿಸುವುದು ಅಸಂಬದ್ಧ ಎಂಬಂತೆ ಅವರು ಯಕ್ಷ ಪೂಜೆಯ ಬಗ್ಗೆ ಅನಾದರವನ್ನು ತಾಳಿದ್ದರೆಂಬುದೂ ಗಮನ ಸೆಳೆಯುತ್ತದೆ, ಹೆಜ್ಜೆ ಹೆಜ್ಜೆಗೆ ಸಂದೇಹ ಹುಟ್ಟಿಸುವಂತಹ ಕ್ಷೇತ್ರಕ್ಕೆ ಸಂಬಂಧಿಸಿದ ಗ್ರಂಥವಿದಾಗಿದ್ದು ಲೇಖಕರು ಹಲವು ಚರ್ಚಾಸ್ಪದ ವಿಷಯಗಳನ್ನೆತ್ತಿ ಅವುಗಳ ಬಗ್ಗೆ ತಮ್ಮ ಅಭಿಪ್ರಾಯ ಗಳನ್ನು ಮಂಡಿಸಿರುವುದರಿಂದ ಸಂಶೋಧಕರನ್ನು ಆಹ್ವಾನಿಸುತ್ತದೆ. ಕನ್ನಡದಲ್ಲಿ ಈ ಬಗೆಗಿನ ಗ್ರಂಥಗಳ ಪಟ್ಟಿ ಕೊಡುವುದರೊಡನೆ ಮೂರ್ತಿ ಶಿಲ್ಪದಲ್ಲೂ ಇವರು

ಹೇಗೆ ಹೇಗೆ ಎಲ್ಲೆಲ್ಲಿ ವಿರಾಜಿಸಿದ್ದಾರೆ ಎಂಬ ಮಾಹಿತಿಯನ್ನು ಲೇಖಕರು ಒದಗಿಸುತ್ತಾರೆ. ಶರೀರಧಾರಿ ಯಕ್ಷ ಯಕ್ಷಿಯರು ಸಂಗೀತ, ನಾಟ್ಯ, ತಂತ್ರಗಳ ಕ್ಷೇತ್ರದಲ್ಲಿ ತಮ್ಮ ರಂಜನೀಯ ರೂಪಗಳಲ್ಲಿ ಕಾಣಿಸುವಂತೆ ಶಿಲ್ಪದಲ್ಲೂ ಹೇಗೆ ರಂಜನೀಯವಾಗಿದ್ದಾರೆ, ಯಕ್ಷ ಯಕ್ಷಿಯರು ಎಂಬ ವೇಷದ ಹಿಂದೆ ಕಾರ್ಯ ಪ್ರವೃತ್ತರಾದ ನಮ್ಮ ಶಿಲ್ಪಿಗಳು ತಮ್ಮ ಕಲೆಯ ಮಹೋನ್ನತಿಯನ್ನೇ ಹೇಗೆ ಪ್ರತಿಮಿಸಿದರು ಎಂಬುದು ಸಾಕಷ್ಟು ವಿಸ್ತಾರವಾಗಿದೆ.

ಆರಂಭದಲ್ಲಿ ಯಕ್ಷರು ಪರಿವಾರ ದೇವತೆಗಳ ಮಟ್ಟಕ್ಕಿದ್ದು ಮುಂದೆ ಶಾಸನ ದೇವತೆಗಳಾಗಿ ಪದೋನ್ನತಿ ಹೊಂದಿರಬೇಕು. ಇವರ ಸ್ಥಾನ ತೀರ್ಥಂಕರ ಅಕ್ಕಪಕ್ಕದಲ್ಲಿ, ಕೆಲಸ ಬಹು ಹೊಣೆಗಾರಿಕೆಯದು. ತೀರ್ಥಂಕರರಿಗೆ ಯಾರಿಂದಲಾದರೂ ತೊಂದರೆ ಬಂದರೆ, ಉಪಸರ್ಗ ಉಂಟಾದರೆ ಕೂಡಲೇ ಅದರ ಸೂಚನೆ ಯಕ್ಷರಿಗೆ ದೊರೆತು ಅವರು ಅಗತ್ಯ ರಕ್ಷಣೆಗೆ ಮುಂದಾಗುವುದುಂಟು. ೨೪ ತೀರ್ಥಂಕರರಿಗೂ ೨೪ ಯಕ್ಷರು, ಯಕ್ಷಿಣಿಯರ ವಿವರವನ್ನು ನೀಡುತ್ತಾ "ಒಂದು ತೀರ್ಥಂಕರ ಇನ್ನೊಂದು ತೀರ್ಥಂಕರ ಮೂರ್ತಿಯನ್ನು ಪ್ರತ್ಯೇಕಿಸಲು, ಗುರುತಿಸಲು ಲಾಂಛನದ ಅಗತ್ಯವಾಯಿತು. ಅದೇ ರೀತಿ ಪ್ರತಿಯೊಬ್ಬ ತೀರ್ಥಂಕರರಿಗೂ ಬೇರೆ ಬೇರೆ ಯಕ್ಷರನ್ನು ಕಲ್ಪಿಸಿಕೊಳ್ಳಲಾಯಿತು" ಎನ್ನುವ ಲೇಖಕರ ಮಾತುಗಳು ವಿಚಾರಣೀಯವಾದವು. ಯಕ್ಷರ ಹೆಸರು, ಬಣ್ಣ, ವಾಹನ, ಭುಜಸಂಖ್ಯೆ, ಆಯುಧ ತತ್ಸಂಬಂಧವಾದ ಯಕ್ಷಿಯರ ಹೆಸರು, ಬಣ್ಣ, ಆಯುಧ, ಭುಜಸಂಖ್ಯೆ ಮೊದಲಾದವುಗಳ ಆಧಾರದಿಂದ ತೀರ್ಥಂಕರರನ್ನು ಗುರುತಿಸಲು ಹೇಗೆ ಸಹಾಯವಾಗುತ್ತದೆ ಎಂಬುದನ್ನು ಪ್ರಸ್ತಾಪಿಸಿರುವುದು ಅತ್ಯಂತ ಸೂಕ್ತವಾಗಿದೆ. ಇದರೊಡನೆ ಇನ್ನೊಂದು ಗಮನಾರ್ಹವೂ ಪ್ರಶಂಸನೀಯವೂ ಆದ ಅಂಶವೆಂದರೆ ಇಲ್ಲಿರುವ ರೇಖಾಚಿತ್ರಗಳು. ವಿದ್ಯಾದೇವಿಯರ, ಯಕ್ಷ ಯಕ್ಷಿಯರ, ಜೈನ ದಿಗಂಬರ ಶ್ವೇತಾಂಬರ ಎರಡೂ ಪದ್ಧತಿಗೆ ಸಲ್ಲುವ ಇವರೆಲ್ಲರ ಒಂದು ನೂರ ಇಪ್ಪತ್ತೆಂಟು ಚಿತ್ರಗಳನ್ನು ಇಲ್ಲಿ ಒದಗಿಸಿದ್ದಾರೆ. ಬಹುಶಃ ದಕ್ಷಿಣ ಭಾರತದ ಬೇರಾವ ಭಾಷೆಯಲ್ಲೂ ಇಂತಹ ಸಮಗ್ರ ಚಿತ್ರ ಪುಸ್ತಕವಿದ್ದಂತೆ ಕಾಣದು. ಕನ್ನಡಕ್ಕೆ ಇದನ್ನು ಒದಗಿಸಿ ನಮ್ಮ ಸಾಹಿತ್ಯ ಭಂಡಾರಕ್ಕೂ ಜೈನ ಧಾರ್ಮಿಕ ಸಾಹಿತ್ಯಕ್ಕೂ ಅನನ್ಯ ಕಾಣಿಕೆ ನೀಡಿರುವ ಲೇಖಕರು ಪ್ರಶಂಸೆ, ಗೌರವಗಳಿಗೆ ಪಾತ್ರರು.

ಯಕ್ಷ ಯಕ್ಷಿಯರ, ವಿದ್ಯಾದೇವತೆಗಳ ಹೆಸರುಗಳು, ಅವರ ವಾಹನಗಳು, ಆಯುಧಾದಿಗಳು ಹಿಂದೂ ಧರ್ಮದ ದೇವತೆಗಳನ್ನು ನೆನಪಿಗೆ ತರುತ್ತವೆ. ಕೆಲವು ಸಂದರ್ಭಗಳಲ್ಲಿ ಹಿಂದೂ ಧರ್ಮದ ರಾಕ್ಷಸರು. ಇತರ ದೇವ ಜಾತಿಗಳವರು ಇವರನ್ನು ಹೋಲುವುದಿದೆ, ರೋಹಿಣಿ, ಕಾಲೀ, ಮೋಹಿನೀ. ಶ್ಯಾಮಾ, ಮಹಾಕಾಲೀ, ಶಾಂತಾ, ಚಾಮುಂಡಾ, ಗೌರಿ, ಮಾನಸಾ, ಜಯಾ, ಬಲಾ, ಅಂಬಿಕಾ

ಎಂಬ ವಿದ್ಯಾ ದೇವಿಯರ ಯಕ್ಷಿಯರ ತುಂಬುರು, ಯಕ್ಷೇಶ್ವರ, ಬ್ರಹ್ಮ, ವಿಜಯ, ಈಶ್ವರ, ಕುಮಾರ, ಷಣ್ಮುಖಿ, ಗರುಡ, ಕುಬೇರ, ವರುಣ-ಮೊದಲಾದ ಯಕ್ಷರ ಹೆಸರುಗಳನ್ನು ಉದಾಹರಿಸಬಹುದು. ಹೀಗೆಯೇ ಆಯುಧ, ಬಣ್ಣ, ವಾಹನಗಳ ದೃಷ್ಟಿಯಿಂದಲೂ ಹಿಂದೂ ಧರ್ಮದ ದೇವತೆಗಳಿಗೆ ಸಾಮ್ಯವಿದೆ. ಈ ಸಾದೃಶ್ಯದ ಹಿನ್ನೆಲೆ ಏನೆಂಬುದು ವಿಚಾರಾರ್ಹವಾದ ಸಂಗತಿ. ಪ್ರಾಯಶಃ ಜೈನ ಧರ್ಮದ ಪ್ರಚಾರ, ಅಭಿವೃದ್ಧಿಗಾಗಿ ಹೀಗೆ ಪೂರ್ವ ದೇವತೆಗಳನ್ನು ಬಳಸದಿರಲು ಸಾಕು. ಈ ನಾಡಿನಲ್ಲೇ ಹುಟ್ಟಿದ ಜೈನಧರ್ಮ ತನ್ನ ನಾಡಿನ ಪ್ರಾಚೀನ ದೇವ ದೇವತೆಗಳನ್ನು ತನ್ನವರೆಂಬ ಪ್ರೀತಿ, ದಾಕ್ಷಿಣ್ಯಕ್ಕಾಗಿ ತನ್ನ ಪರಿವಾರದಲ್ಲಿ ಇವರಿಗೆ ಆಶ್ರಯ ನೀಡಿರಲೂಬಹುದು. ಏನೇ ಆದರೂ ಧಾರ್ಮಿಕ, ಸಾಂಸ್ಕೃತಿಕ ಸಾಮರಸ್ಯದ ದೃಷ್ಟಿಯಿಂದ ಇದು ಸ್ತುತ್ಯವಾದ ಸಂಗತಿಯೇ ಸರಿ. ಜಗತ್ತಿನ ಯಾವ ಧರ್ಮವೇ ಆದರೂ ಕಾಲ ಸರಿದಂತೆ ತನ್ನ ಆರಂಭದ ಸ್ವರೂಪವನ್ನು ಅಷ್ಟಿಷ್ಟು ಮಾರ್ಪಡಿಸಿಕೊಳ್ಳುತ್ತಾ ಹೋಗುತ್ತದೆ. ಅಂದರೆ ಅನೇಕ ಅನ್ಯತ್ರ ಅಂಶಗಳು ಅದರಲ್ಲಿ ಪ್ರವೇಶ ಪಡೆಯಬಹುದು. ಬಹುಮಟ್ಟಿಗೆ ಇವು ಜನಪ್ರಿಯ ಅಂಶಗಳಾಗಿರುತ್ತವೆ. ತಂತ್ರ ಅಂತಹುದರಲ್ಲೊಂದು. ಆರ್ಯ ಧರ್ಮದಲ್ಲಿ ಇದು ಅಥರ್ವಣ ವೇದದಿಂದ ಪ್ರವೇಶ ಪಡೆಯಿತು. ಬರುಬರುತ್ತಾ ತನ್ನ ಸ್ಥಾನವನ್ನು ಗಟ್ಟಿಪಡಿಸಿಕೊಂಡಿತು. ಈ ದೇಶದಲ್ಲೇ ಹುಟ್ಟಿದ ಇನ್ನೆರಡು ಪ್ರಮುಖ ಧರ್ಮಗಳಾದ ಬೌದ್ಧ ಮತ್ತು ಜೈನ ಧರ್ಮಗಳೆರಡೂ ಈ ಪ್ರವೇಶದಿಂದ ಹೊರತಾಗಿಲ್ಲ.

ಬೌದ್ಧ ಧರ್ಮದಲ್ಲಿ ಇದು ಹೇಗೆ ಬಂದಿತು ಎಂಬುದನ್ನು ಸಂಕ್ಷೇಪವಾಗಿ ತಿಳಿಸುತ್ತಾ "ಮಹಾಯಾನ ಮೊದಲು ಒಳ್ಳೆಯ ದೃಷ್ಟಿಯಿಂದ ಪ್ರಾರಂಭವಾಯಿತು. ಕಡೆಗೆ ತನ್ನ ಉದಾತ್ತತೆಯನ್ನು ಕಳೆದುಕೊಂಡಿತು. ಬೌದ್ಧ ಭಿಕ್ಷುಗಳ ಸಂಘ ನಿಯಮಗಳಲ್ಲಿ ಶೈಥಿಲ್ಯ ತಲೆದೋರಿತು. ಅವರು ಸುಖಲೋಲುಪರಾದರು, ತಾಂತ್ರಿಕ ಪದ್ಧತಿಗಳನ್ನು ಗುಟ್ಟಾಗಿ ರೂಢಿಸಿಕೊಂಡರು. ಇದರಿಂದ ಈ ಪಂಥ ಕೇವಲ ಒಂದು ತಾಂತ್ರಿಕ ಧರ್ಮವಾಗಿ ಪರಿಣಮಿಸಿತು. ಮಹಾಯಾನದ ಬೀಳುಗಾಲದಲ್ಲಿ ಹುಟ್ಟಿ ಅದರ ಶಾಖೆಯೇ ವಜ್ರಯಾನ ಅಥವಾ ತಾಂತ್ರಿಕ ಬೌದ್ಧಧರ್ಮ. ವಂಗನಾಡಿನಲ್ಲೂ ಅಸ್ಸಾಮಿನಲ್ಲೂ ಇದು ಚಾಲ್ತಿಯಲ್ಲಿತ್ತು." 'ಅವರು ನಿರ್ವಾಣವನ್ನು, ಶೂನ್ಯ ವಿಜ್ಞಾನ ಮಹಾಸುಖ' ಎಂಬ ಮಾತುಗಳಲ್ಲಿ ನಿರೂಪಿಸಿದ್ದಾರೆ. ಗೋಪ್ಯ ತಂತ್ರಗಳಿಂದ ಕೂಡಿದ 'ಸಂಧ್ಯಾಭಾಷಾ', 'ಗುಹ್ಯ ಸಮಾಜ' ಎಂಬುವು ವಜ್ರಯಾನದ ವಿಧಿ ವಿಧಾನಗಳನ್ನು ತಿಳಿಸುವ ಗ್ರಂಥಗಳು. ಮೀನು, ಮಾಂಸ, ಮುದ್ರೆ, ಮದ್ಯ, ಮೈಥುನಗಳಿಗೆ ವಜ್ರಾಯಾನದಲ್ಲಿ ಅವಕಾಶವಿದೆ. ತಾಂತ್ರಿಕಾಚರಣೆಗಳಿಗೆ ಆದ್ಯತೆ ಕೊಟ್ಟ ಮೇಲೆ ದೇವತೆಗಳನ್ನು ಸೇರಿಸಿಕೊಳ್ಳಬೇಕಾಗುತ್ತದೆ, ಈ ವಜ್ರಯಾನದ ಆರಾಧ್ಯ ದೈವ ವಜ್ರಸತ್ವ ... ಆದಿಬುದ್ಧನೇ ಆಗಿದ್ದಾನೆಂದು ವಜ್ರಯಾನದ

ಪ್ರತಿಪಾದನೆ" ಹೀಗೆ ವಿವರಿಸಿದ್ದಾರೆ. ಕರ್ನಾಟಕದಲ್ಲೂ ಈ ತಂತ್ರಾಚಾರ ಪ್ರಧಾನ ವಾದ ವಜ್ರಯಾನ ಪಂಧ್ಯವು ಹರಡಿತ್ತು. ಬಳ್ಳಿಗಾವಿ, ಕೋಳಿವಾಡ, ಡಂಬಳ ಮೊದ ಲಾದ ಸ್ಥಳಗಳನ್ನು ಹೆಸರಿಸಿ, ತಾರಾಭಗವತೀ ಈ ಪಂಥದ ಪ್ರಮುಖ ದೇವತೆಯೆಂದು ನಿರೂಪಿಸಲಾಗಿದೆ.

ಜೈನಧರ್ಮದಲ್ಲಿಯೂ ಕೂಡ ಮಂತ್ರ, ತಂತ್ರ, ಯಂತ್ರಗಳ ಪ್ರಭಾವವು ಇದ್ದಿತೆಂದು ಹೇಳುತ್ತಾ "ಜೈನಧರ್ಮ ಕುಲದೇವತೆ, ಇಲ್ಲವೇ ಮಂತ್ರ, ತಂತ್ರ ಸಿದ್ಧಿ ಉಪಾಸನೆಗಳಿಗೆ ಪುರಸ್ಕಾರ ಕೊಡದು...ಜೈನಧರ್ಮದಲ್ಲಿ...ತಾಂತ್ರಿಕ ಪ್ರಯೋಗ ಮಾರಣ, ಉಚ್ಚಾಟನೆ ಮೊದಲಾದ ಮಲಿನ ವಿದ್ಯೆಗಳೂ ಪ್ರವೇಶ ಪಡೆದದ್ದು ಆಶ್ಚರ್ಯದ ಸಂಗತಿಯಾಗುತ್ತದೆ" ಎಂದು ತಮ್ಮ ಸಹಜ ನೋವನ್ನು, ಕಳಕಳಿಯನ್ನು ವ್ಯಕ್ತಪಡಿಸುತ್ತಾರೆ. ಹೇಗೆ ಯಂತ್ರವಿದ್ಯೆ ಬೆಳೆಯಿತು ಎಂಬುದನ್ನೂ ಗುರುತಿಸಿದ್ದಾರೆ. ಆದರೆ ಈ ಅನುಶೀಲನೆ ಇನ್ನೂ ವಿಸ್ತಾರವಾಗಬಹುದಾಗಿತ್ತು. ಅರ್ಕಕೀರ್ತಿಯೆಂಬ ಜೈನ ಯತಿ, ವಿಮಲಾದಿತ್ಯನೆಂಬ ದೊರೆಗೆ ಒದಗಿದ್ದ ಶನಿ ಸಂಕಟವನ್ನು ಈ ಮೂಲಕ ನಿವಾರಿಸಿದನೆಂದು...ಜಿನದತ್ತಮುನಿ ಮಹಾ ಮಂತ್ರವಾದಿಯಾಗಿದ್ದ...ಕೀಲುಶಕ್ತಿ ಗಳು ಹತ್ತಿರ ಸುಳಿಯದಂತೆ ಮಾಡುವ ಯಂತ್ರ ತಂತ್ರಸಿದ್ಧಿಯನ್ನು ಜೈನಯತಿಗಳು ಪಡೆದಿದ್ದರೆಂದು...ಜೈನರಲ್ಲೂ ತರಹೇವಾರಿ ಯಂತ್ರ, ಮಂತ್ರ, ತಂತ್ರ, ಚಕ್ರ ಮೊದಲಾದ ಕಲ್ಪನೆಗಳು ಹೀಗೆ ಕಾಣಿಸಿಕೊಂಡದುವರ ವಿವರಣೆಯಿದೆ. "ಏಲಾಚಾರ್ಯ, ಇಂದ್ರನಂದಿ, ಮಲ್ಲಿಷೇಣರು ತಾಂತ್ರಿಕ ದೇವಿಯರ ಸಾಧನೆ ಮಾಡಿದರು. ಏಲಾ ಚಾರ್ಯ, ಜ್ವಾಲಿನೀಕಲ್ಪ ರಚಿಸಿದ, ಇಂದ್ರನಂದಿಯ ಜ್ವಾಲಿನೀಕಲ್ಪ ಉತ್ತರದಲ್ಲೂ ದಕ್ಷಿಣದಲ್ಲೂ ಉಪಲಬ್ಧವಿದೆ...ಮಲ್ಲಿಷೇಣನ ಹೆಸರಾಂತ ಮಂತ್ರ ಶಾಸ್ತ್ರೀಯ ಗ್ರಂಥ ಭೈರವ ಪದ್ಮಾವತೀ ಕಲ್ಪ. ಈತ ವಿದ್ಯಾನುವಾದ, ಕಾಮಚಾಂಡಲಿನೀ ಕಲ್ಪ, ಯಕ್ಷಿಣೀ ಕಲ್ಪ, ಜ್ವಾಲಿನೀ ಕಲ್ಪ...ರಚಿಸಿದ್ದಾನೆ. ಸಾಗರ ಚಂದ್ರಸೂರಿಯ ಮಂತ್ರಾಧಿರಾಜ ಕಲ್ಪ, ಬಪ್ಪು ಭಟ್ಟ ವಿಜಯಕೀರ್ತಿ ಮತ್ತು ಮಲಯ ಕೀರ್ತಿ ಬರೆದ ಸರಸ್ವತೀ ಕಲ್ಪ, ಭಟ್ಟಾರಕ ಅರಿಷ್ಟನೇಮಿಯ ದೇವೀಕಲ್ಪ ಭಟ್ಟಾರಕ ಶುಭಚಂದ್ರನ ಅಂಬಿಕಾ ಕಲ್ಪ ಇವು ತಾಂತ್ರಿಕ ಪ್ರಭಾವ ಕೃತಿಗಳು....ಚಕ್ರ (ತಾಂತ್ರಿಕ) ಬರೆಯುವಾಗ ಯಕ್ಷನನ್ನು ಯಾವ ದಿಕ್ಕಿನಲ್ಲಿ ಆಹ್ವಾನಿಸಿ ಬರೆಯುತ್ತಾರೆಂಬುದು ಮುಖ್ಯವಾಗಿರು ತ್ತದೆ" ತಂತ್ರಾಚರಣೆಯು ಜೈನರಲ್ಲಿ ಬೆಳೆದು ಬಂದ ರೀತಿಯ ಬಗೆಗೆ, ಚಿಕ್ಕದಾದರೂ ಪರಿಣಾಮಕಾರಿಯಾದ ಚಿತ್ರಣವಿದು. ಅವರ ಮಾತಿನ ಧೋರಣೆಯಿಂದ ಹೇಗೆ ತಂತ್ರಾಚರಣೆಯು ಶುದ್ಧವಾದ ಜೈನಧರ್ಮವನ್ನು ಮಲೀನಗೊಳಿಸುತ್ತದೆ ಎಂಬುದು ಮನವರಿಕೆಯಾಗುತ್ತದೆ. ಇದು ಯಾರಾದರೂ ಮೆಚ್ಚಲೇಬೇಕಾದ ಧೋರಣೆ. ಬೌದ್ಧ, ಜೈನ ಧರ್ಮಗಳ ಉಗಮ ಇತಿಹಾಸವನ್ನು ಬಲ್ಲವರಿಗೆ ತಂತ್ರಗಳು ಆ ಧರ್ಮಗಳ ಧವಳತೆಯನ್ನು ಎಲ್ಲಿಯವರೆಗೆ ಮಸಕುಗೊಳಿಸಿವೆಯೆಂಬುದು ತಿಳಿದ

ವಿಷಯವೇ ಆಗಿದೆ. ಜೈನ ಧರ್ಮದಲ್ಲಿ ನುಸುಳಿ ಸೇರಿಕೊಂಡ ಈ ತಂತ್ರ ವಿದ್ಯೆಗೂ ಹಾಗೆಯೇ ಇನ್ನೊಂದು ದಾರಿಯಿಂದ, ಸದುದ್ದೇಶದಿಂದ, ಪರಿಸ್ಥಿತಿಯ ಅನಿವಾರ್ಯತೆಯಿಂದ ನುಸುಳಿ ಸೇರಿದ ಯಕ್ಷ ಯಕ್ಷಿಯರಿಗೂ ಕೊನೆಯ ಕಾಲಕ್ಕೆ ಉಂಟಾದ ಈ ಅವಿನಾಶಿ ಸಂಬಂಧದ ಬಗ್ಗೆ ಶ್ರೀಯುತ ಹಂಪನಾರವರು ಓದುಗರ ಗಮನ ಸೆಳೆಯುತ್ತಾರೆ.

ಅನುಬಂಧದೊಳಗೆ ಕನ್ನಡ ಸಾಹಿತ್ಯದಲ್ಲಿ ಯಕ್ಷರನ್ನು ಕುರಿತ ಕೆಲವು ಪದ್ಯಗಳನ್ನು, ಉದ್ಧರಿಸುತ್ತಾರೆ. ಇದು ಪೂರ್ಣವಲ್ಲ. ಆದರೆ ಆ ದಿಸೆಯಲ್ಲಿ ಹೊರಡುವ ಅಧ್ಯಯನಶೀಲರಿಗೆ ನೆರವು ನೀಡಬಲ್ಲದು. ಯಕ್ಷರನ್ನು ಕುರಿತ ಸ್ತೋತ್ರ ಸಾಹಿತ್ಯದ ಕೆಲವು ಪ್ರಭೇದಗಳು, ಕೆಲವು ನೋಂಪಿಯ ಕಥೆಗಳೂ ಇವೆ.

'ಯಕ್ಷ-ಯಕ್ಷಿಯರು' ಹೇಗೆ ಜೈನ ಸಾಹಿತ್ಯದಲ್ಲಿ ತಮ್ಮ ಆಕರ್ಷಕ ರೀತಿ ನೀತಿಗಳಿಂದ, ರೂಪಗಳಿಂದ, ಶಕ್ತಿ ವಿಶೇಷಗಳಿಂದ ಮೆರೆಯುತ್ತಾರೆಯೋ ಹಾಗೆಯೇ ಇತರ ಸಾಹಿತ್ಯದಲ್ಲೂ ಮತ್ತು ಜನಪದದಲ್ಲೂ ಅವರು ತುಂಬಿಕೊಂಡಿದ್ದಾರೆ. ರಾಜನಿಗೆ ಒಬ್ಬ ಅಧಿರಾಜನಿರುವಂತೆ, ಮಂತ್ರಿಗಳಿಗೆ ಒಬ್ಬ ಪ್ರಧಾನಮಂತ್ರಿ ಇರುವಂತೆ, ಪ್ರಭುಗಳಿಗೆ ಒಬ್ಬ ಮಹಾಪ್ರಭು ಇರುವಂತೆ, ಅನೇಕ ಚಿಕ್ಕವುಗಳನ್ನು ನಿಯಂತ್ರಿಸಲು ಒಂದು ದೊಡ್ಡದು ಇರಬೇಕಾದುದು ಪ್ರಕೃತಿ ಸಹಜವೂ ಹೌದು, ರೂಢವಾದ ವ್ಯವಹಾರ ಧರ್ಮವೂ ಹೌದು. ಪದ್ಮಾವತೀ ಯಕ್ಷಿಯೂ ಧರಣೇಂದ್ರ ಯಕ್ಷನೂ ಆ ಪರಂಪರೆಯಲ್ಲಿ ಅಗ್ರಗಣ್ಯರಿರಬಹುದು. ಹಾಗೆಂದರೆ ಇತರರನ್ನು ಬಿಡುವಂತೆ ಇಲ್ಲ. ಆ ದೃಷ್ಟಿಯಿಂದ ಸಕಲ ಯಕ್ಷ, ಯಕ್ಷಿಯರನ್ನೂ ಕುರಿತಾದ ಸಾಹಿತ್ಯ ಸ್ತೋತ್ರಗಳು, ಪೂಜಾ ಪರಿಕ್ರಮಗಳು, ಅಷ್ಟಕಗಳು, ಶತನಾಮಾವಳಿಗಳು, ಹಾಡು, ಪರಾಕುಗಳು, ನೋಂಪಿಗಳು ಮತ್ತು ಫಲ ಪ್ರಾಪ್ತಿಗಳ ಬಗ್ಗೆಯೂ ಬರೆದಿದ್ದರೆ ಇದು ಗಾತ್ರದಲ್ಲಿ ದೊಡ್ಡದಾದಂತೆಯೇ ಗುಣದಲ್ಲೂ ಉಪಯೋಗದಲ್ಲೂ ಇನ್ನೂ ದೊಡ್ಡದಾಗುತ್ತಿದ್ದಿತು. ಇಲ್ಲಿ ಯಕ್ಷ ಯಕ್ಷಿಯರದ್ದೇ ಪ್ರಸ್ತಾಪ. ಸಾಹಿತ್ಯ, ಸಂಗೀತ, ನಾಟ್ಯ, ನಾಟಕ, ಶಿಲ್ಪಗಳಲ್ಲಿ ಕಂಡುಬರುತ್ತಿರುವ ಯಕ್ಷರು ಅವರ ರೀತಿಗಳು. ತಂತ್ರದಲ್ಲಿನ ಬೇರೆ ಬೇರೆ ಯಕ್ಷರು ಇದನ್ನೆಲ್ಲಾ ಕುರಿತು ಸಮಗ್ರ ಅಧ್ಯಯನ ನಡೆಸುವ ಅವಕಾಶ ಹಂಪನಾ ಅವರಿಗಿದ್ದಿತು. ಈಗಲೂ ಈ ಗ್ರಂಥ ಅವರಿಗೆ ಆ ಶಕ್ತಿ ಇದೆ ಎಂದೇ ಸಾರುತ್ತಿದೆ.

ಡಾ. ಕೆ. ಆರ್. ಸಂಧ್ಯಾರೆಡ್ಡಿ

## ಕೆಲವು ನೋಂಪಿಯ ಕಥೆಗಳು

ಭಾರತದಲ್ಲಿ ಆರಾಧನೆಯ ಕಥೆಗಳ ಒಂದು ವಿಶಿಷ್ಟ ಪರಂಪರೆ ಇದೆ. ನಿರ್ದಿಷ್ಟ ಸಮಯ ಸಂದರ್ಭಗಳಲ್ಲಿ ಮಾತ್ರ ಈ ಕಥೆಗಳನ್ನು ನಿರೂಪಿಸಲಾಗುತ್ತದೆ. ನಿರ್ದಿಷ್ಟ ದೇವತೆಯ ಸಂಬಂಧವಾಗಿ, ನಿರ್ದಿಷ್ಟ ಫಲಪ್ರಾಪ್ತಿಗಾಗಿ ಇಂತಹ ಕಥೆಗಳು ಹುಟ್ಟಿಕೊಂಡಿವೆ. ಗಣೇಶ ಚತುರ್ಥಿಯಂದು ಚಂದ್ರನನ್ನು ನೋಡಿದ ದೋಷ ಪರಿಹಾರಾರ್ಥವಾಗಿ ಹೇಳುವ ಕಥೆ, ಸತ್ಯನಾರಾಯಣ ವ್ರತಕಥೆ, ಶನಿಮಹಾತ್ಮೆಯ ಕಥೆ ಇಂತಹವನ್ನು ಇಲ್ಲಿ ಹೆಸರಿಸಬಹುದು. ಇಲ್ಲೆಲ್ಲ ಒಂದು ನಿರ್ದಿಷ್ಟ ವ್ರತ ಪಾಲನೆಯ ಸಂದರ್ಭದಲ್ಲಿ ಆಯಾ ವ್ರತಕ್ಕೆ ಸಂಬಂಧಿಸಿದ ಕಥೆಯನ್ನು ಓದಿಸುತ್ತಾರೆ, ಇಲ್ಲವೇ ಓದುತ್ತಾರೆ. ಕಥೆಯನ್ನು ಓದಿದವರಿಗೂ ಓದಿಸಿದವರಿಗೂ ಕೇಳಿದವರಿಗೂ ಎಲ್ಲ ರೀತಿಯ ಫಲಪ್ರಾಪ್ತಿಯಾಗುವುದು ಎಂಬ ಶ್ರದ್ಧೆ ಸಂಬಿಕೆಗಳಿವೆ. ಇಂಥ ಕಥೆಗಳೆಲ್ಲವೂ ಗ್ರಂಥಸ್ಥಗೊಂಡಿರುವುದನ್ನು ಕಾಣಬಹುದು. ಒಟ್ಟಿನಲ್ಲಿ ಈ ರೀತಿಯ ಕಥೆಗಾರಿಕೆಯ ಉದ್ದೇಶ ಧಾರ್ಮಿಕವಾದದ್ದು. ಆಚರಣೆಗಳ ಸಮರ್ಥನೆಗೆ, ಭಕ್ತಿ ಪ್ರಸಾರಕ್ಕೆ ಹೇಳುವಂಥದ್ದು. ಈ ಕಥೆಗಳು ಒಂದು ನಿರ್ದಿಷ್ಟ ಪೌರಾಣಿಕ, ಧಾರ್ಮಿಕ, ಸಾಮಾಜಿಕ ನೆಲೆಯಲ್ಲಿ ಬೇರು ಬಿಟ್ಟಿರುತ್ತವೆ. ಆದ್ದರಿಂದ ಆಯಾ ಆವರಣದ ಮಿತಿಯಲ್ಲಿ ಅವನ್ನು ಅರ್ಥ ಮಾಡಿಕೊಳ್ಳಬೇಕಾಗುತ್ತದೆ. ಈ ಕಥೆಗಳಲ್ಲಿ ಆಯಾಧರ್ಮದ ವಿಚಾರಗಳೂ ವ್ಯಕ್ತಿಸಂಗತಿಗಳೂ ಅನೇಕ ಪ್ರಸಂಗಗಳೂ ಧಾರ್ಮಿಕರ ಪರಿಕಲ್ಪನೆ, ಪರಿಭಾಷೆಗಳೂ ಸೇರಿಕೊಂಡಿರುತ್ತವೆ. ಇಲ್ಲಿ ಕಥೆ ಎಷ್ಟೋ ವೇಳೆ ನಿಮಿತ್ತ ಮಾತ್ರವಾಗಿದ್ದು ಕಥೆಗಿಂತ ಹೆಚ್ಚಾಗಿ ಧರ್ಮಶಾಸ್ತ್ರ ವಿಚಾರಗಳೇ ತುಂಬಿರುವುದುಂಟು.

ಬ್ರಾಹ್ಮಣ, ವೀರಶೈವ ಮೊದಲಾದ ಮತಗಳವರಲ್ಲಿ ವ್ರತಗಳು ರೂಢಿಯಲ್ಲಿರುವಂತೆಯೇ ಜೈನರಲ್ಲಿಯೂ ಕೆಲವು

ವ್ರತಗಳು ರೂಢಿಯಲ್ಲಿವೆ. ಇಲ್ಲಿ ವ್ರತಗಳನ್ನು 'ನೋಂಪಿಗಳು' ಎಂದು ಕರೆಯುತ್ತಾರೆ. ಜೈನ ಸಮಾಜದಲ್ಲಿ ಅವರವರ ಶಕ್ತಿಗನುಗುಣವಾಗಿ ನೋಂಪಿಗಳನ್ನು ಆಚರಿಸಬೇಕೆಂಬ ನಂಬಿಕೆಯಿದೆ. ನೋಂಪಿಗಳು ಅಸಂಖ್ಯಾತ, ಪ್ರತಿಯೊಂದು ನೋಂಪಿಗೂ ಸಂಬಂಧಿಸಿದಂತೆ ಒಂದು ಕಥೆಯಿರುತ್ತದೆ.

ನೋಂಪಿ ಕಥೆಗಳು ಅಥವಾ ವ್ರತಕಥೆಗಳು ಜೈನ ಸಾಹಿತ್ಯದ ವಿಶಿಷ್ಟ ಪ್ರಕಾರವಾಗಿ ಬೆಳೆದು ಬಂದಿವೆ. ಈ ಕಥಾ ಸಾಹಿತ್ಯ ಧಾರ್ಮಿಕ ಪರಿಸರದಿಂದ ತುಂಬಿ ತುಳುಕುತ್ತಿದೆ. ಇವುಗಳ ಕರ್ತೃವಿನ ವಿಚಾರ ಸಾಮಾನ್ಯವಾಗಿ ತಿಳಿದು ಬರುವುದಿಲ್ಲ. ಎಲ್ಲೋ ಕೆಲವು ನೋಂಪಿಗಳ ಕೊನೆಯಲ್ಲಿ ಲೇಖಕರ ಹೆಸರು, ಸ್ಥಳ, ಕಾಲ ಇತ್ಯಾದಿಗಳ ಉಲ್ಲೇಖವಿದೆ. ಈ ಕಥೆಗಳ ಮೊದಲ ಭಾಗದಲ್ಲಿ ಕಥಾ ಭಾಗವಿದ್ದು ಕೊನೆಯ ಭಾಗದಲ್ಲಿ ಆಚರಣಾ ಅಂಶಕ್ಕೆ ಹೆಚ್ಚು ಪ್ರಾಧಾನ್ಯತೆಯಿರುತ್ತದೆ. ಆದ್ದರಿಂದ ನೋಂಪಿ ಸಾಹಿತ್ಯವನ್ನು ಜೈನ ಪೂಜಾ ಸಾಹಿತ್ಯದ ಒಂದು ಭಾಗವೆಂದು ಕರೆಯಲಾಗುತ್ತದೆ. ಈ ನೋಂಪಿ ಕಥಾ ಸಾಹಿತ್ಯದ ಸರ್ವತೋಮುಖವಾದ ಅಧ್ಯಯನ ಮತ್ತು ಸಂಗ್ರಹದ ಫಲವೇ ಹಂಪನಾ ಅವರ 'ಕೆಲವು ನೋಂಪಿಯ ಕಥೆಗಳು' ಎಂಬ ಗ್ರಂಥ.

ನೋಂಪಿ ಕಥೆಗಳಲ್ಲಿ ಕಾವ್ಯಗುಣ ಬಹು ಕಡಿಮೆ. ಧಾರ್ಮಿಕ ವಿಧಿವಿಧಾನಗಳ ಆಚರಣೆಗೇ ಇಲ್ಲಿ ಆದ್ಯತೆ. ಸಾಮಾನ್ಯವಾಗಿ ಪ್ರತಿಯೊಂದು ನೋಂಪಿಯಲ್ಲೂ ಆಯಾ ನೋಂಪಿಯನ್ನು ಹಿಂದೆ ಆಚರಿಸಿ ಉತ್ತಮ ಫಲಗಳನ್ನು ಪಡೆದವರ ಪೂರ್ವಕಥೆ ಇರುತ್ತದೆ. ಇದು ಬಹುಮಟ್ಟಿಗೆ ಕಲ್ಪಿತವಾದ ಕಟ್ಟು ಕಥೆಯೇ ಆಗಿರುತ್ತದೆ. ನೋಂಪಿ ಕಥೆಗಳ ಆರಂಭದಲ್ಲಿ ಸಾಮಾನ್ಯವಾಗಿ ಒಂದು ಪ್ರಾರ್ಥನಾರೂಪದ ಕಂದಪದ್ಯ ಅಥವಾ ವೃತ್ತವಿರುತ್ತದೆ. ಕಥಾರಂಭದಲ್ಲಿ ಇವುಗಳನ್ನು ಗೌತಮಗಣಧರರು ಶ್ರೇಣಿಕ ಮಹಾರಾಜನಿಗೆ ಮೊದಲು ವಿಪುಲಾಚಲದಲ್ಲಿ ಹೇಳಿದರೆಂಬ ಹೇಳಿಕೆಯಿರುತ್ತದೆ. ಅನಂತರ ಹಿಂದೆ ಆಯಾ ನೋಂಪಿಯನ್ನು ಆಚರಿಸಿ ಸದ್ಗತಿ ಪಡೆದವರ ಪೂರ್ವಕಥೆ, ವ್ರತವನ್ನು ಆಚರಿಸದೆ ಬಿಟ್ಟಿದ್ದರಿಂದ ಆದ ಕಷ್ಟನಷ್ಟಗಳು, ವ್ರತಾಚರಣೆಯ ವಿವರಗಳು, ವ್ರತವನ್ನು ಮುಗಿಸುವ ಕ್ರಮ, ಫಲ ಪ್ರಾಪ್ತಿಯ ವಿವರಗಳು, ಕಡೆಯಲ್ಲಿ ಪುನಃ ಒಂದು ಕಂದಪದ್ಯ ಈ ರೀತಿಯ ರಚನೆಯಿರುತ್ತದೆ.

ಒಟ್ಟಾರೆ ಯಾವುದೇ ಒಂದು ನೋಂಪಿಯ ಆಚರಣೆಯ ವಿಧಾನ ಮತ್ತು ಅದರಿಂದ ದೊರೆಯುವ ಫಲಪ್ರಾಪ್ತಿ ಇದನ್ನು ವಿವರಿಸುವುದೇ ಎಲ್ಲ ನೋಂಪಿಗಳ ಮುಖ್ಯ ಉದ್ದೇಶ. ಇದಕ್ಕೆ ಹಿನ್ನೆಲೆಯಾಗಿ ಈ ವ್ರತವನ್ನು ಹಿಂದೆ ಆಚರಿಸಿದವರ ವಿವರ ಬರುತ್ತದೆ. ಕೆಲವೊಮ್ಮೆ ಇದಾವ ಹಿನ್ನೆಲೆ ಇಲ್ಲದೆ ಕೇವಲ ನೋಂಪಿಯ ವಿವರ ಮತ್ತು ಫಲಪ್ರಾಪ್ತಿಯ ವಿವರವಷ್ಟೆ ಕೆಲವು ಕಥೆಗಳಿಗಿರುವುದುಂಟು. ಅಂದರೆ ಅಲ್ಲಿ ಕಥೆ ಇರುವುದೇ ಇಲ್ಲ. ನೋಂಪಿಗಳ ಕಥೆ ಸಾಮಾನ್ಯವಾಗಿ ಹೀಗಿರುತ್ತದೆ :

ಒಡ್ಡೋಲಗದಲ್ಲಿರುವ ಮಹಾರಾಜನ ಬಳಿಗೆ ವನಪಾಲಕನೊಬ್ಬನು ಬಂದು ಊರ ಹೊರಗಿನ ಉದ್ಯಾನಕ್ಕೆ ಶ್ರೇಷ್ಠ ಮುನಿ ಸಮುದಾಯ ಬಂದಿರುವ ಸುದ್ದಿಯನ್ನು ತಿಳಿಸುತ್ತಾನೆ. ರಾಜನು ಪತ್ನೀ ಪರಿವಾರ ಸಮೇತ ಅಲ್ಲಿಗೆ ಹೋಗಿ ಅವರನ್ನು ಪೂಜಿಸಿ ತನಗೆ ಈ ಸಕಲ ಸಂಪತ್ತು, ಸೌಭಾಗ್ಯಗಳು ದೊರೆತದ್ದು ಹೇಗೆ ಎಂಬುದನ್ನು ವಿವರಿಸುವಂತೆ ಕೇಳುತ್ತಾನೆ. ಆಗ ಮುನಿಗಳು ಅವನ ಭವಾವಳಿಯ ಕಥೆ ಹೇಳಿ ಹಿಂದೆ ನೋಂಪಿಯನ್ನು ಆಚರಿಸಿದ್ದರ ಫಲ ಇದು ಎಂದು ವಿವರಿಸುತ್ತಾರೆ. ಅಥವಾ ಕೆಲವು ನೋಂಪಿ ಕಥೆಗಳಲ್ಲಿರುವಂತೆ ಕಷ್ಟದಲ್ಲಿರುವವರು ಸುಖದಲ್ಲಿರುವವರನ್ನು ಕಂಡು ಅವರಿಗೆ ಆ ಪುಣ್ಯ ಹೇಗೆ ಪ್ರಾಪ್ತಿಯಾಯಿತು ಎಂದು ಕೇಳುತ್ತಾರೆ ಅಥವಾ ತಮಗೂ ಆ ಪುಣ್ಯ ಪ್ರಾಪ್ತಿಯಾಗಬೇಕಾದರೆ ಏನು ಮಾಡಬೇಕೆಂದು ಕೇಳುತ್ತಾರೆ. ಆಗ ಮುನಿಗಳು ಅಂತಹ ಫಲ ಕೊಡುವ ನೋಂಪಿಯನ್ನು ವಿವರಿಸುತ್ತಾರೆ.

ಒಂದೊಂದು ರೀತಿಯ ಸಮಸ್ಯಾ ನಿವಾರಣೆಗೆ ಒಂದೊಂದು ರೀತಿಯ ನೋಂಪಿ ಇದೆ.

ಅಚ್ಚುಕಟ್ಟಾದ, ಸ್ವಾರಸ್ಯಕರವಾದ ಕಥೆಯನ್ನೊಳಗೊಂಡಿರುವ ನೋಂಪಿಗಳೆಂದರೆ ದಶಲಕ್ಷಣನೋಂಪಿ, ಜೀವದಯಾಷ್ಟಮಿ ನೋಂಪಿ, ಶ್ರೀಮದನಂತ ನೋಂಪಿ, ಶುಕ್ರವಾರದ ನೋಂಪಿ, ಯಶೋಧರನ ಕಥೆಯನ್ನೊಳಗೊಂಡ ನೋಂಪಿಯಾಗಿದ್ದು ಇದು ಬಹಳ ಪ್ರಸಿದ್ಧ. ನೋಂಪಿಯ ಕಥೆಗಳಲ್ಲಿ ಕಾವ್ಯಗುಣದ ದೃಷ್ಟಿಯಿಂದ ಇದಕ್ಕೆ ಅಗ್ರಸ್ಥಾನ ಸಲ್ಲುತ್ತದೆ. ನೋಂಪಿ ಕಥೆಯ ಆರಂಭ-ಮುಕ್ತಾಯಗಳಲ್ಲಾಗಲೀ ಕಥೆಯ ಬೆಳವಣಿಗೆಯಲ್ಲಾಗಲೀ ವೈವಿಧ್ಯತೆ ತೀರ ಕಡಿಮೆ. ಜೈನ ಪಾರಿಭಾಷಿಕ ಪದಗಳ ಮಿಶ್ರಣವನ್ನೂ ಇಲ್ಲಿ ಕಾಣುತ್ತೇವೆ.

ನೋಂಪಿಗಳನ್ನು ಸಾಧಾರಣವಾಗಿ ಬಸದಿಗಲ್ಲಿ ಆಚರಿಸುತ್ತಾರೆ, ಇದನ್ನು ಆಚರಿಸುವ ಸಂದರ್ಭದಲ್ಲಿ ಆಹಾರ ಸೇವನೆ ಇತ್ಯಾದಿಗಳಿಗೆ ಸಂಬಂಧಿಸಿದಂತೆ ಕೆಲವು ನಿರ್ಬಂಧಗಳಿರುತ್ತವೆ. ವ್ರತಪಾಲನೆಯ ದಿನಗಳಲ್ಲಿ 'ನೋಂಪಿ ದಾರ' ಕಟ್ಟಿಕೊಳ್ಳುತ್ತಾರೆ. ವ್ರತಮುಗಿದ ಕೂಡಲೇ ನೋಂಪಿದಾರವನ್ನು ಬಿಚ್ಚಿ ಬಸದಿಯಲ್ಲಿ ಇಟ್ಟಿರುತ್ತಾರೆ. ನೋಂಪಿಯನ್ನು ಆರಂಭಿಸುವುದಕ್ಕೆ ಒಂದು ಶಾಸ್ತ್ರೋಕ್ತ ವಿಧಿ ವಿಧಾನವಿರುವಂತೆ, ಅದನ್ನು ಮುಕ್ತಾಯಗೊಳಿಸುವುದಕ್ಕೂ ಒಂದು ಕ್ರಮವಿದೆ. ಇದನ್ನು 'ಉದ್ಯಾಪನೆ' ಎಂದು ಕರೆಯುತ್ತಾರೆ. ಒಂದೊಂದು ನೋಂಪಿಯ ಉದ್ಯಾಪನಾ ಕ್ರಮವೂ ಭಿನ್ನವಾಗಿರುತ್ತದೆ, ಉದ್ಯಾಪನೆಯ ಸಂದರ್ಭದಲ್ಲಿ ತೀರ್ಥಂಕರ ಮೂರ್ತಿಗೆ ಅಭಿಷೇಕ, ಕೆಲವು ನಿರ್ದಿಷ್ಟ ಭಕ್ಷ್ಯಗಳನ್ನೊಳಗೊಂಡ ಸಂತರ್ಪಣೆ, ಗುರುಗಳಿಗೆ ಮತ್ತು ಆರ್ಯಿಕೆಯರಿಗೆ ಅಗತ್ಯವಾದ ಪಿಂಛ, ಕಮಂಡಲು, ಕಾವಿವಸ್ತ್ರ, ಬಿಳಿಸೀರೆ ಇತ್ಯಾದಿಯನ್ನು ಕೊಡಿಸುವುದು, ಮಹಾಪುರಾಣವನ್ನು ಓದಿಸುವುದು ಮುಂತಾದ ಕಾರ್ಯಗಳನ್ನೆಲ್ಲ

ಮಾಡಬೇಕಾಗುತ್ತದೆ. ಎಲ್ಲ ನೋಂಪಿಗಳಲ್ಲೂ ಉದ್ಯಾಪನೆಯ ಬಗ್ಗೆ ಸ್ಪಷ್ಟ ಸೂಚನೆ ಇರುತ್ತದೆ. ಸಾಮಾನ್ಯವಾಗಿ ಉದ್ಯಾಪನೆಯ ಕ್ರಮವನ್ನು ವಿವರಿಸುವ ವಿಷಯ ಈ ಈ ಮುಂದಿನ ವಾಕ್ಯಗಳ ರೀತಿಯಲ್ಲಿ ಆರಂಭವಾಗುತ್ತದೆ.

"ನಂದೇಶ್ವರದ ನೋಂಪಿಯುದ್ಯಾಪನ ಕ್ರಮವೆಂತಪ್ಪುದೆಂದೊಡೆ...."

"ಬಡವರು ಒಡೆಯರು ಎನ್ನದೆ ಹೆಚ್ಚಾದ ಭಕ್ತಿಪೂರ್ವಕವಾಗಿ ಈ ಕ್ರಮದಿಂದ ಶಕ್ತಿಗೆ ತಕ್ಕಂತೆ ಉದ್ಯಾಪನೆ ಮಾಡುವುದು" ಇತ್ಯಾದಿ.

ಈ ಕಥೆಗಳಲ್ಲಿ ವ್ರತದ ನೇಮನಿಯಮಗಳಿಗಿಂತ ಉದ್ಯಾಪನಕ್ರಮಕ್ಕೆ ಹೆಚ್ಚು ಒತ್ತುಕೊಟ್ಟಿರುವುದನ್ನು ಗಮನಿಸಬಹುದು. ಒಟ್ಟಿನಲ್ಲಿ ಉದ್ಯಾಪನೆ ಬಹಳ ಖರ್ಚಿನ ಕ್ರಮ. ಈ ಉದ್ಯಾಪನೆಗಳನ್ನು ಓದುತ್ತಾ ಹೋದಾಗ ಹೆಚ್ಚಿನ ಸುಖಸೌಭಾಗ್ಯಗಳು ದೊರೆಯಬೇಕಾದರೆ ಹೆಚ್ಚು ಹೆಚ್ಚು ಖರ್ಚಿನ ವ್ರತಗಳನ್ನು ಮಾಡಬೇಕು ಎಂಬ ಭಾವನೆ ಮೂಡುತ್ತದೆ.

ಜೈನಧರ್ಮದಲ್ಲಿ ಈ ನೋಂಪಿಗಳು ಸೃಷ್ಟಿಯಾದ ವಾತಾವರಣ, ಅವು ಬೆಳೆದು ಬಂದ ಬಗೆ, ಅವುಗಳ ಸ್ವರೂಪ, ಸ್ಥಾನ, ಉದ್ದೇಶ, ಅರ್ಥವಂತಿಕೆ ಮುಂತಾದ ಪ್ರತಿಯೊಂದು ಅಂಶವನ್ನೂ ಈ ಗ್ರಂಥದ ಸವಿಸ್ತಾರವಾದ ಪ್ರಸ್ತಾವನೆಯಲ್ಲಿ ಹಂಪನಾ ಅವರು ನಿರೂಪಿಸಿದ್ದಾರೆ. ಈ ಪ್ರಸ್ತಾವನೆ ಸಂಶೋಧನಾತ್ಮಕವಾದ ಅತ್ಯಂತ ಮೌಲಿಕ ಬರಹ. ಈ ವಿಸ್ತಾರವಾದ ಹಿನ್ನೆಲೆಯಿಲ್ಲದಿದ್ದರೆ ನೋಂಪಿಗಳನ್ನು ಅರ್ಥ ಮಾಡಿಕೊಳ್ಳುವುದು ಕಷ್ಟ. ಜೈನ ಸಾಹಿತ್ಯದ ಒಂದು ವಿಶಿಷ್ಟ ಪ್ರಕಾರವಾಗಿ ಬೆಳೆದು ಬಂದಿರುವ ನೋಂಪಿ ಕಥೆಗಳ ಸವಿವರವಾದ ಸಾಹಿತ್ಯಕ ಅಭ್ಯಾಸವನ್ನೂ ಇಲ್ಲಿ ಮಾಡ ಲಾಗಿದೆ. ನೋಂಪಿಯ ಪ್ರಸ್ತಾಪವಿರುವ ಕಾವ್ಯಗಳ ಉಲ್ಲೇಖ, ಇವುಗಳ ಪ್ರಸಾರ ದಲ್ಲಿ ಜೈನ ಪುರೋಹಿತ ಮಂಡಲಿಯು ವಹಿಸಿದ ಪಾತ್ರ, ನೋಂಪಿ ಕಥೆಗಳ ರಚನಾ ಸ್ವರೂಪ, ಶೈಲಿ, ಭಾಷೆ, ಜೈನ ಸಾಹಿತ್ಯದಲ್ಲಿ ನೋಂಪಿ ಕಥೆಗಳ ಸ್ಥಾನ ಇವುಗಳ ಒಂದು ವ್ಯವಸ್ಥಿತವಾದ ಅಧ್ಯಯನ ಇಲ್ಲಿ ನಡೆದಿದೆ.

ನೋಂಪಿಗಳ ಸಂಗ್ರಹದ ವಿಷಯವಾಗಿ ಇದುವರೆಗೆ ನಡೆದಿರುವ ಕಾರ್ಯ ವನ್ನು ಸಹ ಇಲ್ಲಿ ಸೂಕ್ಷ್ಮವಾಗಿ ಪರಿಚಯ ಮಾಡಿಕೊಟ್ಟಿದ್ದಾರೆ. ನೋಂಪಿಗಳ ಆಕರದ ಬಗ್ಗೆ ಕೊಟ್ಟಿರುವ ಮಾಹಿತಿಯೂ ಬಹಳ ಉಪಯುಕ್ತ. ಶ್ರೀಯುತರಾದ ಪದ್ಮರಾಜ ಪಂಡಿತ, ಶಾಂತಿರಾಜಶಾಸ್ತ್ರಿ ಅನಂತರ ಎಂ. ನೇಮಿರಾಜಶಾಸ್ತ್ರಿ, ಪಂಡಿತ ಕೆ. ಭುಜಬಲಿ ಶಾಸ್ತ್ರಿ, ಡಾ. ಬಿ. ಎನ್. ಕುಲಕರ್ಣಿ, ಬಿ. ಬಿ. ಮಹೀಪವಾಡಿ, ಬಿ. ದೇವೇಂದ್ರಕುಮಾರ ಜೈನ್ ಮತ್ತು ಹಂಪನಾ ಮೊದಲಾದವರು ಹಲವಾರು ನೋಂಪಿ ಕಥೆಗಳನ್ನು ಸಂಗ್ರಹಿಸಿದ್ದರೂ ಶಾಂತಿರಾಜ ಶಾಸ್ತ್ರಿಯಂಥವರು ಗ್ರಂಥ ಸಂಪಾದನ ದೃಷ್ಟಿಯಿಂದ ಸಂಗ್ರಹ ಕಾರ್ಯ ಮಾಡಿರುವುದು ನಿಜವಾದರೂ

ಶಾಸ್ತ್ರೋಕ್ತ ರೀತಿಯ ಹಾಗೂ ಗ್ರಂಥ ಸಂಪಾದನೆಯ ನಿಯಮಕ್ಕೊಳಪಟ್ಟ ಸಂಪಾದನೆಯ ಕಾರ್ಯಕ್ಕೆ ವಿದ್ವಾಂಸರು ತೊಡಗಬೇಕಾಗಿರುವ ಅವಶ್ಯಕತೆಯನ್ನು ಒತ್ತಿ ಹೇಳಿದ್ದಾರೆ.

ನೋಂಪಿ ಆಚರಣೆಯ ಕ್ರಮ, ಅದರ ಉದ್ಯಾಪನಾ ವಿಧಾನಗಳು ಮುಂತಾದವುಗಳ ಬಗೆಗಿನ ಮಾಹಿತಿಯನ್ನು ವಿವರವಾಗಿ ಸಂಗ್ರಹಿಸುವಲ್ಲಿ ಹಂಪನಾ ಎಷ್ಟೊಂದು ಶ್ರಮ ವಹಿಸಿದ್ದಾರೆ ಎಂಬುದೂ ಇಲ್ಲಿ ಎದ್ದು ಕಾಣುತ್ತದೆ.

ಈ ಗ್ರಂಥದಲ್ಲಿ ಹಂಪನಾ ಅವರು ಮಾಡಿರುವ ಬಹು ಮಹತ್ವದ ಕೆಲಸವೆಂದರೆ ಸಂಗ್ರಹಿಸಿದ ಮಾಹಿತಿಯ ಅರ್ಥಪೂರ್ಣ ವಿಶ್ಲೇಷಣೆ. ನೋಂಪಿಯ ಸಂಬಂಧವಾಗಿ ಬರುವ ಯಾವುದೇ ಮಾಹಿತಿಯನ್ನು—ಅಂದರೆ ಅದು ಶಾಸ್ತ್ರ ಕ್ರಮಕ್ಕೆ ಸಂಬಂಧಿಸಿರಲಿ, ಸಾಹಿತ್ಯಕ್ಕೆ ಅಥವಾ ಜೈನಧರ್ಮ ಹಾಗೂ ಸಮಾಜಕ್ಕೆ ಸಂಬಂಧಿಸಿಗಲಿ ವಿಶ್ಲೇಷಿಸಿ ನಿರೂಪಿಸಿರುವುದರಿಂದ ಜೈನಧರ್ಮದ ಪರಿಭಾಷೆ, ಆಚರಣೆ ಹಾಗೂ ಸಂಸ್ಕೃತಿಯ ಒಳನೋಟವನ್ನು ಕೊಡುವಲ್ಲಿ ಅದು ಯಶಸ್ವಿಯಾಗಿದೆ. ನಿದರ್ಶನಕ್ಕಾಗಿ ಇಂಥ ಕೆಲವು ಅಂಶಗಳನ್ನು ಹೇಳುವುದಾದರೆ ನೋಂಪಿಗಳ ಆಚರಣೆಗೆ ಆಯ್ದುಕೊಂಡಿರುವ ನಿರ್ದಿಷ್ಟ ಕಾಲ ಮತ್ತು ಸ್ಥಳದ ಹಿನ್ನೆಲೆ, ಮಹಾಪುರಾಣವನ್ನು ಓದಿಸುವ ಉದ್ದೇಶ, ಪುರಾಣ ಗ್ರಂಥಗಳನ್ನು ಬಟ್ಟೆಗಳಲ್ಲಿ ಕಟ್ಟಿಟ್ಟು ರಕ್ಷಿಸಿಕೊಳ್ಳುತ್ತಿದ್ದ ರೀತಿ, ನೋಂಪಿಗಳ ಕಾಲಮಾನ, ಭಾಷೆ, ಪರಿಸರ, ಅವುಗಳ ಆಚರಣೆಯಿಂದ ಜೈನ ಸಮಾಜದಲ್ಲಿ ಸೌಹಾರ್ದಯುತ ಸಂಬಂಧಗಳ ಅಭಿವೃದ್ಧಿಗೆ ದೊರೆತ ನೆರವು ಇಂಥ ಅಂಶಗಳನ್ನೆಲ್ಲ ವಿವರಿಸಿರುವುದರಿಂದ ನೋಂಪಿಗಳ ಪ್ರತಿಯೊಂದು ಅಂಶವೂ ಯಾವುದಾದರೊಂದು ದೃಷ್ಟಿಯಿಂದ ಅಧ್ಯಯನದ ವಸ್ತುವಾಗುತ್ತದೆ ಎಂಬುದು ಸಾಮಾನ್ಯ ಓದುಗರಿಗೆ ತಿಳಿಯುವಂತಾಗಿದೆ. ಹಂಪನಾ ಅವರು ಜೈನಧರ್ಮ ಮತ್ತು ಸಾಹಿತ್ಯಗಳ ಬಗೆಗೆ ಆಳವಾದ ಪಾಂಡಿತ್ಯ ಹೊಂದಿರುವುದನ್ನು ಈ ವಿಶ್ಲೇಷಣೆ ಮನಗಾಣಿಸುತ್ತದೆ.

ಇದಲ್ಲದೆ ನೋಂಪಿಯ ಸ್ವರೂಪ ಹಾಗೂ ಉದ್ದೇಶಗಳನ್ನು ವಿವರಿಸುವ ಮೂಲಕ ಹಂಪನಾ ಅವರು ಎಲ್ಲ ವ್ರತಾಚರಣೆಗಳ ಹಿಂದಿರುವ ಉದ್ದೇಶ ಹಾಗೂ ಅವುಗಳಿಂದ ಪರೋಕ್ಷವಾಗಿ ದೊರೆಯುವ ಲಾಭಗಳನ್ನು ಸಮರ್ಪಕವಾಗಿ ವಿಶ್ಲೇಷಿಸಿದ್ದಾರೆ.

ನೋಂಪಿಗಳನ್ನು ಅವು ರೂಪಿತವಾದ ಕಾಲದ ಹಿನ್ನೆಲೆಯಲ್ಲಿಟ್ಟು ವಿಶ್ಲೇಷಿಸುವಷ್ಟಕ್ಕೇ ಹಂಪನಾರ ದೃಷ್ಟಿ ಸೀಮಿತವಾಗಿಲ್ಲ ಎಂಬುದೂ ಇಲ್ಲಿ ಗಮನಿಸಬೇಕಾದ ಅಂಶ. ನೋಂಪಿಗಳ ಆಚರಣೆಯಿಂದ ಮಾನವನ ಬದುಕಿಗೆ ಆತ್ಮಸಂತೋಷ, ನೆಮ್ಮದಿ, ಶಿಸ್ತು, ಆರೋಗ್ಯ, ಉದಾತ್ತತೆ ಮುಂತಾದವು ಸಾಧ್ಯವಾಗುತ್ತವೆ ಎಂಬ ಉತ್ತಮಾಂಶಗಳನ್ನು ಗುರುತಿಸುವುದರ ಜೊತೆಗೆ ನೋಂಪಿಗಳು ಇಂದಿನ ಸಂದರ್ಭದಲ್ಲಿ

ಎಷ್ಟರ ಮಟ್ಟಿಗೆ ಸಂಗತವಾಗಿವೆ ಎಂಬುದರ ವಿವೇಚನೆಯನ್ನೂ ಮಾಡಿದ್ದಾರೆ. ಅವರೇ ಹೇಳುವಂತೆ ಇಲ್ಲಿ ಕೆಲವು ಪ್ರಗತಿ ವಿರೋಧಿ ಅಂಶಗಳಿರುವುದನ್ನು ಕಾಣಬಹುದು. ಇಲ್ಲಿನ ರಾಜನಿಷ್ಠ ಸಮಾಜ ವ್ಯವಸ್ಥೆ, ಬಹುಪತ್ನಿತ್ವ, ಬಹುಸಂತಾನಪ್ರಿಯತೆ, ಪೂಜೆಯ ವಿಧಿ ವಿಧಾನದಲ್ಲಿರುವ ಅದ್ದೂರಿ ವ್ಯವಸ್ಥೆಗಳು ಇಂಥವು ಇಂದಿನ ದೃಷ್ಟಿಯಲ್ಲಿ ಅರ್ಥಹೀನವಾಗಿರುವುದನ್ನು ಅವರು ಸ್ಪಷ್ಟವಾಗಿ ಗುರುತಿಸಿದ್ದಾರೆ. ಸ್ತ್ರೀಯ ಬಗೆಗಿರುವ ಕೀಳು ದೃಷ್ಟಿಯೂ ಇಲ್ಲಿನ ಪ್ರಗತಿ ವಿರೋಧಿ ಅಂಶವಾಗಿದೆ. ಮೋಕ್ಷ ಪ್ರಾಪ್ತಿಯಾಗಬೇಕಾದರೆ ಭವಾವಳಿಗಳಲ್ಲಿ ಸ್ತ್ರೀಯಾದವಳು ಆ ಜನ್ಮ ತ್ಯಜಿಸಿ ಪುರುಷ ಜನ್ಮವೆತ್ತಿ ಅನಂತರ ಮೋಕ್ಷ ಪಡೆಯುವಳು ಎಂಬ ವಿವರ ಕೆಲವು ನೋಂಪಿ ಕಥೆಗಳಲ್ಲಿದೆ. ಶ್ರೀಮದನಂತ ನೋಂಪಿಯ ಕಥೆಯಲ್ಲಿ ಗುಣವತಿ ಎಂಬಾಕೆ "ದೀಕ್ಷೆಯನ್ನು ಕೈಗೊಂಡು, ತಪವನ್ನಾಚರಿಸಿ...ಪರಮಾತ್ಮನ ಧ್ಯಾನದಿಂದ ಅಂತ್ಯಕಾಲದಲ್ಲಿ ಸಮಾಧಿ ವಿಧಿಯಿಂದ ಶರೀರ ತ್ಯಾಗ ಮಾಡಿ ಅದೇ ಕಾಲದಲ್ಲಿ ಸಾಮಾನಿಕ ದೇವನಾಗಿ ಹುಟ್ಟು ಸ್ತ್ರೀ ಜನ್ಮವನ್ನು ಕಳೆದಳು" ಎಂಬ ವಿವರ ಬರುತ್ತದೆ. ದಶಲಕ್ಷಣ ನೋಂಪಿ ಕಥೆಯಲ್ಲಿ ನಾಲ್ವರು ಕನ್ನಿಕೆಯರು ಅವಧಿಜ್ಞಾನ ಸಂಪನ್ನರಾದ ವಸಂತಸೇನರ ಬಳಿ ಬಂದು "ಸಂಸಾರವೇ ಕಷ್ಟಕರ, ಅದರಲ್ಲಿ ಸ್ತ್ರೀಜನ್ಮ ಅತ್ಯಂತ ಕಷ್ಟ. ಈ ಸ್ತ್ರೀಜನ್ಮವನ್ನು ಕಳೆದು ಸದ್ಗತಿ ದೊರಕಿಸುವ ನೋಂಪಿಯನ್ನು ತಿಳಿಸಿ" ಎಂದು ಬೇಡುತ್ತಾರೆ. ಹಿಡಿಯಕ್ಕಿಯ ನೋಂಪಿ ಕಥೆಯಲ್ಲಿ ಆ ನೋಂಪಿಯ ಫಲಪ್ರಾಪ್ತಿಯನ್ನು ಹೀಗೆ ಹೇಳಲಾಗಿದೆ ! "ಈ ನೋಂಪಿಯನ್ನು ಪುರುಷರು ನೋಂತರೆ ಪಂಚಕಲ್ಯಾಣಗಳಿಗೆ ಭಾಗಿಯಾಗುತ್ತಾರೆ. ಸ್ತ್ರೀಯರು ಸ್ತ್ರೀ ರೂಪವನ್ನು ಬಿಟ್ಟು ಪುರುಷ ರೂಪವನ್ನು ಪಡೆಯುತ್ತಾರೆ."

ಒಟ್ಟಿನಲ್ಲಿ ಆಳವಾದ ಸಂಶೋಧನೆಗೆ ನೋಂಪಿ ಕಥೆಗಳು ವ್ಯಾಪಕವಾದ ಸಾಮಗ್ರಿಯೊದಗಿಸುತ್ತವೆ. ಇವುಗಳ ವ್ಯವಸ್ಥಿತ ಸಂಗ್ರಹ, ಅಧ್ಯಯನ ಹಾಗೂ ಮೌಲ್ಯಮಾಪನವಾಗಬೇಕಾಗಿರುವ ಅವಶ್ಯಕತೆಯನ್ನು ಹಂಪನಾರ 'ನೋಂಪಿಯ ಕಥೆಗಳು' ಮನದಟ್ಟು ಮಾಡಿಕೊಡುವ ಗ್ರಂಥ. ಇವುಗಳನ್ನು ಗಂಭೀರವಾಗಿ ಅಧ್ಯಯನಿಸಿದವರಲ್ಲಿ ಹಂಪನಾರೇ ಮೊದಲಿಗರು ಎಂಬುದರಲ್ಲಿ ಸಂದೇಹವಿಲ್ಲ.

ಡಾ. ಮಲ್ಲಿಕಾರ್ಜುನ ಲಠ್ಠೆ

# ಕರ್ನಾಟಕದ ಜಾತ್ರೆಗಳು

ಜಾತ್ರೆಗಳಲ್ಲಿ ಜನರ ಜಾತ್ರೆಗಳಿವೆ, ದನದ ಜಾತ್ರೆಗಳೂ ಇವೆ, ದೇವದೇವತೆಗಳ ಪ್ರೀತ್ಯರ್ಥವಾಗಿ ಇಲ್ಲವೆ ಸಂತ-ಶಿವ ಯೋಗಿಗಳ ಪುಣ್ಯಸ್ಮರಣೆಗಾಗಿ ಜನರ ಜಾತ್ರೆಗಳು ಹುಟ್ಟಿ ಕೊಂಡರೆ ದನದ ಜಾತ್ರೆಗಳು ಮಾರಾಟ-ಖರೀದಿಗಾಗಿ ಸೇರಿರುತ್ತವೆ. ಶ್ರೀಸಾಮಾನ್ಯರ ಶ್ರದ್ಧೆ, ನಂಬಿಗೆ, ಆಚರಣೆ ಸಂಪ್ರದಾಯಗಳ ಮೇಲೆ ಭಯ-ಭಕ್ತಿ ಹುಟ್ಟಿ ಹರಕೆ ಪೂರೈಸು ವುದಕ್ಕೆಂದು ಒಂದೆಡೆ ಊರ ಜನರೆಲ್ಲರೂ ಸೇರಿ, ಸಾರ್ವತ್ರಿಕವಾಗಿ ದೇವರ ಉತ್ಸವ, ಆರಾಧನೆ ಪೂಜೆ ನಡೆಸುವುದಕ್ಕೆ ಜಾತ್ರೆ ಎನ್ನುವರು, ಹೆಚ್ಚು ಜನ ಸೇರಿದಾಗ 'ಜನಜಾತ್ರೆ' ಎಂಬ ಪಡೆನುಡಿಯನ್ನು ಬಳಸುತ್ತೇವೆ.

ದೇವರ ಜಾತ್ರೆಗಳು ಲೋಕದ ಎಲ್ಲೆಡೆಯಲ್ಲೂ ಕಂಡು ಬರುತ್ತವೆ. ಪ್ರತಿಯೊಂದು ಜನಾಂಗದವರೂ ತಮ್ಮ ತಮ್ಮ ದೇವರ ಜಾತ್ರೆಗಳನ್ನು ನಡೆಸಿಕೊಂಡು ಬಂದದ್ದುಂಟು. ಗ್ರಾಮಸ್ಥರು ಗ್ರಾಮದೇವತೆಗಳ ಜಾತ್ರೆಗಳನ್ನು ಬಹುವಿಜೃಂಭಣೆಯಿಂದ ಆಚರಿಸುತ್ತ ಬಂದವರಾಗಿದ್ದಾರೆ. ಹಾಗೆಯೆ ಸಂತರ, ಶಿವಯೋಗಿ ಗಳ ಜಾತ್ರೆಗಳೂ ರೂಢಿಯಲ್ಲಿ ಬಂದಿರುತ್ತವೆ. ಇವು ಸಮಷ್ಟಿ ಪ್ರಜ್ಞೆಯ ಸಾಮಾಜಿಕ ಆಚರಣೆಗಳಾಗಿವೆ.

ಯಾವುದೇ ಜಾತ್ರೆ ನಡೆಯಬೇಕಾದರೆ ಮೊದಲು ಆ ಊರ ಗ್ರಾಮದೇವತೆಯಾಗಿರುವ ದ್ಯಾಮವ್ವನ ಉಡಿ ತುಂಬುವರು. ಊರ ಹಿರಿಯರೆಲ್ಲರೂ ಸೇರಿಕೊಂಡು ಜಾತ್ರೆಯ ದಿನವನ್ನು ನಿರ್ಧರಿಸುವರು. ಜಾತ್ರೆಯ ಕೆಲಸಕ್ಕೆಂದೇ ಎಲ್ಲರೂ ಸೇರಿ ಕೆಲಸ ಮಾಡಲು ತಮ್ಮ ತಮ್ಮ ಪ್ರತಿನಿತ್ಯದ ಉದ್ಯೋಗಕ್ಕೆ ಬಿಡುವು ಕೊಡುವರು. ಅದನ್ನು ವಾರ ಬಿಡುವುದೂ ಎಂದೂ ಕರೆಯುವರು. ಜಾತ್ರೆಯ ಸಿದ್ಧತೆ ನಡೆಸುವರು. ತೇರಿನ ಜಾತ್ರೆಯಾದರೆ ಗಾಲಿ ಏರಿಸುವರು ಊರಲ್ಲಿ ಪಟ್ಟಿ ಎತ್ತಲು

ಸುರುವು ಮಾಡುವರು. ಅವರವರ ಉತ್ಪನ್ನ ನೋಡಿಕೊಂಡು ಪಂಚರು ಮೊದಲೇ 'ಹಣ' ನಿಗದಿಪಡಿಸುವರು. ಹೆಚ್ಚು ಕಡಿಮೆ ಕೊಟ್ಟರೂ ಸ್ವೀಕರಿಸುವರು. ಬಡಿಗರು ತೇರು ಕಟ್ಟಲು ಪ್ರಾರಂಭಿಸುವರು. ರೈತರು ತೇರಿಗೆ ಬೇಕಾದ ಕಟ್ಟಿಗೆ ತಂದು ಕೊಡುವರು. ಸಿಂಪಿಗರು ದೇವರ ಮತ್ತು ತೇರಿನ ಬಟ್ಟೆಗಳನ್ನು ಹೊಲಿದು ಕೊಡುವರು. ಗುಡಿಯ ಪೂಜಾರಿಗಳು ಗುಡಿ ಗುಂಡಾರಗಳಿಗೆ ಮತ್ತು ಊರವರೆಲ್ಲರೂ ತಮ್ಮ ತಮ್ಮ ಮನೆಗಳಿಗೆ ಸುಣ್ಣ-ಬಣ್ಣ ಹಚ್ಚುವರು. ಬಯಲಾಟದ ಕಲಾಕಾರರು ತಮ್ಮ ತಮ್ಮ ಆಟದ ಕಥಾಪುಸ್ತಕಗಳನ್ನು ಪೂಜೆಮಾಡಿ ತಾಲೀಮು ನಡೆಸುವರು. ಹೀಗೆ ಜಾತ್ರೆಯ ಪೂರ್ವ ಸಿದ್ಧತೆಯಲ್ಲಿ ಊರಿಗೆ ಊರೇ ತೊಡಗಿ ಮನೆ, ಊರು, ಗುಡಿ ಚಂದ ಕಾಣುವಂತೆ ಮಾಡುವರು. ಎಲ್ಲರ ಸಹಾಯ ಸಹಕಾರದೊಂದಿಗೆ ಗೊತ್ತುಪಡಿಸಿದ ಅವಧಿಯಲ್ಲಿ ಉತ್ಸಾಹದಿಂದ ಜಾತ್ರೆ ನಡೆಸುವರು. ಜಾತ್ರೆ ಒಂದು ದಿನದಿಂದ ಹಿಡಿದು ತಿಂಗಳುಗಟ್ಟಲೆ ನಡೆಯುವುದುಂಟು. ತೇರಿನ ಜಾತ್ರೆ ಇದ್ದರೆ ಮೊದಲನೆಯ ದಿನ ಉಚ್ಚಾಯಿ ಎಳೆದು ಮರುದಿನ ದೊಡ್ಡ ತೇರು ಜಗ್ಗುವರು. ತೇರಿಲ್ಲದ ಜಾತ್ರೆಗಳೂ ಇವೆ. ಅಲ್ಲಿ ಬರಿಯ ಪಲ್ಲಕ್ಕಿ ಉತ್ಸವ, ಮೆರವಣಿಗೆ ನಡೆಯುವ ವಾಡಿಕೆಯಿರುತ್ತದೆ.

ಜಾತ್ರೆಗೆ ಊರವರೆಲ್ಲರೂ ಸೇರುವುದಂತೂ ಖಂಡಿತ. ನೆರೆಹೊರೆಯ ಗ್ರಾಮಗಳ ಜನರಲ್ಲದೆ ಬಹುದೂರ ದೂರದ ಜನರೂ ಬಂದು ದರ್ಶನಪಡೆದು ಪುನೀತರಾಗುವರು. ಊರ ಜನರ ನೆಂಟರಿಷ್ಟರಂತೂ ಮೊದಲೇ ಹಾಜರಿರುವರು. ಬಂದವರೆಲ್ಲರೂ ತಮ್ಮ ತಮ್ಮ ಶಕ್ತ್ಯಾನುಸಾರ ದೇವರಿಗೆ ಹೂ–ಹಣ್ಣು–ಕಾಯಿ–ನೈವೇದ್ಯ–ದಕ್ಷಿಣೆ ಸಲ್ಲಿಸಿ, ಹರಕೆ ತೀರಿಸಿ, ತೇರಿನ ಹಗ್ಗಕ್ಕೆ ಕೈ ಹಚ್ಚಿ ಎಳೆದು, ಶಿಖರಕ್ಕೆ ಹಣ್ಣು-ಕಾಯಿ-ಉತ್ತತ್ತಿ ಎಸೆದು ಧನ್ಯರಾದೆವೆಂದು ಬೆಂಡುಬೆತ್ತಾಸ ಖರೀದಿಸಿ ಊರಿಗೆ-ಮನೆಗೆ ಮರಳುವದನ್ನು ಕಾಣಬಹುದಾಗಿದೆ.

ಶ್ರದ್ಧಾವಂತರಿಗೆ ಮನಸ್ಸಿಗೆ ನೆಮ್ಮದಿಯುಂಟಾದರೆ ವ್ಯಾಪಾರಿಗಳಿಗೆ ಹಣದ ಲಾಭವಾಗುವುದು. ತರತರದ ವಸ್ತುಗಳ ಅಂಗಡಿಗಳನ್ನು ಈ ಜಾತ್ರೆಯಲ್ಲಿ ಮೊದಲೇ ಸಾಲುಸಾಲಾಗಿ ಹಚ್ಚಿರುವರು ಅವರಿವರಿಗೆ ಬೇಕಾದ ದಿನನಿತ್ಯದ ವಸ್ತು-ವಡವೆ, ಉಪಕರಣ, ಗಡಿಗೆ–ಮಡಕೆ, ಪಾತ್ರೆಗಳು, ಕಾಳು–ಕಡ್ಡಿ, ಬಟ್ಟೆ-ಬರೆ, ಬಳೆ-ಗಿಳೆ ಮೊದ ಲಾದ ವಸ್ತುಗಳ ಮಾರಾಟ ಮಾಡುವ ವ್ಯಾಪಾರಿಗಳು ಹೆಚ್ಚಿನ ಲಾಭ ಗಿಟ್ಟಿಸಿಕೊಂಡು ಸಂತೋಷಪಡುವರು. ಮಕ್ಕಳನ್ನು ಜಾತ್ರೆಗೆ ಕರೆತಂದ ತಂದೆತಾಯಿಗಳು ಅವರಿಗೆ ಗೊಂಬೆ, ಆಟಿಗೆ-ಖರೀದಿಸಿಕೊಟ್ಟು, ತೊಟ್ಟಿಲ-ಚಕ್ರ ಮತ್ತು ಚಿಕ್ಕರೈಲಿನಲ್ಲಿ ಕೂಡಿಸಿ ಸಂತೋಷಪಡಿಸಿ ತಾವೂ ಆನಂದಪಡುವರು. ಜಾತ್ರೆಗೆ ಬಂದ ಜನರು ಅನ್ನ ದಾಸೋಹ, ಜ್ಞಾನದಾಸೋಹಗಳಲ್ಲಿಯೂ ಭಾಗಿಯಾಗಿ ಮರಳುವರು.

ಜಾತ್ರೆಗೆ ಮುಡಿಪು ಸಲ್ಲಿಸುವವರುಂಟು, ಪಾತರದವರು ಲಾಸ್ಯವಾಡುವುದುಂಟು,

ಹರಕೆಹೊತ್ತವರು ದೇವದಾಸಿಯರಾಗುವ ದೀಕ್ಷೆ ತೊಡುವದುಂಟು. ಕೋಳಿ, ಕುರಿ ಕೋಣಗಳನ್ನು ಬಲಿಕೊಡುವ ದುಷ್ಟ ಸಂಪ್ರದಾಯವೂ ಅಲ್ಲಲ್ಲಿ ಈಗಲೂ ಉಳಿದು ಕೊಂಡು ಬಂದಿರುತ್ತದೆ. ಅಂತೂ ತಮ್ಮ ಹರಕೆ ಕೈಗೂಡಿತೆಂದು ಸಂತೃಪ್ತರಾಗಿ ಹಿಂತಿರುಗುವರು. ಯಾವ ಜಾತಿ ಭೇದವಿಲ್ಲದೆ ಜಾತ್ರೆಗಳಲ್ಲಿ ಜನ ಸೇರುವುದು ನಿಜಕ್ಕೂ ಸಮರಸ ಜೀವನಕ್ಕೆ, ರಾಷ್ಟ್ರೀಯ ಭಾವೈಕ್ಯತೆಗೆ ನಿದರ್ಶನವಾಗಿರುತ್ತದೆ. ಹೀಗೆ ಶ್ರದ್ಧೆಗೆ ಅಂಟಿಕೊಂಡು, ಬಾಯಿಂದ ಬಾಯಿಗೆ, ಕಿವಿಯಿಂದ ಕಿವಿಗೆ ಹರಿದು ಬಂದ ಜಾತ್ರೆಯ ನಡವಳಿಕೆಯನ್ನು ಇತ್ತೀಚೆಗೆ ಮಾತ್ರ ಜಾನಪದ ವಿದ್ವಾಂಸರು ಅಧ್ಯಯನ ಮಾಡುವಂತಾಗಿದೆ. ಪ್ರತಿಫಲವಾಗಿ ಕರ್ನಾಟಕದಲ್ಲಿ ಮೊದಲುಬಾರಿಗೆ 'ಕರ್ನಾಟಕದ ಜಾತ್ರೆಗಳು' ಕುರಿತಾದ ಅಖಿಲ ಕರ್ನಾಟಕ ಮಟ್ಟದ ವಿಚಾರ ಸಂಕಿರಣವೊಂದು ಮೈಸೂರು ವಿಶ್ವವಿದ್ಯಾಲಯದ ಬಿ. ಆರ್. ಪ್ರಾಜೆಕ್ಟಿನಲ್ಲಿರುವ ಸ್ನಾತಕೋತ್ತರ ಕೇಂದ್ರದ ಕನ್ನಡ ಅಧ್ಯಯನ ಸಂಸ್ಥೆಯ ಆಶ್ರಯದಲ್ಲಿ ನಡೆಯಿತು. ಈ ಸಂದರ್ಭದಲ್ಲಿ ವಿಚಾರ ಸಂಕಿರಣದ ಉದ್ಘಾಟಕರಾಗಿ ಆಮಂತ್ರಿತರಾದ ಡಾ|| ಹಂಪ. ನಾಗರಾಜಯ್ಯ ಅವರು ಮಾಡಿದ ಉದ್ಘಾಟನೆ ಪರಭಾಷಣವೇ ಈ 'ಕರ್ನಾಟಕ ಜಾತ್ರೆಗಳು' ಎಂಬ ಕೃತಿಯಾಗಿರುತ್ತದೆ.

ಹಂಪನಾ ಅವರ ಕರ್ನಾಟಕದ ಜಾತ್ರೆಗಳು ಕೃತಿ ಕನ್ನಡ ಸಾಹಿತ್ಯ ಪರಿಷತ್ತಿನಿಂದ ಪ್ರಕಟವಾಗಿದ್ದು ಅದೇ ಸಮಯದಲ್ಲಿ ಈ ಗ್ರಂಥ ಬಿಡುಗಡೆಯೂ ಆಯಿತು. $\frac{1}{8}$ ಡೆಮ್ಮಿ ಆಕಾರದಲ್ಲಿ ನಾಲ್ವತ್ತಕ್ಕೂ ಹೆಚ್ಚು ಜಾತ್ರೆಗಳಿಗೆ ಸಂಬಂಧಿಸಿದ ಭಾವಚಿತ್ರಗಳನ್ನು ಹೊಂದಿದ್ದ ಈ ಕೃತಿ ಒಟ್ಟು ೨೩ ಪುಟಗಳದ್ದಾಗಿದೆ. ಬೆಲೆ ಹತ್ತು ರೂಪಾಯಿ.

ಜಾನಪದ ಅಧ್ಯಯನ ಮಾನವ ಶಾಸ್ತ್ರಜ್ಞರ ಸಾಂಸ್ಕೃತಿಕ ಅಧ್ಯಯನದಲ್ಲಿ ಸಮಾವೇಶಗೊಂಡಿದೆ. ಇದರ ಪ್ರಾಚೀನತೆ, ಹರಹು, ಆಳವನ್ನು ಒಳಹೊಕ್ಕು ಅಧ್ಯಯನ ಮಾಡಿದಾಗ ಇದೊಂದು ಪ್ರತ್ಯೇಕ ವಿಜ್ಞಾನವೆಂದು ವಿದ್ವಾಂಸರು ಗುರುತಿಸಿದರು. ಇಂಗ್ಲಿಷ್ ಕವಿಗಳೆಲ್ಲರೂ ಈ ಕಡೆಗೆ ದೃಷ್ಟಿ ಹರಸಿದರು. ಇಂಗ್ಲಿಷ್ ಭಾಷೆಯ ಪ್ರಭಾವ ಕನ್ನಡ ಸಾಹಿತ್ಯದ ಮೇಲೂ ಉಂಟಾಯಿತು. ಈ ಹಿನ್ನೆಲೆಯೊಂದಿಗೆ ತಮ್ಮ ಭಾಷಣ ಪ್ರಬಂಧವನ್ನು ಪ್ರಾರಂಭಿಸಿದ ಹಂಪನಾ ಅವರು ಯೇಟ್ಸ್ ಮುಂತಾದ ಶ್ರೇಷ್ಠ ಕವಿಗಳೂ ಪುರಾಣಕಥೆ ಸಂಗ್ರಹಸಿದ್ದನ್ನು ಉಲ್ಲೇಖಿಸಿದ್ದಾರೆ. ಕನ್ನಡಿಗರು ಪಶ್ಚಿಮದಿಂದಲೇ ಸಂಗ್ರಹ ಪ್ರಕಟನೆಯ ಕಾರ್ಯ ಚಟುವಟಿಕೆಗಳನ್ನು ವಿವರಿಸಿದ್ದಾರೆ. ಗರತಿಯ ಹಾಡು, ಮಲ್ಲಿಗೆದಂಡೆ, ಹುಟ್ಟಿದಹಳ್ಳಿ, ಜೀವನ ಸಂಗೀತ, ಮೊದಲಾದ ಕೃತಿಗಳನ್ನು ಉಲ್ಲೇಖಿಸಿದ್ದಾರೆ. ಮಧುರಚೆನ್ನ, ಬೇಟಗೇರಿ, ಬೇಂದ್ರೆ, ಮಾಸ್ತಿ, ಬಿ.ಎಂ.ಶ್ರೀ–ಹಣಮಂತೇಗೌಡ ಮೊದಲಾದವರಿಂದ ಸಂದ ಜಾನಪದ ಸೇವೆಯನ್ನು ಸ್ಮರಿಸಿದ್ದಾರೆ. ಇತ್ತೀಚಿನ ದಿನಗಳಲ್ಲಿ ಜಾನಪದ ಅಧ್ಯಯನದ ಒಲವು ಮೂಡಿದ್ದು ಪಾಶ್ಚಾತ್ಯರಿಂದಲೇ ಎಂಬುದಾದರೂ ಕರ್ನಾಟಕದಲ್ಲಿ ಕ್ರಿ. ಶ. ಸು. ೧೬೦೦ರಲ್ಲಿದ್ದ ಬ್ರಹ್ಮಕವಿಯ 'ವಜ್ರ

ಕುಮಾರ ಚರಿತೆ'ಯಲ್ಲಿ ಬರುವ 'ಜನಪದ' ಶಬ್ದ ಚಾರಿತ್ರಿಕ ದಾಖಲೆಯನ್ನು ಸೂಚಿಸುತ್ತದೆಂದು ಹೇಳಿ ಹೊಸಬೆಳಕು ಬೀರಿದ್ದಾರೆ. ಅದಕ್ಕೆಂದು ಈ ಕೆಳಗಿನ ಪದ್ಯ ವನ್ನು ಎತ್ತಿಕೊಟ್ಟಿದ್ದಾರೆ :

"ಜಿನಮತಗಗನ ದಿವಾಕರ ವಾತ್ಸಲ್ಯ
ಅನುಪಮಗುಣ ರತ್ನಾಕರನೂ
ಅನಿಮಿಷ ವಿಭವನು ವಜ್ರಕುಮಾರನ
ಜನಪದ ಕಥೆಯ ಬಣ್ಣಿಪೆನೂ"

ಮುಂದುವರೆದು ವೈಜ್ಞಾನಿಕ ತಳಹದಿಯ ಮೇಲೆ ಕನ್ನಡದಲ್ಲೂ ಇಂದು ಅಧ್ಯಯನ ನಡೆಯುತ್ತಿರುವುದನ್ನು ಸಂಕ್ಷೇಪವಾಗಿ ವಿವರಿಸಿದ್ದಾರೆ. ಅದರ ಕಾರಣ ಕರ್ತರನ್ನೂ (ದೇಜಗೌ, ಹಾಮನಾ) ಸಂಘ ಸಂಸ್ಥೆಗಳನ್ನೂ (ರಾಜ್ಯದ ವಿಶ್ವವಿದ್ಯಾಲಯ ಗಳು, ಕನ್ನಡ ಸಾಹಿತ್ಯ ಪರಿಷತ್ತು, ಜಾನಪದ ಅಕೆಡೆಮಿ ಮುಂ ) ನೆನೆದು ಅಧ್ಯಯನ ನಡೆದು ಬಂದ ಹೆಜ್ಜೆಗಳನ್ನು ಗುರುತಿಸಿದ್ದಾರೆ. ಸಂಶೋಧನೆ–ಸಂಗ್ರಹಕಾರ್ಯ ಬೈಗುಳ, ಒಗಟು, ಶಿಶುಪ್ರಾಸ, ಗಾದೆ, ಆಚರಣೆಗಳು, ಲೈಂಗಿಕತೆ, ನಂಬಿಕೆಗಳು, ಗೋಡೆಬರಹ-ಈ ಮೊದಲಾದ ಹತ್ತಾರು ವಿಷಯಗಳತ್ತ ನಡೆಯಬೇಕಾಗಿದೆಯೆಂದು ವಿದ್ವಾಂಸರ ಗಮನ ಸೆಳೆದಿದ್ದಾರೆ.

ನಿಸರ್ಗದ ಮಡಿಲಲ್ಲಿ ಚಳಿ, ಮಳೆ, ಗಾಳಿ, ಬಿಸಿಲು ಎನ್ನದೆ ಹೊಟ್ಟೆಯ ಪಾಡಿ ಗಾಗಿ ನಿರಂತರ ಶ್ರಮಿಸುತ್ತಿರುವ ಜನತೆ ಕಲ್ಲು, ಮಣ್ಣು, ಮರಗಳಲ್ಲಿ ದೈವತ್ವದ ಅಂಶವನ್ನೂ ಕಂಡುಕೊಂಡು ಶ್ರದ್ಧೆಯಿಂದ ಹಲವಾರು ಆಚರಣೆಗಳನ್ನು ರೂಢಿಯಲ್ಲಿ ತಂದಿದ್ದಾರೆ. ಇಂತಹವುಗಳಲ್ಲಿ ಜಾತ್ರೆಯೂ ಒಂದಾಗಿದೆ. ಕರ್ನಾಟಕದ ಜಾತ್ರೆಗಳ ವಿಷಯಕ್ಕೆ ಬರೆಯುತ್ತಾ ಹಂಪನಾ ಅವರು ಸ್ಥಳದ ಇಲ್ಲವೇ ದೈವದ ಹೆಸರಿನಿಂದ ಜನಪ್ರಿಯವಾಗಿವೆ ಎನ್ನುತ್ತಾರೆ. ಸಮಸ್ತಸಾಮಾಜಿಕ ಪರಂಪರೆಯ ಅಭಿವ್ಯಕ್ತಿ ಯಾಗಿರುವ ಜಾನಪದದ ಅನೇಕ ಅಂಶಗಳನ್ನು ಒಳಗೊಂಡಿವೆಯೆಂದು ಬರೆಯುತ್ತ ಯಾವುದೋ ಒಂದು ನಿಗದಿಯಾದ ವೇಳೆಯಲ್ಲಿ ಜನರೆಲ್ಲ ಸೇರಿ ದೇವರನ್ನು ಆರಾಧಿ ಸುವುದಕ್ಕೆ ಜಾತ್ರೆ ಎಂದು ಕರೆಯಲಾಗುತ್ತದೆ ಎಂದಿದ್ದಾರೆ. ಕೇವಲ ಆರಾಧನೆ ಯೆಂದರೆ ಜಾತ್ರೆಯಾಗಲಾರದು. ಜೊತೆಗೆ ತರತರದ ಅಂಗಡಿಗಳು, ಕಲಾಪ್ರದರ್ಶನ ಗಳಂತಹ ಉಳಿದ ಮನರಂಜನೆ ಕಾರ್ಯಕ್ರಮಗಳೂ ಅಲ್ಲಿ ನಡೆಯಬೇಕಾಗುತ್ತದೆ. ಪಟ್ಟಣದಲ್ಲಿ ನಡೆಯುವಂತಹವು ಶಿಷ್ಟ ಜಾತ್ರೆಗಳಾಗಿಯೂ ಹಳ್ಳಿಗಳಲ್ಲಿ ಜರುಗು ವಂತವು ಗ್ರಾಮೀಣರ ಜಾತ್ರೆಗಳಾಗಿಯೂ ಕಂಗೊಳಿಸುತ್ತವೆ. ಈ ಗ್ರಾಮೀಣರ ಜಾತ್ರೆ ಗಳಲ್ಲಿ ಜನಪದ ಸಂಸ್ಕೃತಿ ಕೂಡಿಕೊಂಡಿರುತ್ತದೆ ಎಂದಿದ್ದಾರೆ. ಆದರೆ ಅದು ಹಳ್ಳಿಯೇ ಇರಲಿ, ಪಟ್ಟಣವೇ ಇರಲಿ–ಜಾತ್ರೆಗಳ ಕಲ್ಪನೆ ಮೂಲತಃ ಜಾನಪದರದು. ಸಾಮು

ಹಿಕ, ಹಿತಾಸಕ್ತಿ, ಕಲ್ಯಾಣ, ಸಮಷ್ಟಿಪ್ರಜ್ಞೆ, ಕೂಡಿಬಾಳುವ ಮನೋಭಾವ, ಸಮಾನತೆ, ಅಂಧಶ್ರದ್ಧೆ, ಕಲೆಗಳ ಪ್ರದರ್ಶನ–ಮೊದಲಾದ ಅಂದಗಳಿಂದಾಗಿ ಜಾತ್ರೆಗಳೆಲ್ಲ ಜನಪದ ಜಾತ್ರೆಗಳೆಂದೇ ಹೇಳಬೇಕಾಗುತ್ತದೆ. ಶಿಷ್ಟರ ಪ್ರಭಾವ ಅಥವಾ ಪ್ರವೇಶ ಅವುಗಳ ಮೇಲೆ ಆದಾಕ್ಷಣವೇ ಅವು ಶಿಷ್ಟಕ್ಕೆ ತಿರುಗುವುದಿಲ್ಲ. ದೇವತೆಗಳ ಪೂಜೆ ಶಾಸ್ತ್ರೋಕ್ತ ವಾಗಿ ನಡೆದಷ್ಟಕ್ಕೇ ಅವು ಶಿಷ್ಟಮೂಲ ಎಂದು ಹೇಳಲಿಕ್ಕಾಗದು.

ಪುಣ್ಯಕ್ಷೇತ್ರದರ್ಶನವೇ ಮೊದಲಾದ ಧಾರ್ಮಿಕ ಉದ್ದೇಶದಿಂದ ಮಾಡುವ ಪ್ರಯಾಣ 'ಯಾತ್ರೆ' ಎಂದೂ ಯಾವುದಾದರೂ ಒಂದು ದೇವತೆಯ ರಥೋತ್ಸವವೇ ಮೊದಲಾದ ವಿಶೇಷ ಕಾರ್ಯಕ್ರಮವನ್ನು ಜಾತ್ರೆಗಿರುವ ಅರ್ಥವೆಂದೂ 'ದೇವರ ರಥೋತ್ಸವ' ಮುಂತಾದ ಸಂದರ್ಭದಲ್ಲಿ ಸೇರುವ ಜನರ ಗುಂಪಿಗೆ, ಸಮೂಹಕ್ಕೆ 'ಪರಿಸೆ' ಎಂದೂ ಹಂಪನಾ ಅವರು ಹೇಳಿ ಜಾತ್ರೆಯ ಲಕ್ಷಣವನ್ನು ನಿಘಂಟು ಹಾಗು ಕವಿಗಳ ಕಾವ್ಯಗಳಲ್ಲಿರುವ ಜಾತ್ರೆಗೆ ಸಂಬಂಧಿಸಿದ ಉಲ್ಲೇಖನಗಳನ್ನು ಎತ್ತಿ ಹೇಳಿ ವಿವರಿಸಿದ್ದಾರೆ. ಯಾತ್ರಾದಿಂದ ಜಾತ್ರೆ ಶಬ್ದ ರೂಪುಗೊಂಡಿದೆ. ಯಾತ್ರೆ ಎಂಬುದು ಶಿಷ್ಟಾರ್ಥದಲ್ಲೂ ಜಾತ್ರೆ ಶಿಷ್ಟೇತರ ಅರ್ಥದಲ್ಲೂ ಬಳಕೆಯಲ್ಲಿವೆ. ಪರಿಸೆ ಹಳ್ಳಿಗರ ಭಾಷೆಯಾದರೆ ವಿದ್ವಾಂಸರದು ಪರಿಷತ್ ಆಗಿದೆ. ಇಂಥ ಜಾತ್ರೆಗಳು ಪ್ರತಿಯೊಂದು ದೇಶದಲ್ಲೂ ಆಚರಣೆಯಲ್ಲಿವೆ. ಇಂಡಿಯಾದ ಜಾತ್ರೆಗಳಿಗೆ ಸಂವಾದಿಯಾದ ಸಂಗತಿ ಗಳನ್ನು ಹೇಳುತ್ತ, ಉಡುಗೆ-ತೊಡುಗೆ, ಬೆಳ್ಳಿ-ಬಂಗಾರ ಮುಂತಾದ ಸರಕುಗಳ ವ್ಯಾಪಾರ ವಿವರಗಳು ದಾಖಲಾದುದನ್ನು ತಿಳಿಯಪಡಿಸಿದ್ದಾರೆ. ಮುಂದುವರಿದು ಕೆಲವು ಜಾತ್ರೆಗಳು ರಾಷ್ಟ್ರೀಯ ಹಬ್ಬಗಳಂತಾಗಿವೆ ಎಂದಿದ್ದಾರೆ. ಜಾತ್ರೆಗಳು ಬಹು ಜನೋಪಯೋಗಿ ಎಂಬ ಮಾತನ್ನು ವಿವರಗಳೊಂದಿಗೆ ಬಣ್ಣಿಸಿದ್ದಾರೆ. ಜನಸಂಪರ್ಕ, ಸ್ನೇಹಪರಿಚಯ, ನೆಂಟರಿಷ್ಟರ ಆಗಮನ ಈ ಜಾತ್ರೆಗಳಿಂದ ಅಲ್ಲದೆ ವ್ಯಾಪಾರಿ ಗಳಿಗಂತೂ ಸುವರ್ಣಾವಕಾಶ. ಹಳ್ಳಿಗರಿಗೆ ಮನರಂಜನೆ, ಜನಪದ ಕಲೆಗಳ ಪ್ರದರ್ಶನ, ಅಂತೆಯೆ 'ಹಬ್ಬ ಊಟಕ್ಕೆ ಚಂದ ಜಾತ್ರೆ ನೋಟಕ್ಕೆ ಚೆಂದ' ಎಂದು ಹಳ್ಳಿಗರ ಅನುಭವದ ನುಡಿಮುತ್ತನ್ನು ಉದಾಹರಿಸಿ ಜಾತ್ರೆಯ ಸೊಗಸನ್ನು ಚಿತ್ರಿಸಿದ್ದಾರೆ. ದೇವರ ಉತ್ಸವ ಮೂರ್ತಿಯನ್ನು ಪಲ್ಲಕ್ಕಿ ಇಲ್ಲವೆ ತೇರಿನಲ್ಲಿ ಕೂಡ್ರಿಸಿ ಮೆರೆಸುತ್ತಾರೆ, ತೇರು ಎಳೆಯುತ್ತಾರೆ. ಈ ತೇರು ಎಳೆಯುವುದರಿಂದ ಇವುಗಳಿಗೆ ತೇರಿನ ಜಾತ್ರೆ, ರಥದ ಜಾತ್ರೆ ಎಂದೆಲ್ಲ ಕರೆಯುವುದುಂಟು. ಮೂರು ಹಂತದ ತೇರಿನ ವೈಶಿಷ್ಟ್ಯ ವನ್ನು, ತೇರಿಗೆ ಕುರ್ಜು, ವ್ಯಾನೇವು ಎಂದೂ ಕರೆಯುವುದರ ಔಚಿತ್ಯವನ್ನು ವಿವರಿಸಿ ದ್ದಾರೆ. 'ಎಕ್ಕಲ ಹಿಂದಿನಿಂದ ದೇವಿಗೆ ಮಾಮೂಲಕ್ಕನಿಗಂ ... ಜಾತ್ರೆಯ ಮಾಳ್ಪಂ ಮೊಕ್ಕಳಗಂ' ಎಂಬುದು ಬ್ರಹ್ಮಶಿವನ ಸಮಯ ಪರೀಕ್ಷೆಯಲ್ಲಿ ಬರುವ ಮಾತನ್ನೂ ಮತ್ತು ಜನ್ನನ ಯಶೋಧರಚರಿತೆಯಲ್ಲಿ ಬರುವ ಮಾರಿಯ ಜಾತ್ರೆಯನ್ನೂ ಜೈನನಲ್ಲಂ ಎಂದೂ 'ಆ ದೇವಿಯ ಜಾತ್ರೆಗೆ...ಬಂದುದಂದು ಬಸಂತಂ'ಎಂದೂ ಉಲ್ಲೇಖಿಸಿದುದು

ಸಂಶೋಧಕರಿಗೆ ಮಾರ್ಗದರ್ಶಕ ಸೂಚಿಕೆಗಳಾಗಿವೆ. ಜಾತ್ರೆಗೆ ಪರಿಸೆ, ತೇರು ಎಂದು ಕರೆಯುವುದರ ಜೊತೆಗೆ ದಿನಬಳಕೆಯ ಗಾದೆಗಳಲ್ಲಿಯೂ ಕೂಡ ಈ ಪದಗಳನ್ನು ಬಳಸುತ್ತಿರುವುದನ್ನು ಆಯ್ದುಕೊಂಡು ಲೇಖಕರು ಸಮಗ್ರವಾಗಿ ಇಲ್ಲಿ ಒದಗಿಸಿದ್ದಾರೆ. ಇದರಿಂದ ಜಾತ್ರೆ ಜನಮನದಲ್ಲಿ ಅಚ್ಚೊತ್ತಿ ನಿಂತಿರುವದನ್ನು ಅರಿತುಕೊಳ್ಳುವಂತಾಗಿದೆ.

'ವರುಷ ಹೆಚ್ಚಾದರೆ ಪರಸೆ ಸಂಗಡ ಹೋಗಲಿಕ್ಕೇನು'
'ಜಾತ್ರೆಗೆ ಹೋದರೂ ಪಾತ್ರೆ ಬಿಡಲಿಲ್ಲ'
'ಜಾತ್ರೆಗೆ ಹೋದವರು ಪಾತ್ರೆ ತರದೆ ಬರಬಾರದು'
'ಜಾತ್ರೆಯೂ ಮುಗೀತು, ಧೋತ್ರವೂ ಹರೀತು'
'ಜಾತ್ರೆಗಿಂತ ಮೊದಲೇ ಗಂಟುಕಳ್ಳರು ಸೇರಿದರು'
'ಮೂಣೆ ಓಣಿ ದೋಣಿ ಮೂರೂ ಇಲ್ಲದಿದ್ದರೆ ಕಾಶೀಯಾತ್ರೆಗೆ ಹೋಗಿ ಬಂದೇನು'
'ಕುಲಕ್ಕೊಂದು ಜನಕ್ಕೊಂದು ಬುದ್ಧಿ'
'ಕೇರಿಗೊಬ್ಬ ಹನುಮಪ್ಪ ಊರಿಗೊಂದು ಜಾತ್ರೆ'
'ಜನರಿದ್ದರೆ ಜಾತ್ರೆ'
'ಜಂಬ ಮಾಡಿ ಜಾತ್ರೆಗೆ ಹೋದರೆ ಕೂಸಿನ ಕೈಯಲ್ಲಿ ಕಾಸಿನ ಕಡಲೆ ಇಲ್ಲ'
'ಜಾತ್ರೆ ಊಟದಲ್ಲಿ ಪಾತ್ರೇನೂ ಕೊಟ್ಟಾರೆ'
'ಜಾತ್ರೆ ಕಳೆದ ಮೇಲೆ ಹೋದೋರು ಉಂಡಲೆ ಬಿಟ್ಟನ್ನ ನೋಡಾಕೆ ಹೋದಾರೆ'
'ಜಾತ್ರೆಗೆ ಹೋದೋನು ಜಾಣ, ದಿಬ್ಬಣಕೆ ಹೋದೋನು ಕೋಣ'
'ಜಾತ್ರೆಗ್ಹೋಗಿ ಜವನವಿಲ್ಲದೆ ಬಂದ ಮುರವ'
'ಜಾತ್ರೆಗ್ಹೋಗಿ ಜವನ ಕಾಣದೆ ಬಂದ ಮದುವೆಗ್ಹೋಗಿ ಅನ್ನ ಕಾಣದೆ ಬಂದ'
'ತೇರಾದ ಮೇಲೆ ಜಾತ್ರೆ ಸೇರಿತು'
'ತೇರಾಯಿತು ಹೇರುಮಾತ್ರ ವ್ಯರ್ಥತಂದೆ'
'ತೇರಿಗೆ ಹಣ ತಪ್ಪಿದರೆ ತರುಮಿಕೊಂಡು ಬರ್ತಾರೆ'
'ತೇರಿಗೆ ಹೋದೋರ ತೀರ್ ನೋಡು'
'ತೇರು ಎಳೀತು ದವನ ಮಾರಿತು'
'ತೇರು ಹರಿದ ಮೇಲೆ ಪರಿಸೆಗೇನು ಅಗ್ಗ'
'ಪರಿಸೆಯಲ್ಲಿ ತೆಗೆದ ವರಸೇನ'
'ಮನೆದೇವರ ಮೊಟ್ಟೆಕಟ್ಟಿ ಹೊರಗಿನ ದೇವರ ಜಾತ್ರೆಗೆ ಹೋದ'
'ಮನೆದೇವರು ಮರುಗ್ತಿತ್ತು ಹೆರವರ ದೇವರಿಗೆ ಹೆಡಗೆ ಜಾತ್ರೆ'
'ಹೊಂಗೆ ಅಮ್ಮನ ಜಾತ್ರೆಗೆ ಹೋಗಿ ಹಂಗೂ ಕೆಟ್ಟೆ ಹಿಂಗೂ ಕೆಟ್ಟೆ'
'ಹೋಳಿಗೆ ಇಲ್ಲದ ಹಬ್ಬವಲ್ಲ, ರಥವಿಲ್ಲದ ಜಾತ್ರೆಯಲ್ಲ'

ಇಂತಹ ಹಲವಾರು ಗಾದೆಯ ಮಾತುಗಳನ್ನು ಉದಹರಿಸಿರುದು ಲೇಖಕರ ಆಳವಾದ ಅಧ್ಯಯನಕ್ಕೆ ನಿದರ್ಶನವಾಗಿದೆ.

ಜಾತ್ರೆಗಳಲ್ಲಿ ಹಲವಂದದ ವೈವಿಧ್ಯತೆಯನ್ನೂ ಗುರುತಿಸಬಹುದಾಗಿದೆ. ಒಂದೊಂದು ಜಾತ್ರೆಗೂ ಹಲವಾರು ಸಂಪ್ರದಾಯಗಳು. ಹರಕೆ ಒಪ್ಪಿಸಲು ನಾನಾ ಭಾಗಗಳಿಂದ ಜಾತ್ರೆಗೆ ಬರುವರು, ಬೇರೆಬೇರೆ ಕಡೆಯ ಸಾಂಸ್ಕೃತಿಕ ಸಂಬಂಧಗಳು ಆಚರಣೆರೂಪದಲ್ಲಿ ಜಾತ್ರೆಗಳು ಅದು ಹೇಗೆ ಅಭಿವ್ಯಕ್ತಗೊಳ್ಳುತ್ತವೆ ಎಂಬುದನ್ನು ಸೋದಾಹರಣವಾಗಿ ಹಂಪನಾ ಅವರು ಸ್ಪಷ್ಟಪಡಿಸಿದ್ದಾರೆ. ಕರ್ನಾಟಕದ ಜಾತ್ರೆಗಳಲ್ಲಿ ಪ್ರಮುಖವೂ ಅಷ್ಟೇ ಜನಪ್ರಿಯವೂ ಆಗಿರುವ ಜಾತ್ರೆಗಳ ವಿವರಣೆಯನ್ನೂ ನೀಡಿ ಹೆಚ್ಚಿನ ಸಂಶೋಧನೆ ನಡೆಸುವವರಿಗೆ ಸೂಚನೆ ಕೊಟ್ಟಿದ್ದಾರೆ. ಕರಾವಳಿ ಪ್ರದೇಶ ಮತ್ತು ಗುಲಬರ್ಗಾ ವಿಭಾಗದಲ್ಲಿರುವ ಒಂದೆರಡು ಜಾತ್ರೆಗಳನ್ನು ಹೆಸರಿಸಿದ್ದರೆ ಪ್ರಬಂಧ ಸಮಗ್ರವಾಗಬಹುದಾಗಿತ್ತು. ಇದು ಉದ್ಘಾಟನಪರ ಭಾಷಣ ಎಂದ ಮೇಲೆ ಅದಕ್ಕೆ ಕಾಲಾವಕಾಶ ಕಡಿಮೆಯಿರುವುದರಿಂದ ಇಷ್ಟೇ ವೇಳೆಯಲ್ಲಿ ಜಾತ್ರೆಯ ವಿಷಯಕ್ಕೆ ಸಮರ್ಪಕವಾದ ಪ್ರಬಂಧ (ಭಾಷಣ) ನೀಡಿದ್ದು ಯಥಾಯೋಗ್ಯವೇ. ಅವರು ವಿವರಿಸಿದ ಜಾತ್ರೆಗಳಿವು :

ಮುಳವಾಡ ಗ್ರಾಮದ ಶಿವರಾಯನ ಜಾತ್ರೆ (ವಿಜಾಪುರ ಜಿಲ್ಲಾ ಬಾಗೇವಾಡಿ ತಾಲ್ಲೂಕು)

ನಾಯಕನಹಟ್ಟಿ ತಿಪ್ಪೇಸ್ವಾಮಿ ಜಾತ್ರೆ (ಚಿತ್ರದುರ್ಗ ಜಿಲ್ಲೆ)

ಭರತೂರ ಬಂದಿಗಮ್ಮನ ಜಾತ್ರೆ (ಹಾಸನ ಜಿಲ್ಲೆ)

ಹುಣಿಕಟ್ಟೆ ಕರಿಯಮ್ಮನ ಜಾತ್ರೆ (ಚಿತ್ರದುರ್ಗ ಜಿಲ್ಲಾ, ಹೊಳಲ್ಕೆರೆ ತಾಲ್ಲೂಕು)

ಕಾದಲವೇಣಿ ಮಾರಮ್ಮನ ಜಾತ್ರೆ (ಕೋಲಾರ ಜಿಲ್ಲಾ, ಗೌರೀಬಿದನೂರ ತಾಲ್ಲೂಕು)

ಬಸವನಗುಡಿ ಕಡಲೇಕಾಯಿ ಪರಿಸೆ (ಬೆಂಗಳೂರು)

ಗೊಂಡನಹಳ್ಳಿ ಮುತ್ತಮ್ಮನ ಜಾತ್ರೆ (ಚಿತ್ರದುರ್ಗ ಜಿಲ್ಲೆ)

ಉಕ್ಕಡಗಾತ್ರೆ ಕರಿಬಸವೇಶ್ವರ ಜಾತ್ರೆ (ಶಿವಮೊಗ್ಗ ಜಿಲ್ಲಾ, ಹೊನ್ನಾಳಿ ತಾಲ್ಲೂಕು)

ತೊರನಹಳ್ಳಿ ಸಪಲಮ್ಮ ಮತ್ತು ಭೀಮೇಶ್ವರನ ಜಾತ್ರೆ (ಕೋಲಾರ ಜಿಲ್ಲಾ, ಮಾಲೂರು ತಾಲ್ಲೂಕು)

ಮೇಲೂರ ಗಂಗಮ್ಮನ ಜಾತ್ರೆ (ಕೋಲಾರ ಜಿಲ್ಲೆ)

ಮಧುಗಿರಿ ಮಾರಮ್ಮನ ಜಾತ್ರೆ (ಹಾಸನ ಜಿಲ್ಲೆ)

ನಲ್ಲೂರ ದೊರೆಕಾಳಿ ಜಾತ್ರೆ (ಹಾಸನ ಜಿಲ್ಲೆ)

ನೆಶ್ವಿಯ ಗುಗ್ಗಳ ಮಹೋತ್ಸವ ಮತ್ತು ತೇರು (ಧಾರವಾಡ ಜಿಲ್ಲೆ, ಹಿರೇಕೇರೂರು ತಾಲ್ಲೂಕು)

ಸವದತ್ತಿ ಎಲ್ಲಮ್ಮನ ಜಾತ್ರೆ (ಬೆಳಗಾವಿ ಜಿಲ್ಲೆ)

ಈ ಮೊದಲಾದ ಜಾತ್ರೆಗಳ ವಿಶಿಷ್ಟ ಆಚರಣೆ ಸಂಪ್ರದಾಯಗಳ ಹಿನ್ನೆಲೆಯಲ್ಲಿ ವಿವರಣೆ ನೀಡಿದ್ದಾರೆ.

ಸವದತ್ತಿ ಎಲ್ಲಮ್ಮನ ಜಾತ್ರೆಯ ವಿಷಯವನ್ನು ಪ್ರಸ್ತಾಪಿಸುವ ಲೇಖಕರು ಸವದತ್ತಿ ತಾಲ್ಲೂಕು ಧಾರವಾಡ ಜಿಲ್ಲೆಯಲ್ಲಿದೆ ಎಂದು ಬರೆದದ್ದು ತಪ್ಪು ಅದು ಬೆಳಗಾವಿ ಜಿಲ್ಲೆಯಲ್ಲಿರುತ್ತದೆ. ಮುಂದುವರಿದು ರಟ್ಟರ ಕಾಲದವರೆಗೆ ಜೈನರ ದೇವಾಲಯವಾಗಿತ್ತೆಂದು ಬರೆಯುತ್ತ ಪ್ರಾಯಃ ಪದ್ಮಾವತಿ ಅಮ್ಮನವರ ಗುಡಿ ಯಾಗಿತ್ತೆಂದೂ ೧೪ನೆಯ ಶತಮಾನದಿಂದೀಚೆಗೆ ಅದು ಹಾಳುಬಿದ್ದು ಅನ್ಯರ ಪಾಲಾ ಯಿತು; ಕ್ರಮೇಣ ಎಲ್ಲಮ್ಮನ ಗುಡಿಯಾಯಿತು ಎಂದು ಅಭಿಪ್ರಾಯ ತಾಳಿದ್ದಾರೆ. ಆಧಾರ ಕೊಟ್ಟು ವಿವರಿಸಿದ್ದರೆ ಚೆನ್ನಾಗಿತ್ತು. ....ಇದರ ಸಂಬಂಧವಾದ ಐತಿಹ್ಯದಂತೆ "ತಾಯಿ ರೇಣುಕೆಯನ್ನು, ತಂದೆ ಜಮದಗ್ನಿಯ ಅಪ್ಪಣೆಯಂತೆ ಮಗ ಪರಶುರಾಮ ಆಯುಧ ಬೀಸಿ ಒಂದೇಟಿಗೆ ತಲೆ ತುಂಡರಿಸಿದ. ಮಗನ ಪಿತೃವಾತ್ಸಲ್ಯಕ್ಕೆ ಮೆಚ್ಚಿದ ತಂದೆ ಮಗನಿಗೆ ಸತ್ತ ತಾಯಿಯನ್ನು ಬದುಕಿಸುವ ವರ ನೀಡಿದ. ಪರುಶುರಾಮ ಆಯುಧ ಬೀಸಿದ ರಭಸದಲ್ಲಿ ತಾಯಿಯ ಪಕ್ಕದಲ್ಲಿ ನಿಂತಿದ್ದ ಮಾತಂಗಿಯ ತಲೆಯೂ ಕತ್ತರಿಸಿ ಉರುಳಿಬಿದ್ದಿತು. ಈಗ ಮತ್ತೆ ತಾಯಿಯನ್ನು ಜೀವಂತಗೊಳಿಸುವ ಉತ್ಸಾ ಹದಲ್ಲಿ ಮಾತಂಗಿಯ ತಲೆಯನ್ನು ರೇಣುಕೆಯ ಮುಂಡಕ್ಕೂ ಮಾತಂಗಿಯ ಮುಂಡಕ್ಕೆ ರೇಣುಕೆಯ ರುಂಡವನ್ನೂ ಜೋಡಿಸಿಬಿಟ್ಟ"–ಹೀಗೆ ಎಲ್ಲಮ್ಮದೇವಿಯ ಜನಜನಿತವಾದ ಕಥೆಯನ್ನು ಉದಾಹರಿಸಿ ಇದು ಆರ್ಯದ್ರಾವಿಡ ಸಂಸ್ಕೃತಿಯ ಸಮನ್ವಯದ ಸಂಕೇತ ಎಂದು ಭಾಷ್ಯಂ ಬರೆದಿದ್ದಾರೆ. ಮುಂದೆ ಗ್ರಾಮದೇವತೆಯಾದ ಮಾರಮ್ಮನ ಕಥೆಯ ವಿವರಣೆಗಳನ್ನು ನೀಡುತ್ತ ಜನ್ನ ಕವಿಯ ಯಶೋಧರ ಚರಿತೆ ಮತ್ತು ಪೊನ್ನಕವಿಯ ಶಾಂತಿ ಪುರಾಣದಲ್ಲಿ ಈ ಕಥೆಯನ್ನು ಗುರುತಿಸುವ ಅಂಶಗಳನ್ನು ತಿಳಿಯಪಡಿಸಿದ್ದಾರೆ.

ಕರ್ನಾಟಕದ ಕೆಲ ಪ್ರಸಿದ್ಧ ಜಾತ್ರೆಗಳ ಚಿತ್ರಗಳನ್ನು ಮುದ್ರಿಸಿರುವುದರಿಂದ ಗ್ರಂಥದ ಅಂದ ಹೆಚ್ಚಿದೆ. ಕರ್ನಾಟಕದ ಪ್ರಮುಖ ಜಾತ್ರೆಗಳನ್ನು ಪ್ರತ್ಯಕ್ಷಕಂಡ ಅನುಭವ ಆದಂತಾಗುತ್ತದೆ. ಇವುಗಳಲ್ಲಿ :

ಮಂಚಿಜಾತ್ರೆಗೆ ಬೆಸ್ತರ ಸೇವೆ

ಚಂದ್ರಗುತ್ತಿ ಜಾತ್ರೆಗೆ ಸಂಬಂಧಪಟ್ಟ ೯ ಚಿತ್ರಗಳು

ಸವದತ್ತಿ ಎಲ್ಲಮ್ಮನ ಜಾತ್ರೆ

ಬಾದಾಮಿ ಕಥೆ
ಮುಡಿಕೊಡುವ ಚಿತ್ರ
ದೀಪ ನಮಸ್ಕಾರದ ಚಿತ್ರ
ದೇವರ ಅಭಿಷೇಕಕ್ಕೆ ತೀರ ತರುವದು
ಜಾತ್ರೆಯಲ್ಲಿ ಒಬ್ಬ ವೇಷಧಾರಿ
ಮಂಚಿ ಆಂಜನೇಯ ಜಾತ್ರೆ
ಮಳ್ಳಾವಿಗೆ ವೇಷಗಾರಿಕೆ
ನವರಾತ್ರಿಯ ಕಾಳಿಮಾತೆ
ಕುಬಟೂರಿನ ದ್ಯಾಮವ್ವ
ಧರ್ಮಸ್ಥಳ
ಮಾವಲಿ ಬನದಮ್ಮ
ಹುಲಿಕಲ್ಲು ಬೀದಿ ಮಾರಿ

ಈ ಮೊದಲಾದ ಮುವತ್ಮೂರು ಜಾತ್ರೆಗಳ ಚಿತ್ರಗಳಿಂದ ಕೃತಿಯು ಅಂದ ಹೆಚ್ಚಿದೆ ಎಂದು ಹೇಳಬೇಕು. ಕರ್ನಾಟಕ ಜಾತ್ರೆಗಳು ಕುರಿತು ಪ್ರಥಮವಾಗಿ ಪ್ರಕಟಗೊಂಡ ಕೃತಿಯಿದಾಗಿದೆ. ಸಾಮಾಜಿಕ ಹಾಗೂ ಸಾಂಸ್ಕೃತಿಕ–ದೃಷ್ಟಿಯಿಂದ ಆಲೋಚನ ಪರವಾದ ವಿವರಣಾತ್ಮಕ ಕೃತಿಯಿದಾಗಿದ್ದು ಜಾನಪದ ಕ್ಷೇತ್ರಕ್ಕೆ ಒಂದು ಕೊಡುಗೆ ಯೆಂದೇ ಹೇಳಬಹುದಾಗಿದೆ. ಲೇಖಕರು ಆಶಿಸಿದಂತೆ ತೇರನ್ನೇ ಕುರಿತು, ಈ ಪ್ರಾದೇಶಿಕ ಜಾತ್ರೆಗಳನ್ನೇ ಕುರಿತು ಹಲವಾರು ಜನ ಸಂಶೋಧನಾತ್ಮಕ ಪ್ರಬಂಧ ಬರೆಯಲು ಸಾಕಷ್ಟು ವಿಷಯ ದೊರಕಬಹುದಾಗಿದೆ ಮತ್ತು ಅದು ತೀರ ಅವಶ್ಯವೂ ಎನಿಸುತ್ತದೆ.

ನೀಲಗಿರಿ ತಳವಾರ

# ಆಕಾಶ ಜಾನಪದ

ಪ್ರೊ|| ಹಂಪ. ನಾಗರಾಜಯ್ಯ ಅವರ ಸಾಹಿತ್ಯಿಕ, ಆಡಳಿತಾತ್ಮಕ (ಕನ್ನಡ ಸಾಹಿತ್ಯ ಪರಿಷತ್ತು) ಸಾಧನೆ, ಸೇವೆ ಕನ್ನಡಿಗರಿಗೆ ಸುಪರಿಚಿತ. ಸೃಜನಶೀಲವಾದ ಸಾಹಿತ್ಯ ರಚನೆ, ಕ್ರಿಯಾಶೀಲವಾದ ಆಡಳಿತ, ಇವುಗಳ ಜೊತೆಗೆ ಇತರರೊಂದಿಗೆ ಅವರ ಆತ್ಮೀಯ ಮಾತುಕತೆ, ಅನುಕಂಪ, ಪ್ರೀತಿ-ವಿಶ್ವಾಸ ಗಳಿಂದಾಗಿ ಆ 'ಜೋಟುದ್ದದ ಮೂರುತಿ' ಇಂದು ಮಹತ್ತಾಗಿ ಬೆಳೆದು ನಿಂತಿದೆ. ಅವರ ಬೆಳವಣಿಗೆಯನ್ನು ಕಂಡು ಹಲವರು ಕರುಬುತ್ತಿರುವುದೂ ಉಂಟು. ಅವರ ವಿಶಿಷ್ಟ ಗುಣ–ಅವರು ಹೊಗಳಿದರೆ ಹಿಗ್ಗುವವರಲ್ಲ, ತೆಗಳಿದರೆ ಕುಗ್ಗುವವರಲ್ಲ. ಅಂತಲೆ ಅವರು ತಮ್ಮ ಅಧ್ಯಯನ, ಅಧ್ಯಾಪನ, ಲೇಖನ, ಭಾಷಣ, ಆಡಳಿತ ಇತ್ಯಾದಿ ಹಲವಾರು ಚಟುವಟಿಕೆಗಳನ್ನು ನಿರಂತರವಾಗಿ ಯಶಸ್ವಿಯಾಗಿ ನಡೆಸಿಕೊಂಡು ಬಂದಿರುವರು. ಈ ಮಾತುಗಳಿಗೆ ಪೂರಕವಾಗಿರುವ ಪ್ರೊ|| ಎಚ್. ಜೆ. ಲಕ್ಕಪ್ಪಗೌಡ ಅವರ ಮಾತೊಂದನ್ನು ಇಲ್ಲಿ ಉಲ್ಲೇಖಿಸಬಹುದು : "…….ಇಷ್ಟೆಲ್ಲ ಬಿಡುವಿಲ್ಲದ ಚಟುವಟಿಕೆಗಳ ನಡುವೆಯೂ ಅವರ ಓದು, ಚಿಂತನೆ, ಗ್ರಂಥರಚನೆ ಅಬಾಧಿತವಾಗಿ ಸಾಗಿರುವುದು ವಿಸ್ಮಯ ಕರ ಸಂಗತಿ ! ಅವರು ಉದ್ಘಾಟಕರಾಗುವ, ಅಧ್ಯಕ್ಷರಾಗುವ, ಮುಖ್ಯ ಅತಿಥಿಗಳಾಗುವ, ಸಮಾರೋಪಕರಾಗುವ ನೂರಾರು ಸಮಾರಂಭಗಳಲ್ಲಿ ಅವರು ಕೇವಲ ಅಲಂಕಾರ ಪುರುಷರಾಗದೆ ಆಯಾ ವಿಷಯಗಳನ್ನು ತಲಸ್ಪರ್ಶಿಯಾಗಿ ಅಭ್ಯಾಸ ಮಾಡಿ, ತಮ್ಮದೆ ಆದ ವಿಶಿಷ್ಟಶೈಲಿಯಲ್ಲಿ ಅವುಗಳ ಒಳನೋಟವೊಂದನ್ನು ತಮ್ಮ ಉಪನ್ಯಾಸಗಳಲ್ಲಿ ನೀಡಿಬಿಡುವ ಅವರ ಹವ್ಯಾಸ, ಪರಿಶ್ರಮಗಳು ನಿಜಕ್ಕೂ ಆದರಣೀಯವಾಗಿವೆ……." ('ಆಕಾಶ ಜಾನಪದ', ಕೆಳೆನುಡಿ).

ಒಂದು ಕಾಲದಲ್ಲಿ ವಿದ್ವಾಂಸರಿಂದ ನಿರ್ಲಕ್ಷಿಸಲ್ಪಟ್ಟ 'ಜಾನಪದ'—ಈ ಜ್ಞಾನ ಶಾಖೆಯು ಅಧ್ಯಯನ, ಸಂಗ್ರಹ,

ಸಂಶೋಧನೆ ಇಂದು ಪ್ರಪಂಚದ ನಾನಾ ದೇಶಗಳಲ್ಲಿ ಭರದಿಂದ ನಡೆಯುತ್ತಿದೆ. ವಿಶ್ವವಿದ್ಯಾಲಯುಗಳು, ಕನ್ನಡ ಸಾಹಿತ್ಯ ಪರಿಷತ್ತು, ಜಾನಪದ ಅಕ್ಯಾಡಮಿ-ಇತ್ಯಾದಿ ಸಂಸ್ಥೆಗಳು ಕರ್ನಾಟಕದಲ್ಲಿ ಈ ಕ್ಷೇತ್ರಕ್ಕೆ ಸಂಬಂಧಿಸಿದಂತೆ ಈಚೆಗೆ ತುಂಬ ಚುರುಕಾಗಿ ಕೆಲಸ ಮಾಡುತ್ತಿರುವುದು ಸಂತಸದ ಸಂಗತಿ.

ಕರ್ನಾಟಕ ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಪೀಠವು ಬೆಳಗಾವಿಯಲ್ಲಿ ಅಖಿಲ ಕರ್ನಾಟಕ ೧೨ ನೆಯ ಜಾನಪದ ಸಮ್ಮೇಳನವನ್ನು ಏರ್ಪಡಿಸಿತ್ತು. ಆಗಿನ ವಿಚಾರ ಸಂಕಿರಣದ ವಿಷಯ 'ಆಕಾಶ ಜಾನಪದ'. ವಿಷಯಕ್ಕೆ ಸಂಬಂಧಿಸಿದಂತೆ ಬೇರೆ ಬೇರೆ ವಿದ್ವಾಂಸರು ಪ್ರಬಂಧ ಮಂಡಿಸಿದರು. ಸಮ್ಮೇಳನದ ಸಮಾರೋಪ ಭಾಷಣ ಶ್ರೀಯುತ ಹಂಪನಾ ಅವರ ಪಾಲಿಗಿತ್ತು. ಅಂದಿನ ಸಮಾರೋಪ ಭಾಷಣವೇ 'ಆಕಾಶ ಜಾನಪದ'ವೆಂಬ ಪುಸ್ತಕರೂಪ ಪಡೆದಿದೆ. ಅಂದು ಸಮಾರೋಪಕಾರರಾಗಿ ಶ್ರೀಯುತರು 'ಏನನ್ನೋ' ಮಾತಾಡಬಹುದು ಎಂಬುದು ನನ್ನ ಹಾಗೂ ಸೇರಿದ ಬಹುಜನರ ಊಹೆಯಾಗಿತ್ತು. ಆದರೆ ಅಂದು ಅವರು ಎಲ್ಲ ಪ್ರಬಂಧಕಾರರಿಗಿಂತ ಮಿಗಿಲಾಗಿ ಆಕಾಶ ಜಾನಪದಕ್ಕೆ ಸಂಬಂಧಿಸಿದಂತೆ ಉಪನ್ಯಾಸ ನೀಡಿದರು. ಅವರು ಅಂದು ನೀಡಿದ ಆ ಉಪನ್ಯಾಸವನ್ನು ನೆನೆಸಿಕೊಂಡರೆ ಇಂದಿಗೂ ನಾನು ಬೆರಗು ಗೊಳ್ಳುವೆ.

ಡಾ॥ ಹಂಪನಾ ಅವರ 'ಆಕಾಶ ಜಾನಪದ' ಅರವತ್ತು ಮೂರು ಪುಟಗಳ-ಕೆಳೆನುಡಿ, ನನ್ನ ನುಡಿ-ಸೇರಿ ಕಿರುಗ್ರಂಥ. ಗ್ರಂಥದ ಪರಿಮಿತಿಯಲ್ಲಿ ಆಕಾಶ ಜಾನಪದದಂತಹ ವಿಶಾಲ ಕ್ಷೇತ್ರವನ್ನು ಬರೆವ ಪ್ರಾಮಾಣಿಕ ಪ್ರಯತ್ನ ಮಾಡಿದ್ದಾರೆ ಹಂಪನಾ ಅವರು.

ಸೂರ್ಯ, ಚಂದ್ರ, ಗ್ರಹಣಗಳು, ಧೂಮಕೇತು, ಮೋಡ, ಗುಡುಗು, ಸಿಡಿಲು, ಮಿಂಚು, ಗಾಳಿ, ಮಳೆ, ಕಾಮನಬಿಲ್ಲು—ಇತ್ಯಾದಿ ಆಕಾಶದ ಹಲವಾರು ಸಂಗತಿಗಳಿಗೆ ಸಂಬಂಧಿಸಿದಂತೆ ಪ್ರಪಂಚದ ಬೇರೆ ಬೇರೆ ಜನಾಂಗದವರು ಇರಿಸಿಕೊಂಡಿರುವ ನಂಬಿಕೆ, ಆಚರಣೆ, ಸಂಪ್ರದಾಯ, ಮಾಡಿಕೊಂಡಿರುವ ಗಾದೆ ಒಗಟು: ಹಾಗೂ ಅದೇ ವಿಷಯುಗಳನ್ನು ಕುರಿತು ವಿಜ್ಞಾನ, ಪುರಾಣ, ಶಿಷ್ಟಪದ ಸಾಹಿತ್ಯಗಳು ನೀಡುವ ದಾಖಲೆ-ಇವೆಲ್ಲವುಗಳನ್ನು ಈ ಗ್ರಂಥದಲ್ಲಿ ಸಂಗ್ರಹಿಸಲಾಗಿದೆ. ಉದಾಹರಣೆಗೆ ಕಾಮನಬಿಲ್ಲಿನಂತಹ ಈ ಆಕಾಶ ಸಂಗತಿಗೆ ಸಂಬಂಧಿಸಿದಂತೆ ಶ್ರೀಯುತರು ಪ್ರಪಂಚದ ಬೇರೆ ಬೇರೆ ಹದಿನಾರು ಜನಾಂಗದವರು ಇರಿಸಿಕೊಂಡಿರುವ ನಂಬಿಕೆಗಳನ್ನು ಸಂಗ್ರಹಿಸಿ ಕೊಟ್ಟಿರುವರು. ವಿಶಾಲ-ಆಳ ಅಧ್ಯಯನದಿಂದ ಮಾತ್ರ ಹೀಗೆ ವಿಪುಲ ವಿಷಯುಗಳನ್ನು ಸಂಗ್ರಹಿಸಲು ಸಾಧ್ಯವಾಗುವುದು. ಈ ದೃಷ್ಟಿಯಿಂದ ಡಾ॥ ಹಂಪನಾ ಅವರ ಈ ಕೃತಿಯನ್ನು ಮೆಚ್ಚಬೇಕಾಗುತ್ತದೆ.

ಅವರ ಮಾತು ಎಂತೋ ಅಂತೇ ಅವರ ಬರವಣಿಗೆ ಕೂಡ ತುಂಬ ಸರಳ ಹಾಗೂ ಸರಸಮಯ.

ಗ್ರಂಥಾಂತ್ಯದಲ್ಲಿ ಸಹಾಯಕಗ್ರಂಥ ಪಟ್ಟಿಯನ್ನು ಕೊಟ್ಟಿದ್ದರೆ ಈ ದಿಶೆಯಲ್ಲಿ ಅಧ್ಯಯನ ಮಾಡುವವರಿಗೆ ಬಹಳ ಅನುಕೂಲ ಮಾಡಿಕೊಟ್ಟಂತಾಗುತ್ತಿತ್ತು. ಈ ಗ್ರಂಥಕ್ಕೆ ಅದೊಂದು ಕುಂದು. ನಡುನಡುವೆ ಕೊಟ್ಟಿರುವ ಚಿತ್ರಗಳು ಅವಶ್ಯಕವೆ ? ಎನಿಸುತ್ತದೆ.

ಪ್ರೊ. ಎಸ್. ಎಸ್. ಭೂಸರೆಡ್ಡಿ

## ಜಾನಪದ ಅಧ್ಯಯನ ವಿಚಾರ ಸಂಕಿರಣ

ಆಧುನಿಕ ಕನ್ನಡ ಸಾಹಿತ್ಯ ಪ್ರಪಂಚದಲ್ಲಿ ಸಾಹಿತ್ಯದ ವಿವಿಧ ಪ್ರಕಾರಗಳಲ್ಲಿ ಅಮೂಲ್ಯ ಸೇವೆ ಸಲ್ಲಿಸಿದ ಅಪೂರ್ವ ಸಾಹಿತಿಗಳ ಶ್ರೇಣಿಯಲ್ಲಿ ಎದ್ದು ಕಾಣುವ ಇನ್ನೊಂದು ಹೆಸರು ಹಂಪನಾ. ನಾನು ಇನ್ನೂ ಎಂ. ಎ. ವಿದ್ಯಾರ್ಥಿಯಾಗಿದ್ದಾಗ ಹಂಪನಾ ಬರೆದ ದ್ರಾವಿಡ ಭಾಷಾ ವಿಜ್ಞಾನ, ಪಠ್ಯಪುಸ್ತಕ ವಾಗಿತ್ತು. ಅಂದಿನಿಂದಲೇ ನಾನು ಹಂಪನಾ ಅವರ ಬಗೆಗೆ ವಿಶೇಷ ಗೌರವ ಭಾವನೆ ತಾಳಿದ್ದೇನೆ. ಧಾರವಾಡಕ್ಕೆ ಬಂದಾಗ ಅವರೊಂದಿಗೆ ಅನೇಕ ವಿಷಯಗಳ ಬಗೆಗೆ ಸಮಾಲೋಚನೆ ಮಾಡಿದ ಪ್ರಸಂಗಗಳಿವೆ. ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷ ರಾಗಿಯಂತೂ ಎರಡು ಅವಧಿಗಳ ಕಾಲಾವಧಿಯಲ್ಲಿ ಅನೇಕ ಉಪಯುಕ್ತ ಯೋಜನೆಗಳನ್ನು ಕಾರ್ಯಗತ ಮಾಡಿದ್ದಾರೆ. ಜನಪ್ರೇಮ-ಪ್ರೀತಿಯನ್ನೂ ಗಳಿಸಿದ್ದಾರೆ. ಜನಪದ ಸಾಹಿತ್ಯ ಸೃಷ್ಟಿ ಹುಲುಸಾಗಿ ಬೆಳೆಯಲು ಕನ್ನಡ ನಾಡಿನ ಎಲ್ಲ ಭಾಗಗಳ ಹಿರಿ-ಕಿರಿ ಸಾಹಿತಿಗಳ ಕೃತಿಗಳನ್ನು ಕನ್ನಡ ಸಾಹಿತ್ಯ ಪರಿಷತ್ತಿನ ಮೂಲಕ ಧಾರಾಳವಾಗಿ ಪ್ರಕಟಿಸಿ ಸಂಶೋಧಕರಿಗೆ, ಅಭ್ಯಾಸಿ ಗಳಿಗೆ, ವಿದ್ಯಾರ್ಥಿಗಳಿಗೆ ಅನುಕೂಲ ಮಾಡಿಕೊಟ್ಟಿದ್ದಾರೆ. ಕರ್ನಾಟಕದ ಏಕೀಕರಣ ಬೆಳ್ಳಿ ಹಬ್ಬದ ಸಂಸ್ಮರಣೆಗಾಗಿ 'ಬೆಳ್ಳಿ ಬಟ್ಟ ಬಳ್ಳಿ' ಗ್ರಂಥ ಮಾಲೆಯನ್ನೇ ಪ್ರಾರಂಭಿಸಿ ತನ್ಮೂಲಕ ನೂರೊಂದು ಅಪರೂಪದ ಗ್ರಂಥಗಳ ಪ್ರಕಾಶನಕ್ಕೆ ಅವಕಾಶ ಮಾಡಿಕೊಟ್ಟಿರುವುದು ಅವರ ಉದಾತ್ತ ಮನೋಧರ್ಮಕ್ಕೆ ಜ್ವಲಂತ ನಿದರ್ಶನ.

ಈ ದಿಸೆಯಲ್ಲಿ ಪ್ರಕಟವಾದ ಹದಿನೆಂಟನೆಯ ಕೃತಿ ಕುಸುಮವೇ 'ಜಾನಪದ ಅಧ್ಯಯನ ವಿಚಾರ ಸಂಕಿರಣ'. ದಿನಾಂಕ : ೧೨-೯-೧೯೮೦ ರಂದು ಪರಿಷತ್ತಿನ ಸಭಾಂಗಣದಲ್ಲಿ ಏರ್ಪಡಿಸಲಾಗಿದ್ದ ಮೂರು ವಿವಿಧ ಗೋಷ್ಠಿಗಳಲ್ಲಿ ವಿದ್ವಾಂಸರು

ಮಂಡಿಸಿದ ಪ್ರಬಂಧಗಳ ಸುಂದರ ಬಂಧುರ ಸಂಕಲನ. ಅವುಗಳ ವಿವರವಿದು:

೧. ಆಚರಣೆಯ ಕುಣಿತ ಮತ್ತು ಬಯಲಾಟ—ಡಾ॥ ಚಂದ್ರಶೇಖರ ಕಂಬಾರ

೨. ಆಟಗಳು : ಮನೋವೈಜ್ಞಾನಿಕ ಮತ್ತು ಸಾಂಸ್ಕೃತಿಕ ಹಿನ್ನೆಲೆಯಲ್ಲಿ
— ಟಿ. ಎಸ್. ಸತ್ಯನಾಥ

೩. ಕನ್ನಡ ಜನಪದ ಪುರಾಣಗಳ ಅಧ್ಯಯನ ಕೆಲವು ಚಿಂತನೆಗಳು
—ಎಂ. ಎಸ್. ವಿ. ಪಂಡಿತಾರಾಧ್ಯ

೪. ಜಾನಪದ ಮತ್ತು ಮನೋವಿಜ್ಞಾನ —ಎ. ಎಸ್. ಧರಣೇಂದ್ರಯ್ಯ

೫. ಜಾನಪದ ಕಥೆಗಳು—ಮಾನವ ಶಾಸ್ತ್ರ —ಡಾ. ಆರ್ವೀಯಸ್ ಸುಂದರಂ

೬. ಜಾನಪದ ವಿಜ್ಞಾನ ಮತ್ತು ಕನ್ನಡ ಜನಪದ —ವಿಲ್ಯಂ ಮಾಡ್ತ

೭. ಮಾನವ ಶಾಸ್ತ್ರ ಮತ್ತು ಜಾನಪದ — ಜೀ. ಶಂ. ಪರಮಶಿವಯ್ಯ

೮. ಜನಪದ ಪುರಾಣಗಳು ಮತ್ತು ಆಚರಣೆಗಳು
— ಡಾ॥ ತೀ. ನಂ. ಶಂಕರನಾರಾಯಣ

ಮೇಲಣ ವಿಷಯಗಳನ್ನು ಅವುಗಳನ್ನು ಮಂಡಿಸಿದ ತಜ್ಞರ ಹೆಸರುಗಳನ್ನು ಪರಿಶೀಲಿಸಿದರೆ, ಜನಪದ ಸಾಹಿತ್ಯವನ್ನು ತಲಸ್ಪರ್ಶಿಯಾಗಿ ಅಧ್ಯಯನ, ಅಧ್ಯಾಪನ ಮಾಡಿದವರೇ ಆಗಿದ್ದಾರೆ. ವಿಷಯಗಳು ಕೂಡ ವೈವಿಧ್ಯಮಯವಾಗಿವೆ. ಓದುಗರ ಕುತೂಹಲವನ್ನು ಕೆರಳಿಸುವಂತಿವೆ. ಜನಪದ ಸಾಹಿತ್ಯ ಒಂದು ಕಾಲದಲ್ಲಿ ಪಂಡಿತರ ಅವಜ್ಞೆಗೆ, ಉಪೇಕ್ಷೆಗೆ ಪಕ್ಕಾಗಿತ್ತು. ಇದು ಒಂದು ಸಾಹಿತ್ಯವೇ ಎಂದು ಮೂಗು ಮುರಿದವರುಂಟು. ಇದೀಗ ಅದು ವಿಶ್ವವಿದ್ಯಾಲಯದ ಗದ್ದುಗೆಯನ್ನೇರಿದೆ. ತನ್ನ ಸ್ಥಾನ-ಮಾನವನ್ನು ಭದ್ರಗೊಳಿಸಿಕೊಂಡಿದೆ. ಅನೇಕ ವಿದ್ವಾಂಸರ ಗಮನ ಸೆಳೆದಿದೆ. ಸಮಗ್ರ ಜಗತ್ತಿನ ವಿವಿಧ ವಿಷಯಗಳೊಂದಿಗೆ ಹಾಸು ಹೊಕ್ಕಾಗಿ ಬೆರೆತುಕೊಂಡಿದೆ. ಇದೀಗ ಅದರ ವರ್ಗೀಕರಣ, ವಿಶ್ಲೇಷಣೆಯ ಕಾರ್ಯ ಭರದಿಂದ ಸಾಗಿದೆ. ಅನೇಕರು ಮಹಾಪ್ರಬಂಧ ಬರೆದು ಡಾಕ್ಟರೇಟ್ ಪದವಿ ಪಡೆದಿದ್ದಾರೆ. ಎಂ. ಎ. ವಿದ್ಯಾರ್ಥಿಗಳಿಗಾಗಿ ಪಠ್ಯ ವಿಷಯವಾಗಿದೆ. ಈ ಸಂದರ್ಭದಲ್ಲಿ ಈ ಬಗೆಯ ಜನಪದ ಸಾಹಿತ್ಯದ ವಿವಿಧ ಮಗ್ಗಲುಗಳನ್ನು ಸಮಾಜಶಾಸ್ತ್ರ, ಮಾನವಶಾಸ್ತ್ರ, ಮನಃಶಾಸ್ತ್ರ ಮೊದಲಾದ ಶಾಸ್ತ್ರಗಳ ಹಿನ್ನೆಲೆಯಲ್ಲಿ ಮೂಡಿಬಂದ ಜನಪದ ಸಾಹಿತ್ಯ ವಿವಿಧ ಅಂಶಗಳನ್ನು ಸಾಧಾರವಾಗಿ ಪ್ರಮಾಣ ಪೂರ್ವಕವಾಗಿ ವಿವೇಚಿಸಿದ ವಿಮರ್ಶಿಸಿದ ಪ್ರಬುದ್ಧ ಪ್ರಬಂಧಗಳು ನಮ್ಮ ವಿದ್ಯಾರ್ಥಿಗಳ ಅಭ್ಯಾಸಕ್ಕೆ ಹೊಸ ಆಯಾಮ ಕಲ್ಪಿಸಿ ಕೊಡುವದರಲ್ಲಿ ಬಹಳಷ್ಟು ಪ್ರಯೋಜನಕಾರಿಯಾಗಿವೆಯೆಂಬುದನ್ನು ಮರೆಯಲಾಗದು, ಮರೆಯಬಾರದು.

ಹಂಪನಾ ಸಮರ್ಥ ಪ್ರಾಧ್ಯಾಪಕರು: ನಮ್ಮ ಸಾಹಿತ್ಯದ ಕೊರತೆಯನ್ನು ಬಲ್ಲವರು, ನಮ್ಮ ವಿದ್ಯಾರ್ಥಿಗಳಿಗೆ ಮಾರ್ಗದರ್ಶನ ಸಿಕ್ಕುವ ಈ ಬಗೆಯ ಕೃತಿಯು ಪ್ರಕಾಶನ ಮಾಡಿರುವುದು ಶ್ಲಾಘನೀಯ. ಹೊಸ ಹೊಸ ಅಂಶಗಳನ್ನು ಬೆಳಕಿಗೆ ತಂದ ಈ ಎಂಟು ಪ್ರಬಂಧಗಳು ವೈಜ್ಞಾನಿಕ ತಳಹದಿಯ ಮೇಲೆ ರೂಪುಗೊಂಡಿವೆ. ಡಾ. ಚಂದ್ರಶೇಖರ ಕಂಬಾರರು ತಮ್ಮ ಪ್ರಬಂಧದಲ್ಲಿ ಸವದತ್ತಿ ಎಲ್ಲಮ್ಮನ ಜೋಗಿತಿಯರು ಆಚರಿಸುವ ಆಚರಣೆಯನ್ನು ಬಹು ಮನೋಜ್ಞವಾಗಿ ಪರಿಚಯ ಮಾಡಿ ಕೊಟ್ಟಿದ್ದಾರೆ. ಈ ಆಚರಣೆಯಲ್ಲಿ ಬಯಲಾಟದ ಅಂಶಗಳನ್ನು ಗುರುತಿಸಿದ್ದಾರೆ. ಎಲ್ಲಮ್ಮ, ರೇಣುಕೆ, ಮಾತಂಗಿ ಮೊದಲಾದ ವ್ಯಕ್ತಿ ಚಿತ್ರಗಳ ಅರ್ಥ ವಿವರಣೆ ಸೊಗಸಾಗಿದೆ. 'ಕಾಂಬಿನೇಶನ್' 'ರಿಪೀಟ' ಮೊದಲಾದ ಆಂಗ್ಲ ಶಬ್ದಗಳನ್ನು ಹೊಡೆದುಹಾಕಬಹುದಿತ್ತು. ಎರಡನೆಯದು ಟಿ. ಎಸ್. ಸತ್ಯನಾಥ ಅವರದು. 'ಮನೋವೈಜ್ಞಾನಿಕ ಮತ್ತು ಸಾಂಸ್ಕೃತಿಕ ಹಿನ್ನೆಲೆಯಲ್ಲಿ ಆಟಗಳು' ಎಂಬ ವಿಷಯ ಕುರಿತಾದ ೩೧ ಪುಟಗಳ ವಿಸ್ತಾರವಾದ ಈ ಲೇಖನ ನಿಜವಾಗಿಯೂ ಹೊಸ ಪ್ರಯತ್ನ. ಆಟ–ಒಂದು ಸಂವಹನ ವ್ಯವಸ್ಥೆಯಾಗಿ, ಅಶಾಬ್ದಿಕ ಸಂವಹನವಾಗಿ ಬೆಳೆದುಬಂದ ಬಗೆಯನ್ನು ಗುರುತಿಸಲಾಗಿದೆ. ಕಥೆ, ಒಗಟು, ಒಡಪು ಮುಂತಾದ ಜನಪದ ಪ್ರಕಾರದ ಹಿಂದೆ ಒಂದು ಆಟದ ಮನೋಭಾವ ಇರುವಂತೆ ಬೈಗುಳದಲ್ಲಿಯೂ ಜನಪದ ಅಂಶಗಳಿವೆ ಎಂದಿರುವುದು ಪರಿಶೀಲನಾರ್ಹ. ಅನೇಕ ಬೈಗುಳಗಳ ವಿಶ್ಲೇಷಣೆ ಮಾಡಲಾಗಿದೆ. ೨೮ ಆಕರ ಪ್ರಮಾಣಗಳಿಂದ ಸಿದ್ಧಪಡಿಸಿದ ಈ ಲೇಖನ ಓದುಗರ ತೀವ್ರ ಗಮನ ಸೆಳೆಯುವಲ್ಲಿ ಯಶಸ್ವಿಯಾಗಿದೆ. ಜಾನಪದದ ಇನ್ನೊಂದು ಮುಖವನ್ನು ಹೇಗೆ ವಿಶ್ಲೇಷಿಸಬಹುದೆಂಬುದಕ್ಕೆ ಈ ಲೇಖನ ಒಂದು ಉತ್ತಮ ಉದಾಹರಣೆ. ಕೊನೆಯಲ್ಲಿ ಕೇಳುಗರ ಪ್ರಶ್ನೆಗಳಿಗೆ ಲೇಖಕರ ಉತ್ತರಗಳಿವೆ.

ಎಂ. ಎಸ್. ವಿ. ಪಂಡಿತಾರಾಧ್ಯ ಅವರ ಕನ್ನಡ ಜನಪದ ಪುರಾಣಗಳ ಅಧ್ಯಯನ: ಕೆಲವು ಚಿಂತನೆಗಳು ಎಂಬ ಲೇಖನದಲ್ಲಿ ಜಾನಪದದ ಚಾರಿತ್ರಿಕ ಅರಿವು, ಅದು ವರ್ತಮಾನದಲ್ಲಿ ಪಡೆಯುತ್ತಿರುವ ಸ್ಥಿತ್ಯಂತರ, ಬದಲಾಗುತ್ತಿರುವ ಬದುಕಿನ ಸಂದರ್ಭದಲ್ಲಿ ಜಾನಪದದ ಮೌಲ್ಯಮಾಪನ–ಇವು ನಮ್ಮ ಇಂದಿನ ಜಾನಪದ ಅಧ್ಯಯನದ ನಿರ್ದೇಶಕ ತತ್ತ್ವಗಳಾಗಬೇಕು ಎಂದು ಸೂಚಿಸಲಾಗಿದೆ. 'ರತ್ನ'ನ ಪದಗಳ ಭಾಷೆ ಪರಿಸರಗಳು ಜಾನಪದದಂತಿದ್ದರೂ ಅವನ ಸಂವೇದನೆ ಶಿಷ್ಟವಾದುದು ಎಂದಿರುವುದು ಗಮನೀಯ. ಒಂದು ನಿರ್ದಿಷ್ಟ ಜನಪದ ಆಚರಣೆಯನ್ನು ವಿವರಿಸುವ, ಸಮರ್ಥಿಸುವ ಸ್ವೀಕರಿಸುವ ಕೆಲಸವನ್ನು ಪುರಾಣ ಮಾಡುತ್ತದೆ. ಕರ್ನಾಟಕದಲ್ಲಿ ದೊರೆಯುವ ಇಂಥ ಪುರಾಣಗಳನ್ನು ಅವುಗಳಿಗೆ ಸಂಬಂಧಿಸಿದ ಆಚರಣೆಗಳ ಸಂದರ್ಭದ ಸಹಿತ ಅಧ್ಯಯನ ಮಾಡಿ ಮೌಲ್ಯಮಾಪನ ಮಾಡುವುದು ಒಳ್ಳೆಯದೆಂದೂ ಸಲಹೆ ನೀಡಿದ್ದಾರೆ. ಇದು ಕೂಡ ಹೊಸ ದೃಷ್ಟಿಯಿಂದ ವಿವೇಚಿಸಿದ

ಮೌಲಿಕ ಲೇಖನ. ಕೊನೆಯಲ್ಲಿ ಎಂಟು ಪ್ರಶ್ನೋತ್ತರಗಳಿವೆ. ಆಧಾರ ಕೃತಿಗಳ ಉಲ್ಲೇಖವಿದೆ. ನಾಲ್ಕನೆಯದು ಜಾನಪದ ಮತ್ತು ಮನೋವಿಜ್ಞಾನ. ಜಾನಪದ ಶಾಸ್ತ್ರದ ಅಧ್ಯಯನಕ್ಕೆ ಮನೋವಿಜ್ಞಾನ ಕೊಡಬಹುದಾದ ನೆರವು ಒಂದು ಮುಖ ವಾದರೆ, ಜಾನಪದ ಶಾಸ್ತ್ರದ ಅಧ್ಯಯನದಿಂದ, ಅದು ಪಡೆಯಬಹುದಾದ ಲಾಭ ಮತ್ತೊಂದು ಮುಖ. ಮಾನವ ವರ್ತನೆಯ ಸಿದ್ಧಾಂತಗಳ ಸ್ಪಷ್ಟೀಕರಣ ಹಾಗೂ ಸುಧಾರಣೆ ಕಾರ್ಯದಲ್ಲಿ ಬುದ್ಧಿಶಕ್ತಿ, ವ್ಯಕ್ತಿತ್ವ, ಅಭಿರುಚಿ ಮುಂತಾದವುಗಳ ಮಾಪನಕ್ಕಾಗಿ ಇರುವ ಪರೀಕ್ಷೆಗಳ ಸಿಂಧುತ್ವ ಪರಿಶೀಲನೆ ಕಾರ್ಯದಲ್ಲಿ, ಮೂಲಭೂತ ಸಂವೇದನೆಗಳ ಕಾರ್ಯಾಚರಣೆಯ ರೀತಿಯನ್ನು ಅರ್ಥಮಾಡಿಕೊಳ್ಳುವಲ್ಲಿ, ಸಂಕೇತಗಳ ಅರ್ಥ ವಿವರಣೆ ಕೊಡುವಲ್ಲಿ ಹಾಗೂ ಇತರ ಹಲವು ಕಾರ್ಯಗಳಲ್ಲಿ ಜಾನಪದ ಅಧ್ಯಯನ ಮನೋವಿಜ್ಞಾನಕ್ಕೆ ವಿಶೇಷ ನೆರವನ್ನು ನೀಡುವ ಸಾಧ್ಯತೆಯಿದೆ. ಜಾನಪದ ಶಾಸ್ತ್ರ ಮತ್ತು ಮನೋವಿಜ್ಞಾನಗಳ ನಡುವೆ ನಿಕಟ ಸಂಪರ್ಕ ಏರ್ಪಡು ವುದರಿಂದ ಪರಸ್ಪರ ಪ್ರಯೋಜನದ ಜೊತೆಗೆ ಮಾನವ ಜೀವನದ ಬಗ್ಗೆ ಸೂಕ್ತ ಒಳ ನೋಟಗಳನ್ನು ಪಡೆಯಲು ಅನುಕೂಲವಾಗುವ ಸಾಧ್ಯತೆ ಹೆಚ್ಚು ಎನ್ನುವ ಅಭಿಪ್ರಾಯ ಸಮರ್ಥನೀಯವಾಗಿದೆ. ಹಾಗೆಯೇ ಮನೋವೈಜ್ಞಾನಿಕ ದೃಷ್ಟಿ ಯಿಂದ ಜಾನಪದ ವ್ಯಾಖ್ಯೆಯನ್ನು ವಿವೇಚಿಸಲಾಗಿದೆ. ಜಾನಪದ ಜೀವನ ಆಳ ವಾದುದು, ಅಗಲವಾದುದು. ವಿಕಾಸಪ್ರಿಯ ಮಾನವ ಜೀವನಕ್ಕೆ ಸೂಕ್ತ ನೆಲೆ ನಿರ್ದೇಶನ ನೀಡಬಲ್ಲುದು ಎಂಬಿತ್ಯಾದಿ ಮನನೀಯ ವಿಚಾರಗಳಿಂದ ಕೂಡಿದ ಈ ಲೇಖನವು ಜಾನಪದ ಅಭ್ಯಾಸಿಗಳಿಗೆ ಮಾರ್ಗದರ್ಶನ ನೀಡಬಲ್ಲದು. ಸಹಾಯಕ ಸಾಹಿತ್ಯ ಸೂಚಿ ಪ್ರಶ್ನೋತ್ತರಗಳಿವೆ. ಇದೇ ಮಾದರಿಯಲ್ಲಿ ಜಾನಪದ ಕಥೆಗಳು ಮಾನವಶಾಸ್ತ್ರ ಎಂಬ ಲೇಖನವನ್ನು ಡಾ. ಆರ್ವಿಯಸ್ ಸುಂದರಂ ಬರೆದಿದ್ದಾರೆ. ಜಾನಪದ ಕ್ಷೇತ್ರಕಾರ್ಯಕ್ಕೆ ಮಾನವಶಾಸ್ತ್ರ ಮತ್ತು ಭಾಷಾಶಾಸ್ತ್ರಗಳಿಂದ ಲಭಿಸಿದ ಸಹಾಯ ಗಮನಾರ್ಹ. ಮಾನವ ಶಾಸ್ತ್ರಜ್ಞರು ಪ್ರಾಚೀನ ಜನಾಂಗಗಳ ನಡೆ-ನುಡಿ, ಸಂಪ್ರದಾಯ, ಆಚಾರ, ಆಚರಣೆ ಮುಂತಾದವುಗಳ ಸಂಗ್ರಹ ಕಾರ್ಯದಲ್ಲಿ ತೊಡಗಿ ದವರಾದುದರಿಂದ ಅವರ ಅನುಭವ ಜಾನಪದ ವಿದ್ವಾಂಸರಿಗೂ ಸಹಾಯ ಮಾಡಿತು. ಮುಖ್ಯವಾಗಿ ಜನಪದ ಕಥೆಗಳಂತಹ ಪ್ರಮುಖ ಪ್ರಕಾರಗಳ ಸಂಗ್ರಹಣೆಗೆ ಮಾನವ ಶಾಸ್ತ್ರಜ್ಞರ ವೈಜ್ಞಾನಿಕ ವಿಧಾನಗಳು ನೆರವಾಗುತ್ತವೆ ಎಂಬುದಾಗಿ ವಸ್ತುನಿಷ್ಠವಾಗಿ ವಿವೇಚಿಸಲಾಗಿದೆ. ವಿಲ್ಯಂ ಮಾಡ್ತ ಅವರ ಜಾನಪದ ವಿಜ್ಞಾನ ಮತ್ತು ಕನ್ನಡ ಜಾನಪದ ವಿಷಯ ಕುರಿತಾದ ತೌಲನಿಕ ವಿಮರ್ಶೆ ಆಕರಸೂಚಿಯೊಂದಿಗೆ ಓದುಗರ ಮನ ಸೆಳೆಯುತ್ತದೆ. ಮಾನವಶಾಸ್ತ್ರ ಮತ್ತು ಜಾನಪದ ಕುರಿತಾದ ಜೀಶಂಪ ಅವರ ಲೇಖನವು ಅನೇಕ ಹೊಸ ಅಂಶಗಳನ್ನು ಬೆಳಕಿಗೆ ತಂದಿದೆ. ಕೊನೆಯ ಲೇಖನ ಜನಪದ ಪುರಾಣಗಳು ಮತ್ತು ಆಚರಣೆಗಳು ಡಾ. ತೀ. ನಂ. ಶಂಕರನಾರಾಯಣರದ್ದು.

ಆರು ಪ್ರಮುಖ ವಿಭಾಗ ಮಾಡಿ ವಿಶ್ಲೇಷಿಸಲಾಗಿದೆ. ಸಮರ್ಥ ಪ್ರತಿಪಾದನೆಯಿಂದ ಲೇಖನ ವಿಚಾರಪರಿಪ್ಲುತ. ಒಟ್ಟಿನಲ್ಲಿ ಪರಿವಿಡಿಯಿಲ್ಲದ ಅಲ್ಲಲ್ಲಿ ಲೇಖನಗಳ ಶೀರ್ಷಿಕೆಗಳ ಅದಲು ಬದಲಾವಣೆ ಪಲ್ಲಟಗಳನ್ನು ಬಿಟ್ಟರೆ ಈ ಕೃತಿ ಜಾನಪದ ವಿದ್ಯಾರ್ಥಿಗಳಿಗೆ ಬಹು ಪ್ರಯೋಜನಕಾರಿಯಾಗಿದೆ. ಜಾನಪದ ಸಾಹಿತ್ಯದ ವ್ಯಾಪ್ತಿ ಯನ್ನು ಬಹಿರಂಗಪಡಿಸುತ್ತದೆ. ಸಂಪಾದಕರಾದ ಹಂಪನಾ ಅವರು ಒಂದು ಮೌಲಿಕವಾದ ವಿನೂತನ ವಿಚಾರಧಾರೆಯಿಂದ ಕೂಡಿದ ಅಧಿಕೃತ ಕೃತಿಯೊಂದನ್ನು ಕನ್ನಡ ಸಾರಸತ ಲೋಕಕ್ಕೆ ಕೊಡಮಾಡಿದ್ದಾರೆ.

ಡಾ. ಶ್ರೀಕಂಠ ಕೂಡಿಗೆ

## ಜಾನಪದ ತಜ್ಞರಾಗಿ

ಅನುಭವ, ಅಧ್ಯಯನ ಮತ್ತು ಅನ್ವೇಷಣಾ ಕುತೂಹಲಗಳು ಸಾಹಿತಿಯೊಬ್ಬನ ಸೃಜನಶೀಲತೆಗೆ ಹೊಸ ಅರ್ಥವಂತಿಕೆಯನ್ನು ತಂದುಕೊಡಬಲ್ಲವು. ಭಾಷಾ ವಿಜ್ಞಾನ, ಸಾಹಿತ್ಯ, ಸಂಶೋಧನೆ ಇತ್ಯಾದಿ ಕ್ಷೇತ್ರಗಳಲ್ಲಿ ಗಣನೀಯ ಸಾಧನೆ ಮಾಡಿರುವ ಪ್ರೊ॥ ಹಂಪನಾ ಅವರ ಜಾನಪದ ಆಸಕ್ತಿ ಮೇಲಿನ ಸಂಗತಿಗಳಿಂದ ಸ್ಫೂರ್ತಿ ಪಡೆದಿದೆ.

ಅಧ್ಯಯನಶೀಲ ಮನಸ್ಸು ಕುತೂಹಲಕ್ಕಾಗಿ ವಿಷಯವೊಂದರ ಜಾಡು ಹಿಡಿದು ಏನೇನು ಮಾಹಿತಿ ಸಂಗ್ರಹಿಸಬಹುದು, ಚರ್ಚಿಸಬಹುದು, ತೀರ್ಮಾನ ಕೈಗೊಳ್ಳಬಲ್ಲದೆಂಬುದಕ್ಕೆ ಹಂಪನಾ ಅವರ 'ಯಕ್ಷ ಯಕ್ಷಿಯರು' (೧೯೭೬) ಕೃತಿ ಸಾಕ್ಷಿಯಾಗಿದೆ. "ಹೊಯ್ಸಳ ವಾಸ್ತುಶಿಲ್ಪವನ್ನು ಜನಸಾಮಾನ್ಯರು ಜಕಣ ಡಂಕಣರಿಗೆ ಆರೋಪಿಸುವುದು ವಾಡಿಕೆ. ಜಕಣ (ಜಕ್ಕಣ)ನ ಹೆಸರನ್ನು ಕೇಳಿದಾಗಲೆಲ್ಲಾ ಅದು ಯಕ್ಷನ ತದ್ಭವರೂಪವಿರಬೇಕೇನೋ ಎಂಬ ಯೋಚನೆ ಕೆಲಸ ಮಾಡತೊಡಗುತ್ತಿತ್ತು. ಅದೇ ನೆಪದಲ್ಲಿ ಸಾಮಗ್ರಿಯನ್ನು ಸಂಶೋಧಿಸುತ್ತ ಹೊರಟ ಫಲವಾಗಿ ಇಷ್ಟು ಬರವಣಿಗೆ ಸಿದ್ಧವಾಗಿದೆ" ಎಂಬುದು ಕೃತಿಯ ಅರಿಕೆಯಲ್ಲಿನ ಮಾತು.

ಯಕ್ಷಯಕ್ಷಿಯರನ್ನು ಕುರಿತ ನಂಬಿಕೆ ಕಲ್ಪನೆಗಳು ಪುರಾತನ ಮಾನವ ಸಂಸ್ಕೃತಿಯಿಂದ ಮೊದಲ್ಗೊಂಡು ಜನಪದ ಸಂಸ್ಕೃತಿಯ ಅನೇಕ ಘಟ್ಟಗಳಲ್ಲಿ ವಿಕಾಸಗೊಂಡ ಬಗೆಯನ್ನು ಪುಸ್ತಕ ವಿವರಿಸುತ್ತದ. 'ಜಕ್ಕ' 'ಜಕ್ಕಿಣಿ' ಮಾತುಗಳು ಇಂದಿಗೂ ಹಳ್ಳಿಗರಲ್ಲಿ ಬಳಕೆಯಲ್ಲಿವೆ. ಮಲೆನಾಡಿನ ಬ್ರಾಹ್ಮಣೇತರ ಜನಾಂಗಗಳಲ್ಲಿ ಜಕ್ಕಿಣಿಯನ್ನು ಎಡೆ ಇಟ್ಟು ಪೂಜಿಸುವ ಪರಿಪಾಠ ಉಂಟು. ಯಕ್ಷರ ನೆಲೆಯನ್ನು ಬೃಹದಾಕಾರದ ವೃಕ್ಷಗಳಿಗೆ ಆರೋಪಿಸಿ ಅವಕ್ಕೆ ಪೂಜೆ ಸಲ್ಲಿಸಲಾಗುತ್ತದೆ. ಸತ್ತವರು ಯಕ್ಷ ಯಕ್ಷಿಯರಾಗುತ್ತಾರೆಂದು ನಂಬಿಕೆ ಇದೆ. ಆದ್ದರಿಂದ ಹೊಸದಾಗಿ

ಸತ್ತವರಿಗೆ ಹನ್ನೆರಡನೆಯ ದಿನದ ತಿಥಿ ನಡೆಸಿ ಈ ಹಿಂದೆ ಸತ್ತವರ ಗುಂಪಿಗೆ ಸೇರಿಸುತ್ತಾರೆ. ಇದಕ್ಕೆ 'ಜಕ್ಕಣಿ ಕೂಡಿಸುವುದು' ಎನ್ನುತ್ತಾರೆ. ಹೀಗೆ ಜನಜೀವನದಲ್ಲಿ ಹಾಸುಹೊಕ್ಕಾಗಿ ರೂಪ, ಕಲ್ಪನೆಗಳಿಗೆ ಎಡೆಮಾಡಿಕೊಟ್ಟಿರುವ ಶಕ್ತಿಗಳನ್ನು ಕುರಿತ ಕುತೂಹಲಕಾರಿ ಅಧ್ಯಯನ 'ಯಕ್ಷಯಕ್ಷಿಯರು'.

ಭಾರತೀಯ ಪ್ರಾಚೀನ ದಾಖಲೆಗಳಾದ ವೇದೋಪನಿಷತ್ತುಗಳಲ್ಲಿ, ಶಾಸನ ಶಿಲ್ಪ ಸಾಹಿತ್ಯಗಳಲ್ಲಿ ಇದರ ಉಲ್ಲೇಖವಿರುವುದರ ಸೂಚನೆ ವಿಷಯದ ಅಧ್ಯಯನ ವ್ಯಾಪ್ತಿಯನ್ನು ನಿರ್ದೇಶಿಸುವಂತಿದೆ. ಜೈನ ಮತ್ತು ಜೈನೇತರ ಕ್ರಮದಲ್ಲೂ ಅಧ್ಯಯನ ಮಾಡಬಹುದೆಂಬ ಸಲಹೆ ಸ್ವೀಕಾರಾರ್ಹವಾಗಿದೆ.

'ಯಕ್ಷಗಾನ' ಪದ ಸಂಸ್ಕೃತ ಮೂಲದ್ದಾದರೂ ಅಲ್ಲಿನ ಸಾಹಿತ್ಯ, ಶಾಸ್ತ್ರಕೃತಿಗಳಲ್ಲಿ ಇದರ ಪ್ರಸ್ತಾಪವಿಲ್ಲ. ಎಕ್ಕಡಿಗರು, ಎಕ್ಕಲಗಾನ, ಯಕ್ಷಾಂದೋಳದಂಥ ಪದಗಳು ಹಳಗನ್ನಡ ಕೃತಿಗಳಲ್ಲೂ : 'ಯಕ್ಷರಾತ್ರಿ' ಎಂಬುದೊಂದು ಆಚರಣೆ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಜೀವಂತವಾಗಿರುವುದು ಮುಂತಾದ ಆಧಾರಗಳ ಮೇಲೆ ಅದು ಭರತನ ನಾಟ್ಯಶಾಸ್ತ್ರಕ್ಕಿಂತ ಭಿನ್ನವಾದ ದ್ರಾವಿಡ ಕಲೆ ಎಂದು ಸಾಧಿಸಿರುವುದು ಚರ್ಚಾಸ್ಪದ ವಿಚಾರವೊಂದಕ್ಕೆ ಖಚಿತ ನೆಲೆಯನ್ನೊದಗಿಸಿದೆ. ಯಕ್ಷರು 'ವೃಕ್ಷವಾಸಿಗಳು, ಲಂಕೆಯ ಆದಿವಾಸಿಗಳು, ಕೈಲಾಸವಾಸಿಗಳು, ಸಂಗೀತಜ್ಞರು, ನೃತ್ಯಸಂಗೀತ ಪ್ರಿಯರು, ರಾಕ್ಷಸಪರವಾಗಿ ಇದ್ದವರು, ಕೆಂಪು ಕಣ್ಣಿನವರು, ಕಪ್ಪು ಮೈಬಣ್ಣದವರು' ಇತ್ಯಾದಿ ವಿಶೇಷಣಗಳನ್ನು ಹೊಂದಿದವರೆಂಬುದನ್ನು ಪ್ರಾಚೀನ ಕೃತಿಗಳಿಂದ ಕ್ರೋಢೀಕರಿಸಿ ಕೊಟ್ಟಿದ್ದಾರೆ. ಈ ಆಧಾರದ ಮೇಲೆ ಯಕ್ಷರು ಆರ್ಯೇತರ ಜನಾಂಗ ಎಂಬ ತೀರ್ಮಾನಕ್ಕೆ ಬಂದಿದ್ದಾರೆ. ಋಗ್ವೇದದ ಕಾಲದಲ್ಲಿದ್ದ ಯಕ್ಷರ ಬಗೆಗಿನ ಭೀತಿ, ಉಪೇಕ್ಷೆ ಕಾಲಕ್ರಮದಲ್ಲಿ ದೈವಿಕ ಗೌರವವಾಗಿ ಪರಿವರ್ತಿತವಾಯಿತೆಂಬ ಪ್ರತಿಪಾದನೆ ತರ್ಕಬದ್ಧವಾದುದಾಗಿದೆ. ಜೈನ ಮತ್ತು ಬೌದ್ಧ ಗ್ರಂಥಗಳಲ್ಲಿನ ಯಕ್ಷರ ಬಗೆಗಿನ ಶುಭ-ಅಶುಭ ಉಲ್ಲೇಖಗಳನ್ನು ಸಂಗ್ರಹಿಸಿಕೊಟ್ಟಿರುವುದು ಉಪಯುಕ್ತವಾಗಿದೆ. ಕಾಲಕ್ರಮದಲ್ಲಿ ಯಕ್ಷರು ಹಿಂದೆಬಿದ್ದು ಯಕ್ಷಿಯರು ಪ್ರಾಧಾನ್ಯತೆ ಪಡೆದುದನ್ನು ಕೃತಿ ಸಮುಚಿತವಾಗಿ ಪ್ರತಿಪಾದಿಸುತ್ತದೆ. ಭಾರತೀಯ ಮೂರ್ತಿಶಿಲ್ಪದಲ್ಲಿ ಯಕ್ಷ ಯಕ್ಷಿಯರ ಚಿತ್ರ ಕ್ರಿ. ಪೂ. ೨೦೦ ರಿಂದಲೂ ಬೆಳೆದುಕೊಂಡು ಬಂದಿದೆ. ಜೈನ ತೀರ್ಥಂಕರ ಮೂರ್ತಿಗಳ ಕೆತ್ತನೆಯಲ್ಲಿ ವೈವಿಧ್ಯವಿಲ್ಲ. ಆದರೆ ಯಕ್ಷಯಕ್ಷಿಯರ ಪ್ರತಿಮೆ ನಿರ್ಮಾಣದಲ್ಲಿ ಕಲಾನೈಪುಣ್ಯಕ್ಕೆ ಹೆಚ್ಚಿನ ಅವಕಾಶವಿದೆ. "ಜೈನ ಶಿಲ್ಪಕಲೆ ತನ್ನ ತುತ್ತತುದಿ ಮುಟ್ಟಿರುವುದು, ಲೌಕಿಕ ದೃಷ್ಟಿಯಿಂದ ಈ ಯಕ್ಷ ಶಿಲ್ಪರಚನೆಯಲ್ಲೇ" ಎಂಬುದು ಒಪ್ಪತಕ್ಕ ಮಾತಾಗಿದೆ. ಜೈನಸಾಹಿತ್ಯದಲ್ಲಿ ಬರುವ ಯಕ್ಷಯಕ್ಷಿಯರ ಪ್ರಸಂಗಗಳು, ದಿಗಂಬರ ಮತ್ತು ಶ್ವೇತಾಂಬರ ಪಂಥಗಳ ವಿಭಿನ್ನ ಕಲ್ಪನೆಗಳು, ಆ ಕುರಿತ ಐತಿಹ್ಯಗಳು ಜಾನಪದೀಯವಾಗಿದ್ದು ಅಧ್ಯಯನಕ್ಕೆ ಗ್ರಾಸ

ಒದಗಿಸುವಂತಿವೆ. ಬೌದ್ಧ ಜೈನ ಸಂಪ್ರದಾಯದ ಯಕ್ಷಯಕ್ಷಿ ಕಥೆಗಳು ಜನಪದ ಕಲ್ಪನೆ ಮತ್ತು ಕಥನಾಶಯಗಳಿಗೆ ಹತ್ತಿರವಾಗಿದ್ದು ಅಧ್ಯಯನ ಯೋಗ್ಯವಾಗಿವೆ. ಈ ಸಂಪ್ರದಾಯದ ಆಮೂಲಾಗ್ರ ನೋಟವೊಂದು ಕೃತಿಯಿಂದ ಲಭ್ಯವಾಗುತ್ತದೆ.

ನಿರಂತರ ಶ್ರಮ, ಜೀವನದ ಆಸರಿಕೆ ಬೇಸರಿಕೆಯಿಂದ ಬಿಡುಗಡೆ ಹೊಂದಿ ನೆಮ್ಮದಿ ಪಡೆಯಲು ಜನಪದ ಸಾಹಿತ್ಯ ಕಲೆಗಳಂತೆ ಹಬ್ಬ, ಉತ್ಸವ, ತೇರು, ಜಾತ್ರೆಗಳು ಪ್ರಮುಖ ಸಾಧನಗಳಾದವು. ಇವುಗಳಲ್ಲಿ ವೈಯಕ್ತಿಕ ಸಂತೋಷಕ್ಕಿಂತ ಸಾಮೂಹಿಕ ಆಶೋತ್ತರಕ್ಕೆ ಹೆಚ್ಚು ಬೆಲೆ ಬಂತು. ಸಂತೋಷದ ಜೊತೆಗೆ ಸಾಮಾಜಿಕ ಹಿತದೃಷ್ಟಿಯೂ ಒಗ್ಗೂಡಿತು. ಇಂಥ ಹಿನ್ನೆಲೆಯಲ್ಲಿ ಜನ್ಮತಾಳಿದ 'ಜಾತ್ರೆ'ಯ ಸ್ವರೂಪ, ವಿವಿಧ ಸಾಂಸ್ಕೃತಿಕ ಮಜಲುಗಳನ್ನು ಹಲವು ದಿಕ್ಕುಗಳಲ್ಲಿ ಒಗ್ಗೂಡಿಸಿ ಅರ್ಥೈಸುವ ಪ್ರಯತ್ನವೇ ಹಂಪನಾ ಅವರ 'ಕರ್ನಾಟಕದ ಜಾತ್ರೆಗಳು' ಕೃತಿ.

ಕರ್ನಾಟಕ ಜಾನಪದ ಇದುವರೆಗೆ ನಡೆದುಬಂದ ದಾರಿಯ ಹೆಜ್ಜೆಗುರುತುಗಳ ಸ್ಥೂಲ ನೋಟ ಕೃತಿಯ ಆರಂಭದಲ್ಲಿದೆ. ಇದುವರೆಗೆ ಯಾರೊಬ್ಬರ ಗಮನವನ್ನೂ ಅಷ್ಟಾಗಿ ಸೆಳೆಯದಿದ್ದ ಬ್ರಹ್ಮಕವಿಯ (ಸು. ೧೬೦೦) 'ವಜ್ರಕುಮಾರ ಚರಿತೆ' ಎಂಬ ಸಾಂಗತ್ಯಕಾವ್ಯದಲ್ಲಿನ 'ಜನಪದ ಕಥೆಯ ಬಣ್ಣಿಪೆನೊ' ಎಂಬ ಮಾತನ್ನು ಉಲ್ಲೇಖಿಸಿ, ಜನಪದ ಸಾಹಿತ್ಯಾಭ್ಯಾಸದಲ್ಲಿ ಇದು "ವಿಶ್ವಾಸನೀಯ ಪ್ರಾಚೀನ ಉಲ್ಲೇಖ"ವೆಂದು ತಿಳಿಸಿದ್ದಾರೆ. "ಇತ್ತೀಚಿನ ಅಧ್ಯಯನದ ಪ್ರೇರಣೆಗಳು ಹೊರಗಿನಿಂದ ಬಂದ ದ್ದೆಂಬುದೂ ತಿಳಿದಿರುವ ಸಂಗತಿಯೇ ಆಗಿದೆ. ಆದರೆ ಎಲ್ಲ ಪರಿಕಲ್ಪನೆಗಳೂ ಎಲ್ಲಿಂದಲೊ ಬರಬೇಕೆ ? ಇಲ್ಲಿನ ಉಪಲಬ್ಧ ಸಾಮಗ್ರಿಯನ್ನು, ಇನ್ನೂ ದೇಶೀಯ ಮೂಲ ನಿಷ್ಪನ್ನ ಅಧ್ಯಯನ ಕ್ರಮವನ್ನು ರೂಢಿಸಿಕೊಂಡು ಪರಿಶೀಲಿಸುವುದೂ ಸೂಕ್ತವಲ್ಲವೆ ?" ಎಂಬ ಪ್ರಶ್ನೆಯನ್ನು ಶ್ರೀಯುತರು ಎತ್ತಿದ್ದಾರೆ. ಉಳಿದ ಜಾನಪದ ಪ್ರಕಾರಗಳಿಗೆ ಸಂಬಂಧಿಸಿದಂತೆ ಈ ಮಾತು ಏನೇ ಇರಲಿ 'ಜಾತ್ರೆ'ಯಂಥ ಅಧ್ಯಯನಕ್ಕೆ ದೇಶೀಯ ಮೂಲವಾದ ಸಾಮಗ್ರಿಗಳು ಮತ್ತು ಅವುಗಳಿಂದ ನಿಷ್ಪನ್ನ ವಾಗುವ ಸೂತ್ರಗಳಿಗೆ ಆತುಕೊಳ್ಳುವುದು ಹೆಚ್ಚು ಸಮಂಜಸವೆನಿಸುತ್ತದೆ. ಶ್ರೀಯುತರು ತಮ್ಮ ಅನಿಸಿಕೆಗೆ ಮಾಡಿದ ಪ್ರಾಯೋಗಿಕ ಪ್ರಯತ್ನವೆನ್ನುವಂತೆ 'ಕರ್ನಾಟಕದ ಜಾತ್ರೆಗಳು' ಕೃತಿಯನ್ನು ನಮ್ಮ ಮುಂದಿಟ್ಟಿದ್ದಾರೆ.

ಶಿಷ್ಟ ಸಂಸ್ಕೃತಿ ಮತ್ತು ಜನಪದ ಸಂಸ್ಕೃತಿಯ ಹಿನ್ನೆಲೆಯಲ್ಲಿ ಜರಗುವ ಜಾತ್ರೆ ಗಳು ಪರಸ್ಪರ ಭಿನ್ನವಾಗುವ ಬಗೆ ; 'ಜಾತ್ರೆ' 'ಪರಿಸೆ'ಗಳ ಪದ ನಿಷ್ಪತ್ತಿ, ಪ್ರಾಚೀನ ಕವಿ ಉಲ್ಲೇಖಗಳು, ಜನಪದ ಕಥೆ, ಹಾಡು, ಲಾವಣಿ, ಒಡಪು ಬಯಲಾಟಗಳಲ್ಲಿ ಜಾತ್ರೆ ಹೆಣೆದುಕೊಂಡು ಬಂದದ್ದರ ಮಾಹಿತಿಯನ್ನು ಪುಸ್ತಕ ಒದಗಿಸುತ್ತದೆ. ಇಂಡಿಯಾದೇಶದ ಜಾತ್ರೆಗಳ ಹೊರರೂಪದಲ್ಲಿ ಏಕತೆ ಕಂಡರೂ ಪ್ರದೇಶ ವಿಶಿಷ್ಟ

ಮತ್ತು ಗ್ರಾಮವಿಶಿಷ್ಟ ಜಾತ್ರೆಗಳು ನೂರಾರಿವೆ. ಶಿಷ್ಟದೇವತೆಗಳ ಜಾತ್ರೆಗಿಂತ ಗ್ರಾಮ ದೇವತೆಗಳ ಜಾತ್ರೆಗಳು ಜನಪದ ಅಧ್ಯಯನಕ್ಕೆ ಉತ್ತಮ ಗ್ರಾಸನ್ನೊದಗಿಸುತ್ತವೆ. ಎಂಬುದು ಸತ್ಯ. ಕರ್ನಾಟಕದಲ್ಲಿ ಈಗ ಪ್ರಚಲಿತವಿರುವ ನೂರಾರು ಗ್ರಾಮದೇವತೆ ಗಳನ್ನು, ಅವುಗಳ ಜಾತ್ರೆಯ ಸ್ವರೂಪ ವಿಶೇಷಗಳನ್ನು ಪ್ರಸ್ತಾಪಿಸಲಾಗಿದೆ. ಹಾಸನ ಜಿಲ್ಲೆಯ ಬಿಂದಿಗಮ್ಮನ ಜಾತ್ರೆ, ಚಿತ್ರದುರ್ಗದ ಹೊಣಿಕಟ್ಟೆ ಕರಿಯಮ್ಮನ ಜಾತ್ರೆ, ನಾರಾಯಣಗೊಂಡನ ಹಳ್ಳಿಯ ಮುತ್ತಮ್ಮನ ಜಾತ್ರೆ, ಕೋಲಾರದ ಕಾದಲವೇಣಿಯ ಮಾರಮ್ಮನ ಜಾತ್ರೆ, ತೊರವನಹಳ್ಳಿ ಸಪಲಮ್ಮ ಮತ್ತು ಭೀಮೇಶ್ವರ ಜಾತ್ರೆ, ಮೇಲೂರು ಗಂಗಮ್ಮ, ಮಧುಗಿರಿಯ ದಂಡಿನ ಮಾರಮ್ಮ ಜಾತ್ರೆ, ಬೆಂಗಳೂರಿನ ಕಡಲೇಕಾಯಿ ಪರಿಷೆ, ಶಿವಮೊಗ್ಗ ಜಿಲ್ಲೆಯ ಉಕ್ಕಡಗಾತ್ರೆ ಕರಿಬಸವೇಶ್ವರ ಜಾತ್ರೆ, ಧಾರವಾಡ ಜಿಲ್ಲೆಯ ನೆಶ್ವಿಯ ಗುಗ್ಗಳ–ರಥೋತ್ಸವ, ನಲ್ಲೂರ ದೊರೆಕಾಳಿ ಜಾತ್ರೆ ಇನ್ನೂ ಮುಂತಾದ ಜಾತ್ರೆಗಳನ್ನು ಸಮೀಕ್ಷಿಸಲಾಗಿದೆ.

ಗೊತ್ತಾದ ಸ್ಥಳ, ನಿರ್ದಿಷ್ಟ ದೇವತೆ ಹಾಗೂ ನಿಶ್ಚಿತ ಕಾಲಾವಧಿಗಳಲ್ಲಿ ಜರುಗುವ ಜಾತ್ರೆಗಳಿಂದ ಸಾಮಾಜಿಕ ಮತ್ತು ಸಾಂಸ್ಕೃತಿಕ ಬದುಕಿಗೆ ಹಲವು ಪ್ರಯೋ ಜನಗಳಿವೆ. ಜನ ಸಂಪರ್ಕವೇರ್ಪಡುತ್ತದೆ, ಸ್ನೇಹ ಪರಿಚಯ ಕುದುರುತ್ತದೆ, ದೂರದ ನೆಂಟರಿಷ್ಟರು ಒಂದೆಡೆ ಕಲೆಯುತ್ತಾರೆ, ವ್ಯಾಪಾರಿಗಳಿಗೆ ವ್ಯಾಪಾರ ಕುದುರುತ್ತದೆ– ಇವು ಜಾತ್ರೆಯಿಂದಾಗುವ ಪ್ರಯೋಜನದ ಒಂದು ಮುಖವಾದರೆ; ಅವು ಜನಪದ ಮನರಂಜಕರಿಗೆ, ಸಾಂಪ್ರದಾಯಿಕ ಕಲೆಯ ಪ್ರದರ್ಶನಕ್ಕೆ ಅವಕಾಶ ಒದಗಿಸುವುದು ಮತ್ತೊಂದು ಮುಖ. ಸಿಡಿ ಕೊಂಡ ಹಾಯುವಿಕೆ, ಬಾಯಿ ಬೀಗ, ಕರಗ, ಗಾವು ಸಿಗಿ ಯುವಿಕೆ, ತೇರು ಎಳೆಯುವಿಕೆ ಇತ್ಯಾದಿ ಹತ್ತಾರು ನಡಾವಳಿಗಳನ್ನು ಜನಪದ ಜಾತ್ರೆ ತನ್ನ ಒಡಲಲ್ಲಿ ಸಂರಕ್ಷಿಸಿಕೊಂಡು ಬಂದಿದೆ. ಜಾತ್ರೆಗಳಲ್ಲಿ ತೇರುಕಟ್ಟುವುದು ಗ್ರಾಮೀಣ ಜನತೆಯ ದೇವತಾಪ್ರೀತಿಯ ಸಂಕೇತವಾಗಿರುವಂತೆ ಅವರ ಕಲಾವಂತಿಕೆಯ ಅಭಿವ್ಯಕ್ತಿ ಕೂಡಾ ಆಗಿದೆ. ರಥ, ಅದರ ವಿನ್ಯಾಸ, ಪ್ರಾದೇಶಿಕ ವೈವಿಧ್ಯಗಳು, ತೇರು, ಶೃಂಗಾರದ ನಾನಾ ಬಗೆಗಳನ್ನು ಉಪಯುಕ್ತ ಮಾಹಿತಿಗಳೊಂದಿಗೆ ಪ್ರಕೃತ ಕೃತಿಯಲ್ಲಿ ಸಾದರ ಪಡಿಸಲಾಗಿದೆ. ಜರಿತ್ರೆಗೆ ಸಂಬಂಧಿಸಿದ ಹತ್ತಾರು ಅಪರೂಪದ ಛಾಯಾಚಿತ್ರ ಗಳನ್ನೊಳಗೊಂಡ ಈ ಪುಸ್ತಕ ಜಾತ್ರೆಗಳನ್ನು ಅಧ್ಯಯನ ಮಾಡುವರಿಗೆ ಒಂದು ಪುಟ್ಟ ಕೈಪಿಡಿಯಂತಿದೆ. ಬೃಹತ್ ಸಂಪುಟವೊಂದರ ಬರವಣಿಗೆಗೆ ಪ್ರೇರಣೆಯೊದಗಿಸಬಹು ದಾದ ಸಾಮಗ್ರಿ ಚಿಂತನೆಯ ಎಲೆಗಳು ಇದರಲ್ಲಿ ಒಗ್ಗೂಡಿವೆ.

ಆದಿಮಾನವನ ಮುಗ್ಧ ಮತ್ತು ಅತಾರ್ಕಿಕ ಮನಸ್ಸಿಗೆ ವಿಸ್ಮಯ ಹಾಗೂ ಕುತೂಹಲವನ್ನುಂಟುಮಾಡಿದ ಹಲವು ಪ್ರಾಕೃತಿಕ ವಸ್ತುಗಳಲ್ಲಿ ಆಕಾಶ ಮುಖ್ಯವಾ ದುದು. ಸೂರ್ಯ, ಚಂದ್ರ, ನಕ್ಷತ್ರ, ಗ್ರಹ, ಗಾಳಿ, ಮಳೆ, ಮೋಡ, ಮಿಂಚು, ಸಿಡಿಲು-

ಗುಡುಗು, ಬೆಳದಿಂಗಳು, ಕಾಮನಬಿಲ್ಲು, ಧೂಮಕೇತು, ಗ್ರಹಣ, ಉಲ್ಕೆ–ಇವು ನೂರಾರು ಜನಪದ ನಂಬಿಕೆ, ಐತಿಹ್ಯಗಳಿಗೆ ಎಡೆಮಾಡಿಕೊಟ್ಟಿವೆ. ಈ ಎಲ್ಲಾ ವಿಷಯ ಗಳನ್ನು ಕ್ರೋಢೀಕರಿಸಿ ಸಂಕ್ಷಿಪ್ತವಾಗಿ ಮುಂದಿಡುವ ಪ್ರಯತ್ನವನ್ನು 'ಆಕಾಶ ಜಾನಪದ' ಎಂಬ ತಮ್ಮ ಕಿರುಹೊತ್ತಿಗೆಯಲ್ಲಿ ಶ್ರೀಯುತರು ಮಾಡಿದ್ದಾರೆ.

ಆಕಾಶಕಾಯಗಳಲ್ಲಿ ಮನುಷ್ಯನಿಗೆ ಹುಟ್ಟಿದ ಭಯ, ಗೌರವ ತತ್ಪರಿಣಾಮ ವಾಗಿ ರೂಪುಗೊಂಡ ಆರಾಧನಾ ಮನೋಧರ್ಮ ಕೃತಿಯ ಆರಂಭದಲ್ಲಿ ನಿರೂಪಿ ಸಲ್ಪಟ್ಟಿದೆ. ಸೂರ್ಯ ಚಂದ್ರರ ಉಗಮ, ಆಕಾರ, ಲಕ್ಷಣಗಳಿಗೆ ಸಂಬಂಧಿಸಿದಂತೆ ಭಾರತ ಮತ್ತು ಜಗತ್ತಿನ ಇನ್ನಿತರ ಭಾಗಗಳ ಬುಡಕಟ್ಟು ಜನರಲ್ಲಿನ ಪ್ರಚಲಿತ ಕಥೆ ಗಳನ್ನು ಒಂದೆಡೆ ಕಲೆ ಹಾಕಲಾಗಿದೆ. ಜಗತ್ತಿನ ಜೀವಶಕ್ತಿಯಾದ ಸೂರ್ಯನನ್ನು ಕುರಿತು ಆರಾಧನೆ, ನೃತ್ಯಗಳು ಜಗತ್ತಿನಾದ್ಯಂತ ಕಾಣಸಿಗುತ್ತವೆ. ಸೂರ್ಯನೃತ್ಯದಲ್ಲಿ ಭಾಗವಹಿಸುವ ತಂಡಗಳು ಧರಿಸುವ ವೇಷಭೂಷಣ, ಸೇವಿಸುವ ಆಹಾರ ಪಾನೀಯ ಗಳು, ಅರ್ಪಿಸುವ ಹರಕೆ, ಕುಣಿತದ ವೈವಿಧ್ಯಗಳನ್ನು ಕೃತಿ ಅಚ್ಚುಕಟ್ಟಾಗಿ ಸಂಗ್ರಹಿಸಿ ಕೊಟ್ಟಿದೆ. ಚಂದ್ರನ ಮೇಲಿನ ಕಲೆ ಚಿತ್ರವಿಚಿತ್ರಗಳ ಕಥೆಗಳಿಗೆ ಎಡೆಮಾಡಿ ಕೊಟ್ಟಿದ್ದು, ಭಿನ್ನ ಸಾಂಸ್ಕೃತಿಕ ವಲಯಗಳಲ್ಲಿ ಕಥೆ ತಳೆದ ರೂಪಾಂತರಗಳು, ಚಂದ್ರನ ಬಗೆಗಿನ ನಾನಾ ನಂಬಿಕೆಗಳನ್ನು ವಿಚಾರಮಾಡಲಾಗಿದೆ. 'ಬೆಳ್ದಿಂಗಪ್ಪನ ಹಸೆ' 'ಗುಡಿಯ ಹುಣ್ಣಿಮೆ' ವಿಶಿಷ್ಟ ಜನಪದ ಸಂಪ್ರದಾಯಗಳಾಗಿದ್ದು ಈ ದಿಕ್ಕಿನಲ್ಲಿ ಮಾಹಿತಿ ಸಂಗ್ರಹಿಸುವರಿಗೆ ಪ್ರೇರಣೆ ಒದಗಿಸುತ್ತವೆ. ನಕ್ಷತ್ರ ಗ್ರಹಣದಂಥ ವಿಷಯಗಳನ್ನು ಕುರಿತ ವಿಚಾರಗಳು ಕುತೂಹಲ ಹುಟ್ಟಿಸುವಂಥವಾಗಿದ್ದು, ಜನಪದೀಯ ಮನಸ್ಸು ನೈಸರ್ಗಿಕ ಘಟನೆಗಳ ಬಗ್ಗೆ ತಳೆಯಬಹುದಾದ ವರ್ಣಮಯ ಕಲ್ಪನೆಗಳನ್ನು ಸೂಚಿಸುವಂತಿವೆ. ಬೇರೆ ಬೇರೆ ಜನಾಂಗ, ಬುಡಕಟ್ಟುಗಳಲ್ಲಿ ಕವಲೊಡೆದ ಇಂಥ ಹಲವು ನಂಬಿಕೆಗಳನ್ನು ಒಂದು ಗೂಡಿಸಿ ಕೊಟ್ಟಿರುವುದು ಕೃತಿಯ ವೈಶಿಷ್ಟ್ಯಗಳಲ್ಲೊಂದಾಗಿದೆ. ಗಾಳಿ ಸಿಡಿಲು ಗುಡುಗು ಮಳೆ ಇಂದ್ರಚಾಪಗಳನ್ನು ಕುರಿತು ಇಂಥ ಎಷ್ಟೋ ಕುತೂಹಲಕರವಾದ ಅಂಶಗಳು ವಿಚಾರ ಮಾಡುವರಿಗೆ ಹೊಸದಿಕ್ಕನ್ನು ನಿರ್ದೇಶಿಸುತ್ತವೆ. ನಡುನಡುವೆ ಆಯಾ ವಿಷಯಗಳಿಗೆ ಸಂಬಂಧಿಸಿದ ಗಾದೆ, ಒಗಟು, ಗೀತೆಗಳನ್ನು ಉಲ್ಲೇಖಿಸಿರುವುದು ವಿಷಯಗ್ರಹಿಕೆಗೆ ಸಹಾಯವಾಗಿದೆ. ಜನಪದ ವಿದ್ವಾಂಸರು ಗಮನ ಹರಿಸದ ಕ್ಷೇತ್ರ ವೊಂದರ ಕಡೆಗೆ ಅನ್ವೇಷಣಾ ಕುತೂಹಲ ಹುಟ್ಟುವಂತೆ ಮಾಡಿರುವುದು ಈ ಪುಟ್ಟ ಕೃತಿಯ ದೊಡ್ಡ ಸಾಧನೆ. ಅಷ್ಟು ಮಾತ್ರವಲ್ಲ, ಕೃತಿಯಲ್ಲಿ ಪ್ರಸ್ತಾಪಿಸಲ್ಪಟ್ಟಿರುವ ಸಂಗತಿಗಳ ಜಾಡುಹಿಡಿದು ಅಧ್ಯಯನ ಮುಂದುವರಿಸುವರಿಗೆ ಇದು ಉತ್ತಮ ಮಾದರಿಯಾಗಿದೆ.

ಹೀಗೆ ಅವಜ್ಞೆಗೊಳಗಾದ ಹಲವು ಕನ್ಯಾಕ್ಷೇತ್ರಗಳಿಗೆ ಹಂಪನಾ ಅವರ ಅನ್ವೇಷಣಾ ಮತಿ ಲಗ್ಗೆ ಹಾಕಿರುವುದು ಕನ್ನಡ ಜಾನಪದ ಅಧ್ಯಯನಕ್ಕಾಗಿರುವ ದೊಡ್ಡ ಲಾಭ.

ಟಿ. ಎಸ್. ನಾಗರಾಜ ಶೆಟ್ಟಿ

# ವಡ್ಡಾರಾಧನೆ

ಸಾಹಿತ್ಯ ಮನೆಮನೆಯ ಮಾತಾಗಬೇಕು, ಶ್ರೀಸಾಮಾನ್ಯನ ಸೊತ್ತಾಗಬೇಕು. ಈ ದೃಷ್ಟಿಯಿಂದ ವಿಶ್ವವಿದ್ಯಾನಿಲಯಗಳು ಕೈಗೊಳ್ಳುತ್ತಿರುವ ಪ್ರಚಾರೋಪನ್ಯಾಸಗಳು ಅರ್ಥಪೂರ್ಣ. ಪ್ರಸಿದ್ಧ ವಿದ್ವಾಂಸರ ಉಪನ್ಯಾಸಗಳನ್ನು ಗ್ರಾಮಾಂತರ ಪ್ರದೇಶಗಳ ಜನತೆಯ ಕಿವಿಗೂ ಮುಟ್ಟಿಸುವುದು ಈ ಬಗೆಯ ಯೋಜನೆಯ ಒಂದು ಮುಖ. ಅವುಗಳನ್ನು ಪುಟ್ಟ ಪುಸ್ತಿಕೆಗಳ ರೂಪದಲ್ಲಿ ಪ್ರಕಟಿಸಿ ಸುಲಭ ಬೆಲೆಗೆ ಒದಗಿಸುವುದು ಮತ್ತೊಂದು ಮುಖ. ಎರಡೂ ಕೆಲಸ ಬಹಳ ಉಪಯುಕ್ತ. ಇದರಿಂದ ಸಾಹಿತ್ಯ ಎತ್ತರದ ದಂತಗೋಪುರವಾಗಿ ಉಳಿಯದೆ ನೆಲದ ಮೇಲಿನ ರಮ್ಯೋದ್ಯಾನವಾಗುತ್ತದೆ; ಶ್ರೀಸಾಮಾನ್ಯನೂ ಅದರಲ್ಲಿ ವಿಹರಿಸಿ ಆಸ್ವಾದಿಸಿ ಆನಂದಿಸಲು ಅವಕಾಶವಾಗುತ್ತದೆ.

ಡಾ॥ ಹಂಪ. ನಾಗರಾಜಯ್ಯ ಅವರ 'ವಡ್ಡಾರಾಧನೆ' ಕಿರು ಹೊತ್ತಗೆ ಮೈಸೂರು ವಿಶ್ವವಿದ್ಯಾನಿಲಯದ ಪ್ರಸಾರಾಂಗ ಪ್ರಕಟಿಸುತ್ತಿರುವ ಪ್ರಚಾರ ಪುಸ್ತಕ ಮಾಲೆಯಲ್ಲಿ ಪ್ರಕಟವಾಗಿದೆ. ಇಂಥ ಹೊತ್ತಗೆಗಳು ಗಾತ್ರದಲ್ಲಿ ಕಿರಿಯದಾದರೂ ಅಂತರಂಗದಲ್ಲಿ ಸಮಸ್ತ ಮಾಹಿತಿಯನ್ನು ಸುಲಲಿತವಾಗಿ ಸಂಕ್ಷೇಪವಾಗಿ ಒಳಗೊಳ್ಳುವ ಹಾಗೆ ಅವುಗಳನ್ನು ರಚಿಸುವುದು ಸುಲಭಸಾಧ್ಯವಾದುದೇನೂ ಅಲ್ಲ. ಇಲ್ಲಿ ಕೃತಿಯ ಸಾರ ಕೆನೆಗಟ್ಟಬೇಕು. ಅರೆಕೊರೆಗಳಿಂದ ಹೊರತಾಗಿರಬೇಕು. ಈ ನಿಟ್ಟಿನಲ್ಲಿ 'ವಡ್ಡಾರಾಧನೆ' ಸ್ತುತ್ಯರ್ಹ ಪ್ರಯತ್ನ ಎನ್ನಬಹುದು.

ವಡ್ಡಾರಾಧನೆ ಹತ್ತೊಂಬತ್ತು ಆಕರ್ಷಕ ಕಥೆಗಳ ಕಥಾಗುಚ್ಛ. ಶಿವಕೋಟ್ಯಾಚಾರ್ಯನ ಈ ಕೃತಿ ಕನ್ನಡದ ಮೊಟ್ಟಮೊದಲ ಗದ್ಯಗ್ರಂಥ (ಕಾಲ ಸು. ೯೨೦). ಮೊದಲ ಗದ್ಯಗ್ರಂಥವಾದರೂ ಭಾಷೆ, ಶೈಲಿ, ಕಥನ ಕಲೆಗಳನ್ನು ಗಮನಿಸಿದಾಗ ಆಶ್ಚರ್ಯ, ಆನಂದಗಳೆರಡೂ ಒಟ್ಟಿಗೇ ಉಂಟಾಗುತ್ತವೆ. ಹಾಗೆ

ನೋಡಿದರೆ ಕನ್ನಡದ ಆದಿಕಾವ್ಯಗಳೂ ಶ್ರೇಷ್ಠ ಕೃತಿಗಳಾಗಿರುವುದು ನಾವು ಹೆಮ್ಮೆ ಪಡಬಹುದಾದ ಸಂಗತಿ.

ಸಂಸ್ಕೃತವೇ ಸವಾರಿ ನಡೆಸುತ್ತಿದ್ದ ಕಾಲದಲ್ಲಿ ರಚಿತವಾಗಿದ್ದರೂ ದೇಸಿಯ ದಿಗ್ವಿಜಯವನ್ನು ಇಲ್ಲಿ ನೋಡಬಹುದು. ಶೈಲಿ ನದಿಯ ನೀರಿನಂತೆ ಸರಾಗ ಹರಿಯುತ್ತದೆ, ಕಥನ ತಂತ್ರದಲ್ಲಿ ಪರಿಣತಿಯಿದೆ. ಈ ಗುಣಗಳೆಲ್ಲ ಆದ್ಯಗದ್ಯ ಗ್ರಂಥದಲ್ಲೇ ಮೈಗೂಡಿಕೊಂಡಿರುವುದು ಆಶ್ಚರ್ಯದ ಸಂಗತಿಯಲ್ಲದೆ ಮತ್ತೇನು ? ಇಂಥ ಸಾಧನೆ ಆನಂದ ತರುವುದರಲ್ಲಿ ಸಂಶಯವಿಲ್ಲ.

ಈ ಕೃತಿಯಲ್ಲಿ ಧರ್ಮವೂ ತಳಕು ಹಾಕಿಕೊಂಡಿದೆ. ಹಾಗೆ ನೋಡುವುದಾದರೆ ಧರ್ಮ ನಮ್ಮ ಸಾಹಿತ್ಯದ ಒಂದು ಅಂಗವೇ ಆಗಿದೆ. ಧರ್ಮವನ್ನು ಶುಷ್ಕವಾಗಿ ಬೋಧಿಸದೆ ಕಾವ್ಯದ ಮುಖೇನ ಕಮನೀಯವಾಗಿ ತಲುಪಿಸುವುದರಲ್ಲಿ ನಮ್ಮ ಕವಿಗಳು ನಿಸ್ಸೀಮರು. ಬೋಧನೆಯ ಅಂಶವೇ ನಮ್ಮ ಪರಿವೆಗೆ ಬಾರದೆ 'ಕಾಂತಾ ಸಂಮಿತ'ದಲ್ಲಿ ಧರ್ಮ ರವಾನೆಯಾಗುತ್ತದೆ !

ವಡ್ಡಾರಾಧನೆಗೆ 'ಉಪಸರ್ಗ ಕೇವಲಿಗಳ ಕಥೆ' ಎನ್ನುವ ಮತ್ತೊಂದು ಹೆಸರೂ ರೂಢಿಯಲ್ಲಿತ್ತು. ಆ ಹೆಸರೂ ಬಹಳ ಸಮರ್ಥವಾಗಿ ಹೊಂದಿಕೊಳ್ಳುತ್ತದೆ. ಜಿನಧರ್ಮ ಪರಿಭಾಷೆಯಲ್ಲಿ ಉಪಸರ್ಗ ಎಂದರೆ ಕೇಡು, ತೊಂದರೆ ಎಂದರ್ಥ. "ಕೇವಲಿಗಳು (ಜಿನತಪೋಧನರಾದ ಯತಿಗಳು) ತೊಂದರೆಗಳಿಂದ ವಿಚಲಿತರಾಗದೆ ತಪಸ್ಸು ಮಾಡಿ ಸ್ವರ್ಗಾಪವರ್ಗ (ಮೋಕ್ಷ) ಸುಖಕ್ಕೆ ಭಾಜನರಾಗುವ ಕಥೆಗಳು" ಇಲ್ಲಿವೆ.

ಈಜುಗಾರ ನೇರವಾಗಿ ನೀರಿಗೆ ಧುಮ್ಮಿಕ್ಕುವಂತೆ ಹಂಪನಾ ಅವರು ಪುಸ್ತಿಕೆಯನ್ನು ಹೀಗೆ ಪ್ರಾರಂಭಿಸಿದ್ದಾರೆ:

"ದೇಸಿಯ ದಿಗ್ವಿಜಯವನ್ನು ಸಾರುವ ಗದ್ಯ ಕೃತಿರತ್ನವಾದ ವಡ್ಡಾರಾಧನೆ ಕನ್ನಡ ಸಾಹಿತ್ಯದ ಇತಿಹಾಸದಲ್ಲಿ ಒಂದು ಮೈಲಿಗಲ್ಲು. ಜಿನಧರ್ಮದ ಉದಾತ್ತ ಆದರ್ಶ ಹಾಗೂ ಉಚ್ಚ ಧ್ಯೇಯಗಳ ನಿಕ್ಷೇಪದಂತಿರುವ ವಡ್ಡಾರಾಧನೆ ಹತ್ತೊಂಬತ್ತು ಜೈನ ಕಥೆಗಳ ಶ್ರೇಷ್ಠ ಸಂಕಲನ ಗ್ರಂಥ. ಯಾವುದೇ ನಿಟ್ಟಿನಿಂದ ನೋಡಿದರೂ ಕನ್ನಡ ಗದ್ಯ ಸಾಹಿತ್ಯದ ಕ್ಷೇತ್ರದಲ್ಲಿ ಉತ್ಕೃಷ್ಟವಾದ ಸೀಮಾಕೃತಿಯೆಂದು ಪ್ರಶಂಸೆಗೆ ಪಾತ್ರವಾಗಿದೆ".

ಸುಮಾರು ಐದನೇ ಒಂದು ಭಾಗದಷ್ಟನ್ನು ಹಿನ್ನೆಲೆಗಾಗಿಯೇ ಮೀಸಲಿಟ್ಟಿದ್ದಾರೆ. ಭಾರತದಲ್ಲಿ ಕಥಾ ಸಾಹಿತ್ಯ ಹೇಗೆ ಹುಟ್ಟಿ ಬೆಳೆಯಿತೆನ್ನುವ ವಿಷಯದಿಂದ ತೊಡಗಿ, ಧಾರ್ಮಿಕ ವಿಚಾರಗಳ ಸೇರ್ಪಡೆಯಿಂದ ಗ್ರಂಥದ ಪೂಜ್ಯತೆ ಹಾಗೂ ಮೌಲ್ಯ ಹೆಚ್ಚುತ್ತದೆಂಬ ಕವಿಗಳ ಕಲ್ಪನೆಯನ್ನು ಪ್ರಸ್ತಾಪಿಸುತ್ತಾರೆ. "ಭಾರತೀಯರ

ಜನಜೀವನದ ಜಾಗೃತಿಗಾಗಿ ಈ ಧರ್ಮದ ಹೊನಲು ಪ್ರವಹಿಸಿ ತನ್ನ ಪಾಲಿನ ಕೈಂಕರ್ಯವನ್ನು ಎಸಗಿದೆ.” ಪರಿಸ್ಥಿತಿ ಹೀಗಿದ್ದರೂ ಇದರ ಮಿತಿಯ ಅರಿವು ಹಂಪನಾ ಅವರಿಗೆ ಇಲ್ಲದಿಲ್ಲ. “ಇದರಿಂದ ಶುದ್ಧ ಸಾಹಿತ್ಯದ ಗತಿ ಏನಾಯಿತೆಂಬ ವಿಮರ್ಶಾತ್ಮಕ ಪ್ರಶ್ನೆಯೊಂದಿದ್ದರೂ ಒಟ್ಟು ಜನಜೀವನ ಹಸನಾಯಿತೆಂದು ಸ್ಥೂಲ ವಾಗಿ ಹೇಳಬಹುದು” ಎಂದು ಹೇಳುವಾಗ ಆ ಅರಿವಿನ ಸೂಚನೆ ಸೂಕ್ಷ್ಮವಾಗಿ ಸೇರಿಕೊಂಡಿದೆ !

ಜಿನಧರ್ಮ ಹಾಗೂ ಅದರ ಕಥಾ ಸಾಹಿತ್ಯ ಕುರಿತ ಲೇಖಕರ ಸ್ಪಷ್ಟ ಅಭಿ ಪ್ರಾಯಗಳನ್ನು ಹೀಗೆ ಕ್ರೋಢೀಕರಿಸಬಹುದು:

೧. ಜಿನಧರ್ಮದ ಪ್ರಭಾವ ಆರ್ಯಧರ್ಮ ಹಾಗೂ ಸಾಹಿತ್ಯದ ಮೇಲೆ ಬಿದ್ದಿರುವುದು ಪರಿಶೀಲಿಸಿದರೆ ನಿಚ್ಚಳವಾಗಿ ಕಾಣುತ್ತದೆ.

೨. ಜೈನ ಕಥೆ ಜಾತಕ ಕಥೆಗಳಿಗಿಂತ ನಯ ನೈಪುಣ್ಯ ಕಲೆಗಾರಿಕೆಯಿಂದ ಸುಂದರವಾಗಿದೆ.

೩. ಜೈನ ನಿರೂಪಣಾ ಸಾಹಿತ್ಯ ಭಾರತದ ಅಪಾರ ಕಥಾ ಸಾಹಿತ್ಯದ ರಾಶಿಯಲ್ಲಿ ಅತ್ಯಂತ ಶ್ರೀಮಂತವಾಗಿದ್ದು ಉಳಿದುದಕ್ಕೆ ಉಗಮ ಸ್ಥಾನವಾಯಿತು.

೪. ವೈದಿಕ ಕಥಾ ಸಾಹಿತ್ಯಕ್ಕೆ ಜೈನ ಕಥಾ ಸಾಹಿತ್ಯವೇ ಸ್ಫೂರ್ತಿಯ ಚಿಲುಮೆ ಯಾಗಿ ಚಿಮ್ಮಿತು.

೫. ಗುಣಾಢ್ಯನಿಂದ ಪ್ರಾರಂಭವಾದ ಬೃಹತ್ಕಥಾ ಪರಂಪರೆ ಪಂಚತಂತ್ರ ಕಥೆಗಳ ಪರಂಪರೆಗೂ ಭಗವತೀ ಆರಾಧನೆ ಕನ್ನಡದ ವಡ್ಡಾರಾಧನೆ ಮತ್ತು ಇತರ ಸಂಸ್ಕೃತ ಪ್ರಾಕೃತ ಕಥಾಕೋಶ ಪರಂಪರೆಗೂ ಮೂಲವಾದುವು.

ಈ ಹೇಳಿಕೆಗಳ ಹಿಂದೆ ಹಂಪನಾ ಅವರು ಕಥಾ ಸಾಹಿತ್ಯದ ಪರಂಪರೆಗಳ ಹಿನ್ನೆಲೆ ಕುರಿತು ಆಳವಾದ ವ್ಯಾಸಂಗ ಮಾಡಿರುವ ಶ್ರಮದ ಸೂಚನೆಯಿದೆ.

ಶಿವಾರ್ಯನ ಭಗವತೀ ಆರಾಧನೆ(ಶೌರಸೇನೀ ಪ್ರಾಕೃತ)ಯಲ್ಲದೆ ಹರಿಷೇಣನ ಬೃಹತ್ಕಥಾಕೋಶ ವಡ್ಡಾರಾಧನೆಯ ಮತ್ತೊಂದು ಮೂಲ. ಈ ಇಬ್ಬರ ವ್ಯತ್ಯಾಸ ಕುರಿತು ಹೇಳುತ್ತಾರೆ: “ಹರಿಷೇಣನ ಗಮನ ಸಂಗ್ರಹ ಹಾಗೂ ಸಂಕ್ಷಿಪ್ತದತ್ತ; ವಡ್ಡಾರಾಧನೆಕಾರನ ದೃಷ್ಟಿ ವಿಸ್ತಾರ ಹಾಗೂ ದೀರ್ಘತೆಯತ್ತ” ಇದಕ್ಕೆ ಹಂಪನಾ ಅವರು ಪಂಪ ಹಾಗೂ ರನ್ನರ ಹೋಲಿಕೆ ನೆನಪಿಸಿದ್ದಾರೆ !

ಮುಂದೆ ವಡ್ಡಾರಾಧನೆಯ ಪ್ರಕಾಶನದ ಹಿನ್ನೆಲೆಯ ಕಡೆ ಗಮನ ಕೊಟ್ಟಿ ದ್ದಾರೆ. ಕೃತಿಯ ಮೊದಲ ಪ್ರಸ್ತಾಪ ಡಾ. ಫ್ಲೀಟ್ ಅವರದು (೧೮೮೩). ನಂತರ ಕೆ. ಬಿ. ಪಾಠಕರ ಲೇಖನ (ಇವೆರಡೂ ‘ಇಂಡಿಯನ್ ಆಂಟಿಕ್ವೆರಿ’ಯಲ್ಲಿ). ಮುಂದೆ ಪ್ರಾಕ್ತನ ವಿಮರ್ಶ ವಿಚಕ್ಷಣ ರಾವ್‌ಬಹದ್ದೂರ್ ಡಾ. ರಾ. ನರಸಿಂಹಾಚಾರ್

ಅವರು ತಮ್ಮ 'ಕರ್ಣಾಟಕ ಕವಿಚರಿತೆ'ಯ ಮೊದಲ ಸಂಪುಟದಲ್ಲಿ (೧೯೦೭) ಪ್ರಸ್ತಾಪಿಸಿದ್ದಾರೆ. ಇಷ್ಟು ತಿಳಿಸಿದ ನಂತರ ಹಂಪನಾ ಬರೆಯುತ್ತಾರೆ :

"ಸೊಗಸಾದ ಗ್ರಂಥವನ್ನು ನೋಡಿಯೂ ಅದರ ಒಂದು ಭಾಗವನ್ನು ಉಲ್ಲೇಖಿಸಿಯೂ ಅವರಿಗೆ ಅದರಲ್ಲಿ ಆಸಕ್ತಿ ಹುಟ್ಟದೇ ಹೋದುದು ಸೋಜಿಗವೇ ಸರಿ." ಹೌದು, ಕೆಲವು ಬಾರಿ ಆಗುವುದು ಹೀಗೇ !

"ವಡ್ಡಾರಾಧನೆಯನ್ನು ಕನ್ನಡಿಗರಿಗೆ ಹೃದಯವನ್ನು ತಣಿಸುವಂತೆ ಬೆಳಕಿಗೆ ತಂದ ಶ್ರೇಯಸ್ಸು ಪ್ರಾ॥ ಡಿ. ಎಲ್. ನರಸಿಂಹಾಚಾರ್ ಅವರದು. ಈ ನಡುವೆ ಡಾ॥ ಆ. ನೇ. ಉಪಾಧ್ಯೆಯವರು ತಮ್ಮ ಬೃಹತ್ಕಥಾಕೋಶದ ಮುನ್ನುಡಿಯಲ್ಲಿ (೧೯೪೩) ಹಾಗೂ ಗೋವಿಂದ ಪೈ ಅವರು ತಮ್ಮ ಮೂರು ಉಪನ್ಯಾಸಗಳಲ್ಲಿ (೧೯೪೦) ಕೃತಿಯ ವಿಷಯ ಚರ್ಚಿಸಿದ್ದಾರೆ.

ದೊರೆತ ಹಸ್ತಪ್ರತಿಗಳ ವಿವರವಾದ ಪ್ರಸ್ತಾಪವಿದೆ. ಈ ಕಿರುಹೊತ್ತಗೆಯಲ್ಲಿ ಇದರ ಅಗತ್ಯವಿತ್ತೇ ಎನ್ನುವ ಪ್ರಶ್ನೆಯನ್ನು ಸ್ವಲ್ಪ ಬದಿಗಿಸಿದರೆ, ಕೃತಿ ಸಂಪಾದಕನ ಕಾರ್ಯದ ಕಷ್ಟಕೋಟಲೆಗಳ ಸುಳಿವು ಇಲ್ಲಿ ಕಾಣುತ್ತದೆ.

ವಡ್ಡಾರಾಧನಂ, ವೊಡ್ಡಾರಾಧಣಂ, ಒಡ್ಡಾರಾಧನೆ ಎಂದು ಗ್ರಂಥದ ಹೆಸರಿನ ವ್ಯುತ್ಪತ್ತಿಯನ್ನೂ ಸೂಚಿಸಿದ್ದಾರೆ. ಗ್ರಂಥಕಾರನ ಹೆಸರನ್ನು ಶಿವಕೋಟ್ಯಾಚಾರ್ಯ ಎಂದು ತಿಳಿಯಲು ವಿದ್ವಾಂಸರು ನಡೆಸಿದ ಚರ್ಚೆ, ಶೋಧನೆಗಳ ವಿವರವೂ ಕುತೂಹಲ ಕರವಾಗಿದೆ. ಮೊದಲಿಗೆ ಚಾವುಂಡರಾಯ ಪುರಾಣವೇ ಹಳೇ ಗ್ರಂಥವೆಂಬ ಕೀರ್ತಿಗೆ ಪಾತ್ರವಾಗಿತ್ತು. ವಡ್ಡಾರಾಧನೆ ದೊರೆತ ಮೇಲೆ ಪಂಡಿತ ಮಂಡಳಿ ವಡ್ಡಾರಾಧನೆಯೇ ಪ್ರಾಚೀನ, ಕನ್ನಡದ ಮೊಟ್ಟಮೊದಲ ಗದ್ಯ ಗ್ರಂಥವೆಂದು ಗುರುತಿಸಿದ್ದಲ್ಲದೆ ಅದಕ್ಕಿಂತ ಶ್ರೇಷ್ಠಕೃತಿಯೆಂದೂ ಅಭಿಪ್ರಾಯಪಟ್ಟಿತು.

ಚಾವುಂಡರಾಯ ಪುರಾಣ ಹಾಗೂ ವಡ್ಡಾರಾಧನೆಯ ತೌಲನಿಕ ವ್ಯಾಸಂಗ ಇದುವರೆಗೆ ನಡೆಯದಿರುವ ಕೊರತೆಯ ಕಡೆ ಬೊಟ್ಟು ಮಾಡಿ, ಹಂಪನಾ ಅವರು ಆ ಬಗ್ಗೆ ಕೆಲವು ಸ್ಥೂಲವಾದ ವಿವರಗಳನ್ನು ನೀಡಿದ್ದಾರೆ. ಜೊತೆಗೆ ಆ ನಂತರ ರಚಿತ ವಾದ ಗ್ರಂಥ ನೋಂಪಿ(ಗಳ) ಕಥೆಯ ಹೆಸರನ್ನೂ ಉಲ್ಲೇಖಿಸಿ ಅದರೊಡನೆಯೂ ಹೋಲಿಸಿ ಹೀಗೆ ನಿರ್ಣಯಿಸಿದ್ದಾರೆ.

"ಒಟ್ಟಿನಲ್ಲಿ ವಡ್ಡಾರಾಧನೆ ಕನ್ನಡದಲ್ಲಿ ಉಪಲಬ್ಧವಾಗಿರುವ ಎಲ್ಲ ಗದ್ಯ ಗ್ರಂಥ ಗಳಿಗಿಂತಲೂ ಶಕ್ತಿಯುತವಾದ ಆದರ್ಶ ಶೈಲಿಯ ರಸಘಟ್ಟಿಯಾಗಿದೆ".

ವಡ್ಡಾರಾಧನೆಯ ಸೊಗಸಾದ ದೇಸೀ ಶೈಲಿ, ಆಕರ್ಷಕ ಗದ್ಯ, ಕೆಲನೂನ್ಯತೆಗಳು ಪದಪ್ರಯೋಗ, ಏಕತಾನತೆಯ ಬೇಸರವನ್ನು ಹೋಗಲಾಡಿಸುವ ಉಪಾಯ,

ಚಂಪುವಿನ ಪ್ರಭಾವ ಮುಂತಾದ ವೈಶಿಷ್ಟ್ಯಗಳೆಲ್ಲದರ ವಿವರಣೆ ವಿಪುಲವಾಗಿದೆ. ಕುಟುಂಬ ಜೀವನದ ವಿವರಣೆಯ ಪದಗಳ ಒಂದು ಪಟ್ಟಿಯನ್ನೇ ಕೊಡಲಾಗಿದೆ (ಪುಟ ೩೮). ಕಥೆಗಳಲ್ಲಿ ಮೂಡಿಬಂದಿರುವ ಸಮಾಜ ಚಿತ್ರಗಳನ್ನು ಕಲೆ ಹಾಕಿದ್ದಾರೆ (ಪುಟ ೪೦). ಆ ಕಾಲದ ಸಮಾಜ ಪದ್ಧತಿಗಳನ್ನು ಹೆಕ್ಕಿ ತೆಗೆದಿದ್ದಾರೆ! ಈ ವಿವರಗಳೆಲ್ಲ ಪರಿಪೂರ್ಣವಾಗಿವೆ. ಪುಸ್ತಿಕೆಯ ಬಹುಭಾಗ ಇವುಗಳಿಂದಲೇ ಇಡಿಕಿರಿದಿದೆ; ಇದು ಸಮಂಜಸವೂ ಹೌದು.

"ಕುಶಾಗ್ರಮತಿಯಾದ ವಡ್ಡಾರಾಧನೆಯ ಕಥೆಗಾರ ಅರಮನೆ, ಗುರುಮನೆ, ನಾಗರಿಕ ಜೀವನದ ವಿವರ ಮುಂತಾದುವುಗಳನ್ನು ಗಮನಿಸಿದಂತೆ ಪ್ರಾಣಿಜೀವನ-ವನ್ನೂ ಕಂಡಿದ್ದಾನೆ" ಎಂದು ಹೇಳುತ್ತ ವಿಶೇಷವಾಗಿ ಆನೆಗಳ ಬದುಕಿನ ವಿವಿಧ ಲಕ್ಷಣ ಗಳನ್ನು ಉಲ್ಲೇಖಿಸಿದ್ದಾರೆ. ಅವನು 'ಸಮಾನಾರ್ಥ ಶಬ್ದ ಪ್ರತಿನಿಧಾನ'ದಲ್ಲಿ ತೋರುವ ಪರ್ಯಾಯ ಪದಗಳ ಬಳಕೆಯನ್ನೂ ಉದಾಹರಿಸಿದ್ದಾರೆ.

"ಧರ್ಮದ ಪ್ರತಿಪಾದನೆ ಮಾಡಿರುವ ಕೃತಿಕಾರ ಎಲ್ಲೂ ಅನ್ಯಧರ್ಮದ ಅವ ಹೇಳನ ಮಾಡಿಲ್ಲ" ಎನ್ನುವ ಅವನ ಅಗ್ಗಳಿಕೆಯ, ಸುಸಂಸ್ಕೃತಿಯ ವಿಷಯವನ್ನು ಹಂಪನಾ ತಿಳಿಸಿದ್ದಾರೆ.

ಈ ಪುಟ್ಟ ಪುಸ್ತಕದ ಕೊನೆಯ ಹತ್ತು ಪುಟಗಳಲ್ಲಿ ಹಂಪನಾ ಅವರು ವಡ್ಡಾರಾ ಧನೆಯ ಸಮಗ್ರ ಗುಣಗಣಗಳ ಕ್ರೋಢೀಕರಣದಿಂದ ಕೂಡಿದ ಸೊಗಸಾದ 'ಸಮಾ ರೋಪ'ವನ್ನು ನಿರೂಪಿಸಿದ್ದಾರೆ. ಅಲ್ಲಿನ ಅಭಿಪ್ರಾಯಗಳಲ್ಲಿ ಕೆಲವನ್ನು ಇಲ್ಲಿ ಉದ್ಧರಿಸಬಹುದು :

೧. ವಡ್ಡಾರಾಧನೆಯಲ್ಲಿ ಆಗಾಗ ಬರುವ ಬಾಳಿನ ಆಳವಾದ ಅನುಭವ ಹಾಗೂ ಜೀವನ ವಿವೇಕದಿಂದ ವಿಕಸಿತವಾದ ಬರವಣಿಗೆಯ ಮಾತುಗಳು ಚಿತ್ತಾ ಕರ್ಷವಾಗಿವೆ (೧೫ ಉದಾಹರಣೆ ಕೊಡಲಾಗಿದೆ).

೨. ಇಸಿದಾದ ಕನ್ನಡದ ಮಾತುಗಳು, ಮನೆಮಾತು ಅನೇಕ ಕಡೆ ಹೂ ಅರಳಿ ದಂತೆ ಬಳಕೆಯಾಗಿವೆ.

೩. ವಡ್ಡಾರಾಧನೆಯೆಂಬ ಕಥಾಮೃತದಲ್ಲಿ ಧರ್ಮಾಮೃತವೂ ಬೆರೆತು ಹೋಗಿದೆ.

೪. ಇಲ್ಲಿಯ ಶೈಲಿಯ ಸೊಗಸೆಂದರೆ ಅದು ಕನ್ನಡ ಭಾಷೆಯ ಚೆಲುವಿನ ಹೃದಯವನ್ನೇ ತೆರೆದಿಟ್ಟಂತಿದೆ.

೫. ವಡ್ಡಾರಾಧನೆಯ ಶಬ್ದ ಸಂಪತ್ತು ಅದ್ಭುತ, ಆಶ್ಚರ್ಯಕಾರಕ.

೬. ಕನ್ನಡ ಕಥಾ ಪ್ರಪಂಚದಲ್ಲಿ ಇಂದಿಗೂ ಹೊಸವಸ್ತು, ಹೊಸತಂತ್ರ, ಸರಳವಾದರೂ ಕುತೂಹಲಕಾರಿಯಾದ ಓಟವುಳ್ಳ ಕಥೆಗಳು ಇಲ್ಲಿವೆ.

೭. ಸರ್ವಾಂಗ ಸುಂದರವಾದ ಈ ಕಥಾ ಸಂಕಲನದಲ್ಲಿ ಕಥೆಗಾರ ಮಂಗಳಕರವಾದ ಮಾನವತೆಯ ನಂದಾದೀಪವನ್ನೂ ಹಚ್ಚಿಟ್ಟು ಧರ್ಮಜ್ಯೋತಿಯನ್ನೂ ಬೆಳಗಿದ್ದಾನೆ. ಪ್ರತಿಯೊಂದು ಕಥೆಯಲ್ಲೂ ಮಾನವತೆಯ ಆತ್ಮಶ್ರೀ ಮಧುಮಾಸದ ಸಂಪಗೆಯಂತೆ ಮೋಹಕವಾಗಿ ಅರಳಿ ತನ್ನ ಸುಮಸೌರಭವನ್ನು ಸಮೃದ್ಧವಾಗಿ ಸೂಸಿದೆ. ಇಲ್ಲಿನ ಕಥೆಗಳಲ್ಲಿ ಜೀವನ ಹಾಗೂ ಕಾವ್ಯ ಸೌಂದರ್ಯ ಮಾತ್ರವಲ್ಲದೆ ಆಧ್ಯಾತ್ಮಿಕ ಹಾಗೂ ಅಲೌಕಿಕವಾದ ಸುಂದರ ಭಾವನೆಗಳ ಸಾಮರಸ್ಯವನ್ನೂ ಕಾಣಬಹುದು. ಈ ಹಲವು ವಿಶಿಷ್ಟ ಗುಣಗಳಿಂದ ಇದು ಕನ್ನಡ ಸಾಹಿತ್ಯದಲ್ಲಿ ನಿತ್ಯ ನೂತನವಾಗಿ ಬೆಳಗುವ ಉತ್ಕೃಷ್ಟ ಕಥಾಸಂಕಲನವಾಗಿದೆ.

ಈ ಹೇಳಿಕೆಗಳೆಲ್ಲವನ್ನೂ ಗಮನಿಸಿ, ಹಂಪನಾ ಅವರು ಕೃತಿಯ ಸ್ವಾರಸ್ಯವನ್ನು ಆಸ್ವಾದಿಸಿ ಎಷ್ಟು ಚೆನ್ನಾಗಿ,,ಸೂತ್ರಪ್ರಾಯವಾಗಿ ಅದರ ಸಾರವನ್ನು ಹಿಡಿದುಕೊಡುತ್ತಾರೆ ಎನ್ನುವುದರ ಪರಿಚಯವಾಗುತ್ತದೆ. ಈ ಸಮಾರೋಪವಂತೂ ಗುಡಿಗೆ ಕಳಶವಿಟ್ಟಂತೆ, ಟೊಪ್ಪಿಗೆಗೆ ಗರಿ ಸಿಕ್ಕಿಸಿದಂತೆ ಪುಸ್ತಕಕ್ಕೆ ಅರ್ಥಪೂರ್ಣ ಮುಕ್ತಾಯವನ್ನು ಕೊಟ್ಟಿದೆ. ಕೃತಿಯ ಕೊನೆಯ ವಾಕ್ಯವಾಗಿ “ವಡ್ಡಾರಾಧನೆ ಸಂಶೋಧಕರ ವಿಹಾರಕ್ಕೆ ತಕ್ಕ ಆಡುಂಬೊಲ” ಎಂದು ಅದರ ವ್ಯಾಸಂಗದ ಅಗತ್ಯತೆಯನ್ನು ಸೂಚಿಸುವುದನ್ನೂ ಅವರು ಮರೆತಿಲ್ಲ.

ಈ ಹೊತ್ತಗೆಯಲ್ಲಿ ಎರಡು ಪ್ರಮುಖ ನ್ಯೂನ್ಯತೆಗಳಿವೆ. ಮೊದನೆಯದೆಂದರೆ, ಯಾವುದೇ ಒಂದು ಕಥೆಯನ್ನು ಸಂಕ್ಷೇಪವಾಗಿ ಕೊಡದೇ ಇರುವುದು. ಬೆಲ್ಲ ಹಾಗಿರುತ್ತದೆ, ಹೀಗಿರುತ್ತದೆ ಎಂದು ಹೇಳುವುದಕ್ಕಿಂತ ಒಂದು ತುಂಡನ್ನು ಕೊಟ್ಟು ಬಾಯಿಗೆ ಹಾಕಿಕೊಳ್ಳಿ ಎನ್ನುವುದೇ ಸೂಕ್ತ ಅಲ್ಲವೇ ?

ಎರಡನೆಯ ಕೊರೆತೆಯೆಂದರೆ ಸಮರ್ಥ ಗದ್ಯದ ಒಂದು ಪುಟ್ಟ ಭಾಗವನ್ನು ಉದ್ಧರಿಸದಿರುವುದು

ಇವೆರಡನ್ನು ಬಿಟ್ಟರೆ ಶ್ರೀಸಾಮಾನ್ಯನೇ ಏಕೆ ಬಲ್ಲಿದನೂ ಇದನ್ನೋದಿದಲ್ಲಿ ವಡ್ಡರಾಧನೆಯನ್ನು ಕುರಿತು ಸಮಗ್ರ ವಿಷಯ ತಿಳಿಯಬಹುದು ಎನ್ನುವುದಕ್ಕೆ ಎರಡನೆಯ ಮಾತಿಲ್ಲ. ಇದರ ರಚನೆಗಾಗಿ ನಾವು ಹಂಪನಾ ಅವರನ್ನು ಅಭಿನಂದಿಸಲೇಬೇಕು. ಒಂದು ಸಣ್ಣ ಪುಸ್ತಕದಲ್ಲಿ ಸಾಧಿಸಬಹುದಾದ ಎಲ್ಲವನ್ನೂ ಅವರು ಇಲ್ಲಿ ಸಾಧಿಸಿದ್ದಾರೆ ಎಂದರೆ ತಪ್ಪಲ್ಲ.

ಸಿ. ನಾಗರಾಜು

# ಮೂರನೆಯ ಮಂಗರಸ ಕವಿ

ಮೈಸೂರು ವಿಶ್ವವಿದ್ಯಾನಿಲಯದ ಪ್ರಚಾರೋಪನ್ಯಾಸ ಪುಸ್ತಕ ಮಾಲೆಯು ೧೫೪ನೇ ಕೃತಿಯಾಗಿ ಹೊರಬಂದಿರುವ 'ಮೂರನೆಯ ಮಂಗರಸ ಕವಿ' ಹಂಪನಾ ಅವರು ಪ್ರಸಾರಾಂಗದ ಪತಿಯಿಂದ ಕಾರ್ಕಳದ ಭಂಡಾರಕರ ಕಾಲೇಜಿನಲ್ಲಿ ಮಾಡಿದ ಉಪನ್ಯಾಸದ ಬರಹದ ರೂಪ. ಉಪನ್ಯಾಸಕರು ತಮ್ಮ ಮುನ್ನುಡಿಯಲ್ಲಿ ಕೃತಿಯನ್ನು ಕುರಿತು ಹೇಳಿರುವ 'ಉಪನ್ಯಾಸದ ವಿಸ್ತೃತ ರೂಪವೆ ಈ ಕಿರುಹೊತ್ತಗೆ' ಎಂಬ ಮಾತು ಕೃತಿಯನ್ನು ಓದಿದ ಯಾವ ಓದುಗರಿಗೂ ನಿಜವಾಗಿಯೂ ವಿಸ್ತೃತ ರೂಪವೇ ಎಂದೆನಿಸದೇ ಇರದು.

ಕನ್ನಡ ಸಾಹಿತ್ಯದಲ್ಲಿ ಕವಿಗಳ ಕಾಲ, ದೇಶಗಳನ್ನು ಕುರಿತು, ಕವಿಗಳ ಕೃತಿಗಳನ್ನು ಕುರಿತು ಕೆಲವು ಜಿಜ್ಞಾಸೆಗಳಿವೆ. ಇಂತಹ ಜಿಜ್ಞಾಸೆಗಳಲ್ಲಿ ಪ್ರಸ್ತುತ 'ಮೂರನೆಯ ಮಂಗರಸ ಕವಿ'ಯ ಜಿಜ್ಞಾಸೆಯೂ ಒಂದು. ಈ ಕವಿಯನ್ನು ಕುರಿತು ಉಪನ್ಯಾಸ ಮಾಡಿರುವ ಹಂಪನಾ ಅವರು ನಿಜಕ್ಕೂ ಸಾಹಸಿಗರು. ಅವರ ಈ ಸಾಹಸಿಗತನ ಕೃತಿಯ ಅಂತಸತ್ವವಾಗಿರುವ ಮೂರನೆಯ ಮಂಗರಸನನ್ನು ಕುರಿತಾದ ವಿಚಾರಗಳನ್ನು ಕಲೆ ಹಾಕಿರುವುದರಲ್ಲಿ ಹಾಗೂ ಅವುಗಳನ್ನು ಸರಸ ಶೈಲಿಯಲ್ಲಿ ಪ್ರತಿಪಾದನೆ ಮಾಡಿರುವುದರಲ್ಲಿ ಎದ್ದು ಕಾಣುತ್ತದೆ.

ಕನ್ನಡ ಸಾಹಿತ್ಯದಲ್ಲಿ ಖಡ್ಗ ಹಿಡಿದು ರಣರಂಗದಲ್ಲಿ ಹೋರಾಡಿದ ಹಾಗೆಯೇ ಲೇಖಣಿ ಹಿಡಿದು ಸಾಹಿತ್ಯ ವಾಹಿನಿಯಲ್ಲಿ ಈಜಿದ ಮಹಾಪುರುಷರಿದ್ದಾರೆ. ಇಂತಹವರಲ್ಲಿ ಮೂರನೆಯ ಮಂಗರಸ ಕವಿಯೂ ಒಬ್ಬ. ಈ ಕವಿಯನ್ನು ಕುರಿತಾದ ಹಂಪನಾ ಅವರ ಭಾಷಣದ ವಿಸ್ತೃತ ರೂಪವಾದ 'ಮೂರನೆಯ ಮಂಗರಸ ಕವಿ' ಕೃತಿಯನ್ನು ಸಮೀಕ್ಷಿಸುವುದು ಈ

ಪ್ರಬಂಧದ ಉದ್ದೇಶ. ಪೀಠಿಕೆಯನ್ನು ಇಲ್ಲಿಗೆ ಮೊಟಕು ಗೊಳಿಸುತ್ತೇನೆ. ಏಕೆಂದರೆ ಮೂಗಿಗಿಂತ ಮೂಗುತಿ ಭಾರವಾಗಬಾರದು.

ಈ ಕೃತಿಯಲ್ಲಿ ಕವಿಯ ಹಿನ್ನೆಲೆ, ಕವಿ-ಕಾಲ, ಕವಿಯ ಕೃತಿಗಳು ಮತ್ತು ಅವುಗಳ ವಿಮರ್ಶೆ ಅನುಕ್ರಮವಾಗಿದ್ದು ಮೂರು ಮಜಲುಗಳಲ್ಲಿ ಮಂಗರಸನನ್ನು ಕುರಿತಾದ ಹಂಪನಾ ಅವರ ವಿಚಾರಗಳು ಹಬ್ಬಿ ಹರಡಿಕೊಂಡಿವೆ.

ಕವಿಯ ಹಿನ್ನೆಲೆಯ ವಿಚಾರದಲ್ಲಿ ಚರ್ಚೆ ಮಾಡುತ್ತ ಮೂರನೆಯ ಮಂಗರಸನನ್ನು ಬಹು ಸೂಕ್ಷ್ಮವಾಗಿ, ಸ್ಪಷ್ಟವಾಗಿ ಲೇಖಕರು ಗುರುತಿಸುತ್ತಾರೆ. ಮಂಗರಸ ಎನ್ನುವ ಹೆಸರಿನ ಕವಿಗಳು ಕನ್ನಡ ವಾಙ್ಮಯದಲ್ಲಿ ನಾಲ್ಕು ಜನರಿರುವುದರಿಂದ ಈ ಹೆಸರಿನ ತೊಡಕನ್ನು ಬೇರೆ ಬೇರೆ ಹಸ್ತಪ್ರತಿಗಳಲ್ಲಿ ದೊರಕುವ ಮಾಹಿತಿಗಳಿಂದ ಬೇರೆ ಬೇರೆ ವಿದ್ವಾಂಸರು ಉದಾ : ಬಿ. ಎಲ್. ರೈಸ್‌ರವರಂತಹವರು ಮೂರನೆಯ ಮಂಗರಸನನ್ನು ಗುರುತಿಸುವಲ್ಲಿ ಹೇಗೆ ಎಡವಿದ್ದಾರೆ ಮತ್ತು ತಪ್ಪಾಗಿ ವಿಷಯಗಳನ್ನು ಗ್ರಹಿಸಿದ್ದಾರೆ ಎಂಬುದನ್ನು ನಿಖರವಾಗಿ ಹಂಪನಾ ಗುರುತಿಸಿದ್ದಾರೆ. ಕವಿಯ ಕಾಲದ ವಿಚಾರವಾಗಿಯೂ ಸುಮಾರು ನಾಲ್ಕು ಹಸ್ತಪ್ರತಿಗಳು ಮತ್ತು ಶಾಸನಗಳಿಂದ ಕವಿಯ ಬಗೆಗಿನ ಆಧಾರಗಳನ್ನು ಸ್ವೀಕರಿಸಿ ಕವಿಯ ಬಗ್ಗೆ ಒಂದು ವಂಶಾವಳಿಯನ್ನು ನಿರ್ಮಿಸಿ ಆ ಮೂಲಕ ಮಂಗರಸನನ್ನು, ಅವನ ಕೃತಿಗಳನ್ನು ನಿಷ್ಕರ್ಶೆ ಮಾಡಿದ್ದಾರೆ. ಇಲ್ಲಿ ಹಂಪನಾ ಅವರು ಬೇರೆ ಬೇರೆ ವಿದ್ವಾಂಸರುಗಳ ವಿಚಾರಗಳನ್ನು ಸಹಾನುಭೂತಿಯಿಂದ ಪರಿಶೀಲಿಸುವ ಮನೋಭಾವವನ್ನು ಪ್ರಕಟಿಸುವ ಮೂಲಕ ಸಂಶೋಧಕನಿಗಿರಬೇಕಾದ ಅರ್ಹತೆಯನ್ನು ಮೆರೆಯುತ್ತಾರೆ. ಈ ಅರ್ಹತೆಯಿಂದ ಕೃತಿಗೂ ಲಾಭವಾಗುತ್ತದೆ. ಇಲ್ಲಿಗೆ ಕವಿಯ ಹೆಸರಿನ ತೊಡಕು ಮತ್ತು ಅವನ ಕೃತಿಗಳನ್ನು ಪಟ್ಟಿ ಮಾಡುವುದು ಕೊನೆಯಾಗುತ್ತದೆ. ಇಲ್ಲಿ ಒಂದೊಂದು ಆಧಾರಗಳನ್ನು ಸತ್ಯದ ಒರೆಗಲ್ಲಿಗೆ ತಿಕ್ಕಿ ನೋಡಿ ಸ್ವೀಕರಿಸುವ ಮನೋಭಾವವನ್ನು ನಾವು ಮನಗಾಣಬಹುದಾಗಿದೆ.

ಮೂರನೆಯ ಮಜಲಿನಲ್ಲಿ ಕವಿಯ ಕೃತಿಗಳ ವಸ್ತು-ವಿಷಯ ಮತ್ತು ಅವುಗಳ ವಿಮರ್ಶೆ ಕಾಣಿಸಿಕೊಳ್ಳುತ್ತದೆ. ಮಂಗರಸಕವಿಯ ಉಪಲಬ್ಧ ಕೃತಿಗಳು ಆರು. ಅವುಗಳಲ್ಲಿ ಮೂರು ಪ್ರಕಟವಾಗಿವೆ. ಇನ್ನುಳಿದ ಮೂರು ಪ್ರಕಟವಾಗಿಲ್ಲ ಎಂದು ಲೇಖಕರು ಸೂಚಿಸುತ್ತಾರೆ. ಆನೆಯನ್ನು ಕನ್ನಡಿಯಲ್ಲಿ ಹಿಡಿದಿಡುವಂತೆ ಮೂರನೆಯ ಮಂಗರಸನ ವಿಸ್ತಾರವಾದ ಸಾಹಿತ್ಯ ಕೃಷಿಯನ್ನು ಈ ಸಣ್ಣ ಹೊತ್ತಗೆಯಲ್ಲಿ ಹಿಡಿದಿಟ್ಟಿದ್ದಾರೆ. ಮೊದಲಿಗೆ ಮಂಗರಸನ ಅಪ್ರಕಟಿತ ಕೃತಿ 'ಪ್ರಭಂಜನ ಚರಿತೆ'ಯ ಕಥಾವಸ್ತುವಿನ ನಿರೂಪಣೆಯಿದ್ದು ಅದಷ್ಟು ಸಂಗ್ರಹ ರೂಪದಲ್ಲಿದೆ. ಇದರ ವಿಮರ್ಶೆಯೂ ವಸ್ತುನಿಷ್ಠವಾಗಿದ್ದು ಎಲ್ಲೂ ವಿಮರ್ಶೆಯ ಕೊರತೆ ಕಂಡುಬರುವುದಿಲ್ಲ. ಎರಡನೆಯದಾಗಿ 'ಶ್ರೀಪಾಲ ಚರಿತೆ'ಯ ವಸ್ತುವಿನ ವಿವರಣೆ ಇದೆ. ಇಲ್ಲೂ

ಸಹ ಮೇಲಿನ ಸೂತ್ರವನ್ನೇ ಅಂದರೆ ಕಥೆಯ ಸಂಕ್ಷಿಪ್ತ ನಿರೂಪಣೆ ಮತ್ತು ಅದರ ವಿಮರ್ಶೆಯು ಬರುವ ಹಾಗೆ ಅನುಸರಿಸಿದ್ದಾರೆ. 'ಪ್ರಭಂಜನ ಚರಿತೆ'ಯ ವಸ್ತು ನಿರೂಪಣೆಗಿಂತ 'ಶ್ರೀಪಾಲ ಚರಿತೆ'ಯ ವಸ್ತುವಿನ ನಿರೂಪಣೆಯಲ್ಲಿ ಕಥೆಯ ಸಂಗ್ರಹ ಶಕ್ತಿ ಒಂದು ಹೆಜ್ಜೆ ಮುಂದೆ ಸಾಗಿದೆ ಎನ್ನಬಹುದು. ಏಕೆಂದರೆ 'ಶ್ರೀಪಾಲ ಚರಿತೆ'ಯ ಕಥೆ 'ಪ್ರಭಂಜನ ಚರಿತೆ'ಯ ಕಥೆಗಿಂತಲೂ ವಿಸ್ತಾರವಾದುದು. ಆದರೆ ಸಂಗ್ರಹದಲ್ಲಿ ಪ್ರಭಂಜನ ಚರಿತೆಯ ಕಥೆಯ ವಿಸ್ತಾರದಷ್ಟೇ 'ಶ್ರೀಪಾಲ ಚರಿತೆ' ಕಥೆಯೂ ವಿಸ್ತಾರವಾಗಿದೆ. ಶ್ರೀಪಾಲ ಚರಿತೆಯ ವಿಮರ್ಶೆಯೂ ಕೂಡ ಪ್ರಾಮಾಣಿಕತನದಿಂದ ಕೂಡಿದುದಾಗಿದೆ. ಕವಿಯಲ್ಲಿನ ಕುಸುರಿ ಕೆಲಸವನ್ನು ಶ್ಲಾಘಿಸಿರುವುದು ಕಂಡು ಬರುತ್ತದೆ. ಹಾಗೆಯೇ ಅವನ ಸಂಪ್ರದಾಯಬದ್ಧವಾದ ಅಷ್ಟಾದಶ ವರ್ಣನೆಗಳನ್ನು ಅನುಚಿತವೆಂದು ಟೀಕಿಸುವುದು ಕಂಡುಬರುತ್ತಿದೆ. ಮೂರನೆಯದು 'ನೇಮಿಜಿನೇಶ ಸಂಗತಿ' ಇದರ ವಿವರಣೆಯಲ್ಲು ಮೇಲಿನ ಸೂತ್ರವನ್ನೇ ಅನುಸರಿಸಿದ್ದಾರೆ. 'ನೇಮಿ ಜಿನೇಶ ಸಂಗತಿ' ಕೃತಿಯ ವಿಮರ್ಶೆಯಲ್ಲಿ ತುಸು ಭಿನ್ನತೆಯಿದೆ. ಅದೇನೆಂದರೆ 'ನೇಮಿಜಿನೇಶ ಸಂಗತಿ' ಕೃತಿಯ ಕಥೆಯ ವಿಸ್ತಾರಕ್ಕಿಂತ ಅದರ ವಿಮರ್ಶೆಯ ವಿಸ್ತಾರ ದೊಡ್ಡದಾಗಿದೆ. ಅದಕ್ಕೆ ಕಾರಣ ಕನ್ನಡ ಭಾಷೆಯಲ್ಲದೆ ಸಂಸ್ಕೃತ, ಪ್ರಾಕೃತ, ಹಿಂದಿ, ಗುಜರಾತಿ, ಭಾಷೆಗಳಲ್ಲಿ 'ನೇಮಿನಾಥ ಪುರಾಣದ' ಸೃಷ್ಟಿಯಾಗಿರುವುದು ಮತ್ತು ಈ ಕೃತಿಯಲ್ಲಿ ಮಹಾಭಾರತದ ಕುರುವಂಶದ ಕಥೆಯ ಜೊತೆಗೆ ಹರಿವಂಶವನ್ನು ಸೇರಿಸಿ ಹೇಳಿರುವುದೇ ಆಗಿದೆ. 'ನೇಮಿಜಿನೇಶ ಸಂಗತಿ'ಯಲ್ಲಿ ಜೈನ ಕವಿಯಾದ ಮೂರನೆಯ ಮಂಗರಸನು ಮಾಡಿಕೊಂಡಿರುವ ಮಾರ್ಪಾಟುಗಳು ಮತ್ತು ಮಂಗರಸನ ಮೇಲಾಗಿರುವ ಬೇರೆ ಬೇರೆ ಕವಿಗಳ ಪ್ರಭಾವವನ್ನು ಸ್ಪಷ್ಟವಾಗಿ ಗುರುತಿಸಿದ ಹಂಪನಾ ಅವರು ಸಂಶೋಧನೆಗೆ ಹಲವು ವಿಷಯಗಳನ್ನು ಸಿದ್ಧಮಾಡಿ ಕೊಟ್ಟಿದ್ದಾರೆ. ಇಲ್ಲಿಂದ ಮುಂದೆ ಮಂಗರಸನ 'ಸಮ್ಯಕ್ತ್ವಕೌಮುದಿ' ಮತ್ತು 'ಜಯನೃಪ ಕಾವ್ಯ'ಗಳ ಪರಿಚಯದೊಂದಿಗೆ ಲೇಖಕರ ಉಪನ್ಯಾಸದ ಕಿರುಹೊತ್ತಿಗೆ ಮುಕ್ತಾಯವಾಗುತ್ತದೆ.

ಕನ್ನಡ ಸಾಹಿತ್ಯಕ್ಕೆ ಜೈನರ ಕೊಡುಗೆ ಅಪೋಘವಾದುದು ಮತ್ತು ಅನುಪಮ ವಾದುದು. ಇಂತಹ ಜೈನಕವಿಗಳಲ್ಲಿ ಒಬ್ಬನಾದ ಮೂರನೆಯ ಮಂಗರಸನನ್ನು ಕುರಿತ ಹಂಪನಾ ಅವರ ಈ ಕೃತಿ ಬಹು ಮೇಲ್ಮೆಯುಳ್ಳದ್ದು. ಕವಿಯ ಬಗೆಗೆ ಬೇರೆ ಬೇರೆ ಮೂಲಗಳಿಂದ ಅಪಾರವಾದ ಆಧಾರಗಳನ್ನು ಸಂಗ್ರಹಿಸಿ ಅವುಗಳನ್ನು ಸರಳ ಹಾಗೂ ಸುಂದರ ಗದ್ಯ ಶೈಲಿಯಲ್ಲಿ ಓದುಗರಿಗೆ ಎಲ್ಲೂ ಬೇಸರವಾಗದಂತೆ ಎಚ್ಚರವಹಿಸಿ ನಿರೂಪಣೆ ಮಾಡಿದ್ದಾರೆ. ಕವಿಯ ಅಪ್ರಕಟಿತ ಕೃತಿಗಳನ್ನು ಸಾಕಷ್ಟು ಹಿತಮಿತವಾಗಿ ಪರಿಚಯ ಮಾಡಿಕೊಟ್ಟಿದ್ದಾರೆ. ಲೇಖಕರು ಕೊಟ್ಟಿರುವ ಸಂಕ್ಷಿಪ್ತ ಕಥೆಯನ್ನು ಓದಿದರೆ ಸಾಕು ಮೂಲ ಕಾವ್ಯವನ್ನು ಓದಿದ ಅನುಭವವಾಗುತ್ತದೆ.

ಮೂರನೆಯ ಮಂಗರಸನನ್ನು ಕುರಿತ ಈ ಕೃತಿ ಪ್ರಾಚೀನ ಕವಿಯೊಬ್ಬನನ್ನು ಪರಿಚಯಿಸುವ ದೃಷ್ಟಿಯಿಂದಲೂ ಕನ್ನಡ ಸಾಹಿತ್ಯ ಸಂಶೋಧನೆಯ ದೃಷ್ಟಿಯಿಂದಲೂ ಬಹಳ ಉಪಯುಕ್ತ ಮಾಹಿತಿಯನ್ನು ಒದಗಿಸುತ್ತದೆ. ಕವಿಯ ಕಾವ್ಯಪ್ರತಿಭೆ, ಛಂದಸ್ಸಿನ ನೈಪುಣ್ಯತೆ ಹಾಗೂ ಕಥೆಯನ್ನು ಹೇಳುವ ಕಲೆಗಾರಿಕೆಗಳನ್ನು ಸಮರ್ಥವಾಗಿ ಗುರುತಿಸುವುದರ ಮೂಲಕ ಮೂರ್ತಿ ಚಿಕ್ಕದಾದರೂ ಕೀರ್ತಿ ದೊಡ್ಡದು ಎನ್ನುವ ಮಾತಿಗೆ ಉದಾಹರಣೆಯಾಗಿ ನಿಲ್ಲುತ್ತದೆ.

ಜಿ. ಬ್ರಹ್ಮಪ್ಪ

## ಆತ್ಮತತ್ವ ವಿಚಾರ

ಶ್ರೀ ವಿಜಯ ಲಕ್ಷ್ಮಣ ಸೂರಿಜಿಯವರು ಶ್ವೇತಾಂಬರ ಜೈನಪಂಥದ ಆಚಾರ್ಯರು. ಇವರು ಶ್ರಾವರಿಗಾಗಿ ಮಾಡಿದ ಪ್ರವಚನಧಾರೆಯೇ ಗುಜರಾಥಿ ಹಾಗೂ ಆಂಗ್ಲಭಾಷೆಯಲ್ಲಿ ಆತ್ಮ ತತ್ವ ವಿಚಾರವೆಂಬ ಶೀರ್ಷಿಕೆಯಲ್ಲಿ ಅಚ್ಚಾಗಿರುವ ಒಂದು ಹೆಬ್ಬೊತ್ತಿಗೆ. ಇದನ್ನು ಪ್ರೊ॥ ಹಂಪನಾರವರು ಕನ್ನಡಿಸಿ ಸಾರ ಸಂಗ್ರಹವನ್ನು ಹಿತಮಿತವಾದ ಮಾತಿನಲ್ಲಿ ನಮಗೆ ಕೊಟ್ಟಿರುವರು. ಮೂಲ ಶೀರ್ಷಿಕೆಯನ್ನು ಹಾಗೇ ಉಳಿಸಿಕೊಂಡಿರುವರು. ಮೂಲಗ್ರಂಥದ ಗಾತ್ರವನ್ನು ಕಾಲುಭಾಗಕ್ಕೆ ಇವರು ಇಳಿಸಿದ್ದರೂ ಗ್ರಂಥದ ಪಾತ್ರಕ್ಕಾಗಲೀ ನೇತ್ರಕ್ಕಾಗಲೀ (ದರ್ಶನ) ಊನ ಬಾರದಂತೆ ಚಾಕಚಕ್ಯತೆಯಿಂದ ಇವರು ಕನ್ನಡಿಸಿರುವುದು ಅನುವಾದ ಕಾರ್ಯಕ್ಕೆ ಮಾರ್ಗ ಹಾಕಿಕೊಟ್ಟಂತಿದೆ.

ಆತ್ಮತತ್ವ ಪ್ರತಿಪಾದನೆಗಾಗಿ ಮೂಲಲೇಖಕರು ಜೈನ ಕಥಾಕೋಶವನ್ನು ಸಂದರ್ಭೋಚಿತವಾಗಿ ಬಳಸಿಕೊಂಡು ಯಶಸ್ವಿಯಾಗಿರುವರು. ಜೈನಾಚಾರ್ಯರು ಸೃಷ್ಟಿಸಿರುವ ಕಥೆಗಳಿಗೆ ಲೆಕ್ಕವೇಇಲ್ಲ. ಜನಸಾಮಾನ್ಯರ, ದೀನದಲಿತರ ಉದ್ಧಾರವೇ ಇವರ ಗುರಿಯಾಗಿದ್ದುದರಿಂದ ಗಹನವಾದ ತತ್ವಗಳನ್ನು ಕಥಾ ಮಾಧ್ಯಮದಲ್ಲಿ ಇವರು ಹರಿಸಿ ಕೃತಕೃತ್ಯರಾಗಿರುವರು.

"ಭಾಷಣಕಾರನನ್ನು ಸಂಪ್ರೀತಿಯಿಂದ, ಸುಸ್ಮಿತ ಮುಖದಿಂದ ನೋಡುವುದು ಶ್ರಾವಕನ ಮೊದಲನೆಯ ಗುಣ... ಭಾಷಣಕಾರನ ಬಾಯಿಂದ ಬರುವ ಮಾತುಗಳಿಗೆ ತನ್ನ ಕಿವಿ ಕೊಡಬೇಕು. ಏಕಾಗ್ರ ಚಿತ್ತರಾಗಿರಬೇಕು. ಸಹಶ್ರೋತೃಗಳ ಬಗ್ಗೆ ಅವನು ಸ್ನಿಗ್ಧನಾಗಿದ್ದು, ಎಚ್ಚರಿಕೆ, ಕುಳಿತುಕೊಳ್ಳಿ, ಕಣ್ಣು ಕಾಣುವುದಿಲ್ಲವೇನೋ ? ನನಗೆ ಕಾಲು ತಾಗಿಸಬೇಡ" ಎಂದು ಮಾತನಾಡುವುದಿಲ್ಲ (ಪ್ರ. ೪). ಶ್ರಾವಕರಲ್ಲಿರಬೇಕಾದ ಸಾಮುಹಿಕ ಪ್ರಜ್ಞೆ ಹಾಗೂ ಪ್ರವಚನ ವಾತ್ಸಲ್ಯವನ್ನು ಇಲ್ಲಿ ವಿವರಿಸಿ

ರುವರು. ಸಹಜವಾದ ಶೈಲಿ, ಮಾರ್ಮಿಕವಾದ ಮಾತುಗಳು ಓದುಗರನ್ನು ಸೆಳೆಯದಿರವು.

"ಹಿಂಸ್ರ ಪಶುಗಳ ಕಾಡಿನಂತಿರುವ ರಾಜನ ಆಸ್ಥಾನಕ್ಕೆ ಹೋಗಲು ನಿರಾಕರಿಸಿದರು" (ಪು. ೮). ರಾಜಾಸ್ಥಾನದ ನೈಜ ಚಿತ್ರಣಕ್ಕೆ ಇಲ್ಲಿಯ ವಿವರಣೆ ಕನ್ನಡಿಯಂತಿದೆ. "ಮನುಷ್ಯಲೋಕವು ಹೀನವಾಸನೆಯದು. ಈ ವಾಸನೆ ಮುನ್ನೂರು ನಾನ್ನೂರು ಮೈಲಿಗಳವರೆಗೆ ಮೇಲೆ ಹಬ್ಬಿರುತ್ತದೆ. ದೇವರಿಗೆ ಈ ದುರ್ವಾಸನೆ ಹಿಡಿಸುವುದಿಲ್ಲ. ಆದುದರಿಂದ ಅವರು ಈ ಭೂಮಿಗೆ ಬರಲಾರರು" (ಪು. ೮). ಮಾನವರ ಆಶೆ-ಅತಿಯಾಶೆ-ದುರಾಶೆ-ಸ್ವಾರ್ಥತೆ ಇವುಗಳನ್ನೆಲ್ಲ 'ಹೀನವಾಸನೆ' ಎಂದು ಆಚಾರ್ಯರು ಕರೆದಿರುವುದು ಮಾರ್ಮಿಕವಾಗಿದೆಯಲ್ಲವೆ ?

ಮಹೇಶ್ವರದತ್ತನ ಕಥೆಯಲ್ಲಿ ಬರುವ ಗಾಂಗೀಲಳು ಮಹೇಶ್ವರದತ್ತನ ಹೆಂಡತಿ. ಈಕೆ ಹುಟ್ಟುಜಾರಿಣಿ. ಒಮ್ಮೆ ಇವಳ ವ್ಯಭಿಚಾರವನ್ನು ಗಂಡನೇ ಕಂಡು ಜಾರನನ್ನು ಕೊಂದು ಹಾಕಿದನು. ಆ ಜಾರನ ಜೀವ ಮತ್ತೆ ಗಾಂಗೀಲಳ ಗರ್ಭವನ್ನು ಹೊಕ್ಕು. ಮಹೇಶ್ವರದತ್ತನ ಮಗನಾಗಿ ಜನಿಸಿತು. ಇನ್ನೊಂದು ಕಡೆ ಸಾಯುವಾಗ ಮಹೇಂದ್ರದತ್ತನ ತಂದೆಯು ಜಾನುವಾರುಗಳ ಬಗ್ಗೆ ಚಿಂತಿಸಿದುದರಿಂದ ಅವನು ತನ್ನ ಮಗನ ಮನೆಯಲ್ಲಿ ಕೋಣವಾಗಿ ಹುಟ್ಟಿದನು. ಇವನ ತಾಯಿಯೂ ದುಶ್ಚಿಂತೆಯಿಂದ ಸತ್ತು ಮಗನ ಮನೆಯಲ್ಲಿ ನಾಯಾಗಿ ಹುಟ್ಟಿದರು. ಇಲ್ಲಿ ಹೊರ ರೂಪಗಳೂ ಮಾರ್ಪಾಟಾದರೂ ಒಳರೂಪಗಳು ಮಾತ್ರ ಮೊದಲಿನಂತೆಯೇ ರಾಗದ್ವೇಷಗಳ ಉಯ್ಯಾಲೆಯಾಡುತ್ತಿರುವ ದೃಶ್ಯ ಕರುಣಾಜನಕವಾಗಿದೆ.

ಮಹೇಂದ್ರದತ್ತನು ತನ್ನ ತಂದೆಯ ಶ್ರಾದ್ಧಕ್ಕೆ ತಂದೆಯನ್ನೇ (ಕೋಣನನ್ನು) ಕೊಲ್ಲಿಸಿದನು. ತನ್ನ ಗಂಡನ ಮಾಂಸವನ್ನು ತಿನ್ನಲು ನಾಯಿ (ತಾಯಿ) ಪ್ರಯತ್ನಿಸಿ ಏಟುಗಳನ್ನು ಮಗನಿಂದಲೇ ತಿಂದಿತು. ಈ ಸಂದರ್ಭದಲ್ಲಿ ಅನಿರೀಕ್ಷಿತವಾಗಿ ಕಾಣಿಸಿಕೊಂಡ ಸಂತರು ಮಹೇಂದ್ರದತ್ತನಿಗೆ ಅವನ ಸುತ್ತಮುತ್ತಣ ಜನ್ಮಾವಳಿಯನ್ನು ವಿವರಿಸಿದರು. ಮಹೇಂದ್ರದತ್ತನ ಒಳಗಣ್ಣು ಅರಳಿತು. ಅಗ ಅವನೂ ಮೋಕ್ಷಮಾರ್ಗವನ್ನು ತುಳಿದನು. ಕಾಲಲಬ್ಧಿ ಯಾವ ಯಾವ ರೂಪದಲ್ಲಿ ಬರುವುದೋ ಹೇಳುವುದು ಕಷ್ಟ (ಪು.೧೨-೧೩). ಕಾಲಲಬ್ಧಿಯ ವಿವರಣೆಯೇ ಜೈನಧರ್ಮವೆಂದರೆ ತಪ್ಪಾಗದು.

ಇಲ್ಲಿ ಬರುವ ಕಥೆಗಳಲ್ಲಿ ಕೆಲವೊಮ್ಮೆ ಹಾಸ್ಯವೂ ಹರಿದಿದೆ. ಮೊದಲಿನವಳು ಒಳ್ಳೆಯವಳು, ಕೊನೆಯವಳೂ ಒಳ್ಳೆಯವಳು, ನಡುವಿರುವಾಕೆಗೆ ನಾಲ್ಕು ಹೊಡೆಯಬೇಕು" ಎಂದು ಸಾಧು ತನಗೆ ತಾನು ಗೊಣಗಿದ್ದನ್ನು ಕೇಳಿ ಒಬ್ಬ ಹೆಣ್ಣುಮಗಳು ತನ್ನನ್ನೇ ಕುರಿತು ಈ ಸಾಧು ಹೇಳಿರುವನೆಂದು ಭ್ರಾಂತಿಗೆ ಬಿದ್ದು ತನ್ನ ಗಂಡನನ್ನು ರೇಗಿಸಿ ರಾದ್ಧಾಂತ ಮಾಡಿದಳು. "ಮೊದಲನೆಯವಳು ಅಂದರೆ ಬಾಲ್ಯ, ಕೊನೆಯವಳು

ಎಂದರೆ ಯೌವನ" ಎಂದು ವಿವರಿಸಿದಾಗ ನಾವೂ ನಗುತ್ತಾ ತತ್ವವನ್ನು ಮೆಲುಕು ಹಾಕುವೆವು. ಏನೇನೋ ನಾವು ಸಂಬಂಧ ಕಲ್ಪಿಸಿಕೊಂಡು ಅನಾವಶ್ಯಕವಾಗಿ ಸುತ್ತ ಮುತ್ತಣ ಶಾಂತಿಯನ್ನು ಕಲುಕುತ್ತಿರುವೆವು.

ಇಬ್ಬರು ವರ್ತಕರ ಕಥೆಯಲ್ಲೂ ತಿಳಿಹಾಸ್ಯವುಕ್ಕಿ ತತ್ವದರ್ಶನವಾಗುವುದು. ಒಬ್ಬನಿಗೆ ಹುಳಿಬೆಲ್ಲದ ಸುರುಕನ್ನು ಕಂಡರೆ ಪಂಚಪ್ರಾಣ. ಅವನ ಮುಂದೆ ಸುಮಧುರವಾದ ನಾನಾ ತಿನುಸುಗಳನ್ನು ಬಡಿಸಿದರೂ ಅವನಿಗೆ ಪ್ರಿಯವಾದ ಹುಳಿಬೆಲ್ಲದ ಸುರುಕಿಲ್ಲದುದನ್ನು ಕಂಡು ಕುಪಿತನಾಗಿ ಕೈಯೆತ್ತಿದಾಗ ಬಲವಂತವಾಗಿ ಅವನ ಬಾಯಿಗೆ ಸಿಹಿತಿಂಡಿಯನ್ನು ತುರುಕಿದಾಗ ಇವನು ಹುಳಿಬೆಲ್ಲವನ್ನು ಮರೆತು ಹೊಸರುಚಿ ಕಂಡು ಹಿಗ್ಗಿದನು (ಪು. ೩೬)-ಎಲ್ಲರ ಬಾಳೂ ಇಷ್ಟೆ. ಆತ್ಮತತ್ವ ತಿಳಿಯುವ ಮೊದಲು ನಾವೂ ಕೂಡ ಹೆಣ್ಣು, ಹೊನ್ನು, ಮಣ್ಣು ಇವುಗಳಿಗಾಗಿ ಬಾಯ್ ಬಾಯ್ ಬಿಡುವೆವು. ಆತ್ಮತತ್ವ ದರ್ಶನವಾಗುತ್ತಿದ್ದಂತೆಯೇ ನಮ್ಮ ರುಚಿ ಮಾರ್ಪಟ್ಟು ಲೌಕಿಕ ಆಶೆ ಆಕಾಂಕ್ಷೆಗಳನ್ನು ಗಾಳಿಗೆ ತೂರುವೆವು.

ನಿತ್ಯಮಿತ್ರ, ಪರ್ವಮಿತ್ರ ಮತ್ತು ಜುಹುರಮಿತ್ರರ ಕಥೆಯು ಮಾರ್ಮಿಕ ವಾಗಿದೆ. ನಿತ್ಯಮಿತ್ರ ಮತ್ತು ಪರ್ವಮಿತ್ರರು ಸಖ್ಯವನ್ನು ಕಾಪಾಡಿಕೊಳ್ಳಲಾರರು. ಜುಹುರಮಿತ್ರ ಮಾತ್ರ ತನಗೆ ಅಪಾಯ ಬಂದರೂ ನಂಬಿ ಬಂದ ಸ್ನೇಹಿತನನ್ನು ನಡುನೀರಿನಲ್ಲಿ ಕೈ ಬಿಡುವುದಿಲ್ಲ. "ಇದೊಂದು ರೂಪಕಕಥೆ. ಓಲಗದವನು ಆತ್ಮನು, ನಿತ್ಯಮಿತ್ರನೆಂದರೆ ದೇಹ. ಪರ್ವಮಿತ್ರನೆಂದರೆ ಮಿತ್ರರೂ ಬಂಧುಗಳು. ಜುಹುರ ಮಿತ್ರನೆಂದರೆ ಧರ್ಮಕಾರ್ಯಗಳು. ಸಾವು ಬಂದಾಗ ದೇಹವು ಆತ್ಮನಿಂದ ಬೇರೆಯಾಗು ವುದು. ಮಿತ್ರರೂ ಬಂಧುಗಳೂ ಕೊಂಚದೂರ ಕಣ್ಣೀರು ಹಾಕಿಕೊಂಡು ಬಂದು ಹಿಂತಿರುಗುವರು. ಆದರೆ ಧರ್ಮಕಾರ್ಯ ಮಾತ್ರ ಆತ್ಮನೊಂದಿಗೆ ಸಾಗುವುದು" (ಪು. ೪೫). ಯಾವೊಂದು ಕಥೆಯೂ ಇಲ್ಲಿ ಮನರಂಜನೆಗಾಗಿ ಬಂದಿಲ್ಲ. ಆತ್ಮತತ್ವ ಪ್ರಕಾಶನಕ್ಕಾಗಿ ಇಲ್ಲಿನ ಕಥೆಗಳು ಊಳಿಗವೆಸಗುವುವು.

ಒಬ್ಬನೇ ಸಂಚರಿಸಬೇಡ, ಗುಂಪು ಜನರ ಮಾತನ್ನು ಕೇಳು, ಎಲ್ಲರೂ ಸ್ನಾನ ಮಾಡುವಲ್ಲಿ ಸ್ನಾನ ಮಾಡಬೇಡ, ಹೆಂಗಸರ ಹತ್ತಿರ ಯಾವ ರಹಸ್ಯವನ್ನೂ ಹೇಳಬೇಡ – ಈ ಉಪದೇಶಗಳನ್ನು ಬುದ್ಧಿವಂತಿಕೆ ಅಂಗಡಿಯಲ್ಲಿ ಕೊಂಡವನ ಕಥೆಯೂ ಸ್ವಾರಸ್ಯಪೂರ್ಣವಾಗಿದೆ (ಪು. ೫೭). ಇಲ್ಲೆಲ್ಲ ಜಾನಪದದ ಸೊಗಡು ತುಂಬಿದೆ.

"ಪ್ರಯತ್ನಕ್ಕೂ ಪಂಚ ಹಂತಗಳಿವೆ. ಉತ್ಥಾನವೆಂದರೆ ಆಲಸ್ಯದಿಂದ ಜಾಗ್ರತ ನಾಗುವುದು. ಶಮನವೆಂದರೆ ಕಾರ್ಯನಿರತನಾಗುವುದು. ಬಲವೆಂದರೆ ವಾಕ್ಕಾಯ

ಮನೋಶಕ್ತಿ ಸಾಮರ್ಥ್ಯಗಳನ್ನು ಬೆಳಗುವುದು. ವೀರ್ಯವೆಂದರೆ ಪ್ರಯತ್ನಕ್ಕೆ ಏಕಪ್ರಕಾಶ ಪರಿಶ್ರಮವನ್ನು ಕೂಡಿಸುವುದು. ಪರಾಕ್ರಮವೆಂದರೆ ಉದ್ದೇಶ ಸಾಧನೆಯ ಪ್ರಯತ್ನದಲ್ಲಿ ಅವಿಶ್ರಾಂತವಾಗಿ ಸರ್ವಸಂಕಟಗಳನ್ನು ಎದುರಿಸಿ ನಿಲ್ಲುವುದು. ಇವು ಒಂದೊಂದೇ ಹಂತಗಳು" (ಪು. ೬೫). ಆತ್ಮತತ್ವ ವಿಚಾರದಲ್ಲಿ ಲೇಖಕರು ತಮ್ಮ ಅನುಭವವನ್ನು ಎರಕ ಹೊಯ್ದಿರುವರು. ಕಥೆಗಳನ್ನೇ ಕೈಲಾಸಕ್ಕೆ ಇಚ್ಚಿಣಿಗೆಯಾಗಿ ಜೋಡಿಸಿರುವರು.

ಪೀಟರನ ತ್ರಿಕಾಲ ಜ್ಞಾನವನ್ನು ಲೇಖಕರು ಉದಾಹರಿಸಿ ಜೈನಸಿದ್ಧಾಂತದ ಅವಧಿ ಪುನಃ ಪರ್ಯಾಯ ಜ್ಞಾನಗಳನ್ನು ನಿಜವೆಂದು ಸಾರಿರುವರು. ಲೋಕಸತ್ಯವನ್ನು ಬಳಸಿಕೊಂಡು ಅಲೋಕಸತ್ಯವನ್ನು ತಾರ್ಕಿಕವಾಗಿ ಪ್ರತಿಪಾದಿಸಿರುವರು (ಪು. ೭೨).

"ಸಾವಿರ ಯೋಧ ಬಲದವನು ಬಲದೇವ...ಬಲದೇವನ ಎರಡುಪಟ್ಟು ವಾಸು ದೇವನ ಬಲ, ಪ್ರತಿ ವಾಸುದೇವನು ವಾಸುದೇವನಿಗಿಂತ ದುರ್ಬಲನು...ಚಕ್ರವರ್ತಿ ಬಲಿಷ್ಠ. ಸ್ನಾನ ಮಾಡುವಾಗ ಅವನ ಸಮಗ್ರಸೇನೆ ಬಂದು ಕೈಯನ್ನೆಳೆದರೂ ಅವನು ಆ ಕೈಯಿಂದ ನಿಯಂತ್ರಿಸುತ್ತಾ ಇನ್ನೊಂದು ಕೈಯಿಂದ ಸ್ನಾನ ಮುಂದುವರಿಸಬಲ್ಲ" (ಪು. ೭೫–೭೭) – ಈ ಮಾತುಗಳು ಪೌರಾಣಿಕವಾದರೂ ಉತ್ಪ್ರೇಕ್ಷೆಯಲ್ಲ. ೧೪ ವರ್ಷ ಶ್ರೀಮತಿ ಇಂದಿರಾಗಾಂಧಿಯವರು ಚಾಕಚಕ್ಯತೆಯಿಂದ ಎಲ್ಲ ಗಂಡಸರನ್ನೂ ನಿಯಂತ್ರಿಸಿ ತಾವೇ ತಾವಾಗಿ ರಾಜ್ಯವಾಳಿದರು. ನವಮನ್ವಂತರವನ್ನು ಅವರು ಸೃಷ್ಟಿಸಿದರು. ಅವರನ್ನು ಸೋಲಿಸಿ ಗದ್ದುಗೆಗೆ ಬಂದವರು ಮೂರು ವರ್ಷಕಾಲ ವಾದರೂ ಎದುರಾಳಿಗಳನ್ನು ನಿಗ್ರಹಿಸಲಾರದೆ ಕೆಳಗಿಳಿಯಬೇಕಾಯಿತು !

ಒಟ್ಟಿನಲ್ಲಿ ಈ ಗ್ರಂಥ ಅನುವಾದವಾಗಿ ಕಾಣುವುದೇ ಇಲ್ಲ. ಇಲ್ಲಿಯ ಭಾಷೆ ಸಹಜವಾಗಿದೆ, ಸುಂದರವಾಗಿದೆ. ಕನ್ನಡದ ಓಟ ಮತ್ತು ಮಾಟ ಎಲ್ಲೂ ಕೆಟ್ಟಿಲ್ಲ. ಕನ್ನಡದ ಕಂಪು ಪ್ರಾರಂಭದಿಂದ ಕೊನೆಯತನಕ ಹರಿದಿದೆ. ಭಾಷೆ ಎಲ್ಲೂ ಕೃತಕ ವಾಗಿಲ್ಲ, ನೀರಸವಾಗಿಲ್ಲ. ಮೂಲಗ್ರಂಥದ ಸಾರವನ್ನು ಅನುವಾದಕಾರರು ಹೀರಿ ರಕ್ತಗತ ಮಾಡಿಕೊಂಡು ಅಚ್ಚ ಕನ್ನಡವಾಗಿಸಿರುವರು.

ಡಾ. ಪದ್ಮಾಶೇಖರ್

# ಕೃಷ್ಣಪಾಂಡವರು

ಮಹಾಭಾರತ, ರಾಮಾಯಣ, ಭಾಗವತಗಳು ಪ್ರಾಚೀನ ಕಾಲದಿಂದಲೂ ಜನಾನುರಾಗವನ್ನು ಪಡೆದ ಕಾವ್ಯಗಳು. "ಕಾವ್ಯಾಲಾಪಾಂಶ್ಚ ವರ್ಜಯೇತ್" ಎಂಬುದಾಗಿ ಕಾವ್ಯಪಠನವನ್ನು ನಿಷೇಧಿಸುತ್ತಿದ್ದ ಜನರು ಇವನ್ನು ಪಾರಾಯಣ ಗ್ರಂಥಗಳಾಗಿ ಸ್ವೀಕರಿಸಿ ಗೌರವಿಸಿದ್ದರು. ಆ ಮಹಾಕಾವ್ಯಗಳೂ ಅಷ್ಟೆ, "ಕಲೆಗಾಗಿ ಕಲೆ"ಯ ಸೃಷ್ಟಿಯಾಗಿರಲಿಲ್ಲ. "ಆತ್ಮೋದ್ಧಾರಕಾಗಿ ಕಲೆ"ಯೆನ್ನಿಸಿದ್ದವು. ಹಿಂದೂ ಜನರ ಬದುಕಿನಲ್ಲಿ ಪುರುಷಾರ್ಥಗಳು ಹಾಸುಹೊಕ್ಕಾಗಿ ಬೆಸೆದಿವೆ. ಜೀವಿಯ ಅಂತ್ಯ ಮೋಕ್ಷದಲ್ಲಿ ಎಂಬ ಸಾರ್ವತ್ರಿಕ ನಂಬಿಕೆಯಿಂದಾಗಿ ಮೇಲಿನ ಕಾವ್ಯಗಳು ಮತ್ತಷ್ಟೂ ಪುರಸ್ಕೃತಗೊಂಡು, ಪರಂಪರೆಯನ್ನು ಸೃಷ್ಟಿಸಿಕೊಂಡು ಬಂದವು. ಏಕೆಂದರೆ ಇವುಗಳು ಸದ್ಭಾವನೆ, ಸಚ್ಚಾರಿತ್ರಗಳನ್ನು ಹೃದ್ಯವಾಗುವಂತೆ ಮನವರಿಕೆ ಮಾಡಿಕೊಡುತ್ತವೆ, ಭಾರತೀಯರ ಸ್ವಭಾವ ಸಂಪ್ರದಾಯಗಳನ್ನು ರೂಢಿಸುವ ಮೂಲಕ ಜೀವನವನ್ನು ಧರ್ಮದ ನೆಲಗಟ್ಟಿನ ಮೇಲೆ ಕಟ್ಟುತ್ತವೆ. ಇವುಗಳು ಕೇವಲ ವೀರಗಥೆಯಾಗದೆ, ಅಂತರ್ಗತವಾಗಿ ನೈತಿಕ ಹಾಗೂ ಧಾರ್ಮಿಕ ಭಾವನೆಗಳನ್ನು ಪ್ರವಹಿಸುತ್ತವೆ.

ಬಹುಶಃ ಈ ಕಾರಣದಿಂದಲೇ ಬಾಣನ ಕಾಲದಲ್ಲಿ ಮಕ್ಕಳ ಅಧ್ಯಯನಕ್ಕೆ ಇವನ್ನು ಅತ್ಯವಶ್ಯ ಪಠ್ಯವಾಗಿ ಗ್ರಹಿಸಿದ್ದು ಎಂದು ತೋರುತ್ತದೆ.[1] ಪ್ರಸ್ತುತದಲ್ಲಿ ಹಂಪನಾ ಅವರ 'ಕೃಷ್ಣಪಾಂಡವರು' ಸಹ ಅಂಥದೊಂದು ಪ್ರಯತ್ನದ ಫಲ. ಮಕ್ಕಳು ಮುಗ್ಧರು, ಅವರ ಮನಸ್ಸು ಕೋಮಲ ಹಾಗೂ ಸೂಕ್ಷ್ಮವಾದುದು. ಒಳಿತು ಕೆಡಕೆನ್ನದೆ ಕಂಡದ್ದನ್ನು, ಕೇಳಿದ್ದನ್ನು

---

1 ಡಾ. ಸ. ಸುಬ್ರಮಣ್ಯ, ಮಹಾಭಾರತ ಸಮೀಕ್ಷೆ, ಮೈಸೂರು, 1973 ಪು. 6

ಬೇಗ ಗಮನಕ್ಕೆ ತಂದುಕೊಂಡುಬಿಡುತ್ತವೆ. ಯಾವುದನ್ನು ನಾವು ಸಂಸ್ಕಾರ ಅನ್ನುತ್ತೇವೋ ಅದೇ ಮಕ್ಕಳ ಚಿಕ್ಕಂದಿನ ಕಲಿಕೆ. ಚಿಕ್ಕಂದಿನಲ್ಲಿ ಅವುಗಳ ಮನಸ್ಸನ್ನು ಮೇಣದಂತೆ ಇಚ್ಛೆ ಬಂದ ಆಕಾರಕ್ಕೆ ತಿರುಗಿಸಬಹುದಾಗಿದೆ. ಹೀಗಾಗಿ ಮಕ್ಕಳ ಉನ್ನತ ವ್ಯಕ್ತಿತ್ವ ಸೃಷ್ಟಿಗೆ ಭದ್ರತಳಪಾಯ ಹಾಕುವಲ್ಲಿ ಮೇಲಿನ ಕಾವ್ಯಗಳು ಬಹು ಪರಿಣಾಮಕಾರಿ ಪ್ರಭಾವ ಬೀರುತ್ತವೆ.

'ಕೃಷ್ಣಪಾಂಡವರು' ಕೃತಿಯಲ್ಲಿ ಮಕ್ಕಳಿಗೆಂದೇ ರಚಿತವಾಗಿರುವ ಹದಿನೈದು ಪ್ರಸಂಗಗಳಿವೆ. ನೇರವಾಗಿ ಕೃಷ್ಣನ ಬದುಕಿಗೇ ಸಂಬಂಧ ಪಟ್ಟವು ಮೊದಲವು ಮೂರು–ಕೃಷ್ಣನ ಮೊದಲ ಹುಟ್ಟುಹಬ್ಬ, ರುಕ್ಮಿಣಿಯೊಡನೆ ಮದುವೆ ಮತ್ತು ರುಕ್ಮಿಣಿ ಮತ್ತು ಸತ್ಯಭಾಮೆ. 'ನಾರದನ ಪಜೀತಿ' ನಾರದನ ಭಕ್ತಿಯ ಅಹಂ ಅನ್ನು ಕುಗ್ಗಿಸಲು ಸೃಷ್ಟಿಗೊಂಡದ್ದು, ಉಳಿದವು ಒಂದೆಡೆ "ಮಮ ಪ್ರಾಣಾಹಿ ಪಾಂಡವಾಃ" ಎಂಬ ಕೃಷ್ಣನ ಪಾಂಡವ ಪಕ್ಷಪಾತಿತನವನ್ನು ತೋರಿಸಿದರೆ, ಮತ್ತೊಂದು ಮಗ್ಗುಲಲ್ಲಿ ಕೆಲವು ಪಾಂಡವರ ಬಲಾಬಲದ ಇತಿಮಿತಿಯನ್ನು ತೋರಿಸುವಂಥವಾಗಿವೆ. ಕ್ರಮವಾಗಿ ಇವುಗಳ ಕಥಾವಸ್ತು ಹೀಗಿವೆ.

'ಕೃಷ್ಣನ ಮೊದಲ ಹುಟ್ಟುಹಬ್ಬ',–ದುಷ್ಟನಿಗ್ರಹಕ್ಕಾಗಿ ತಾನು ಜನಿಸಿದ ಅವತಾರಿ ಎಂಬುದಕ್ಕೆ ಸಾಕ್ಷಿಯಾಗಿ ಹಸುಳೆ ಬಾಲಕೃಷ್ಣ ಕಂಸನಿಂದ ಕಳುಹಿಸಲ್ಪಟ್ಟ ತರಣಾವರ್ತನೆಂಬ ರಕ್ಕಸನನ್ನು ಸಂಹರಿಸಿ, ದುಷ್ಟನಿಗ್ರಹ ಮಾಡಿದ ಕತೆ, 'ರುಕ್ಮಿಣಿ ಯೊಡನೆ ಮದುವೆ ಒಲಿದ ಹೃದಯಗಳಿಗೆ ಎಂಥ ಸಂಕಷ್ಟವನ್ನು ದಾಟುವ ಅದಮ್ಯ ಶಕ್ತಿಯಿರುತ್ತದೆ ಎಂಬುದರ ದ್ಯೋತಕ: 'ರುಕ್ಮಿಣಿ ಮತ್ತು ಸತ್ಯಭಾಮೆ'–ನಿಸ್ವಾರ್ಥ ಭಕ್ತಿ ಪ್ರೀತಿಗೆ ಜಗತ್ತಿನಲ್ಲಿ ಹೆಚ್ಚಿನ ಬೆಲೆ ಎಂಬುದನ್ನು ಪ್ರಕಟಪಡಿಸುವ ತುಳಸೀ ದಳದ ಪ್ರಸಂಗವನ್ನು ವರ್ಣಿಸುವಂಥದ್ದು: ಭಕ್ತಿಗೆ ಅಹಂ ಇದ್ದರೆ ಆ ಭಕ್ತಿ ಮುಕ್ಕು ಎಂಬುದನ್ನು 'ನಾರದನ ಪಜೀತಿ' ದೃಢಪಡಿಸುತ್ತದೆ. 'ಐರಾವತ ಧರೆಗಿಳಿಯಿತು'– ಅರ್ಜುನನ ಶರಸಾಮರ್ಥ್ಯ, ಭೀಮನ ಸಾವಿರ ಆನೆಯ ಭುಜಬಲತ್ವವನ್ನು ಮತ್ತು ಒಳ್ಳೆಯವರಿಗೆ ದೈವಸಹಾಯ ಯಾವತ್ತೂ ಇರುತ್ತದೆ ಎಂಬುದನ್ನು ಸಿದ್ಧಮಾಡಿ ತೋರಿಸುವ ಆಶಯವನ್ನು ಹೊತ್ತಿರುವ ಪ್ರಸಂಗ. 'ಮೋಸದ ಜೂಜು' ಬಹು ಪ್ರಸಿದ್ಧ ಕಥನ, ತನ್ನ ದ್ವೇಷ ಮತ್ಸರವನ್ನು ಈಡೇರಿಸಿಕೊಳ್ಳಲು ಶಕುನಿ ಹೂಡಿದ ಚಾಣಕ್ಯತಂತ್ರ, ಅದನ್ನು ಈಡೇರಿಸಹೊರಟು ತನ್ನ ಸ್ವಾರ್ಥವನ್ನು ಸಾಧಿಸಹೊರಟ ದುರ್ಯೋಧನನ ದುಷ್ಟತನ, ದೈವ ಕೈಕೊಟ್ಟಾಗ ಬುದ್ಧಿವಂತನು ಬುದ್ಧಿಹೀನನಾಗು ತ್ತಾನೆ ಎಂಬುದಕ್ಕೆ ಸಾಕ್ಷಿಯಾಗಿ ನಿಂತ ಧರ್ಮರಾಯ, ದ್ರೌಪದಿಯ ವಸ್ತ್ರಾಪಹರಣ, ಶ್ರೀಕೃಷ್ಣನ ಕೃಪೆ–ಹೀಗೆ ಹತ್ತಾರು ಘಟನೆಗಳ ಮಡುವು: ಪಾಶುಪತಾಸ್ತ್ರವನ್ನು ಅರ್ಜುನ ಪಡೆವ ಪೂರ್ವಭಾವಿಯಾಗಿನ ಬೇಡ ವೇಷಧಾರಿ ಶಿವನ ಪರೀಕ್ಷೆಯನ್ನು 'ಅರ್ಜುನನ ತಪಸ್ಸು' ಒಳಗೊಂಡಿದೆ. ಆಡಂಬರದ ಭಕ್ತಿಗಿಂತ ಅನನ್ಯ ಗುಪ್ತಭಕ್ತಿಗೆ

ಹೆಚ್ಚುಬೆಲೆ ಎಂಬುದನ್ನು 'ಭೀಮ ಭಕ್ತಿಪರೀಕ್ಷೆ', 'ಅರ್ಜುನನ ಹೆಮ್ಮೆಗೊಂದು ಮದ್ದು' ಕತೆಗಳನ್ನು ತೋರಿಸುತ್ತವೆ. ಭೀಮ ಸಾವಿರ ಆನೆಯ ಬಲವನ್ನು ಹೊಂದಿದ್ದ ಬಲಿಷ್ಠನು. ತನ್ನ ಬಲದ ಬಗ್ಗೆ ಆತನಿಗೆ ಕೋಡು. ಅದನ್ನು ಕೇವಲ ತನ್ನ ಬಾಲ ವೊಂದರ ಶಕ್ತಿಯಿಂದ ಕೆಳಗುರುಳಿಸಿದ ಹನುಮಂತ, ಇವರಿಬ್ಬರ ಬಲಾಬಲ ಪರೀಕ್ಷೆಯನ್ನು ಕುರಿತದ್ದೇ 'ಭೀಮ ಹನುಮಾನ್ ಭೇಟಿ'—ಹೀಗೆ ಪುರಾಣಪ್ರಸಿದ್ಧ ಕಥನಗಳನ್ನು ಮಕ್ಕಳಿಗೆ ಸುಲಭವಾಗಿ ಮನಮುಟ್ಟುವಂತೆ ಇಲ್ಲಿನ ಕಥೆಗಳು ಹೆಣೆಯಲ್ಪಟ್ಟಿವೆ.

ಇಲ್ಲಿನ ಬಹುಪಾಲು ಕಥೆಗಳು ಮೇಲಿನ ಕಾವ್ಯಮೂಲದಿಂದಲೇ ರೂಪು ತಳೆದವುಗಳು ಎಂಬುದನ್ನು ಪ್ರತ್ಯೇಕವಾಗಿ ಹೇಳಬೇಕಿಲ್ಲ. ಹಾಗಿದ್ದು ಇಲ್ಲಿನ ಕೃತಿಯಲ್ಲಿನ ಕೆಲವು ಕಥೆಗಳ ರೂಪುರೇಷೆಯನ್ನು ಕಂಡಾಗ ಮಕ್ಕಳಿಗೆ ಸುಲಭಗ್ರಾಹ್ಯ ವಾಗುವಂತೆ ಯೋಜಿಸಲ್ಪಡುವಾಗಲೂ ಮೂಲದ ಆಶಯವನ್ನು ಪರಿಪೂರ್ಣವಾಗಿ ಪಾಲಿಸಿಲ್ಲ ಎಂಬ ಕೊರೆಯನ್ನು ಕಾಣಬಹುದಾಗಿದೆ. ಕೆಲವನ್ನಿಲ್ಲಿ ವಿಶ್ಲೇಷಿಸಬಹುದು :

(1) ಕೃಷ್ಣನ ಮೊದಲ ಹುಟ್ಟುಹಬ್ಬ ಪ್ರಸಂಗ, ಭಾಗವತ ಮತ್ತು ಇಲ್ಲಿ ಪರಿಣಾಮದಲ್ಲಿ ಯಾವ ವ್ಯತ್ಯಾಸವನ್ನು ಹೊಂದಿಲ್ಲ ನಿಜ. ಆದರೆ ಕಥಾಬೆಳವಣಿಗೆ ಯಲ್ಲಿ ಶುಷ್ಕತೆ ಎದ್ದು ಕಾಣುತ್ತದೆ. ಬಿರುಗಾಳಿಯಾಗಿ ಮಗುವನ್ನು ತರಣಾವರ್ತ ಎಲ್ಲರ ಕಣ್ಣಿಗೂ ಕಸತುಂಬಿಸಿ ಕದ್ದೊಯ್ದು ಎಂಬ ಇಲ್ಲಿನ ಪ್ರಸಂಗಕ್ಕೆ ಸಂವಾದಿಯಾಗಿ ಭಾಗವತದಲ್ಲಿ ಗಾಢಾಂಧಕಾರದ ಭೀಕರ ಮತ್ತು ಅಷ್ಟೆ ಪರಿಣಾಮಯುತ ಸಹಜ ಚಿತ್ರಣವಿದೆ. ಮಗುವನ್ನು ಕಳೆದುಕೊಂಡು ವಿಹ್ವಲಗೊಂಡ ಗೋಕುಲ ಜನರ ಒಳತೋಟಿಯಿದೆ. ಹಾಗೆಯೇ ಮಗುವಿನ ಭಾರವನ್ನು ತಡೆಯಲಾರದೆ ನಿಜರೂಪ ಧರಿಸಿದ ತರಣಾವರ್ತ ಮುಂದೆ ಆಕಾಶದಿಂದ ನೆಲದ ಮೇಲೆ ಬಿದ್ದು ಸತ್ತನು ಎಂಬುದಕ್ಕೆ ಸಾದೃಶ್ಯವಾಗಿ ಮೂಲದಲ್ಲಿ ಹಸುಳೆ ಕೃಷ್ಣನ ಹಿಡಿತದಲ್ಲಿ ಸಿಲುಕಿ ಒದ್ದಾಡುವ ತರಣಾವರ್ತನನ್ನು ಕಾಣುತ್ತೇವೆ. ಬದುಕಿಬಂದ ಮಗುವನ್ನು ಕಂಡು ಎಲ್ಲರೂ ಸಂತೋಷಪಟ್ಟರಷ್ಟೆ. ಈ ಸಂದರ್ಭದಲ್ಲಿ "ಲೋಕದಲ್ಲಿ ಘಾತುಕರು ತಮ್ಮ ಪಾಪದಿಂದಲೇ ತಾವು ಕೆಟ್ಟುಹೋಗುವರು. ಸಾಧುಗಳನ್ನಾದರೋ ಅವರ ಸುಸ್ವಭಾವವೇ ಅವರನ್ನು ಮಹಾಭಯದಿಂದ ತಪ್ಪಿಸುವುದು. ಮುಖ್ಯವಾಗಿ ನಾವು ದೊಡ್ಡ ತಪಸ್ಸನ್ನೋ ದಾನಧರ್ಮಗಳನ್ನೋ ನಡೆಸಿರಬೇಕು"[2] ಎಂಬ ಧರ್ಮೋಪದೇಶವಿದೆ. ಇದನ್ನು ಗಮನಿಸಿದಾಗ ಪ್ರಸ್ತುತ ಕೃಷ್ಣನ ಮೊದಲ ಹುಟ್ಟುಹಬ್ಬ ಕೇವಲ ಘಟನೆಯ ಬಿತ್ತರವಾಗಿ ರೂಪಿತಗೊಂಡಿದೆಯೇ ಹೊರತು ಬಾಲಸಹಜ ಕಥಾಚೌಕಟ್ಟನ್ನು

---

2. ಪಂಡಿತ ದೇವಶಿಖಾಮಣಿ ಅಳಸಿಂಗಚಾರ್ಯ 'ಶ್ರೀಮದ್ಭಾಗವತ', ದಶಮಸ್ಕಂದ ಪೂರ್ವ ಭಾಗ ಮೈಸೂರು, ಪು. 1781, 1921

ಹೊಂದಿಲ್ಲವೆಂದೇ ಹೇಳಬೇಕಾಗುತ್ತದೆ. ಏಕೆಂದರೆ ಮಕ್ಕಳಿಗೆ ಕೃಷ್ಣನ ಮಹಿಮೆಯೊಂದನ್ನು ತೋರುವಷ್ಟರಲ್ಲೇ ಕಥೆಯ ತೃಪ್ತಿಯಿರಕೂಡದು, ಅದರಾಚೆಯ ವ್ಯಕ್ತಿತ್ವ ನಿರ್ಮಾಣದ ತಳಪಾಯ ಇರಬೇಕು.

೨) ರುಕ್ಮಿಣಿಯೊಡನೆ ಮದುವೆ–ರುಕ್ಮಿಣಿಯ ಬಾಲ್ಯದಿಂದ ಆರಂಭಗೊಂಡು ಮದುವೆಯೊಡನೆ ಮುಕ್ತಾಯವಾಗುತ್ತದೆ. ರುಕ್ಮಿಣಿಯನ್ನು ಕೃಷ್ಣ ಅಪಹರಿಸುವ ಪ್ರಸಂಗವೇ ಪ್ರೀತಿಯ ಗಾಢತೆ, ಭಕ್ತಿಯ ಬಲ, ಶ್ರೀಕೃಷ್ಣ ಮಹಿಮೆಯನ್ನು ಏಕ ಕಾಲದಲ್ಲಿ ಹೊರಚೆಲ್ಲುವಂಥದ್ದು. ಶ್ರೀಕೃಷ್ಣ ರುಕ್ಮಿಣಿಯನ್ನು ಯುದ್ಧಮೂಲಕ ವರಿಸುವ ಹಿನ್ನೆಲೆಯಲ್ಲಿ ಭಾಗವತ ಪುರಾಣ "ದುಷ್ಟಕ್ಷತ್ರಿಯರನ್ನಡಗಿಸಿ, ಧರ್ಮ ಸ್ಥಾಪನೆಯನ್ನು ಮಾಡುವ" ಆಶಯವನ್ನು ಸ್ಪಷ್ಟವಾಗಿಸುತ್ತದೆ. ಇದನ್ನು ಅಗತ್ಯ ವಾಗಿಲ್ಲಿ ಸ್ಮರಿಸಬೇಕಿತ್ತು. ಇಲ್ಲಿ ಕೃಷ್ಣ ಏಕಾಂಗಿವೀರನಾಗಿ ರುಕ್ಮನನ್ನು ಸೋಲಿಸಿ, ರುಕ್ಮಿಣಿಯನ್ನು ಪಡೆದನೆಂಬ ತಪ್ಪುಮಾಹಿತಿಯಿದೆ. ಮೂಲದಲ್ಲಿ ಯುದ್ಧ ನೇರವಾಗಿ ಘಟಿಸಿದ್ದು ರುಕ್ಮನೊಡನಲ್ಲ: ಶಿಶುಪಾಲ ಕೃಷ್ಣರನಡುವೆ. ಸಾಲ್ವ, ಜರಾಸಂಧ, ದಂತ ವಕ್ರರು ಶಿಶುಪಾಲನ ಪರದಲ್ಲಿದ್ದರೆ, ಬಲರಾಮ ಮತ್ತು ಯಾದವ ಸೈನ್ಯ ಕೃಷ್ಣನ ಬೆಂಬಲದಲ್ಲಿತ್ತು. ಕೃಷ್ಣ ಭೀಷ್ಮಕನ ಆತಿಥ್ಯವನ್ನು ಮೊದಲು ಸ್ವೀಕರಿಸಿ, ತರುವಾಯ ದಲ್ಲಿ ರುಕ್ಮಿಣಿಯಿದ್ದ ಅಂಬಿಕಾಲಯಕ್ಕೆ ಹೋದ ಎಂಬ ಮೂಲಭಾವವಿಲ್ಲಿ ತಿರುಚಿ ಕೊಂಡಿದೆ. ಹೀಗಾಗಿ ಈ ಕತೆಯ ಹತ್ತಾರು ಮಾಹಿತಿಗಳು ಸುಳ್ಳಿನ ಕಂತೆಯಂತೆ ತಪ್ಪು ಮಾಹಿತಿಯೊದಗಿಸಿದೆ ಎಂದು ಹೇಳದೆ ವಿಧಿಯಿಲ್ಲ. ಕೊನೆಯ ಕಥಾಪರಿಣಾಮ ಎರಡರಲ್ಲೂ ಒಂದೇ ಆಗಿದೆ. ಈ ಹಂತದಲ್ಲಿ ಭಾಗವತದಲ್ಲಿ ಒಂದು ಮಾತಿದೆ "ಸುಖ ದುಃಖಗಳು ಜೀವನಚಕ್ರದಂತೆ ತಿರುಗಿತಿರುಗಿ ಬರುತ್ತಿರುವುವು... ಈ ಜಗತ್ತೆಲ್ಲವು ಪರಮೇಶ್ವರನಿಗೆ ಅಧೀನವಾಗಿ ಸುಖದುಃಖಗಳನ್ನು ಅನುಭವಿಸುತ್ತಿರುವುದು. ಅದಕ್ಕೆ ತಕ್ಕ ಹಾಗೆಯೇ ಕರ್ಮಗಳಲ್ಲಿ ತೊಳಲುತ್ತಿರುವರು"[3] ಇಲ್ಲಿ ಉಲ್ಲೇಖಿತ ಗೊಂಡಿರುವ ಧಾರ್ಮಿಕ ಸಿದ್ಧಾಂತ ದುರಾಶೆ ದುಷ್ಟತನ ಮಾನವನ ಬದುಕಿಗೆ ಪಾತದೋಪಾದಿಯಲ್ಲಿದೆ. ಈ ಆಶಯವನ್ನು ಮಕ್ಕಳ ಮನದುಂಬಿಸುವ ಮೂಲಕ ಅವರಲ್ಲಿ ತೃಪ್ತಮನೋಭಾವವನ್ನು ಮೂಡಿಸುವ ಸಾಧ್ಯತೆಯಿತ್ತು.

ಹಾಗೆಯೇ ಮೂಲದಲ್ಲಿನ ಬಹುದೀರ್ಘ ಹಾಗೂ ವಿಸ್ತಾರವಾದ ಕಥಾಹಂದರ ವನ್ನು ಮಕ್ಕಳ ಆಲೋಚನೆಯ ತಂತುವಿಗನುಸಾರವಾಗಿ ಸಂಗ್ರಹಿಸಿರುವ ಜಾಣ್ಮೆಯನ್ನು ಕೆಲವು ಕಥೆಗಳಲ್ಲಿ ಕಾಣಬಹುದು. ಉದಾಹರಣೆಗೆ :

೧) ಮೋಸದ ಜೂಜು : ಸಭಾಪರ್ವದ ಬಹುಭಾಗವನ್ನು ನುಂಗುವ ಹಾಗೂ ಇಡೀ ಮಹಾಭಾರತ ಸೃಷ್ಟಿಗೆ ಮೂಲಹೇತುವಾದ ಈ ಪ್ರಸಂಗ ಬೇಸರತರಿಸುವಷ್ಟು

3. : ಪೂರ್ವೋಕ್ತ. ಪು. 2123–424

ವಿಸ್ತೃತವಾಗಿ ನಿರೂಪಗೊಂಡಿದೆ. ಇಂಥದೊಂದು ಭಾಗವನ್ನು ಇಡಿಗಂಟಾಗಿ ಅದರಲ್ಲೂ ಮಕ್ಕಳಿಗಾಗಿ ಕೆಲವೇ ಪುಟಗಳಲ್ಲಿ ನೇಯುವುದು ಎಂದರೆ ಹುಡುಗಾಟದ ಮಾತಲ್ಲ. ಅಲ್ಲಿನ ಮೌಲ್ಯಕ್ಕೆ, ಮೂಲ ಆಶಯಕ್ಕೆ, ಮೂಲಕಥಾಗತಿಗೆ ಕಿಂಚಿತ್ತು ಧಕ್ಕೆ ಬಾರದಂತೆ ಇಲ್ಲಿ ಸಿಂಹಾವಲೋಕನ ನಡೆದಿದೆ. ಇಂದ್ರಪ್ರಸ್ಥದ ವೈಭವ, ರಾಜಸೂಯ ಯಾಗ ಮಾಡಿದ್ದು, ದುರ್ಯೋಧನನಲ್ಲಿ ಚಿಗಿತ ಅಸಮಾಧಾನ, ಮತ್ಸರ, ಶಕುನಿಯ ಕುತಂತ್ರ, ಧರ್ಮರಾಜನ ಬುದ್ಧಿಹೀನತೆ, ಜೂಜಾಟ, ಸೋಲು, ದ್ರೌಪದಿಯ ಶಪಥ,[4] –ಇತ್ಯಾದಿ ಘಟನೆಗಳು ಕೆಲವೇ ಮಾತಿನಲ್ಲಿ ವ್ಯಕ್ತವಾಗಿದ್ದರೂ ಪೂರ್ಣ ಸಂಗತಿಗಳನ್ನು ಹಿಡಿದಿಡುವಲ್ಲಿ ಯಶಸ್ವಿಯಾಗುತ್ತದೆ.

೨) ಅರ್ಜುನನ ತಪಸ್ಸು : ಪಾಶುಪತಾಸ್ತ್ರ ಪಡೆಯಲೆಂದು ಇಂದ್ರಕೀಲ ಪರ್ವತದಲ್ಲಿ ಅರ್ಜುನ ಉಗ್ರತಪಸ್ಸಿನಲ್ಲಿ ನಿರತನಾಗುವುದು, ಆತನನ್ನು ಪರೀಕ್ಷಿಸಲೆಂದು ಶಿವ, ಶಬರಧಾರಿಯೊಂದಿಗೆ ಬಂದದ್ದು, ಅರ್ಜುನನೊಡನೆ ಸಂವಾದಕ್ಕಿಳಿದದ್ದು, ಅರ್ಜುನನ ನಿರಂತರ ಹೋರಾಟ, ಸೋಲು, ಶಿವನ ಮಹಿಮೆ, ಪಾಶುಪತಾಸ್ತ್ರವನ್ನು ಬಹುಮಾನವಾಗಿ ಕೊಟ್ಟ ಪ್ರಸಂಗವನ್ನು ಕೇವಲ ನಾಲ್ಕು ಪುಟ್ಟ ಪುಟಗಳಲ್ಲಿ ನಿರೂಪಿಸಲಾಗಿದೆ. ಇಲ್ಲಿ ಕಿರಾತಶಿವನೊಂದಿಗೆ ಶಿವೆಯು ಇದ್ದಳೆಂಬ ಸಂಗತಿ ಬಿಟ್ಟುಹೋಗಿದೆ.

ಹೀಗೆ ಇಲ್ಲಿನ ಕಥೆಗಳು ತಮ್ಮದೇ ಆದ ಇತಿಮಿತಿಯನ್ನು ಹೊಂದಿದೆ. ಎರಡು ಪ್ರಸಂಗಗಳನ್ನು ಒಂದೆಡೆ ಬೆಸೆದಿರುವ 'ರುಕ್ಮಿಣಿ ಸತ್ಯಭಾಮೆ'ಯಂಥ ಕಥೆಯು ಇಲ್ಲಿದೆ. ದೈವಸಾಕ್ಷಾತ್ಕಾರಗೊಂಡರೂ ಆ ದೈವವನ್ನು ತಿರಸ್ಕರಿಸುವ ಅಜ್ಞಾನಿ ಮೂರ್ಖ ಉತಂಗನ ಕಥೆಯೂ ಇಲ್ಲಿದೆ–ಒಟ್ಟಾರೆ ಪಂಚತಂತ್ರ ಕಥೆಗಳಂತೆ ನೇರವಾಗಿ ಇಲ್ಲಿನ ಕಥೆಗಳು ಉಪದೇಶಕ್ಕೆ ತೊಡಗುವುದಿಲ್ಲವಾದರೂ ಪರೋಕ್ಷವಾಗವು ಆ ಕೆಲಸವನ್ನು ನಿರ್ವಹಿಸುತ್ತವೆ ಎಂಬುದೂ ಗಮನಾರ್ಹ. ಒಂದರ್ಥದಲ್ಲಿ ಮಕ್ಕಳಿಗೆ ಈ ಪರೋಕ್ಷ ತಂತ್ರ ಗ್ರಾಹ್ಯವಾಗುವುದು ಕಠಿಣವೆಂದುಕೊಂಡರೂ ಆ ಮೂಲಕ ಮಕ್ಕಳ ಆಲೋಚನಾಶಕ್ತಿಯನ್ನು ಬೆಳೆಸಬಲ್ಲವು ಎಂಬುದನ್ನು ಒಪ್ಪಬೇಕಾಗುತ್ತದೆ.

ಇಂಥದೊಂದು ಕೃತಿ ಅನುವಾದವಾಗಿ ಬಂದಿರುವುದು ಅಚ್ಚರಿಯೇ ಸರಿ. ಏಕೆಂದರೆ 'ಕೃಷ್ಣಪಾಂಡವ'ರಿಗೆ ಸೇರಿದ ದೋಷಗಳು ಈ ಕಾರಣದಿಂದಲೇ ಮಾಡಿದವೇ ಹೊರೆತು, ಇದಕ್ಕೆ ಹೊಣೆಗಾರರು ಕನ್ನಡಕ್ಕೆ ತಂದ ಹಂಪನಾ ಅವರಲ್ಲ ಎಂಬುದನ್ನು ನಾನು ಮೊದಲು ಓದುಗರಲ್ಲಿ ಸ್ಪಷ್ಟಪಡಿಸಬೇಕು. ಹೀಗಾಗಿ ದೋಷ ಏನಿದ್ದರೂ ಮೂಲಲೇಖಕರಿಗೇ ಸಂಬಂಧಿಸಿದ್ದೆಂದು ನಾನು ಹೇಳಬೇಕಾಗುತ್ತದೆ. ಇಷ್ಟಾದರೂ ಮೆಚ್ಚುವ ಅಂಶವೆಂದರೆ ಅನುವಾದವನ್ನು ಕುರಿತದ್ದು. ಕನ್ನಡಕ್ಕೆ ಸರಿಹೊಂದುವ

4. ಕುವೆಂಪು (ಸಂ), ಕರ್ಣಾಟಕ ಭಾರತ ಕಥಾಮಂಜರಿ, ಮೈಸೂರು, ಪು. 119–14 1958, ಮಾಸ್ತಿ

ವಾಕ್ಯರಚನೆ, ಮೂಲಭಾವದ ಯಥಾನುಸರಣೆ, ಭಾವಭಾವನೆಗಳ ನೇರಭಟ್ಟಿತನದಲ್ಲಿ ಹಂಪನಾ ಅವರ ಸಾಮರ್ಥ್ಯ ಹುದುಗಿದೆ. ಭಾಷೆಗೆ ಸಂಬಂಧಿಸಿ ಹೇಳುವುದಾದರೆ ಪುಟ್ಟ ಪುಟ್ಟ ಮಹಾವಾಕ್ಯಗಳು, ಮಕ್ಕಳು ನೆನಪಿನಲ್ಲಿಟ್ಟುಕೊಳ್ಳಲು ಸಹಕಾರಿಯಾಗಿವೆ. ಸರಳ ಸುಂದರ ಹಾಗೂ ಸುಲಲಿತವಾಗಿ ಅನುವಾದಗೊಂಡಿರುವ ಪ್ರಸ್ತುತ ಕೃತಿ ಮಕ್ಕಳ ಗ್ರಂಥಾಲಯದಲ್ಲಿ ಅಗತ್ಯವಾಗಿ ಸೇರ್ಪಡೆಯಾಗಬೇಕಾದುದಾಗಿದೆ. ಇದನ್ನು ಪ್ರಕಟಿಸಿದ ಐ. ಬಿ. ಎಚ್. ಪ್ರಕಾಶನದವರು ಈ ನಿಟ್ಟಿನಲ್ಲಿ ಸ್ತುತ್ಯಾರ್ಹರು.

ಪ್ರೊ. ಸಿ. ವ್ಹಿ. ಕೆರಿಮನಿ

# ಭೀಮ ಭಕ್ತಿ ಪರೀಕ್ಷೆ

ಕನ್ನಡ ಸಾರಸ್ವತ ಕ್ಷೇತ್ರದಲ್ಲಿ ಹಂಪನಾ ಅವರು ಈ ಶತಮಾನದ ಪ್ರಮುಖರಲ್ಲಿ ಒಬ್ಬರು. ಭಾಷಾಶಾಸ್ತ್ರ, ಚರಿತ್ರೆ, ಕಥೆ, ನಾಟಕ, ವಿಮರ್ಶೆ, ಕಾವ್ಯ ಹೀಗೆ ಸಾಹಿತ್ಯದ ವಿವಿಧ ಮಜಲುಗಳಲ್ಲಿ ಅವರ ಸೃಜನಶೀಲ ಸಾಹಿತ್ಯ ಬೆಳೆದು ಬಂದಿದೆ. ಅವರು ಕರ್ನಾಟಕದ ಹೆಮ್ಮೆಯ ನಾಡು ನುಡಿಗಾಗಿ ಹೋರಾಡುವ ಅನೇಕ ಸಾಹಿತ್ಯ ವಿದ್ವಾಂಸರಿಂದ ಕೂಡಿದ 'ಕನ್ನಡ ಸಾಹಿತ್ಯ ಪರಿಷತ್ತಿ'ನ ಅಧ್ಯಕ್ಷರಾಗಿ ಸಲ್ಲಿಸಿದ ಕಾಲವಂತೂ ಚಿರಸ್ಮರಣೀಯ. ಗಡಿನಾಡಿನ ಹಳ್ಳಿಯಿಂದ ರಾಜ್ಯದ ರಾಜಧಾನಿ ಅಷ್ಟೇ ಏಕೆ ದಿಲ್ಲಿಯವರೆಗೂ ಅನೇಕ ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ಸಾಹಿತ್ಯ ಸಮ್ಮೇಳನಗಳನ್ನು ವಿಚಾರ ಸಂಕಿರಣಗಳನ್ನು ನಡೆಸಿದ ಕೀರ್ತಿ ಹಂಪನಾ ಅವರದು. ಅವರ ಸುಮಾರು ಏಳೂವರೆ ವರುಷದ ಅವಧಿಯಲ್ಲಿ ಕನ್ನಡ ಸಾಹಿತ್ಯ ಪರಿಷತ್ತಿನ ಕೀರ್ತಿ ಹೊರ ನಾಡುಗಳಲ್ಲೂ ಹಬ್ಬಿತು. ಅವರು ಯಾವುದೇ ವಿಷಯದ ಮೇಲೆ ಭಾಷಣಕ್ಕೆ ನಿಲ್ಲಲಿ ಇಲ್ಲವೆ ನಮ್ಮೊಡನೆ ಮಾತಿಗೆ ನಿಲ್ಲಲಿ ಮಾತಿನ ಮೋಡಿಯಲ್ಲಿ ಎಂತಹವರನ್ನು ಮನಾಕರ್ಷಿಸಬಲ್ಲ ವ್ಯಕ್ತಿತ್ವ ಅವರದು. ಅವರ ಸತತ ಪ್ರಯತ್ನ ಬುದ್ಧಿಮತ್ತೆ ಜನರೊಡನೆ ಹೊಂದಿಕೊಂಡು ಬಾಳುವ ವಿಚಾರಗಳು, ನನ್ನನ್ನು ಅವರ ಸಮೀಪಕ್ಕೆ ತಂದಿದೆ. ಅವರ ಸಾಹಿತ್ಯದ ಕುಲುಮೆಯಿಂದ ಬೆಳಕಿಗೆ ಬಂದ 'ಭೀಮ ಭಕ್ತಿ ಪರೀಕ್ಷೆ'ಯ ಬಗೆಗೆ ನನ್ನ ವಿಚಾರ ಗಳನ್ನಿಲ್ಲಿ ವಿವರಿಸಬಯಸುವೆ.

ಆಯ್ ಬಿ ಎಚ್ ಪ್ರಕಾಶನ, ಬೆಂಗಳೂರು ಅವರಿಂದ ೧೯೭೯ರಲ್ಲಿ ಪ್ರಕಟಗೊಂಡ ಈ ಕೃತಿ ಹಂಪನಾ ಅವರ ಅನುವಾದಿತ ಗ್ರಂಥ. ಮೂಲಗ್ರಂಥ ಕರ್ತೃ ಸಗುಣಾ ಮಂಜೇಶ್ವರ. ಮಕ್ಕಳಿಗಾಗಿ 'ಇಕೋ' ಮಾಲಿಕೆಯಲ್ಲಿ ೧೯೭೯ರ ಮಕ್ಕಳ ವರ್ಷದ ಸುಸಂದರ್ಭದಲ್ಲಿ ಬರೆಯಲ್ಪಟ್ಟ ಈ ಪುಟ್ಟ

ಪುಸ್ತಕ ಕಿಶೋರರ ಮೇಲೆ ತುಂಬಾ ಪ್ರಭಾವ ಬೀರುವ ಕೃತಿಯಾಗಿದೆ. ನಮ್ಮ ದೇಶದಲ್ಲಿ ರಾಮಾಯಣ ಮಹಾಭಾರತಗಳ ಕಥೆಗಳು ನಿತ್ಯದ ಜೀವನದಲ್ಲಿ ಹಾಸುಹೊಕ್ಕಾಗಿವೆ.

ಈ ಭೀಮ ಭಕ್ತಿ ಪರೀಕ್ಷೆ ಗ್ರಂಥವು ಅನುವಾದಿತವೆಂದು ಅವರೇ ಹೇಳಿದ್ದರಿಂದ ನಂಬಬೇಕಾಗಿದೆ. ಇಲ್ಲವಾದರೆ ಕನ್ನಡದ ಒಂದು ಸ್ವತಂತ್ರ ಕೃತಿ ಎಂಬಂತೆ ಓದುಗನಿಗೆ ಭಾಸವಾಗುವುದು. ಮೂಲದಲ್ಲಿದ್ದ ವಸ್ತು ಕೆಡದಂತೆ ಕನ್ನಡದ ಜಾಯಮಾನಕ್ಕೆ, ಮಕ್ಕಳ ಅಭಿರುಚಿಗೆ ತಕ್ಕಂತೆ, ಸರಳ ಸುಂದರ, ಚಿಕ್ಕ ಚಿಕ್ಕ ವಾಕ್ಯಗಳಲ್ಲಿ ಓದುಗರ ಕುತೂಹಲವನ್ನು ಕೆರಳಿಸುತ್ತದೆ ಈ ಕೃತಿ.

ಇದರಲ್ಲಿ ಬಾಲಭಾಷೆಯಲ್ಲಿ ಬರೆಯಲ್ಪಟ್ಟ ಸಣ್ಣ ಪುಟ್ಟ ಕಥೆಗಳಿವೆ : ಒಂದನ್ನು ಓದಿದರೆ ಇನ್ನೊಂದನ್ನು ಓದಬೇಕೆನಿಸುತ್ತದೆ. ಮಹಾಭಾರತದಲ್ಲಿ ನಡೆದು ಹೋದ ನೂರಾರು ಘಟನೆಗಳು, ಸನ್ನಿವೇಶಗಳು ಇಲ್ಲಿನ ಕಥೆಗಳು. ಅವು ಇಂದಿಗೂ ಗ್ರಾಹ್ಯ ವಾಗಿವೆ. ಇಲ್ಲಿ ಬಂದಿರುವ (೧) ಭೀಮಭಕ್ತಿ ಪರೀಕ್ಷೆ, (೨) ಭೀಮ ಹನುಮಾನ್ ಭೇಟಿ (೩) ಅಕ್ಷಯ ಪಾತ್ರೆ (೪) ಬಾಣದ ಸೇತುವೆ (೫) ಸಾವಿನ ಮಡವು (೬) ಕೃಷ್ಣನು ಭಕ್ತನಿಗಿತ್ತ ಫಲ (೭) ಬಾಯಾರಿಕೆಗೆ ಅಮೃತ (೮) ಅರ್ಜುನನ ಹೆಮ್ಮೆಗೊಂದು ಮದ್ದು–ಮುಂತಾದ ಕಥೆಗಳು ಕಿಶೋರರ ಮನದಲ್ಲಿ ಚಿರಕಾಲ ನಿಲ್ಲ ಬಲ್ಲವುಗಳಾಗಿವೆ.

**ಭೀಮ ಭಕ್ತಿ ಪರೀಕ್ಷೆ :**

ಭೀಮ ಭಕ್ತಿ ಪರೀಕ್ಷೆಯು ಪಾಂಡವರು ಕಾಡಿನಲ್ಲಿದ್ದಾಗ ನಡೆದ ಒಂದು ಘಟನೆ. ಭೀಮ ಸೋಮಾರಿ. ಊಟ ಮಾಡುವದರಲ್ಲಿ, ಮಲಗಿ ಏಳುವದರಲ್ಲಿ ಕೊನೆಯವ ಈತ. ಅರ್ಜುನನಿಗೆ ತಾನು ಕೃಷ್ಣನಿಗೆ ಅತ್ಯಂತ ಮೆಚ್ಚಿಕೆಯವನೆಂಬ ಹೆಮ್ಮೆ. ಒಂದು ಸಲ ದ್ರೌಪತಿ ಕೃಷ್ಣನಿಗೆ ಬೇಕಾದ ವಿಶೇಷ ಅಡಿಗೆ ತಯಾರಿಸಿ ಊಟಕ್ಕೆ ಆಮಂತ್ರಿಸಿದಳು. ಆದರೆ ಕೃಷ್ಣ ಬೇರೊಂದು ಅನಿವಾರ್ಯ ಕೆಲಸಕ್ಕೆ ಹೋಗಬೇಕಾಗಿದೆ ಬರಲಿಕ್ಕಾಗುವದಿಲ್ಲವೆಂದೂ ಮತ್ತೊಮ್ಮೆ ಬರುವದಾಗಿ ತಿಳಿಸಿದ. ಕೃಷ್ಣನ ಪ್ರೀತಿಗೆ ಪಾತ್ರನಾದ ಅರ್ಜುನನು ನಾನು ಕರೆದರೆ ಇಲ್ಲೆನ್ನಲಿಕ್ಕಿಲ್ಲ ಬಂದೇ ಬರುವನೆಂಬ ಗರ್ವದಿಂದ ಆಮಂತ್ರಿಸಲು ಹೋದ. ಆಗಲೂ ಬರಲಿಲ್ಲ, ಎಲ್ಲರಿಗೂ ನಿರಾಶೆಯಾಯಿತು. ನಂತರ ಬಂದ ಭೀಮ ಈ ವಿಷಯ ತಿಳಿದು–ಆ ಕೆಲಸ ನನಗೆ ಬಿಡಿ, ನಾನು ಅವನನ್ನು ಕರೆದುಕೊಂಡೇ ಬಂದೇನು, ದ್ರೌಪತಿ, ಕೃಷ್ಣನಿಗಾಗಿ ಬೆಳ್ಳಿಯ ಬಟ್ಟಲನ್ನಿರಿಸು ಎಂದು ಉಬ್ಬಿನಿಂದ ಹೇಳಿದ ಭೀಮ. ಉಳಿದವರಿಗೆ ಆಶ್ಚರ್ಯ ವೆನಿಸಿತು, ಕುತೂಹಲ ಕೆರಳಿತು. ಭೀಮ ತನ್ನ ಭಾರವಾದ ಗದೆಯನ್ನು ಎತ್ತಿಹಿಡಿದ. ಅದನ್ನು ಬಲವಾಗಿ ಬೀಸುತ್ತ ಗಗನಕ್ಕೆಸೆದ. ಎಸೆಯುತ್ತ 'ಕೃಷ್ಣ ಈ ಕ್ಷಣವೇ ಬರದಿದ್ದರೆ ಕೆಳಗೆ ಬೀಳುತ್ತಿರುವ ಈ ಗದೆಗೆ ನನ್ನ ತಲೆಯನ್ನೊಡ್ಡುತ್ತೇನೆ' ಎಂದು

ಚೀರಿದ. ಇದನ್ನರಿತ ಕೃಷ್ಣ ಕೂಡಲೇ ಬಂದು ಗದೆ ಹಿಡಿದುಕೊಂಡದ್ದಲ್ಲದೇ ಆತನನ್ನು ಅಪ್ಪಿಕೊಂಡು ಊಟಕ್ಕೆ ಬಂದನು. ಇದರಿಂದ ಭೀಮನಲ್ಲಿದ್ದ ದೈವಭಕ್ತಿ ಎಂತಹದು ಎಂಬುದು ತಿಳಿಯುತ್ತದೆ.

## ಭೀಮ-ಹನುಮಾನ್ ಭೇಟಿ

ಪಾಂಡವರ ವನವಾಸ ಜೀವನದಲ್ಲಿ ಒಂದು ದಿನ ದ್ರೌಪತಿಯು ಸುಂದರ ಮರಗಳ ತೋಪಿನೆಡೆಯಲ್ಲಿ ಕೊಂಚ ಮಲಗಿ ವಿಶ್ರಾಂತಿ ಪಡೆಯುವ ವೇಳೆಯಲ್ಲಿ ಗಾಳಿಗೆ ತೂರಿಕೊಂಡು ಬಂದ ಪುಷ್ಪ ಮುಡಿಯುವ ಮನಸ್ಸಾಗಿ ಭೀಮನನ್ನು ಕರೆದು ಆ ಹೂವುಗಳನ್ನು ತರಲು ಅರುಹಿದಳು. ಆತ ಪರಿಮಳ ಬರುವ ಸುಳಿಯನ್ನು ಹಿಡಿದು ಹೋಗುವಾಗ ದಾರಿ ಮಧ್ಯದಲ್ಲಿ ಒಂದು ದೊಡ್ಡ ಮಂಗ ಮಲಗಿತ್ತು. ಅದರ ದೊಡ್ಡ ಬಾಲ ಇಡೀ ದಾರಿಯನ್ನೇ ಅಡ್ಡಗಟ್ಟಿತ್ತು. ಆಗ ಭೀಮ ಅದಕ್ಕೆ ಗದರಿಸಿದ ಅದು ಹೋಗಲಿಲ್ಲ. ಅದರ ಬಾಲವನ್ನು ಎತ್ತಲು ಹೋದ ಎತ್ತಲಾಗಲಿಲ್ಲ. ಆಗ ಆಶ್ಚರ್ಯವಾಗಿ ಕೇಳಲಾಗಿ ಅದು ಹೇಳಿತು-ನಾನೇ ಹನುಮಂತ ನಿನ್ನಣ್ಣ, ನಿನಗೆ ಬೇಕಾದ ಹೂವು ಆ ಪೊಳೆಯ ಬಳಿಯಿದೆ. ಎನ್ನಲಾಗಿ ಭೀಮ ಪಾದಮುಟ್ಟಿ ನಮಸ್ಕರಿಸಿದ. ಹನುಮಂತ ನಾಳಿನ ಯುದ್ಧದಲ್ಲಿ ಅರ್ಜುನನ ರಥದ ಪತಾಕೆಯ ಮೇಲೆ ಕುಳಿತಿರುತ್ತೇನೆ ಎಂದು ಹೇಳಿ ಅದೃಶ್ಯನಾದ. ಇಲ್ಲಿ ಹನುಮಂತ ಭೀಮರ ಸಮಾಗಮ ಪೂರ್ವ ಘಟನೆ ತುಂಬಾ ಸ್ವಾರಸ್ಯಕರವಾಗಿ ಬಂದಿದೆ.

## ಅಕ್ಷಯಪಾತ್ರೆ

ಭಗವಂತ ಭಕ್ತರನ್ನು ಎಂಥ ಸಮಯದಲ್ಲೂ ಕೈಬಿಡಲಾರ ಎಂಬುದೇ ಇಲ್ಲಿ ನಾವು ಕಲಿಯಬೇಕಾದದ್ದು.

ಪಾಂಡವರು ವನವಾಸದಲ್ಲಿದ್ದಾಗ ಸೂರ್ಯದೇವ ದ್ರೌಪತಿಗೊಂದು ಅಕ್ಷಯ ಪಾತ್ರೆಯನ್ನು ನೀಡಿದ್ದ. ಅದರಿಂದ ಅವರು ತಿಂದುಂಡು ಸುಖವಾಗಿದ್ದರು. ದುರ್ಯೋಧನನ ದುಷ್ಟಬುದ್ಧಿಯ ಪ್ರಚೋದನೆಯ ಮೇರೆಗೆ ದೂರ್ವಾಸ ಮುನಿಯು ೧೦ ಸಾವಿರ ಶಿಷ್ಯರೊಂದಿಗೆ ಬಂದು ನಮಗೀಗ ಊಟವಾಗಬೇಕೆಂದು ಹೇಳಿದ. ಧರ್ಮರಾಜ ಹಾಗೂ ದ್ರೌಪತಿಗೆ ಹೇಗೆ ಇವರಿಗೆ ಉಣಬಡಿಸುವದು ಎಂಬ ಚಿಂತೆ ಕಾಡಹತ್ತಿತು. ಆಗ ಕೃಷ್ಣಪರಮಾತ್ಮನೊಬ್ಬನೇ ಇವರ ಜಿಂಗಾವಲು. ಆತನನ್ನು ಅನನ್ಯ ಭಕ್ತಿಯಿಂದ ಸ್ಮರಿಸಿದ. ಆತ ಬ್ರಾಹ್ಮಣ ವೇಷದಲ್ಲಿ ಬಂದು-ಮಾನಿನಿ ದಿಗಿಲಾಗಬೇಡ. ನೀನು ಅಡುಗೆ ಮಾಡಿದ ಪಾತ್ರೆಯನ್ನು ತಂದು ತೋರಿಸು ಅದರಲ್ಲಿ ಏನಾದರೂ ಅಗಳು ಉಳಿದಿದ್ದೀತು, ಎನ್ನಲಾಗಿ ಅವರು ನೋಡಿದರು ಒಂದೇ ಅನ್ನದ ಒಂದು ಅಗಳು ಮಾತ್ರ ಇತ್ತು. ಇದರಿಂದ ಸಂತೋಷಗೊಂಡರು. ದುರ್ವಾಸಮುನಿ ಹಾಗೂ ಶಿಷ್ಯರು

ತಾವೆಲ್ಲಿದ್ದರೋ ಅಲ್ಲಿಯೇ ಹೊಟ್ಟೆತುಂಬಿ ಸಂತೋಷಗೊಂಡಿದ್ದರು. ದೇವರು ಕರುಣಾಳು. ನಮ್ಮನ್ನೆಲ್ಲ ಕಾಪಾಡುವ ಭಾರ ಅವನದಾಗಿದೆ ಎಲ್ಲವೂ ಸರ್ವಾರ್ಪಣ ವೆಂದು ನಾವು ನಂಬಿದರೆ ನಮಗೆ ಸುಖವಿದೆ.

### ಬಾಣದ ಸೇತುವೆ

ಪಾಂಡವರೆಲ್ಲರು ವನವಾಸದಲ್ಲಿದ್ದಾಗ ಅರ್ಜುನನೊಮ್ಮೆ ತೀರ್ಥಯಾತ್ರೆಗೆಂದು ರಾಮೇಶ್ವರಕ್ಕೆ ಬಂದ. ಅಲ್ಲಿನ ಕಡಲ ತೀರದಲ್ಲಿ ನಿಂತಾಗ ಸೇತುವೆ ನೋಡಿ ಆಶ್ಚರ್ಯ ವಾಯಿತು. ಯಾರು ಕಟ್ಟಿರಬಹುದು ? ಎಂದು ತನ್ನಷ್ಟಕ್ಕೇ ಉದ್ಗಾರ ತೆಗೆದಾಗ ಅಲ್ಲಿಯೇ ಕಲ್ಲಿನ ಬಂಡೆಯೊಂದರ ಮೇಲೆ ಕುಳಿತಿದ್ದ ಕಪಿ ಶ್ರೀ ರಾಮಚಂದ್ರನೇ ವಾನರ ಸೇನೆಯೊಂದಿಗೆ ಕಟ್ಟಿದನೆಂದು ಹೇಳಿದ. ಆತ ಅವತಾರ ಪುರುಷ-ತನ್ನ ಬಿಲ್ಲಿನಿಂದಲೇ ಕಟ್ಟಬಹುದಿತ್ತಲ್ಲ, ಅದು ವಾನರ ಸಹಕಾರದಿಂದ ಏಕೆ ಕಟ್ಟಿದನೆಂದು ಮೂದಲಿಸಿದನು. ಸಹಜವಾಗಿಯೇ ಶ್ರೇಷ್ಠ ಭಕ್ತನಾದ ಹನುಮಂತನಿಗೆ ಸಿಟ್ಟು ಬಂದಿತು. ಹಾಗಾದರೆ ನೀನು ಬಾಣದ ಸೇತುವೆ ನಿರ್ಮಾಣ ಮಾಡು ಅದನ್ನು ನಾನೊಬ್ಬನೇ ಮುರಿದು ಹಾಕುತ್ತೇನೆ ಎಂದ. ಅರ್ಜುನನು ಹಾಗಾದರೆ ನೀನು ಬಾಣದ ಸೇತುವೆ ಮುರಿದೆಯಾದರೆ ನಾನು ಸೋತಂತೆ ಅಗ್ನಿಪ್ರವೇಶ ಮಾಡುವೆ. ಹನುಮನೆಂದ– ನಾನು ಸೋತದ್ದಾದರೆ ನಿನ್ನ ದಾಸನಾಗುವೆ. ಬಾಣದಿಂದ ನಿರ್ಮಿಸಿದ ಸೇತುವೆ ಯನ್ನು ಆಕಾಶಕ್ಕೆ ನೆಗೆದು ಬಾಣದ ಸೇತುವೆಗೆ ಧುಮುಕಿದಾಗ ಅದು ಪುಡಿ ಪುಡಿಯಾಯಿತು. ಅರ್ಜುನನ ಗರ್ವ ಭಂಗವಾಯಿತು. ಕೃಷ್ಣನನ್ನು ಸ್ಮರಿಸಲಾಗಿ ಆತ-ಬ್ರಾಹ್ಮಣ ವೇಷದಿಂದ ಬಂದು ಅವರಲ್ಲಿ ತಿಳಿವಳಿಕೆ ಮೂಡಿಸಿದ. ಆತ ಶ್ರೀಕೃಷ್ಣ ನಂತೆ ಕಾಣಿಸಿದ. ಇಬ್ಬರೂ ಪಾದಕ್ಕೆ ನಮಿಸಿದರು. ಹನುಮ ನೀನು ನನ್ನ ಪರಮಭಕ್ತ, ನನ್ನ ಹಿಂದಣ ಅವತಾರದಲ್ಲಿ ಸೇವೆ ಸಲ್ಲಿಸಿದವ. ಇಂದು ನೀವಿಬ್ಬರೂ ನಾನು ಅವತರಿಸಿ ಬಂದ ಕಾರ್ಯಕ್ಕಾಗಿ ಸಹಾಯ ಮಾಡಬೇಕು ಎಂದು ಹೇಳಿ ಅದೃಶ್ಯನಾದ. ಆಗ ಹನುಮ ಅರ್ಜುನರು ಒಬ್ಬರನ್ನೊಬ್ಬರು ತಬ್ಬಿಕೊಂಡರು. ದೇವರು ತಮಗೆ ಕಲಿಸಿ ಕೊಟ್ಟ ವಿನಯದ ಪಾಠಕ್ಕಾಗಿ ಅವನನ್ನು ಕೊಂಡಾಡಿದರು. ಮನುಷ್ಯನಲ್ಲಿ ಆತ್ಮ ಪ್ರಶಂಸೆ, ಒಣ ಅಭಿಮಾನಗಳು ತಕ್ಕದಲ್ಲ, ಅರಿತು ನಡೆದರೆ ಅದೇ ಜನ್ಮ ಕಡೆ ಎಂಬ ಪಾಠ ನಾವಿಲ್ಲಿ ಕಾಣುತ್ತೇವೆ.

### ಸಾವಿನ ಮಡುವು

ಇಲ್ಲಿ, ಪಾಂಡವರಲ್ಲಿ ಹಿರಿಯಣ್ಣನಾದ ಧರ್ಮರಾಜನಲ್ಲಿ ಇದ್ದ ತಾಳ್ಮೆ ಹಾಗೂ ಜಾಣ್ಮೆ ಇವುಗಳ ಜೊತೆಗೆ ಆತನಿಗೆ ಮಾದ್ರಿ ಪುತ್ರರಾದ ನಕುಲ-ಸಹದೇವರ ಮೇಲೆ ಇರುವ ಪ್ರೇಮ ಕೂಡಾ ವ್ಯಕ್ತವಾಗುತ್ತದೆ.

ಪಾಂಡವರು ವನವಾಸದಲ್ಲಿ ಇದ್ದಾಗ ಒಂದು ಜಿಂಕೆಯನ್ನು ಬೆನ್ನಟ್ಟಿಕೊಂಡು ಓಡಿಹೋದರು. ಆ ಜಿಂಕೆಯೇನೂ ಸಿಗಲಿಲ್ಲ. ಆದರೆ ಅವರು ಸೋತು, ಬಸವಳಿದು ಬಾಯಾರಿ ಬೆಂಡಾಗಿ–ಇಂತಹ ಸಾಲುಗಳನ್ನು ನೋಡಿದಾಗ ಅನುವಾದಕರ ಭಾಷೆಯ ಬಳಿಕ ಭಾವನೆಯ ತೀವ್ರತೆಯ ಹಾಗೂ ಒಟ್ಟು ಪರಿಣಾಮ ಚೆನ್ನಾಗಿ ಓಲೈಸುವಲ್ಲಿ ಅವರು ಯಶಸ್ವಿಯಾಗಿದ್ದಾರೆ. ಧರ್ಮರಾಜನು ನಕುಲನನ್ನು ಕರೆದು ಬಾಯಾರಿಕೆಯಾಗಿದೆಯೆಂದು ಹೇಳಿ ನೀರು ತರಲು ಕೊಳಕ್ಕೆ ಕಳಿಸಿದನು. ಆತ ನೀರು ಕುಡಿಯಲು ಹೊರಟಾಗ ದನಿಯೊಂದು ಕೇಳಿಬಂತು. "...ಮಾದ್ರಿಯಪುತ್ರ ತಡೆ ನನ್ನಮಾತನ್ನು ಆಲಿಸಿ, ಆಮೇಲೆ ನೀರು ಕುಡಿ. ನನ್ನ ಪ್ರಶ್ನೆಗಳಿಗೆ ಉತ್ತರ ಕೊಟ್ಟೇ ನೀರನ್ನುಕುಡಿಯಬೇಕು." ಆದರೆ ಬಾಯಾರಿಕೆಯಿಂದ ಕಂಗೆಟ್ಟ ನಕುಲ ಆ ಮಾತನ್ನು ಲಕ್ಷಕ್ಕೆ ತಾರದೇ ನೀರು ಕುಡಿದು ಸತ್ತು ಬಿದ್ದ. ಹಾಗೆಯೇ ಸಹದೇವ, ಅರ್ಜುನ, ಭೀಮ, ಇವರು ಕೂಡಾ ನೀರು ಕುಡಿದು ಸತ್ತುಬಿದ್ದರು. ಕೊನೆಯಲ್ಲಿ ಬಂದ ಧರ್ಮರಾಜ ಈ ಭಯಾನಕ ದೃಶ್ಯವನ್ನು ನೋಡಿ ದುಃಖಿಸಹತ್ತಿದ. ಆಗ ಎಲ್ಲಿಂದಲೊ ಒಂದು ಧ್ವನಿಬಂತು–ನೀನು ನೀರನ್ನ ಕುಡಿಯಬೇಡ. ಮೊದಲು ನನ್ನ ಪ್ರಶ್ನೆಗಳಿಗೆ ಉತ್ತರ ಕೊಡು ಎಂದು ಹೇಳಲಾಗಿ ಆಗ ಧರ್ಮರಾಜನು ದಯವಿಟ್ಟು ಪ್ರಶ್ನೆಗಳನ್ನು ಕೇಳಬಹುದು ಎಂದು ಹೇಳಿದ.

"ಸೂರ್ಯ ಪ್ರಕಾಶಿಸುವಂತೆ ಮಾಡುವ ಶಕ್ತಿ ಯಾವುದು ?" ಎಂದು ಆ ದನಿ ಪ್ರಶ್ನೆ ಕೇಳಿತು. ಮೊದಲ ಬಾರಿಗೆ "ಬ್ರಹ್ಮಶಕ್ತಿ" ಎಂದು ಧರ್ಮರಾಜ ಉತ್ತರಿಸಿದ.

"ಭೂಮಿಗಿಂತ ಹೆಚ್ಚಿನ ಸಹನೆ ಯಾರಿಗೆ" ? ಎಂದು ದನಿ ಕೇಳಲು ಮಕ್ಕಳನ್ನು ಹೆತ್ತು ಹೊತ್ತು ಸಾಕುವ ತಾಯಿಗೆ ಎಂದು ಉತ್ತರಿಸಿದ ಧರ್ಮರಾಜ.

"ಮನೆಯಲ್ಲಿ ಸ್ನೇಹಿತ ಯಾರು ?"
"ಹೆಂಡತಿ" ಧರ್ಮರಾಜನ ಉತ್ತರ

"ನಿಜವಾದ ಬ್ರಾಹ್ಮಣ ಯಾರು? ಬ್ರಾಹ್ಮಣ್ಯ ವಿದ್ವತ್ತಿದಿಂದ ಬರುತ್ತಿದೆಯೊ?" ಎಂದು ದನಿ ಪ್ರಶ್ನಿಸಿತು.

"ಸತ್‌ಶೀಲದಿಂದಲೇ ಬ್ರಾಹ್ಮಣ್ಯ"

"ಯಾವದು ನಷ್ಟವಾದರೆ ಅದರಿಂದ ಸಮಾಧಾನ ಉಂಟಾಗುತ್ತದೆ ?" ಎಂಬುದು ಮತ್ತೊಂದು ಪ್ರಶ್ನೆ.

"ಕೋಪ ಅದನ್ನು ಬಿಟ್ಟರೆ ಎಲ್ಲ ಕಷ್ಟ ಕಾರ್ಪಣ್ಯಗಳೂ ನೀಗುತ್ತವೆ."

ಜಗತ್ತಿನಲ್ಲಿಯೇ ಅತ್ಯಂತ ಅದ್ಭುತವಾದುದು ಯಾವುದು ? ಆ ದನಿ ಕೇಳಿತು.

"ಪ್ರತಿದಿನವೂ ಜೀವಿಗಳು ಸಾಯುವುದನ್ನು ಕಂಡೂ ಬದುಕಿರುವವರು ಮತ್ತೂ

ಬದುಕುವ ಆಸೆಯನ್ನು ಇಟ್ಟುಕೊಂಡಿರುವುದೇ ಪರಮ ಚೋದ್ಯ'' ಎಂದು ಧರ್ಮರಾಜ ಉತ್ತರಿಸಿದ.

ನಿನ್ನ ಉತ್ತರಗಳಿಂದ ಸಂತುಷ್ಟನಾಗಿದ್ದೇನೆ. ನಿನ್ನ ಸೋದರರಲ್ಲಿ ಒಬ್ಬನನ್ನು ಬದುಕಿಸುತ್ತೇನೆ ಯಾರನ್ನು ಬದುಕಿಸಲಿ ಹೇಳು ಎಂದು ಕೇಳಿದನು. ಆಗ ಧರ್ಮರಾಜನು ಕುಂತಿಯ ಮಕ್ಕಳಲ್ಲಿ ಒಬ್ಬನಾದ ನಾನು ಜೀವಿಸಿದ್ದೇನೆ. ಮಾದ್ರಿ ಮಕ್ಕಳಲ್ಲಿ ನಕುಲನನ್ನು ಬದುಕಿಸು ಎಂದು ಹೇಳಲಾಗಿ ಆ ಉತ್ತರದಿಂದ ಸಂತುಷ್ಟವಾದ ದನಿಯು ನಿನ್ನ ಸೋದರೆಲ್ಲರಿಗೂ ಜೀವದಾನ ಮಾಡಿದ್ದೇನೆ. ನಿಮಗೆ ಶುಭವಾಗಲಿ ಎಂದು ಹೇಳಿತು.

## ಕೃಷ್ಣನು ಭಕ್ತನಿಗೆ ಇತ್ತ ಫಲ

ಇಲ್ಲಿ ಗರುಡ ಸತ್ಯಭಾಮೆಯರಿಗೆ ಹನುಮನ ಭಕ್ತಿಎಂತಹುದು ಭಕ್ತನಲ್ಲಿ ಇರ ಬೇಕಾದ ನಿಷ್ಠೆ ಭಕ್ತಿ ವಿನಯಗಳ ಪ್ರದರ್ಶನವನ್ನು ಇಲ್ಲಿ ಕಾಣಬಹುದು. ಕೃಷ್ಣ ಒಂದು ಸಲ ಗರುಡನಿಗೆ ದ್ವಾರಕೆಯ ಆ ರಾಜ್ಯದಲ್ಲಿ ಇರುವ ಒಬ್ಬ ಶ್ರೇಷ್ಠ ಕಪಿಗೆ ಸಂದೇಶ ಒಂದನ್ನು ಕಳಿಸಲು ಕೇಳಿಕೊಂಡ. ಇದು ಗರುಡನಿಗೆ ಅವಮಾನವೆನಿಸಿತು. ನನ್ನಂತಹ ನಿಷ್ಠೆ ಭಕ್ತಗರುಡನೆಲ್ಲಿ ಆ ಸಾಮಾನ್ಯ ಕಪಿಯಲ್ಲಿ ? ಎಂದು ಕೇಳಿತು. ಆಗ ಕೃಷ್ಣನು ಅದು ಮಹತ್ವವಾದ ವಿಷಯವಿರುವುದರಿಂದ ನೀನೇ ಹೋಗು ಎಂದು ಹೇಳಲಾಗಿ ಗರುಡನು ಅನಿವಾರ್ಯವಾಗಿ ಕಪಿಯಿದ್ದ ಸ್ಥಾನಕ್ಕೂ ಬಂದಿತು. ರಾಮ ಧ್ಯಾನದಲ್ಲಿ ಕುಳಿತಿದ್ದ ಕಪಿಗೆ ...ಎಲೋ ಕಪಿಯೇ ಮಹಾರಾಜ ಬಲರಾಮ ನಿನ್ನ ಭೇಟಿಯನ್ನು ಆಶಿಸುತ್ತಿದ್ದಾನೆ ಎಂದು ಹೇಳಿದನು. ಅದು ಸುಮ್ಮನೇ ಕುಳಿತಿತ್ತು. ಆಗ ಗರುಡನು ಕಿವಿಯಲ್ಲಿ ಬಂದು ಜೋರಾಗಿ ಹೇಳಲಾಗಿ ಕಪಿಯು ಯಾವುದೂ ಸೊಳ್ಳೆ ಗುಯ್‌ಗುಡುತ್ತಿದೆ ಎಂದು ಕೈಬೀಸಲಾಗಿ ಗರುಡನ ಮುಖಕ್ಕೆ ಹೊಡೆದಂತಾಗಿ ಆಕಾಶಕ್ಕೆ ಹಾರಿ ಒಮ್ಮೆಲೆ ದ್ವಾರಕೆಯ ಅರಮನೆಯ ಅಂಗಳಕ್ಕೆ ಬಿದ್ದ. ಗರುಡನಿಗೆ ಅವಮಾನವಾಯಿತು. ಆಗ ಕೃಷ್ಣ ಹೇಳಿದ, ನೀನು ಮನಸಾ ರಾಮ ನಿನ್ನ ಕರೆಯುತ್ತಾನೆ ಅಂತಾ ವಿನಯದಿಂದ ಹೇಳು ಎಂದು ಮತ್ತೆ ಕಳಿಸಿದ. ಆಗ ವಾನರನು ಒಮ್ಮೆಲೇ ಕಣ್ಣನ್ನು ತೆರೆದು ಆನಂದದಿಂದ ರಾಮನೆಲ್ಲಿದ್ದಾನೆ ಎಂದು ಅವನ ಜೊತೆಗೆ ಓಡೋಡಿ ಬಂದ. ಆತ ಬರುವದನ್ನು ಕಂಡ ಕೃಷ್ಣನು ತಾನು ರಾಮನಾಗಿ ಬಲರಾಮನನ್ನು ಲಕ್ಷ್ಮಣನಾಗಿ ಮಾಡಿ ಸಿಂಹಾಸನದ ಮೇಲೆ ಕುಳಿತುಕೊಂಡಿದ್ದರು. ಆಗ ಹನುಮಂತ ಬಂದವನೇ ಅವರ ಪಾದಗಳಿಗೆ ಎರಗಿ ಸೀತಾಮಾತೆ ಎಲ್ಲಿ ಎಂದು ಕೇಳಿದ. ಅದೇ ಹೊತ್ತಿಗೆ ರುಕ್ಮಿಣಿ ಅಲ್ಲಿಗೆ ಬಂದಳು, ಅವಳನ್ನು ಸೀತೆಯೆಂದು ತಿಳಿದು ನಮಸ್ಕರಿಸಿದ. ಸತ್ಯಭಾಮೆಗೆ ಅವಳಲ್ಲಿದ್ದ ಗರ್ವಭಂಗವಾಯಿತು. ಇದರಿಂದ ಹನುಮಂತನಿಗೆ ರಾಮದರ್ಶನದಿಂದ ಪರಮಾನಂದವಾಯಿತು.

## ಬಾಯಾರಿಕೆಗೆ ಅಮೃತ

ಜ್ಞಾನಿಯ ಕಣ್ಣಿಗೆ ಸಮಸ್ತ ಮಾನವರು ಸರಿಸಮಾನರು. ಉತ್ತಂಗನೆಂಬ ತಪಸ್ವಿ ಇಂದ್ರನು ಅಮೃತವನ್ನು ತಂದರೂ ಕೂಡ ತಿಳಿಯದೇ ಬಿಟ್ಟ, ಕೃಷ್ಣನನ್ನು ಅರಿಯದೇ ಹೋದ–ಎನ್ನುವರು. ಇಲ್ಲಿ ನಮಗೆ ತಿಳಿದುಬರುವುದು ಉತ್ತಂಗನಲ್ಲಿ ಕೋಪ ಇದ್ದುದರಿಂದಲೇ ತಾನು ತಪಸ್ಸಿನಿಂದ ಪಡೆದ ಪುಣ್ಯ ಫಲವನ್ನು ವ್ಯರ್ಥ ಕಾರಣಕ್ಕಾಗಿ ಕಳೆದುಕೊಂಡ. ಇವನಂತೆಯೇ ಇದ್ದ ಅಹಂಕಾರಿಗಳಾದ ಕೌರವರು ಕೃಷ್ಣನ ಉಪದೇಶಕ್ಕೆ ಕವಡೆ ಬೆಲೆಯನ್ನು ಕೊಡದೇ ಅವರ ದುಷ್ಟತನವೇ ಅವರನ್ನು ನಾಶಮಾಡಿತು. ಕೃಷ್ಣ ಅವತಾರವಾಗಿದ್ದೇ ಈ ದುಷ್ಟರ ಶಿಕ್ಷೆ ಶಿಷ್ಟರ ಪರಿಪಾಲನೆಗಾಗಿ.

ಉತ್ತಂಗನಿಗೆ ಭಗವಂತನ ದರ್ಶನವಾದಾಗ ಆತ ಕೇಳಿದ್ದು ತಾನು ಮರಳು ಗಾಡಿನಲ್ಲಿ ಅಡ್ಡಾಡುವಾಗ ನೀರಡಿಕೆ ಆದರೆ ಕುಡಿಯಲು ನೀರು ದೊರೆಕಿಸುವಂತೆ ಕರುಣಿಸು ಎಂದು ಬೇಡಿಕೊಂಡ. ನಿನ್ನ ಬಯಕೆಯನ್ನು ಸಲ್ಲಿಸುವನೆಂದು ಕೃಷ್ಣ ಅಲ್ಲಿಂದ ಮಾಯವಾದನು.

ಒಮ್ಮೆ ಉತಾಂಗನಿಗೆ ಬಾಯಾರಿಕೆ ಆಯಿತು. ಒಬ್ಬ ಬೇಡ ಐದು ನಾಯಿ ಗಳೊಂದಿಗೆ ಕಾಣಿಸಿಕೊಂಡ. ಹೆಗಲಲ್ಲಿ ತೊಗಲಚೀಲ ತೂಗು ಹಾಕಿದ್ದ. ನಿನಗೆ ಬಾಯಾ ರಿಕೆ ಆಗಿದ್ದರೆ ನೀರನ್ನು ಕುಡಿ ಎಂದು ಹೇಳಿದ. ಆಗ ಈ ಕೀಳು ಜಾತಿಯವನಿಂದ ನೀರು ಕುಡಿಯುವುದು ಹೇಗೆ ಎಂದು ಯೋಚಿಸಿ, ಬಹಳ ಉಪಕಾರವಾಯಿತು ನನಗೆ ನೀರಡಿಕೆ ಆಗಿಲ್ಲ ಅಂತಾ ಹೇಳಿಬಿಟ್ಟ. ಆಗ ಬೇಡ ನಾಯಿಗಳು ಮಾಯವಾದವು. ಆಗ ಉತ್ತಂಗ ಋಷಿಗೆ ತನ್ನ ತಪ್ಪಿನ ಅರಿವಾಯಿತು. ಕಾಲ ಮಿಂಚಿತ್ತು.

## ಅರ್ಜುನನ ಹೆಮ್ಮೆಗೆ ಒಂದು ಮದ್ದು

ಇಲ್ಲಿ ಅರ್ಜುನನಲ್ಲಿ ಇದ್ದ ಹೆಮ್ಮೆಯ ಗರ್ವಭಂಗ ಹಾಗೂ ಶ್ರೀಕೃಷ್ಣ ಪರಮಾತ್ಮ ನಲ್ಲಿ ಅನನ್ಯ ಭಕ್ತಿ ಇಟ್ಟ ಗುಪ್ತಭಕ್ತರ ಪ್ರದರ್ಶನವನ್ನು ಇಲ್ಲಿ ಕಾಣುತ್ತೇವೆ.

ಒಂದುಸಲ ಶ್ರೀಕೃಷ್ಣ ಹಾಗೂ ಅರ್ಜುನರು ಅಡ್ಡಾಡಿಕೊಂಡು ಬರಲು ಹೊರಗೆ ಹೋಗಿದ್ದರು. ಅಲ್ಲೊಬ್ಬ ಬ್ರಾಹ್ಮಣ ಕಾಣಿಸಿಕೊಂಡ. ಆತ ಸೊಂಟದಲ್ಲಿ ಖಡ್ಗವಿಟ್ಟಿದ್ದು ಒಣಹುಲ್ಲನ್ನು ತಿನ್ನುತ್ತಿದ್ದ. ಇದನ್ನು ಕಣ್ಣಾರೆ ಕಂಡ ಅರ್ಜುನ ಆಶ್ಚರ್ಯಪಟ್ಟು ಅವನಲ್ಲಿ ಹೋಗಿ ಪ್ರಶ್ನಿಸಿದ. ನಿನ್ನ ಈ ರೀತಿ ಆಶ್ಚರ್ಯವಾಗಿದೆ. ಖಡ್ಗವನ್ನು ಏಕೆ ಇಟ್ಟಿರುವೆ ಎಂದು ಕೇಳಿದ. ಆತ ನಾನು ಸಂದರ್ಭ ಸಿಕ್ಕಿದರೆ ನಾಲ್ವರನ್ನು ಶಿಕ್ಷಿಸಬೇಕೆಂದಿದ್ದೇನೆ. ಅವರು ಯಾರು ಎಂದು ಮತ್ತೆ ಅರ್ಜುನ ಪ್ರಶ್ನಿಸಿದ. ಕೃಷ್ಣನಿಗೆ ಕ್ಷಣಕಾಲವೂ ವಿಶ್ರಾಂತಿಯನ್ನು ಕೊಡದೇ ಆತನ ಪ್ರಾರ್ಥನೆ

ಮಾಡಿ ಕಾಡುತ್ತಿರುವ ನಾರದ, ಹೊತ್ತುಗೊತ್ತು ಇಲ್ಲದೇ ತನಗೆ ಸಂಕಟ ಬಂದಾಗ ದುರ್ವಾಸ ಮತ್ತು ಆತನ ಹತ್ತುಸಾವಿರ ಶಿಷ್ಯರಿಗೆ ಉಣಬಡಿಸಲು ಕೇಳಿಕೊಂಡ ದ್ರೌಪತಿ, ಕಲ್ಲುಕಂಬವನ್ನು ಒಡೆದು ಬರುವಂತೆ ಮಾಡಿದ ಪ್ರಹ್ಲಾದ, ನನ್ನೊಡೆಯನನ್ನು ಸಾರಥಿಯಂತೆ ಕೀಳುಕೆಲಸಕ್ಕೆ ಹಚ್ಚಿದ ಆ ಮೂರ್ಖ ಅರ್ಜುನನನ್ನು ಎಂದು ಹೇಳಲಾಗಿ ಸೋಜಿಗಗೊಂಡ ಅರ್ಜುನನು ಆ ಬ್ರಾಹ್ಮಣನ ಕಾಲಿಗೆ ನಮಸ್ಕರಿಸಿದ. ನನಗಿಂತಲೂ ಶ್ರೀಕೃಷ್ಣನ ಭಕ್ತರು ಈ ಜಗತ್ತಿನಲ್ಲಿ ಇದ್ದಾರೆಂಬ ಅರಿವು ಅವನಿಗೆ ಉಂಟಾಯಿತು.

ಈ ಪುಟ್ಟಕತೆಗಳು ಒಂದೊಂದೂ ಜೀವನದ ಮೌಲ್ಯಕ್ಕೂ ಹೊಂದಿಕೊಂಡಂತಹವುಗಳು. ಭಾರತೀಯ ಸಂಸ್ಕೃತಿಯನ್ನು ಪ್ರತಿಬಿಂಬಿಸುವಂಥವುಗಳಾಗಿವೆ. ಭಾಷೆಯಲ್ಲಿ ಸರಳತೆ, ಭಾವನೆಯಲ್ಲಿ ತೀವ್ರತೆ, ಓದುಗರ ಮನಸ್ಸಿನ ಮೇಲೆ ಪರಿಣಾಮವಾಗುವಂತೆ ಚಿತ್ರಿಸಿದ ಅನುವಾದಕರ ಭೀಮ ಭಕ್ತಿ ಪರೀಕ್ಷೆಯು ಸಾಹಿತ್ಯದಲ್ಲೊಂದು ಮೈಲುಗಲ್ಲು.

ಪ್ರೊ. ಟಿ. ಎಸ್. ಪ್ರಭಾಕರ್

# ಅನುವಾದಕರಾಗಿ

ಡಾ॥ ಹಂಪ. ನಾಗರಾಜಯ್ಯನವರನ್ನು ನಾನು ಸುಮಾರು ಇಪ್ಪತ್ತೆಂಟು ವರ್ಷಗಳಿಂದ ಬಲ್ಲೆ. ಮೈಸೂರು ಮಹಾರಾಜ ಕಾಲೇಜಿನ ವಿದ್ಯಾರ್ಥಿ ದಿನಗಳವು. ನಾವು ಕೆಲವರು ಜೈನ್ ಬೋರ್ಡಿಂಗಿನಲ್ಲಿದ್ದೆವು. ಆದರೆ ಅಲ್ಲಿದ್ದ ಬೇರೆ ವಿದ್ಯಾರ್ಥಿಗಳು ಇತರೇ ಕಾಲೇಜಿಗೆ ಹೋಗುತ್ತಿದ್ದವರು. ಮಹಾರಾಜ ಕಾಲೇಜಿಗೆ ಅಲ್ಲಿಂದ ಒಂದಿಬ್ಬರು ಮಾತ್ರ ಹೋಗುತ್ತಿದ್ದೆವು. ಮಹಾರಾಜ ಕಾಲೇಜಿಗೆ ಸನಿಹದಲ್ಲೇ ವಿಶ್ವವಿದ್ಯಾನಿಲಯದ ಪುಸ್ತಕ ಹಾಗೂ ವಾಚನಾಲಯ; ಅದರ ಪಕ್ಕಕ್ಕೇ ವಿದ್ಯಾರ್ಥಿ ನಿಲಯ. ಓದುವ ಹುಮ್ಮಸ್ಸು ಇದ್ದ ವಿದ್ಯಾರ್ಥಿಗಳಿಗೆಲ್ಲಾ ಪುಸ್ತಕಾಲಯದ ಸಮೀಪವೇ, ಅದರಲ್ಲೂ ಸುಸಜ್ಜಿತವಾದ ಕಾಲೇಜು ವಿದ್ಯಾರ್ಥಿ ನಿಲಯದಲ್ಲೇ ಇದ್ದರೆ ಆಗಬಹುದೆಂಬ ಹಂಬಲ. ಹಾಗಾಗಿ ಕಾಲೇಜು ವಿದ್ಯಾರ್ಥಿನಿಲಯದಲ್ಲಿದ್ದವರು ಯಾರಾದರೂ ಸ್ನೇಹಿತರು ಸಿಕ್ಕಿದರೆ, ಎಲ್ಲಿಲ್ಲದ ಉತ್ಸಾಹ. 'ಅಹಾ ಇವರೆಂಥ ಭಾಗ್ಯಶಾಲಿಗಳು' ಎಂಬ ಅಸೂಯೆ ಬೇರೆ!

ಬಿ.ಎ. ಆನರ್ಸ್‌ಗೆ ನಾನು ಆಯ್ದುಕೊಂಡ ವಿಷಯವನ್ನೇ ಆಯ್ದುಕೊಂಡಿದ್ದ, ಆದರೆ ನನಗಿಂತ ಎರಡು ವರ್ಷ ಹಿರಿಯ ರಾಗಿ, ಮೇಲಿನ ತರಗತಿಯಲ್ಲಿದ್ದ ಒಂದಿಬ್ಬರು, ಕಾಲೇಜು ವಿದ್ಯಾರ್ಥಿನಿಲಯದಲ್ಲಿದ್ದ ವಿದ್ಯಾರ್ಥಿಗಳ ಜೊತೆ–ಸಾಕಷ್ಟು ಸಮಯ ವಾಚನ ಹಾಗೂ ಪುಸ್ತಕಾಲಯದಲ್ಲಿ ಕಳೆಯುವ ಆಸೆಯಿಂದ ಸಂಪರ್ಕ, ಸ್ನೇಹ ಬೆಳೆಸಿಕೊಂಡಿದ್ದೆ. ಫಲವಾಗಿ ಆಗಾಗ ಅವರನ್ನು ಭೇಟಿಯಾಗಿ ಚರ್ಚೆ, ವಿಮರ್ಶೆ, ಮಾತುಕತೆ ನಡೆಸುತ್ತಿದ್ದೆ. ಇಂಥ ಒಂದು ಸಂದರ್ಭದಲ್ಲಿ ಅಕಸ್ಮಾತ್ ಹಂಪ. ನಾಗರಾಜಯ್ಯನವರ ಪರಿಚಯವಾಯಿತು. ನಾನು ಬಿ. ಎ. ಆನರ್ಸ್‌ನ ಪ್ರಥಮ ವರ್ಷದಲ್ಲಿದ್ದರೆ, ಅವರಾಗ ಮೂರನೆಯ ಹಾಗೂ ಕೊನೆಯ ವರ್ಷದಲ್ಲಿದ್ದರು. ತರಗತಿಯಲ್ಲಿ

ಹಿರಿಯರಾಗಿದ್ದರೂ ಆತ್ಮೀಯರಾಗಿ ಅವರು ಮಾತನಾಡಿಸಿದ್ದು. ಕಂಡಾಗಲೆಲ್ಲಾ ಕರೆದು, ವಿಚಾರಿಸಿ, ಸತ್ಕರಿಸಿದ್ದು ನೆನಪಿನಲ್ಲಿನ್ನೂ ಹಸಿರಾಗಿಯೇ ಇದೆ. ಆಗ ಅವರ ಕೊಠಡಿ, ಪ್ರಾಧ್ಯಾಪಕರ ಕೊಠಡಿಯಂತೆಯೇ ಇರುತ್ತಿತ್ತು. ಮೇಜು, ಚೇರುಗಳ ತುಂಬಾ ಪುಸ್ತಕಗಳು, ಬರವಣಿಗೆಯ ಪರಿಕರಗಳು, ಎಲ್ಲಕ್ಕಿಂತ ಹೆಚ್ಚಾಗಿ ನನ್ನನ್ನು ಆಕರ್ಷಿಸಿದ್ದೆಂದರೆ, ಗೋಡೆ ತುಂಬಾ ಬರೆದಿದ್ದ ಕೈ ಬರೆಹಗಳು.

ವಿದ್ಯಾರ್ಥಿ ದೆಸೆಯಲ್ಲೇ ನಾಗರಾಜಯ್ಯನವರು ಅಪ್ಪಟ ಸಾಹಿತಿ. ಸದಾ ಅಭ್ಯಾಸನಿರತ: ಮಿದು ಭಾಷಿ, ಓದು, ಬರಹದಲ್ಲೇ ತಲ್ಲೀನ. ಅವರೆಂದೂ ಜೇಡದ ಮಾತಾಡಿದ್ದನ್ನು, ಇತರರ ಮನನೋಯುವಂತೆ ನಡೆದುದನ್ನು ಕಂಡ ನೆನಪಿಲ್ಲ. ಸದಾ ಹಸನ್ಮುಖಿಯಾಗಿ ಎಲ್ಲರೊಡನೆ ಬೆರೆಯುತ್ತಿದ್ದರು. ಗುಂಪು ಸೇರಿದಾಗ ನಗೆಚಾಟಿಕೆಗಳನ್ನು ಹಾರಿಸುತ್ತಿದ್ದರು. ಆಗಲೇ ಅವರ ಧರ್ಮಪತ್ನಿ ಕಮಲಾರನ್ನೂ ಭೇಟಿಯಾದ ನೆನಪು. ಓದು ಮುಗಿದ ನಂತರ ಅವರಿಬ್ಬರೂ ಪ್ರಾಧ್ಯಾಪಕರಾಗಿ ಕಾಲೇಜು ಸೇರಿದರೆಂದು ತಿಳಿದೆ. ನಂತರ ಅನೇಕ ವರ್ಷ ಸಂಪರ್ಕವಿರಲಿಲ್ಲ. ನಾನೂ ಎಂ. ಎ. ಮುಗಿಸಿ ಅದೇ ಹಾದಿ ಹಿಡಿದೆನಾದರೂ ಅವರ ಭೇಟಿಯಾಗಲಿಲ್ಲ. ಆಗಲೇ ಧರ್ಮಸ್ಥಳದ ಈಗಿನ ಧರ್ಮಾಧಿಕಾರಿಗಳಾದ ವೀರೇಂದ್ರ ಹೆಗ್ಗಡೆಯವರನ್ನು, ಬೆಂಗಳೂರಿನ ಸರಕಾರಿ ಕಲಾ ಕಾಲೇಜಿಗೆ ಸೇರಿಸಲೆಂದು ಹೋಗಿದ್ದೆ. ಅಲ್ಲೇ ನಾನು ಎರಡು ವರ್ಷ ಕೆಲಸ ಮಾಡಿದ್ದರೂ ನನಗಾಗ ಮಂಡ್ಯಕ್ಕೆ ವರ್ಗವಾಗಿತ್ತು. ಹಾಗೆ ಹೋದವನೇ ಹಳೆಯ ಸ್ನೇಹಿತರನ್ನು ಭೇಟಿಯಾಗಲೆಂದು ಸ್ಟಾಫ್ ರೂಮಿಗೆ ಹೋದಾಗ ಆಶ್ಚರ್ಯ ಕಾದಿತ್ತು. ನಾಗರಾಜಯ್ಯ ಅದೆಲ್ಲಿಂದಲೋ ಅಲ್ಲಿಗೆ ವರ್ಗವಾಗಿ ಬಂದಿದ್ದರು. ಹೆಗ್ಗಡೆಯವರಿಗೆ ಪಾಠ ಹೇಳುವ ಯೋಗ ಅವರದಾಗಿತ್ತು. ಅಲ್ಲಿ ಪರಿಚಯಿಸಿ ಮಾತನಾಡಿಸಿ ಹೋದೆ.

ನಂತರ ಹಂಪನಾ ಎಂಬ ಮೂರಕ್ಷರಗಳಿಂದ ಖ್ಯಾತರಾದ ಹಂಪ. ನಾಗರಾಜಯ್ಯನವರ ಜತೆ, ನಿಕಟವಾಗಿ ಜೊತೆಯಲ್ಲಿ ಒಟ್ಟಾಗಿ ಕೆಲಸಮಾಡುವ ಸಂದರ್ಭ ಬಂದದ್ದು, ಶ್ರೀ ಧರ್ಮಸ್ಥಳದಲ್ಲಿ ನಡೆದ ಐವತ್ತನೇ ಕನ್ನಡ ಸಾಹಿತ್ಯ ಸಮ್ಮೇಳನದಲ್ಲಿ. ಈ ಸ್ನೇಹಮಯಿ, ಚತುರ, ಮುತ್ಸದ್ದಿ ಹಾಗೂ ಉತ್ತಮ ಮಾತುಗಾರ. ಎಂತಹ ಉತ್ಸಾಹ ಲವಲವಿಕೆಯಿಂದ ಸಮಾರಂಭದ ಯಶಸ್ವಿಯಾಗಾಗಿ, ದುಡಿದಿದ್ದರೆಂಬುದನ್ನು ನೆನಪಿಸಿಕೊಂಡಾಗ ನನಗೆ ಈಗಲೂ ಆಶ್ಚರ್ಯವೆನಿಸುತ್ತದೆ. ಇದುವರೆಗೆ ಅವರು ಏರಿದ ಎತ್ತರ, ಸಾಗಿಬಂದ ದಾರಿ, ನಿಜಕ್ಕೂ ಕುತೂಹಲಕರ. ಅಧ್ಯಯನ, ಅಧ್ಯಾಪನ, ಇತರ ಸಾಹಿತ್ಯ ಕಾರ್ಯಗಳ ನಡುವೆ ಪ್ರಾಧ್ಯಾಪಕರಾಗಿ, ವಿಶ್ವವಿದ್ಯಾನಿಲಯದ ಪ್ರೊಫೆಸರ್ ಆಗಿ, ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾಗಿ ಅವಿಸ್ಮರಣೀಯ ಸೇವೆ ಸಲ್ಲಿಸಿದ್ದು ನೆನೆಯುತಕ್ಕ ಅಂಶ. ಈ ದುಡಿಮೆಯ ನಡುವೆ, ಅನೇಕ ಎಡರು–ತೊಡರುಗಳನ್ನು ಎದುರಿಸಿದರು. ಹಲವು ಅಪವಾದಗಳ ಹೊರೆ ಹೊತ್ತು ಮನದಲ್ಲಿ ನೊಂದರು.

ಆದರೂ ಧೃತಿಗೆಡದೆ 'ಹಿಡಿದ ಕೆಲಸವನ್ನು ಬಿಡದ ಹಠಮಾರಿ' ಎನಿಸಿಕೊಂಡರು. ಯಾವುದೇ ರಚನಾತ್ಮಕ ಕಾರ್ಯದಲ್ಲಿ ತೊಡಗುವಾಗ ಮತ್ತು ಗುರುತರ ಜವಾಬ್ದಾರಿಯನ್ನು ಸ್ವೀಕರಿಸುವಾಗ ಅವರು ತುಂಬ ವಿವೇಕ ಮತ್ತು ಎಚ್ಚರದಿಂದ ವರ್ತಿಸುತ್ತಿದ್ದುದನ್ನು ನಾನು ಗಮನಿಸಿದ್ದೇನೆ.

ಹಂಪ. ನಾಗರಾಜಯ್ಯನವರ ಸಾಹಿತ್ಯ ಸೇವೆ ಬಹುಮುಖವಾದುದು. ಸಾಹಿತ್ಯದ ನಾನಾ ಪ್ರಕಾರಗಳಲ್ಲಿ ಯಶಸ್ವಿಯಾಗಿ ಕೆಲಸ ಮಾಡಿದ ಪ್ರಭಾವಶಾಲಿ. ಪ್ರಾಚ್ಯ ಸಾಹಿತ್ಯ, ಭಾಷಾ ವಿಜ್ಞಾನ, ಜೀವನ ಚರಿತ್ರೆ, ವಿಮರ್ಶೆ, ಸಂಶೋಧನೆ, ಅನುವಾದ ಯಾವುದೇ ಇರಲಿ, ಎಲ್ಲ ಬಗೆಯ ಸಾಹಿತ್ಯ ಕ್ಷೇತ್ರದಲ್ಲಿಯೂ ತಲಸ್ಪರ್ಶಿಯಾಗಿ ದುಡಿದಿದ್ದಾರೆ. ಅಷ್ಟೇ ಏಕೆ, ಕನ್ನಡ ಪ್ರಚಾರ, ಪುಸ್ತಕ ಪ್ರಕಟಣೆ, ವಿದ್ಯಾರ್ಥಿ ಸಂಘಟನೆಗಳಲ್ಲಿಯೂ ತಮ್ಮನ್ನು ಬಹುವಾಗಿ ತೊಡಗಿಸಿಕೊಂಡಿದ್ದಾರೆ. ಜೈನ ಧರ್ಮಕ್ಕೆ ಸಂಬಂಧಿಸಿದಂತೆ ಕನ್ನಡದಲ್ಲಿ ವಿಶೇಷ ಕೆಲಸ ಮಾಡಿದವರಲ್ಲಿ ಹಂಪನಾ ಒಬ್ಬರು. ವಿದ್ವತ್ಪೂರ್ಣ ಪ್ರಬಂಧಗಳನ್ನು ಪ್ರಕಟಿಸಿ, ಜೈನ ಸಾಹಿತ್ಯ ಸಂಸ್ಕೃತಿಯ ಮೇಲೆ ಹೊಸ ಬೆಳಕು ಚೆಲ್ಲಿದ್ದಾರೆ. ಅವರ ಯಾವ ಕೃತಿಯಾದರೂ ಅದರಲ್ಲಿ ಹಂಪನಾ ಅವರ ಸೃಜನಶೀಲ ಮನಸ್ಸೊಂದು ದುಡಿದದ್ದನ್ನು ನಾವು ಕಾಣಬಹುದು.

ಅನುವಾದ ಅಥವಾ ಭಾಷಾಂತರ ಎನ್ನುವುದು ಒಂದು ಕಲೆ. ಅದು ಯಾರು ಬೇಕಾದರೂ ಹೇಗೆ ಬೇಕಾದರೂ ಎಸಗಬಹುದಾದ ಯಾಂತ್ರಿಕ ಕೆಲಸವಲ್ಲ. ಕೇವಲ ಅನುಕರಣ ಕಾರ್ಯವೂ ಅಲ್ಲ. ಅದೊಂದು ಪುನರ್‌ಸೃಷ್ಟಿ. ಪರಕಾಯ ಪ್ರವೇಶದಷ್ಟು ಕ್ಲಿಷ್ಟವಾದುದು. ಅದಕ್ಕಾಗಿಯೇ ಡಾ. ರಾಧಾಕೃಷ್ಣನ್ ಅವರು ಭಗವದ್ಗೀತೆಯ ಇಂಗ್ಲಿಷ್ ಅನುವಾದ ಮಾಡುವಾಗ, ಅನುವಾದಕನಿಗೆ ಎದುರಾಗುವ ತೊಂದರೆಗಳನ್ನು ಬಹು ಸ್ಪಷ್ಟವಾಗಿ ಕೆಳಗಿನ ಮಾತುಗಳಲ್ಲಿ ತಿಳಿಸಿದ್ದಾರೆ.

But no translation of the Githa can bringout the dignity and grace of the original. It's malady and music of phrase are difficult to recapture in another medium. The translator's anxiety is to render the thought but he cannot convey fully the spirit. He cannot evoke in the readers the mood in which the thought was born and induce in him, the ecstasy of the seer and the vision he beholds.

ಅನುವಾದ ಎನ್ನುವುದು, ನೂತನ ಗ್ರಂಥ ರಚನೆಗಿಂತ ಹೊಣೆಗಾರಿಕೆಯುಳ್ಳದ್ದು. ಮೂಲದ ಸೊಬಗು, ನಯ, ಭಾವ-ಬಂಧುರತೆಗಳನ್ನು ಅನುವಾದದಲ್ಲಿ ಅಳವಡಿಸಬೇಕಾಗುತ್ತದೆ. ಭಾಷಾಂತರವನ್ನು ಓದುತ್ತಿದ್ದೇನೆಂಬ ಕಲ್ಪನೆಯೂ ಸಹ, ಓದುಗನಿಗೆ ಬಾರದಂತೆ ನೋಡಿಕೊಳ್ಳುವುದರಲ್ಲಿ ಭಾಷಾಂತರಕಾರನ ಹಿರಿಮೆ ಅಡಗಿದೆ. ಒಳ್ಳೆಯ ಭಾಷಾಂತರಕ್ಕೆ ಮೂಲದಷ್ಟೇ ಬೆಲೆ ಇರುತ್ತದೆ. ಅದನ್ನು ಓದುವುದು ಸುಲಭ.

ಬರೆಯುವುದು ಕಷ್ಟ. ಒಂದು ಭಾಷೆಯ ಉದ್ಗ್ರಂಥಗಳನ್ನು ಮೂಲದಲ್ಲಿಯೇ ಎಲ್ಲರೂ ಓದುವುದು ಅಸಾಧ್ಯವಾದ್ದರಿಂದ, ಅವುಗಳನ್ನು ಚೆನ್ನಾಗಿ ಭಾಷಾಂತರ ಮಾಡಿಕೊಡುವ ವಿದ್ವಾಂಸರ ಉಪಕಾರವನ್ನು ಎಷ್ಟು ಕೊಂಡಾಡಿದರೂ ಸಾಲದು. ಈ ನೆಲೆಯಲ್ಲಿ ಕೆಲಸ ಮಾಡಿದ ಹಂಪನಾ ನನಗೆ ಬಹುಮುಖ್ಯ ವ್ಯಕ್ತಿಯಾಗಿ ಗೋಚರಿಸುತ್ತಾರೆ.

ಹಂಪನಾ ಅವರ ಅನುವಾದ ಕೃತಿಗಳು ನಾಲ್ಕು. "ಆತ್ಮತತ್ವ ವಿಚಾರ, ವೀರಜಿನೇಂದ್ರ ಚರಿತ್ರೆ, ಕೃಷ್ಣ ಪಾಂಡವರು ಮತ್ತು ಭೀಮ ಭಕ್ತಿ ಪರೀಕ್ಷೆ". ಪ್ರಾರಂಭದ ಎರಡು ಕೃತಿಗಳು ಮಹತ್ವದ್ದು. ಉಳಿದೆರಡು ಮಕ್ಕಳಿಗಾಗಿ ಅನುವಾದಿಸಿದ ಚಿಕ್ಕ ಕೃತಿಗಳು. ಮಕ್ಕಳ ಮನಸ್ಸನ್ನು ದೃಷ್ಟಿಯಲ್ಲಿಟ್ಟುಕೊಂಡು ಇವುಗಳನ್ನು ರಚಿಸಲಾಗಿದೆ. ಮಹಾಭಾರತ ಕಥೆಯಲ್ಲಿ ಉಕ್ತನಾದ, ಶ್ರೀಕೃಷ್ಣನ ಚರಿತ್ರೆಯನ್ನು ಮತ್ತು ಪಾಂಡವರ ಕಥೆಯನ್ನು ಸಂಕ್ಷಿಪ್ತವಾಗಿ ಸರಳವಾಗಿ ಮನಮುಟ್ಟುವಂತೆ, ಮೋಹಕ ಶೈಲಿಯಲ್ಲಿ ಅನುವಾದಿಸಿರುವುದು, ಈ ಕೃತಿಗಳ ವೈಶಿಷ್ಟ್ಯ. ಅನುವಾದ ಗ್ರಂಥವೆಂಬ ಅನುಮಾನ ಸ್ವಲ್ಪವೂ ಬಾರದ ರೀತಿಯಲ್ಲಿ ಇರುವ ಇವುಗಳ ನಿರೂಪಣೆ, ಮೆಚ್ಚುವಂತಹದು. ಆದರೆ, ನಿಜವಾದ ಅನುವಾದಕ ಹಂಪನಾ ಅವರನ್ನು ನೋಡುವುದಾದರೆ ಮತ್ತು ಗುರುತಿಸುವುದಾದರೆ, ಅವರ 'ಆತ್ಮ ತತ್ವ ವಿಚಾರ' ಮತ್ತು 'ವೀರಜಿನೇಂದ್ರ ಚರಿತ್ರೆ' ಕೃತಿಗಳನ್ನು ಅಗತ್ಯವಾಗಿ ನೋಡಬೇಕು. ಎರಡೂ ಜೈನ ಶಾಸ್ತ್ರಗ್ರಂಥಗಳು. 'ಆತ್ಮತತ್ವಕ್ಕೆ' ಸಂಬಂಧಿಸಿದವು. ಒಂದು ಶುದ್ಧ ಶಾಸ್ತ್ರವಾದರೆ, ಇನ್ನೊಂದು ಶಾಸ್ತ್ರವನ್ನೊಳಗೊಂಡ ಪುರಾಣ. ಒಬ್ಬ ನಿಜವಾದ ಅನುವಾದಕನಿಗೆ ಎದುರಾಗುವ ಮೂಲಭೂತ ಸಮಸ್ಯೆಗಳನ್ನು, ನಾವು ಇಲ್ಲಿ ಕಾಣುತ್ತೇವೆ. ಹೆಜ್ಜೆ ಹೆಜ್ಜೆಗೂ ಜಟಿಲವಾದ ಸೂಕ್ಷ್ಮವಾದ ವಿಷಯಗಳ ಪರಿವೇಶವನ್ನೊಳಗೊಂಡ ಶಾಸ್ತ್ರ ತನ್ನ ಜಿಗುಟುತನವನ್ನು ಗೂಢತೆಯನ್ನು ತೋರಿಸುತ್ತಾ ಹೋಗುತ್ತದೆ. ಅವುಗಳ ಅಂತರಾರ್ಥವನ್ನು ಗುರುತಿಸುವಲ್ಲಿ ಅವುಗಳ ಮೂಲವನ್ನು ಸಜೀವವಾಗಿ ಭಾಷೆಯಿಂದ ಹಿಡಿಯುವಲ್ಲಿ, ಅನುವಾದಕ ತುಂಬಾ ಶ್ರಮಿಸಿದ್ದನ್ನು ಕಾಣುತ್ತೇವೆ. ಕತ್ತಿಯ ಅಲಗಿನ ಮೇಲೆ ಸಾಮು ಮಾಡಿದಂತೆ ಈ ಕೆಲಸ. ಮೈಯೆಲ್ಲಾ ಕಣ್ಣಾಗಿ ಅನುವಾದಕ ಇಲ್ಲಿ ಮುಂದುವರಿಯಬೇಕಾಗುತ್ತದೆ. ತಾನು ಕಲಿತ ಎಲ್ಲಾ ಪಟ್ಟು ವರಸೆಗಳನ್ನು ಪ್ರಯೋಗಿಸುತ್ತಾ ಶಾಸ್ತ್ರದ ರಹಸ್ಯ ಕೋಟೆಗೆ ಲಗ್ಗೆ ಹಾಕಿ ತನ್ನ ಪ್ರಭುತ್ವವನ್ನು ಸಾರಬೇಕಾಗುತ್ತದೆ. ಇಂತಹ ಪ್ರಾಮಾಣಿಕ ಪ್ರಯತ್ನವೊಂದನ್ನು, ಯಶಸ್ವಿಯಾಗಿ ನೆರವೇರಿಸಿದ ಹಂಪನಾ ನಮಗೆ ಇಲ್ಲಿ ಮುಖ್ಯರಾಗುತ್ತಾರೆ.

ಆತ್ಮತತ್ವವಿಚಾರ ಜೈನ ಶ್ರಾವಕರನ್ನುದ್ದೇಶಿಸಿ ನೀಡಿದ, ಉಪನ್ಯಾಸ ಮಾಲೆಯ ಸಾರ. ಮೂಲ ಗುಜರಾಥಿಯಲ್ಲಿ ಶ್ರೀಮದ್ ವಿಜಯ ಲಕ್ಷ್ಮಣ ಸೂರೀಶ್ವರಜೀ ಮಹಾರಾಜರು ಶ್ವೇತಾಂಬರ ಸಂಪ್ರದಾಯದಂತೆ ಜೈನ ಧರ್ಮದ ತತ್ವಗಳನ್ನು, ಆತ್ಮ

ನಿಗೆ ಸಂಬಂಧಿಸಿದ ಗಹನ ವಿಚಾರಗಳನ್ನು ತಿಳಿಯಾದ ರೀತಿಯಲ್ಲಿ ಕಥೆ, ಉಪಕಥೆ, ದೃಷ್ಟಾಂತಗಳೊಡನೆ ವಿವರಿಸಿದರು. ಹೀಗೆ ವಿವರಿಸಿದ ಕೃತಿಯನ್ನು, ಘನಶ್ಯಾಮ ಜೋಷಿ ಅವರು ಇಂಗ್ಲಿಷಿಗೆ ಅನುವಾದಿಸಿದ್ದರು. ಸುಮಾರು ಎಂಟುನೂರು ಪುಟಗಳಷ್ಟು ವಿಸ್ತಾರವಾದ ಈ ಗ್ರಂಥವನ್ನು ಹಂಪನಾ ನೂರಾಎಂಭತ್ತು ಪುಟಗಳಲ್ಲಿ ಸಂಗ್ರಹಿಸಿದ್ದಾರೆ. ಆದ್ದರಿಂದ ಇದು ಮೂಲಗ್ರಂಥದ ತದ್ರೂಪ ಅನುವಾದವಲ್ಲ. ಮೂಲದ ಸೊಬಗನ್ನು ಬಿಡದೆ ಸಂಗ್ರಹಿಸಿದ ರೂಪಾಂತರ (Adaptation) ಹಳಗನ್ನಡದಲ್ಲಿರುವ ನಯಸೇನನ ಧರ್ಮಾಮೃತ, ವೃತ್ತವಿಲಾಸನ ಧರ್ಮ ಪರೀಕ್ಷೆ, ಶಾಂತಿನಾಥನ ಸುಕುಮಾರಚರಿತೆ, ನಾಗರಾಜನ ಪುಣ್ಯಾಸ್ರವ, ಬ್ರಹ್ಮಶಿವನ ಸಮಯ ಪರೀಕ್ಷೆ, ಮೊದಲಾದ ಕಾವ್ಯಗಳ ಮಾದರಿಯಲ್ಲಿ ಇದನ್ನು ಸಂಗ್ರಹಿಸಿರುವುದು ಇದರ ಹಿರಿಮೆಯಾಗಿದೆ.

ಆತ್ಮ, ಪುನರ್‌ಜನ್ಮ, ಕರ್ಮ, ಕರ್ಮಬಂಧನ, ಅಷ್ಟಕರ್ಮಗಳು. ಘಾತಿ–ಅಘಾತಿ ಕರ್ಮಗಳು, ಗುಣಸ್ಥಾನ, ಕರ್ಮನಿರ್ಜರೆ ಇತ್ಯಾದಿ ತಾತ್ವಿಕ ವಿಚಾರಗಳನ್ನು ವಸ್ತುನಿಷ್ಠವಾಗಿ ಪ್ರತಿಪಾದಿಸುತ್ತ ಹಂಪನಾ ಜೈನ ಧರ್ಮದ ಮುಖ್ಯ ಅಂಶವನ್ನೆಲ್ಲ ಇಲ್ಲಿ ವಿವೇಚಿಸುತ್ತಾರೆ. ಪುನರ್ಜನ್ಮ ಮತ್ತು ಜನ್ಮಾಂತರ ವಿಷಯ ಕುರಿತು ಹೇಳುವ ಒಂದು ಸಂದರ್ಭ ಹೀಗಿದೆ :

"ನಮ್ಮ ಬಾಳೊಂದು ಸೇತು. ಹುಟ್ಟು ಸಾವುಗಳನ್ನದು ಜೋಡಿಸುತ್ತದೆ. ಅವೆರಡರ ನಡುವೆ ಅಂತರವಿಲ್ಲ. ಒಂದರ ಮೂಲಕ ಒಳಸೇರಿ ಇನ್ನೊಂದರ ಮೂಲಕ ಹೊರಬರುವುದೇ ಅದು. ಹುಟ್ಟಿದವರು ಸಾಯಬೇಕು. ಸತ್ತವರು ಹುಟ್ಟಲೇಬೇಕು. ಆದರೂ ಸರಸ–ಜನನ, ವಿರಸ–ಮರಣ ಇವೆರಡು ದೋಷಗಳಿಂದ ಹುಟ್ಟು ಸಾವುಗಳಾದರೂ ಈ ದೋಷಾತೀತರಾಗುತ್ತಿಲ್ಲ ನಾವು.

ಮನುಷ್ಯ ಸಂಕಟದಲ್ಲಿದ್ದಾಗ ದೇವರೇ ಕಾಪಾಡು ಎನ್ನುತ್ತಾನೆ. ಪಾರಾದೊಡನೆ ಹಿರಿಹಿಗ್ಗಿನಿಂದ ಹಬ್ಬ ಮಾಡುತ್ತಾನೆ. ದೇವರನ್ನು ಮರೆತುಬಿಡುತ್ತಾನೆ. ಮಗುವೊಂದು ಆಟಿಗೆ ತೆಗೆದುಕೊಂಡು ಆಡುತ್ತದೆ. ಹಾನಿಕರವಾಗಿದ್ದರೆ, ಅದನ್ನು ತೆಗೆದಿಟ್ಟರೆ ಅಳುವ ಮಗುವು ಮತ್ತೊಂದು ಆಟಿಕೆ ಕಂಡೊಡನೆ ಸುಮ್ಮನಿರುತ್ತದೆ. ಮನುಷ್ಯನೂ ಮರಣದ ದುಃಖವನ್ನು ಜನನದಲ್ಲಿ ಮರೆಯುತ್ತಾನೆ. (ಆತ್ಮತತ್ವ ವಿಚಾರ, ಪು. ೨೮)

ವಿಶ್ವವೊಂದು ಸಿಂಧು, ಅದರಲ್ಲಿ ಪ್ರತಿ ಆತ್ಮವೂ ಒಂದು ಬಿಂದು. ಅಸಂಖ್ಯ ಹುಟ್ಟು–ಸಾವುಗಳ, ಕರ್ಮಾನುಸಾರಿಣಿಯಾದ ಆತ್ಮಕ್ಕೆ ಪರಿಪ್ರಾಪ್ತಿ ಎಂದಿರುವ ಈ ಸರ್ವಜ್ಞರು ತಮ್ಮ ಪೂರ್ವಜನ್ಮಗಳ ವಿವರಗಳನ್ನೂ ಕೊಟ್ಟಿದ್ದಾರೆ. ಹೀಗಿರುವಾಗ ಜನ್ಮಾಂತರವನ್ನು ಒಪ್ಪದಿರಲಿಕ್ಕಾದೀತೆ ? (ಅದೇ, ಪು. ೨೭)

ಒಂದು ಶರೀರದಲ್ಲಿ ಎಷ್ಟು ಆತ್ಮಗಳಿರುತ್ತವೆ ? ಹಸು, ಎಮ್ಮೆ, ಕುದುರೆ, ಕತ್ತೆ, ಆನೆ, ಕಪ್ಪೆ, ಪತಂಗ ಇಲ್ಲವೆ ಮನುಷ್ಯ ಮೊದಲಾಗಿ ಒಂದು ದೇಹಕ್ಕೆ ಒಂದೇ ಆತ್ಮವಿರುವುದು. ಹಾಗೆಯೇ ಬೇರು, ಎಲೆ, ಕಾಯಿ, ಹಣ್ಣು, ತೊಗಟೆ ಇತ್ಯಾದಿಗಳಲ್ಲಿ ಒಂದೊಂದೆ ಆತ್ಮಗಳಿರುವುದು. ಆದರೆ ಯಾವುದಾದರೊಂದು ತರಕಾರಿಯಲ್ಲಿ ಅನೇಕ ಆತ್ಮಗಳಿರುತ್ತವೆ. ಅದರೊಳಗಿರುವ ಒಂದೊಂದು ಆತ್ಮವೂ ಒಂದೊಂದು ಬೆರಳಿನ ಅನಂತ ಭಾಗಗಳ ಗಾತ್ರದಷ್ಟಿರುತ್ತದೆ. ಇಷ್ಟೆಲ್ಲ ಆತ್ಮಗಳು ಏಕತ್ರ ಹೇಗಿರುತ್ತವೆ ? ಸಂಘರ್ಷಉಂಟಾಗದೇ ? ಘರ್ಷಣೆಯಿಂದ ಛಿದ್ರಛಿದ್ರವಾಗದೇ ಇರಲು ಶಕ್ಯವೆ ? ಅನಂತ ದೀಪಗಳು ಒಂದಕ್ಕೊಂದು ಹೇಗೆ ಹೊಂದಬಲ್ಲವೋ ಹಾಗೆಯೇ ಅಸಂಖ್ಯ ಆತ್ಮರು ಇರಬಲ್ಲರು. ಘರ್ಷಣೆಗೇನೂ ಅವಕಾಶ ಇಲ್ಲ. (ಅದೇ, ಪು. ೩೩)

ಹೀಗೆ ತುಂಬ ಲವಲವಿಕೆಯಿಂದ ಹೊಸ-ಹೊಸ ಸಂಗತಿಗಳನ್ನು ಅರಳಿಸುತ್ತ ಹೋಗುತ್ತಾರೆ. ಪುಟ್ಟ ಪುಟ್ಟ ವಾಕ್ಯಗಳಿಂದ ಬಿಡಿ ಬಿಡಿ ಶಬ್ದಗಳಿಂದ ಇಡಿಯಾದ ಭಾವವನ್ನು ಹಿಡಿಯುತ್ತಾರೆ. ಶಾಸ್ತ್ರದ ಜಡತೆಯನ್ನು ತೊಡೆದು ಹೃದ್ಯವಾಗಿಸುತ್ತಾರೆ. ಎಲ್ಲಿಯೂ ನೀರಸವೆನಿಸಿದೆ ಓದುಗನ ಕುತೂಹಲವನ್ನು ಕೊನೆಯವರೆಗೆ ಹಿಡಿಯುತ್ತಾರೆ. ಅತ್ಯಂತ ಸೂಕ್ಷ್ಮವಿಚಾರಗಳನ್ನು ಮನದಟ್ಟುಮಾಡಿಕೊಳ್ಳುವಾಗಲೂ ಸಾಕಷ್ಟು ಎಚ್ಚರವಹಿಸುತ್ತಾರೆ. ಎಲ್ಲರಿಗೂ ಪ್ರಿಯವಾಗುವ ಲೌಕಿಕ ದೃಷ್ಟಾಂತಗಳನ್ನು, ಕಥೆಗಳನ್ನು ಉದಾಹರಿಸುತ್ತಾರೆ. ಕರ್ಮತತ್ತ್ವವನ್ನು ವಿವರಿಸುವ ಒಂದು ಸಂದರ್ಭ ಹೀಗಿದೆ. "ಕರ್ಮವು ಭೌತಿಕ ಪದಾರ್ಥ ಅಥವಾ ವಸ್ತು. ಅಂದರೆ ಪುದ್ಗಲ. ಅದು ಜಡ. ಅಚೇತನ. ನಿಶ್ಚೇತನ. ಆದರೆ ಅದರ ಶಕ್ತಿಯೇನೂ ಕಡಿಮೆಯಲ್ಲ. ಹಗ್ಗ, ಸಿಡಿಮದ್ದು, ಹರಿತಶಸ್ತ್ರ, ಬಾಂಬು ಇವೆಲ್ಲ ಜಡ ಪದಾರ್ಥಗಳೇ. ಬಳಸಿದಾಗ ಎಷ್ಟು ಬಲಿಷ್ಠ ಹಾಗೆಯೇ ಕರ್ಮಬಲಕೂಡ. ಆತ್ಮನ ಸಂಪರ್ಕ ಸಂಬಂಧ ಬಂದೊಡನೆ ಬಲಿಷ್ಠವೇ. ಕರ್ಮಗಳು ಕ್ರಮೇಣ ಬಲಗೊಂಡು ಪ್ರಚಂಡವಾಗಿರುತ್ತವೆ. ಆದರೆ ಆತ್ಮಶಕ್ತಿಯು ಮೊದಲು ಕರ್ಮಬಲಕ್ಕೆ ಸಿಕ್ಕಿಕೊಂಡರೂ ಕ್ರಮೇಣ ಅದಕ್ಕಿಂತಲೂ ಬಲಿಷ್ಠವಾಗಿ ಮುಕ್ತವಾಗುತ್ತದೆ. ಇದೇ ಮಹತ್ವ...ಕರ್ಮಬಲದ ಕಾರಣವಾಗಿಯೇ ಬ್ರಹ್ಮದತ್ತ ೧೬ವರ್ಷಕ್ಕೆ ಕುರುಡನಾಗಬೇಕಾಯಿತು. ಭಾರತದ ಚಕ್ರವರ್ತಿ ಬಾಹುಬಲಿಗೆ ಸೋಲಬೇಕಾಯತು. ವಾಸುದೇವ ಶ್ರೀಕೃಷ್ಣನು ಯಾದವನಾಶದ ನಂತರ ಸೋದರನೊಡನೆ ಹೊರಟಾಗ ವ್ಯಾಧನ ಬಾಣಕ್ಕೆ ಗುರಿಯಾದನು. ಕರ್ಮಬಲದಿಂದಲೇ ಹಿಟ್ಲರನಂಥ ಪ್ರಚಂಡನೂ ಅಳಿದನು. ಸಾಮಾನ್ಯವಾಗಿ ಆತ್ಮಬಲವು ಅಂತಿಮ ಜಯದ್ದು ; ಕರ್ಮಬಲವು ಆದಿಜಯದ್ದು..." ಹೀಗೆ ಮುಂದುವರಿಸುತ್ತ, "ಮೋಹನೀಯ ಕರ್ಮವು ನಿಮ್ಮ ಪ್ರಥಮ ಶತ್ರು. ನಾನು ಮತ್ತು ನನ್ನ ಎಂಬುವುಗಳೇ ಅದರಲ್ಲಿ ಜಾಸ್ತಿ. ಅಹಂಭಾವ ಅಥವಾ ಮಮಕಾರವು ಮೋಹದ ಫಲ. ಆದ್ದರಿಂದ ಬುದ್ಧಿವಂತರಾದವರು 'ನಾನಲ್ಲ', 'ನನ್ನದಲ್ಲ' ಎಂಬುದನ್ನು ಹೇಳುತ್ತಿರುತ್ತಾರೆ.

ಧರ್ಮಪಥಬಿಟ್ಟು ಧರ್ಮವನ್ನು ವಿರೋಧಿಸಿ, ಅಧರ್ಮವನ್ನು ಪ್ರಚಾರಗೊಳಿಸಿ, ಧರ್ಮ ಸಂಸ್ಥೆಗಳ ಆಸ್ತಿಪಾಸ್ತಿಗಳನ್ನು ಎತ್ತಿಹಾಕಿ, ಗೃಹಸ್ಥ ಜೈನಮುನಿ ಮೊದಲಾದ ಸಾಧುಸಜ್ಜನರನ್ನು ನೋಯಿಸಿ ಆತ್ಮನು ದರ್ಶನೀಯಾವರಣದಲ್ಲಿರುತ್ತಾನೆ (ಅದೇ, ಪು. ೧೩೬). ಇದು ಹಂಪನಾ ಅವರ ಅನುವಾದದ ಒಂದು ಮಾದರಿಯಷ್ಟೇ. ಇದನ್ನು ಓದುತ್ತಾ ಹೋದಂತೆ, ಇದು ಅನುವಾದ ಎಂಬ ಕಲ್ಪನೆ ಸ್ವಲ್ಪವೂ ಉಂಟಾಗುದಿವುಲ್ಲ.

'ವೀರ ಜಿನೇಂದ್ರ ಚರಿತ್ರೆ'ಯು ಪ್ರಾಕೃತ, ಸಾಂಸ್ಕೃತ, ಅಪಭ್ರಂಶ ಭಾಷಾ ಸಾಹಿತ್ಯ ಸಂಶೋಧನ ಕ್ಷೇತ್ರದಲ್ಲಿ ದಿಗ್ಗಜಗಳಾದ ಡಾ॥ ಹಿರಾಲಾಲ್ ಜೈನ್, ಡಾ॥ ಆ. ನೇ. ಉಪಾಧ್ಯೆ ಇವರು ಸಂಯುಕ್ತವಾಗಿ ಸಿದ್ಧಪಡಿಸಿದ 'ವೀರ ಜೀನೇಂದ್ರ ಚರಿತ್ರೆ' ಗ್ರಂಥದ ಸ್ವತಂತ್ರ ರೂಪಾಂತರ. ಅಪಭ್ರಂಶ ಭಾಷೆಯ ಆಧಾರಗಳಿಂದ ಮಹಾವೀರರ ಜೀವನ ಚರಿತ್ರೆಯನ್ನು ಮೊದಲು ಸಂಗ್ರಹಿಸಿದವರು ಡಾ॥ ಹಿರಾಲಾಲ್ ಜೈನ್. ಇದರ ಹಿಂದಿ ಅನುವಾದವನ್ನು ಸಮರ್ಥ ರೀತಿಯಲ್ಲಿ ಮಾಡಿದ್ದರು. ಇದರ ಇಂಗ್ಲಿಷ್ ಭಾಷಾಂತರವನ್ನು ಸಾರಸಂಗ್ರಹ ರೂಪದಲ್ಲಿ ಮಾಡಿವದರು ಡಾ॥ ಉಪಾಧ್ಯೆ. ಪ್ರಸ್ತುತ ಹಂಪನಾ ಅವರ ರೂಪಾಂತರ ಇಂಗ್ಲಿಷ್, ಹಿಂದಿ ಮೂಲವನ್ನೂ ಈ ವಿಷಯಕ್ಕೆ ಸಂವಾದಿಯಾಗಿ ಕನ್ನಡದಲ್ಲಿ ಸಿಗುವ ಆಧಾರಗಳನ್ನೂ ಆಧರಿಸಿದೆಯೆನ್ನ ಬಹುದು. ಅದರಲ್ಲೂ ಕೊನೆಯ ಸಂಧಿಗಳಲ್ಲಿ ಕನ್ನಡ ಭಾಷಾ ಸಾಮಗ್ರಿಯನ್ನು ಹೆಚ್ಚಾಗಿ ಬಳಸಿಕೊಂಡಿದ್ದಾರೆ.

ಜೈನ ಸಂಪ್ರದಾಯದಲ್ಲಿ ಭಗವಾನ್ ಮಹಾವೀರ ಇಪ್ಪತ್ತನಾಲ್ಕನೆಯ ತೀರ್ಥಂಕರ. ಜೈನಧರ್ಮ ತತ್ವವನ್ನು ಜನತೆಗೆ ಪ್ರಸಾರ ಮಾಡಿದವನು. ಅವನ ಜನ್ಮ, ಬಾಲ್ಯಾವಸ್ಥೆ, ತಪಸ್ಸು, ಕೇವಲ ಜ್ಞಾನಪ್ರಾಪ್ತಿ, ಧರ್ಮೋಪದೇಶ, ನಿರ್ವಾಣ–ಈ ಎಲ್ಲ ವಿಷಯಗಳು ವಾದಗ್ರಸ್ಥವಾಗಿದ್ದವು. ದಿಗಂಬರ ಮತ್ತು ಶ್ವೇತಾಂಬರ ಪರಂ ಪರೆಯಲ್ಲಿ ಉಕ್ತವಾದ ಮೂಲ ಸಾಮಗ್ರಿಗಳನ್ನು ಬಳಸಿಕೊಂಡು, ಇದುವರೆಗೆ ವಿದ್ವಾಂಸರು ನೀಡಿದ ಅಭಿಪ್ರಾಯಗಳನ್ನು ಹಿಂಜಿ ಹಿಂಜಿ ನೋಡಿ, ಮೌಲಿಕವಾದ ನಿರ್ಣಯವನ್ನು ಗುರುತಿಸುವ ಪ್ರಯತ್ನವೊಂದನ್ನು ಇಲ್ಲಿ ಮಾಡಲಾಗಿದೆ. ಮಹಾವೀರರ ಜನ್ಮಸ್ಥಾನ ವೈಶಾಲಿ ಅಥವಾ ಕುಂಡಲಪುರ. ಕೇವಲ ಜ್ಞಾನಕ್ಷೇತ್ರ ಭೃಂಬಿಕ ಗ್ರಾಮದ ಸಮೀಪ ಯಜಕುಲಾತೀರ (ಬಿಹಾರದ ಕುಯೇಲ ನದಿ ತೀರ) ಉಪದೇಶ ಮಾಡಿದ ಸ್ಥಳ ರಾಜಗ್ರಹ ಸಮೀಪದ ವಿಪುಲಾಚಲ, ನಿರ್ವಾಣಕ್ಷೇತ್ರ ಪಾವಾಪುರಿ ಎಂಬ ಮಹತ್ವದ ಅಂಶವನ್ನು ಆಮೂಲಾಗ್ರವಾಗಿ ಶೋಧಿಸಿ ತೀರ್ಮಾನಿ ಸಲಾಗಿದೆ. ಇವುಗಳ ಜೊತೆಗೆ ಮಹಾವೀರರ ಸಮಕಾಲೀನರಾಗಿ ಬಾಳಿದ ಮಗಧರಾಜ ಶ್ರೇಣಿಕ ಬಿಂಬಸಾರ, ಶ್ರೇಣಿಕಸುತ ಅಭಯಕುಮಾರ, ಶ್ರೇಣಿಕಸುತ ವಾರಿಷೇಣ, ಶ್ರೇಣಿಕಸುತ ಗಜಕುಮಾರ, ಕಾಕಾಂಬೆಯ ರಾಜ ಶತಾನೀಕ, ಇವರುಗಳ ವಿಷಯವನ್ನು

ಸಂಗ್ರಹಿಸಲಾಗಿದೆ. ಇದರಲ್ಲಿ ಅಭಯಕುಮಾರ ಮತ್ತು ಗಜಕುಮಾರರ ವಿಷಯ ಕನ್ನಡ ವಡ್ಡಾರಾಧನೆ ಕಥೆಯಲ್ಲಿ ಬಂದಿರುವುದು ಮಹತ್ವದ ಸಂಗತಿ.

ಹಂಪನಾ ಅವರು ಮಹಾವೀರರ ಜೀವನ ಮತ್ತು ಉಪದೇಶವನ್ನು ಪ್ರಧಾನವಾಗಿ ಪುಷ್ಪದಂತ ಕವಿಯ 'ತಿಸಟ್ಠಿ ಮಹಾಪುರಿಸ ಗುಣಾಲಂಕಾರ' ಅಥವಾ 'ಮಹಾಪುರಾಣ' ಎಂಬ ಕಾವ್ಯದ ೯೫-೧೦೨ನೆಯ ಸಂಧಿಗಳನ್ನು ಆಧರಿಸಿಯೇ ರಚಿಸಿದ್ದಾರೆ. ಶ್ರೀಚಂದ್ರಕವಿಯ 'ಕಹಕೋಸು' ಕೃತಿಯ ಕೆಲವು ಭಾಗಗಳನ್ನೂ ಆಯ್ದುಕೊಂಡಿದ್ದಾರೆ. ತಮ್ಮ ಕೃತಿಯ ಇತಿ-ಮಿತಿಗಳನ್ನು ಹಂಪನಾ ಪ್ರಾರಂಭದಲ್ಲಿ ಸ್ಪಷ್ಟವಾಗಿಯೇ ತಿಳಿಸಿದ್ದಾರೆ. "...ಅಧ್ಯಾಯಗಳು ಮಹಾವೀರರ ಜನನ ಪ್ರಸಂಗದಿಂದ ಹಿಡಿದು ಆತನ ಸರ್ವಜ್ಞತ್ವ ಪ್ರಾಪ್ತಿಯವರೆಗೆ ನಿರೂಪಿಸುತ್ತವೆ. ನಂತರದ ಅಧ್ಯಾಯಗಳು ಚಂದನೆಯ ಜೀವನವನ್ನು ತಿಳಿಸುತ್ತವೆ. ಚಂದನಾದೇವಿ ಆರ್ಯಿಕೆಯರ ಸಂಘಕ್ಕೆ ಮೊದಲ ಮುಂದಾಳುವಾಗಿದ್ದವಳು (೯೮). ಅಲ್ಲಿಂದ ಜೀವಂಧರ ಮುನಿಯ ಮೊದಲಿನ ಭವಾವಳಿಯ ವಿವರ ಬರುತ್ತದೆ (೯೯), ಜಂಬೂ ಸ್ವಾಮಿಯ ವೈರಾಗ್ಯ (೧೦೦) ಇವು ನಿರೂಪಿತವಾಗಿವೆ. ಮಹಾವೀರರ ಜೀವನದೊಡನೆ ಜೀವಂಧರ ಹಾಗೂ ಪ್ರೀತಿಂಕರರ ಉಪಕಥೆಗಳು ಯಾವ ಸಂಬಂಧವನ್ನೂ ಚಾರಿತ್ರಿಕವಾಗಿ ಪಡೆದಿಲ್ಲ. ಆದ್ದರಿಂದ ಅವನ್ನು ಇಲ್ಲಿ ಕೈಬಿಡಲಾಗಿದೆ. ಉಳಿದ ವಿವರಗಳನ್ನು ಸಂಕ್ಷಿಪ್ತಗೊಳಿಸಿ ಪರಿಷ್ಕರಿಸಲಾಗಿದೆ. ಹೀಗೆ ಒಂದು ಅವಿಚ್ಛಿನ್ನಗತಿಯಲ್ಲಿ ಮಹಾವೀರರ ಜೀವನವನ್ನು (ಸಂಧಿ-೧-೩) ಆತನ ಶಿಷ್ಯ ಗಣಧರರ ಬಾಳನ್ನೂ (ಸಂಧಿ-೪) ಆರ್ಯಿಕೆ ಚಂದನಾಳ ಬದುಕನ್ನೂ (ಸಂಧಿ-೫) ಸ್ವತಂತ್ರವಾಗಿ ಪ್ರತಿಪಾದಿಸಲಾಗಿದೆ. (ವೀರ ಜಿನೇಂದ್ರ ಚರಿತೆ, ಪು. ೨). ಈ ಮಾತುಗಳಿಂದ ಗ್ರಂಥವನ್ನು ಕುರಿತು ಇಡಿಯಾದ ಕಲ್ಪನೆಯೊಂದು ಓದುಗರಿಗೆ ಸಿಗುತ್ತದೆ. ವಿಷಯವನ್ನು ಸುಲಭವಾಗಿ ಅರಿತುಕೊಳ್ಳಲು ಇದರಿಂದ ಸಹಾಯಕವಾಗುತ್ತದೆ.

ಇಡಿ ಗ್ರಂಥಕ್ಕೆ ಶಿಖರಪ್ರಾಯವಾಗಿ ವಿದ್ವತ್‌ಪೂರ್ಣ, ಸಂಶೋಧನಾತ್ಮಕ ನಾಲ್ವತ್ತು ಪುಟಗಳ ಪ್ರಸ್ತಾವನೆ, ಗ್ರಂಥದ ತೂಕವನ್ನು ಹೆಚ್ಚಿಸಿದೆ. ಮಹಾವೀರ ತೀರ್ಥಂಕರರ ಕುರಿತು ಸಮಗ್ರವಾದ ಚಿತ್ರವೊಂದು ಪ್ರಥಮಬಾರಿಗೆನ್ನುವಂತೆ ನಮಗೆ ಇಲ್ಲಿ ದೊರೆತಿದೆ. ಇದುವರೆಗೆ ಪುರಾಣಗಳ ಕಲ್ಪನಾ ವಿಲಾಸದಲ್ಲಿ ಅತಿಮಾನವ ನೆಲೆಯಲ್ಲಿ ಚಿತ್ರಿತವಾದ ಮಹಾವೀರ, ಐತಿಹಾಸಿಕ ಪುರುಷನಾಗಿ ಇಲ್ಲಿ ಗೋಚರಿಸುವುದು ಮಹತ್ವದ ಅಂಶ. ಇದು ಕನ್ನಡ ಸಾಹಿತ್ಯಕ್ಕೆ ಅಮೂಲ್ಯವಾದ ಕೊಡುಗೆ.

'ನಾ' ವೃಜಿರೆ

## ಬಸವಪ್ಪ ಶಾಸ್ತ್ರಿ

ಎಲ್ಲಾ ಭಾಷೆಗಳ ಸಾಹಿತ್ಯ ಚರಿತ್ರೆಗಳಲ್ಲೂ ಸಾಹಿತ್ಯದ ಆಧುನಿಕ ಪ್ರಕಾರಗಳಾದ ಕಾದಂಬರಿ, ಸಣ್ಣಕಥೆ, ನಾಟಕ, ಏಕಾಂಕ ನಾಟಕ, ಹರಟೆಗಳ ಉದ್ಭವ ಮತ್ತು ವಿಕಾಸದ ಬಗೆಗೆ ಅಧ್ಯಯನ ಮಾಡುವ ಸಂದರ್ಭ ಬರುತ್ತದೆ. ಅದೇ ರೀತಿಯಲ್ಲಿ ಕನ್ನಡ ಸಾಹಿತ್ಯಚರಿತ್ರೆಯನ್ನು ಅಧ್ಯಯನ ಮಾಡುವವರಿಗೆ, 'ಆಧುನಿಕ ಕನ್ನಡ ನಾಟಕಗಳ ಆರಂಭ ಕಾಲದಲ್ಲಿ ವಿಶೇಷ ಪ್ರಭಾವ ಬೀರಿದ ಪ್ರಕಾಂಡ ಪಂಡಿತರಾದ ಲೇಖಕರಲ್ಲೊಬ್ಬರು ಕಾಳಿದಾಸನು ಸಂಸ್ಕೃತದಲ್ಲಿ ರಚಿಸಿದ ಅಮರಕೃತಿಯಾದ 'ಶಾಕುಂತಲ'ವನ್ನು ಕನ್ನಡಕ್ಕೆ ಭಟ್ಟಿಯಿಳಿಸಿದ "ಅಭಿನವ ಕಾಳಿದಾಸ ಬಿರುದಾಂಕಿತರು' ಎಂದು ಮಾತ್ರ ತಿಳಿದಿರುತ್ತದೆ–ಬಸವಪ್ಪ ಶಾಸ್ತ್ರಿಗಳ ಬಗೆಗೆ.

ಸಂಸ್ಕೃತದಲ್ಲಿ ಮೂಲ 'ಶಾಕುಂತಲ' ನಾಟಕವನ್ನು ಓದಿದ ಮಂದಿ ಬಸವಪ್ಪ ಶಾಸ್ತ್ರಿಗಳ ಕನ್ನಡ 'ಶಾಕುಂತಲ'ದ ಬಗೆಗೆ ಪಾಠ ಹೇಳುವಾಗ ಅಂತೂ ಏನೇನೂ ಗೌರವ ಸೂಚಕವಾಗಿ ತಿಳಿಯಹೇಳುವುದೇ ಇಲ್ಲ. ಆದ್ದರಿಂದ ಹೆಚ್ಚಿನವರಿಗೆ ಬಸವಪ್ಪ ಶಾಸ್ತ್ರಿಗಳ ಬಗೆಗೆ ಬಹಳಷ್ಟು ಅಜ್ಞಾನವೇ ಇರುತ್ತದೆ.

ಡಾ. ಹಂಪನಾ ಅವರು ಕಾವ್ಯಜೀವಿಯವರೊಂದಿಗೆ ಸೇರಿ, ರಾಷ್ಟ್ರೋತ್ಥಾನ ಸಾಹಿತ್ಯ ಪ್ರಕಾಶನದವರಿಗಾಗಿ 'ಭಾರತ ಭಾರತೀ ಪುಸ್ತಕ ಸಂಪದ' ಮಾಲೆಗಾಗಿ ೨೦೫ನೇ ಕ್ರಮಾಂಕದ ಪ್ರಕಟಣೆಯಾಗಿ ರಚಿಸಿದ ಕಿರುಹೊತ್ತಗೆಯಾದ 'ಬಸವಪ್ಪ ಶಾಸ್ತ್ರಿ'ಯೆಂಬ ಜೀವನ ಚರಿತ್ರೆಯು ಗಾತ್ರದಲ್ಲಿ ಕಿರಿದಾಗಿದ್ದರೂ ಗುಣದಲ್ಲಿ ಬೃಹತ್ತಾದದ್ದು. 'ಬಿಂದುವಿನಲ್ಲಿ ಸಿಂಧು'ವನ್ನು ತೋರುವ ಕೃತಿಯಾಗಿದೆ. ಜೀವನಚರಿತ್ರೆಯನ್ನು ಹೇಗೆ ರಚಿಸಬೇಕೆಂಬುದಕ್ಕೊಂದು ಉತ್ಕೃಷ್ಟ ಮಾದರಿಯಾಗಿದೆ. ಎಂದರೆ ಅತಿಶಯೋಕ್ತಿಯಾಗದು.

ಜೀವನಚರಿತ್ರೆಯು ಸಾಹಿತ್ಯ ಕ್ಷೇತ್ರದಲ್ಲಿ ಮುಖ್ಯ

ಪ್ರಕಾರವಾಗಿದ್ದು, ಅದರಲ್ಲೂ ಅನೇಕ ಸಾಹಿತ್ಯಕ-ಗುಣಗಳ ಸಮಾವೇಶವಿರುವುದನ್ನು ನಾವು ಗುರುತಿಸಬಹುದು. ಉತ್ತಮ ಜೀವನಚರಿತ್ರ-ಗ್ರಂಥದಲ್ಲಿ ವ್ಯಕ್ತಿಯೋರ್ವನ ಅಂತರಂಗ ಬಹಿರಂಗಗಳ ಕಲಾತ್ಮಕ ನಿರೂಪಣೆಯಿದ್ದು, ಸಹೃದಯಿಗಳಾದ ಓದುಗರ ಹೃದಯಕ್ಕೆ ರಸಸಿಂಚನದ ಅನುಭವವಾಗುತ್ತದೆ. ಜೀವನಚರಿತ್ರೆಯಲ್ಲಿ ಮಾನವೀಯ ಬದುಕಿನ ಒಳಿತು-ಕೆಡುಕುಗಳೆರಡರ ವಿವರಣೆಯೂ ಹೃದಯಸ್ಪರ್ಶಿಯಾಗಿ ಬರುವುದರಿಂದಾಗಿ, ಸಾಹಿತ್ಯ ಜಗತ್ತಿನಲ್ಲಿ ಇಂತಹ ಸಾಹಿತ್ಯಕೃತಿಗಳಿಗೆ ವಿಶೇಷ ಸ್ಥಾನವಿದೆ. ಎ. ಆರ್. ಕೃಷ್ಣಶಾಸ್ತ್ರಿಗಳ 'ಬಂಕಿಂಚಂದ್ರ', ಮಾಸ್ತಿಯವರ 'ರವೀಂದ್ರನಾಥ ಠಾಗೂರ್'-ಮೊದಲಾದ ಕೃತಿಗಳಿಗೆ ಸರಿಸಾಟಿಯಾಗಿ ನಿಲ್ಲಬಲ್ಲ ಕೃತಿಯಾಗಬಹುದಾಗಿದ್ದ 'ಬಸವಪ್ಪಶಾಸ್ತ್ರಿ' ಪುಸ್ತಕವು ತನ್ನ ಗಾತ್ರದ ಕೊರತೆಯಿಂದಾಗಿಯೇ ಮಕ್ಕಳ ಪುಸ್ತಕ ಮಾಲೆಗೆ ಸೇರುವಂತಾಗಿದೆಯಾದರೂ ಡಾ. ಹಂಪನಾ ಅವರು ಮುಂದಕ್ಕಾದರೂ ಬಸವಪ್ಪಶಾಸ್ತ್ರಿಗಳ ಬಗೆಗೆ ಸಮಗ್ರವೂ ಪರಿಪೂರ್ಣವೂ ಆದ ಬೃಹತ್ ಕೃತಿಯನ್ನು ನೀಡುವತ್ತ ಈ ಕೃತಿಯಲ್ಲಿ ಮೊದಲ ಹೆಜ್ಜೆಯಿರಿಸಿದ್ದಾರೋ ಅನ್ನಿಸುತ್ತದೆ.

ವಿಶ್ವಸಾಹಿತ್ಯದಲ್ಲೇ ಶ್ರೇಷ್ಠನಾಟಕಗಳಲ್ಲೊಂದೆಂದು ಪರಿಗಣಿತವಾದ ಕಾಳಿದಾಸನ 'ಶಾಕುಂತಲ'ವನ್ನು ಕನ್ನಡೀಕರಿಸಿ, ಗದ್ಯ-ಪದ್ಯಗಳಲ್ಲಿ ಯಥಾವತ್ತಾಗಿ ಕನ್ನಡಿಗರಿಗೆ ಮಹಾಕವಿಯ ಮಹಾಕೃತಿಯ ರಸದೌತಣವನ್ನು ಉಣಬಡಿಸಿದ 'ಬಸವಪ್ಪ ಶಾಸ್ತ್ರಿ'ಗಳನ್ನು ಕನ್ನಡಿಗರಿಗೆ ಪರಿಚಯಿಸುವ ಉಪಯುಕ್ತ ಕಾರ್ಯ ಈ ಕಿರುಹೊತ್ತಗೆಯಲ್ಲಿದೆ. ಕೇವಲ ೪೮ ಪುಟಗಳ ಈ ಸಣ್ಣ ಪುಸ್ತಕವು ಚಿಕ್ಕ ಮಕ್ಕಳಿಗೆಂದು ರಚಿತವಾಗಿದ್ದರೂ ಹಿರಿಯ-ಕಿರಿಯರೆನ್ನದೆ ಎಲ್ಲಾ ವರ್ಗದ ಓದುಗರನ್ನೂ ತಲಪಬಲ್ಲ, ಮನಸ್ಸನ್ನು ರಂಜಿಸಬಲ್ಲ ಕೃತಿಯಾಗಿದೆ.

ಕಾಳಿದಾಸನ ಪರಿಚಯದೊಂದಿಗೇ ಈ ಕೃತಿ ಆರಂಭವಾಗುತ್ತದೆ. "ಕಾಳಿದಾಸ ಭಾರತದ ಶ್ರೇಷ್ಠ ಕವಿಗಳಲ್ಲಿ ಒಬ್ಬ, ಅವನ ಶಾಕುಂತಲ ನಾಟಕ ಪ್ರಪಂಚದ ಹಲವು ಭಾಷೆಗಳಿಗೆ ಅನುವಾದವಾಗಿದೆ. ಇಂಗ್ಲೆಂಡ್, ರಷ್ಯಾದಂತಹ ಹಲವು ದೇಶಗಳಲ್ಲಿ ಅದನ್ನು ಅಭಿನಯಿಸಿದ್ದಾರೆ. ಅವನು ಇದ್ದದ್ದು ನೂರಾರು ವರ್ಷಗಳ ಹಿಂದೆ, ಬರೆದದ್ದು ಸಂಸ್ಕೃತ ಭಾಷೆಯಲ್ಲಿ, ಆದರೆ ಇಂದೂ ಸಂಸ್ಕೃತ ಬಾರದವರೂ ಭಾರತದಾಚೆಗಿನ ದೇಶಗಳವರೂ ಅವನ ಸಾಹಿತ್ಯವನ್ನು ಓದಿ ಆನಂದ ಪಡುತ್ತಾರೆ". 'ಅಭಿನವ ಕಾಳಿದಾಸ' ಎಂಬ ಬಿರುದನ್ನು ಪಡೆದ ಬಸವಪ್ಪಶಾಸ್ತ್ರಿಗಳ ಪರಿಚಯಾರಂಭಕ್ಕೆ ಎಂತಹ ಸೂಕ್ತ ಉಪೋದ್ಘಾತ ! ಬಸವಪ್ಪಶಾಸ್ತ್ರಿಗಳಿಗೆ ಈ ಬಿರುದು ದೊರೆತುದಕ್ಕೆ ಸಮರ್ಪಕ ಕಾರಣವನ್ನು ವಿಶದೀಕರಿಸುತ್ತಾ ಲೇಖಕರು, ಶಾಸ್ತ್ರಿಗಳ ಮಹಾನ್ ಕಾರ್ಯದ ಹಿರಿಮೆ-ಗರಿಮೆಗಳನ್ನು ವಿವರಿಸುತ್ತಾರೆ :

"ಅವರು ಕಾಳಿದಾಸನ 'ವಿಕ್ರಮೋರ್ವಶೀಯ' ಹಾಗೂ 'ಅಭಿಜ್ಞಾನ ಶಾಕುಂತಲ'-ಎಂಬೆರಡು ಶ್ರೇಷ್ಠನಾಟಕಗಳನ್ನು ಮೊಟ್ಟಮೊದಲ ಬಾರಿಗೆ ಕನ್ನಡಕ್ಕೆ ಅನುವಾದಿಸಿದರು. ಅಷ್ಟೇ ಅಲ್ಲ, ಕಾಳಿದಾಸನ ಕೃತಿಗಳ ಮೂಲಭಾವ, ಮೂಲಸೌಂದರ್ಯ ಸ್ವಲ್ಪವೂ ಮುಕ್ಕಾಗದಂತೆ ಅವುಗಳಲ್ಲಿನ ರಸವನ್ನು ಕನ್ನಡ ಜನ ಸವಿದು, ಆನಂದಿಸುವಂತೆ ಮಾಡಿದರು. ಕನ್ನಡ ಜನತೆಗೆ, ಸಾಹಿತ್ಯಕ್ಕೆ, ಮಹೋಪಕಾರ ಮಾಡಿದರು. 'ಅಭಿನವ ಕಾಳಿದಾಸ' ಎಂದು ಹೆಸರು ಪಡೆದರು."

ಮಹಾನ್ ಲೇಖಕರ ಬಗೆಗೆ ಜೀವನಚರಿತ್ರೆ ರಚನೆಗೆ ಈ ಪುಟ್ಟ ಕೃತಿ ಆದರ್ಶ ಪ್ರಾಯವಾಗಿದೆ. ವಿವಿಧ ಪರಿಚ್ಛೇದಗಳಿಗೆ ನೀಡಲಾದ ಸುಂದರ ಶೀರ್ಷಿಕೆಗಳ ಸೊಗಸು ಅನುಭವಿಸಿಯೇ ತೀರಬೇಕಷ್ಟೇ! "ಧರ್ಮನಿಷ್ಠ ತಂದೆ-ತಾಯಿಯರು, ಬಾಳಿಗೆ ಬೆಳಕಾಗಿ ಬಂದ ಮಗ, ಅರಳುತ್ತಿದ್ದ ಮೊಗ್ಗು, ಸಿಡಿಲೆರಗಿತು, ಕಷ್ಟದ ದಿನಗಳು, ಅರಮನೆದು ಮಗು, ಯಾರು ಹಾಡುತ್ತಿರುವವರು ?... ಜನಸಾಮಾನ್ಯರ ಕವಿಯೂ ಹೌದು.....ಸೇತುವೆ ಕಟ್ಟುವವರು ಯಾರು ?...ಮಾದರಿಯೇ ಇರಲಿಲ್ಲ.... ನಮ್ಮ ಕೃತಜ್ಞತೆ ಸಲ್ಲಬೇಕು." ಇತ್ಯಾದಿ

ಪಾಯಸದಲ್ಲಿ ಮಿಶ್ರಿತಗೊಂಡಿರುವ ದ್ರಾಕ್ಷಿ, ಗೋಡಂಬಿ, ಏಲಕ್ಕಿಗಳಂತೆ ಅಲ್ಲಲ್ಲಿ ಬರುವ ಉಪವಿಷಯಗಳ ಉಪಾಖ್ಯಾನವಂತೂ ಅತ್ಯಂತ ಚೇತೋಹಾರಿಯಾಗಿದೆ.

ಉದಾ : ಮುಮ್ಮಡಿ ಕೃಷ್ಣರಾಜ ಒಡೆಯರ ಪರಿಚಯ ಎಷ್ಟೊಂದು ಸೂಕ್ಷ್ಮ ಹಾಗೂ ಅರ್ಥಪೂರ್ಣ! "ಅವರು ತುಂಬಾ ಧರ್ಮನಿಷ್ಠ, ಸೌಜನ್ಯಯುತ ದೊರೆ ಯೆಂದು ಪ್ರಸಿದ್ಧಿ ಹೊಂದಿದ್ದರು. ವಿದ್ವಾಂಸರು, ಕವಿಗಳು, ಕಲಾವಿದರು ಎಂದರೆ ಅವರಿಗೆ ಬಹು ಗೌರವ, ವಿಶ್ವಾಸ. ಅವರೇ ಸ್ವತಃ ಪಂಡಿತರು." (ಪು. ೭)

ಮಕ್ಕಳಿಗಾಗಿ ರಚಿತವಾದ ಈ ಕಿರುಹೊತ್ತಗೆಯಲ್ಲಿ ಅಲ್ಲಲ್ಲಿ ಬರುವ ಆಯಾಯ ವಿಷಯಗಳ ಬಗೆಗೆ ಬರುವ ಲಘು-ಪರಿಚಯಾತ್ಮಕ ಟಿಪ್ಪಣಿಗಳು ಈ ಕೃತಿಯನ್ನು ಸ್ವಯಂಪೂರ್ಣವನ್ನಾಗಿ ಮಾಡಿವೆ. ಇದೇ ರೀತಿಯಲ್ಲಿ ಅನುಭಾವಗೋಷ್ಠಿ (ಪು. ೯) ಆಶುಕವಿತ್ವ (ಪು. ೨೦.) ನಾಟಕಗಳು (ಪು. ೨೭) ಸಮಸ್ಯಾ ಪೂರ್ತಿ (ಪು. ೩೮) ಕನ್ನಡದಲ್ಲಿ ನಾಟಕಗಳು (ಪು. ೪೩) ಆಗಿನ ಕಾಲ (ಪು. ೪೪) ಮೊದಲಾದವು ಗಮನಾರ್ಹವಾಗಿವೆ.

ಬಸವಪ್ಪಶಾಸ್ತ್ರಿಗಳ ಬಾಲ್ಯ, ಯೌವನ, ಗೃಹಸ್ಥ ಜೀವನ, ಅರಮನೆಯೊಂದಿಗೆ ಸಂಪರ್ಕ, ಮಹಾರಾಜರಿಂದ ಗೌರವ, ಬದುಕಿನ ಸಮಸ್ಯೆಗಳು, ಸಾಹಿತ್ಯ ಸೇವೆ, ಕಲಾಸೇವೆ-ಮೊದಲಾಗಿ ಹತ್ತಾರು ಮುಖ್ಯ ವಿಷಯಗಳನ್ನು ಸಂಕ್ಷಿಪ್ತವಾಗಿ ಈ ಕೃತಿಯಲ್ಲಿ ಅಳವಡಿಸುವ ಪ್ರಯತ್ನ ಇಲ್ಲಿ ಸಾರ್ಥಕ್ಯವನ್ನು ಕಂಡಿದೆ.

ಮಕ್ಕಳಿಗಾಗಿ ಬರೆದ ಕೃತಿಯಾದರೂ ಅಲ್ಲಲ್ಲಿ ಬರುವ ಸುಂದರ ಭಾಷಾ ಪ್ರಯೋಗಗಳು, ಉತ್ತಮ ಶೈಲಿ, ಮನಮುಟ್ಟುವಂತಹ ಕಥನ ಕೌಶಲ, ಸರಳ ವಾಗಿದ್ದೂ ಅನಿರ್ವಚನೀಯ ಸೌಂದರ್ಯದಿಂದ ಕೂಡಿರುವ ನುಡಿಗಟ್ಟುಗಳು ಈ ಕೃತಿಯ ಮೌಲಿಕತೆಯನ್ನು ಹೆಚ್ಚಿಸಿವೆ.

ಉದಾ : (೧) ಎಲ್ಲಿಯಾದರೂ ಸ್ವಲ್ಪ ಅಲಕ್ಷ್ಯ ತೋರಿದರೂ ಸಾಕು, ಸುಂದರ ವಾದ ವಿಗ್ರಹಕ್ಕೆ ಏಟು ಕೊಟ್ಟ ಹಾಗೆ ಆಗುತ್ತದೆ. (ಪು. ೬.)

(೨) ಇಂಥ ಉತ್ತಮ ಪಾಲನೆ ಪಡೆದ ಮಗು ದಿನದಿನಕ್ಕೆ ಅರಳುವ ಮೊಗ್ಗಿನಂತೆ ಮೈದುಂಬಿಕೊಂಡು ಬೆಳೆಯತೊಡಗಿತು. (ಪು. ೧೦)

(೩) ಅದು ಕಲಿತು ಹಾಡುವ ವಿದ್ವಾಂಸರ ಗಾಯನದಂತಿರಲಿಲ್ಲ. ಆದರೆ ಸಹಜವಾಗಿ ಹಾಡುವ ಕೋಗಿಲೆಯ ಸುಸ್ವನದಂತಿತ್ತು. (ಪು. ೧೬)

೪) ಸಂಸ್ಕೃತ–ಕನ್ನಡಗಳನ್ನು ಹದವಾಗಿ ಬೆರಸಿದರೆ ಕಾವ್ಯವು ಸಕ್ಕರೆ ಬೆರೆಸಿದ ಹಾಲಿನಂತಿರುತ್ತದೆ. (ಪು. ೩೩)

ಈ ಕೃತಿಯ ಇನ್ನೊಂದು ವೈಶಿಷ್ಟ್ಯವೆಂದರೆ ತುಲನಾತ್ಮಕ–ಅಧ್ಯಯನದ ದೃಷ್ಟಿ ಕೋನ. ಸಾಮಾನ್ಯವಾಗಿ ಇಂದಿನ ವಿಚಾರಗಳು, ಅಪರಿಚಿತ ವಿಷಯಗಳನ್ನು ಹೋಲಿಸಿ ಅವುಗಳ ಅಂತರವನ್ನು, ವೈಶಿಷ್ಟ್ಯವನ್ನು ನಿರೂಪಿಸಿದಾಗ, ಯಾರಿಗಾದರೂ ಎಂತಹ ಕ್ಲಿಷ್ಟವಿಷಯವೂ ಸಹಜಗಮ್ಯವಾಗಿ ಪರಿಣಮಿಸುತ್ತವೆ. ಈ ನಿಟ್ಟಿನಲ್ಲೇ ಈ ಕೃತಿಯಲ್ಲಿ ತುಲನಾತ್ಮಕ ದೃಷ್ಟಿಯ ಪಥವನ್ನವಲಂಬಿಸಲಾಗಿದೆ.

ಉದಾಹರಣೆಗೆ :

ಆಗಿನ ಕಾಲ :– "ಕನ್ನಡದ ಮೊದಲ ಮುದ್ರಣಾಲಯ ಸ್ಥಾಪಿತವಾದುದ್ದು ೧೮೩೫ ರಲ್ಲಿ. ಮುದ್ರಣಾಲಯಗಳು ಬೆಳೆದದ್ದು ಬಹು ನಿಧಾನವಾಗಿ. ಈಗ ನಮ್ಮ ಕಾಲದಲ್ಲಿ ನೂರಾರು ಮುದ್ರಣಾಲಯಗಳಿವೆ. ಸಣ್ಣ ಊರುಗಳಲ್ಲಿಯೂ ಮುದ್ರಣಾಲಯಗಳಿವೆ. ಆದುದರಿಂದ ಯಾವ ಪುಸ್ತಕದ ಪ್ರತಿಯಾದರೂ ಸಿಕ್ಕುತ್ತದೆ. ಈಗ ಅಕ್ಷರಸ್ಥರ ಸಂಖ್ಯೆಯೂ ಹೆಚ್ಚಾಗಿದೆ. ಹೆಂಗಸರಲ್ಲಿ ವಿದ್ಯಾಭ್ಯಾಸ ಬೆಳೆದಿದೆ." (ಪು. ೪೪)

ಅದೇ ರೀತಿ ಸಿಂಗರಾರ್ಯನ 'ಮಿತ್ರಾವಿಂದ ಗೋವಿಂದ' ನಾಟಕದ ವಿಷಯ ವನ್ನು ಹೇಳಿ, ಬಸಪ್ಪಶಾಸ್ತ್ರಿಗಳೊಡನೆ ಹೋಲಿಸುವ ಪ್ರಯತ್ನ.

ಆಗ ಮತ್ತು ಈಗ 'ಕನ್ನಡ ರಂಗಭೂಮಿ'ಯ ಸ್ಥಿತಿ-ಗತಿಗಳನ್ನು ಹೋಲಿಸುವ ಯತ್ನ. ಇವೆಲ್ಲವೂ ಕೃತಿಕಾರರ ಸಂಶೋಧನಾತ್ಮಕ ಪ್ರವೃತ್ತಿಗೆ ಜ್ವಲಂತ ಸಾಕ್ಷಿಯಾಗಿವೆ.

ಈ ಕೃತಿಯ ಕೊನೆಯಲ್ಲಿ 'ಶೂರಸೇನ ಚರಿತ್ರೆ'ಯೆಂಬ ಬಸಪ್ಪಶಾಸ್ತ್ರಿಗಳ ಇನ್ನೊಂದು ಕೃತಿಯ ಕಿರುಪರಿಚವನ್ನೂ ನೀಡಲಾಗಿದೆ 'ಮತ್ತೊಬ್ಬರಿಂದ ಅರ್ಥವನ್ನು ತಿಳಿದುಕೊಂಡು, ಇಂಗ್ಲಿಷ್ ನಾಟಕವನ್ನು ಕನ್ನಡಕ್ಕೆ ಎರಕಹೊಯ್ದಾಗ, ಅವರ ಕೃತಿ ಅಷ್ಟು ಸುಂದರವಾಗಿರಲ್ಲಿಲ್ಲ'–ಎಂಬಲ್ಲಿ ದಾಕ್ಷಿಣ್ಯರಹಿತವಾಗಿ ಗುಣ, ದೋಷ ಪರೀಕ್ಷೆ ಮಾಡುವ ವಿಮರ್ಶಾವೃತ್ತಿಯೂ ಪ್ರಕಟವಾಗಿರುವುದು ಈ ಕೃತಿಯ ಹಿರಿಮೆಗೆ ಮತ್ತೊಂದು ಸಾಕ್ಷಿ.

ಹಲವು ವರುಷಗಳಿಂದ ಶಿಕ್ಷಣರಂಗದಲ್ಲಿದ್ದು ಜ್ಞಾನಪಿಪಾಸುಗಳನ್ನು ಸಾಹಿತ್ಯದ ರಸಧಾರೆಯಿಂದ ತಣಿಸುತ್ತಾ ಬಂದ ಡಾ।। ಹಂಪನಾ ಅವರು 'ದ್ರಾವಿಡ ಭಾಷಾ ವಿಜ್ಞಾನ'ವೇ ಮೊದಲಾದ ಪಾಂಡಿತ್ಯಪೂರ್ಣ ಕೃತಿಗಳನ್ನು ರಚಿಸಿಯೂ ಮಕ್ಕಳಿಗಾಗಿ ಇಂತಹ ಸರಳ-ಸುಂದರ, ಆದರೆ ಅಮೂಲ್ಯ ಮುತ್ತಿನಂತಹ ಕೃತಿಯನ್ನು, ಆದ್ದರಿಂದಲೇ ಅಮೂಲ್ಯ ಸತ್ವಯುತ ಕೃತಿಯನ್ನು ಕನ್ನಡ ಸಾರಸ್ವತ ಲೋಕಕ್ಕೆ ನೀಡಿದ್ದಾರೆ : ಕನ್ನಡಿಗರಿಗೆ ಮಹೋಪಕಾರ ಮಾಡಿದ್ದಾರೆ.

ಕನ್ನಡ ಸಾಹಿತ್ಯ ಪರಿಷತ್ತಿನ ಕಾರ್ಯದರ್ಶಿಗಳಾಗಿ, ಅಧ್ಯಕ್ಷರಾಗಿ ಕನ್ನಡದ ನಿಷ್ಠಾಪೂರ್ಣ ಕೈಂಕರ್ಯವನ್ನು ಕೈಗೊಂಡು, ಕನ್ನಡದ ಬಾವುಟವನ್ನು ಮುಗಿಲೆತ್ತರಕ್ಕೆ ಹಾರಿಸಿದ ಅವರ ಲೇಖನಿಗೆ ಬಹುಶಃ ಇತ್ತೀಚೆಗಿನ ವರುಷಗಳಲ್ಲಿ ಬೃಹದ್-ಗ್ರಂಥಗಳ ರಚನೆಗೇ ಅವಕಾಶ ಸಿಕ್ಕದೇ ಹೋಗಿದೆಯೆಂದರೆ ತಪ್ಪಾಗದು. ಅವರ ಸಮರ್ಥ ಲೇಖನಿಯಿಂದ ಎ. ಆರ್. ಕೃಷ್ಣಶಾಸ್ತ್ರಿ, ಮಾಸ್ತಿಯವರ ಕೃತಿಗಳ ಸಾಲಿಗೆ ಸೇರತಕ್ಕಂತಹ ಬೃಹತ್–ಕೃತಿ 'ಬಸಪ್ಪಶಾಸ್ತ್ರಿ'ಗಳ ಬಗೆಗೆ ಬರಲಿ; ಅದು ಬಂದಾಗ ಈ ನಾಡಿನ ಸಾಹಿತ್ಯಕ್ಷೇತ್ರಕ್ಕೆ ಅಮೂಲ್ಯ ಕೃತಿಯಾಗುವುದರಲ್ಲಿ ಸಂಶಯವಿಲ್ಲ.

ಗಂಭೀರವಾದ, ತಲಸ್ಪರ್ಶಿಯಾದ ಅಧ್ಯಯನವು ಅಪರೂಪವಾಗುತ್ತಿರುವ ಮತ್ತು 'ಪಲ್ಲವಗ್ರಾಹಿ ಪಾಂಡಿತ್ಯ'ವನ್ನೇ ಮರೆತು ಮೇಲೇರುತ್ತಿರುವ ಇಂದಿನ ದಿನಗಳಲ್ಲೂ ಪ್ರೊ।। ಹಂಪನಾ ಅವರು 'ಕಾವ್ಯಜೀವಿ'ಯವರೊಡನೆ ಸೇರಿ ರಚಿಸಿದ 'ಬಸಪ್ಪಶಾಸ್ತ್ರಿ' ಕೃತಿಯು ಗಾತ್ರದಲ್ಲಿ ಕಿರಿದಾದರೂ ಶ್ರೇಷ್ಠಕೃತಿಯ ಎಲ್ಲಾ ಸಲಕ್ಷಣಗಳನ್ನೂ ತನ್ನಲ್ಲಿ ಗರ್ಭೀಕರಿಸಿಕೊಂಡಿದೆ, ಹಾಗೂ ಮುಂದೆ ಬರುಬಹುದಾದ ಮೇರು ಕೃತಿಯ 'ಸ್ಯಾಂಪಲ್'ನಂತಿದೆ.

ಎ. ಗೋಪಾಲಕೃಷ್ಣ

# ಕರ್ನಾಟಕ ಮತ್ತು ಜೈನಧರ್ಮ

ಜೈನಧರ್ಮಕ್ಕೂ ಕರ್ನಾಟಕಕ್ಕೂ ಇರುವ ಸಂಬಂಧ ಬಹು ಹಿಂದಿನದು. ಕ್ರಿ. ಪೂ. ಐದನೆಯ ಶತಮಾನದಷ್ಟು ಹಳೆಯದೆಂದು ಕೆಲವು ವಿದ್ವಾಂಸರ ಅಭಿಪ್ರಾಯ. ಅಂದಿನಿಂದಲೂ ಅವರು ಕರ್ನಾಟಕ ಜನತೆಯೊಂದಿಗೆ ಸೌಹಾರ್ದಯುತ ಜೀವನ ನಡೆಸುತ್ತ ಬಂದಿದ್ದಾರೆ. ಅಹಿಂಸೆಯೇ ಪರಮ ಧ್ಯೇಯವಾಗುಳ್ಳ ಜೈನಧರ್ಮ, 'ನೀನೂ ಜೀವಿಸು, ಇತರರನ್ನು ಜೀವಿಸಲು ಬಿಡು' ಎಂಬ ಬಹುಜನ ಮಾನ್ಯವಾದ ಸಂದೇಶವನ್ನು ಸಾರುತ್ತಾ ಜನಪ್ರಿಯ ಧರ್ಮವಾಗಿ ಉಳಿದುಕೊಂಡು ಬಂದಿದೆ. ಜೈನಾಚಾರ್ಯರು ಉದಾತ್ತವಾದ ರಾಜಕೀಯ ಧೋರಣೆಯುಳ್ಳವರಾಗಿದ್ದರು. ಇವರು ಶಕ್ತಿಶಾಲಿಗಳೂ ಸಮರ್ಥರೂ ಆದ ಮುಂದಾಳುಗಳನ್ನು ಗುರುತಿಸಿ ಅಂತಹವರಿಗೆ ಪ್ರೋತ್ಸಾಹ ನೀಡುವುದರ ಮೂಲಕ ಅನೇಕ ರಾಜಮನೆತನಗಳಿಗೆ ಭದ್ರವಾದ ಬುನಾದಿ ಹಾಕಿದರು. ಕೆಲವು ಪ್ರತಿಷ್ಠಿತ ರಾಜಮನೆತನಗಳು ಬಹುಕಾಲ ಸ್ಥಿರವಾಗಿ ನಿಲ್ಲಲು ಇಂತಹ ಆಶೀರ್ವಾದದ ಬಲವೂ ಒಂದು ಕಾರಣ.

ಜೈನಧರ್ಮವು ಕರ್ನಾಟಕದಲ್ಲಿ ಯಾವ ಯಾವ ಕಾಲದಲ್ಲಿ ಹೇಗೆಲ್ಲಾ ನೆಲೆಗೊಂಡು ಕಾಲಕ್ರಮದಲ್ಲಿ ಅದು ರಾಜಕೀಯ, ಸಾಮಾಜಿಕ ಕಲೆ ಹಾಗೂ ಸಾಹಿತ್ಯ ಕ್ಷೇತ್ರಗಳಲ್ಲಿ ಇತರ ಧರ್ಮಾವಲಂಬಿಗಳೊಡನೆ ಹೇಗೆ ಅನ್ಯೋನ್ಯ ಸಂಬಂಧ ಬೆಳಸಿ ಪ್ರವರ್ಧಮಾನಕ್ಕೆ ಬಂದಿತು ಮುಂತಾದ ವಿಷಯವನ್ನು ಡಾ॥ ಹಂಪನಾ ಅವರು ಈ ಪುಟ್ಟ ಪುಸ್ತಿಕೆಯಲ್ಲಿ ಸರಳವಾಗಿ, ಸಂಕ್ಷಿಪ್ತವಾಗಿ ಅವಲೋಕಿಸಿದ್ದಾರೆ.

---

* ಪ್ರಥಮ ವಿಶ್ವ ಕನ್ನಡ ಸಮ್ಮೇಳನದ ಸಂದರ್ಭದಲ್ಲಿ ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯದವರಿಂದ ಐಬಿಎಚ್ ಪ್ರಕಾಶನದವರ ನೆರವಿನೊಡನೆ ಪ್ರಕಟಿಸಲಾಗಿದೆ (೧೯೮೫)

## ಜೈನ ಧರ್ಮ ಹಾಗೂ ಕರ್ನಾಟಕದ ಅರಸರು

ಕ್ರಿ. ಪೂ. ೩ನೇ ಶತಮಾನದಲ್ಲಿ ಭದ್ರಬಾಹು ಜೈನಾಚಾರ್ಯರು ಶ್ರವಣಬೆಳಗೊಳದ ಚಿಕ್ಕಬೆಟ್ಟದಲ್ಲಿ ನೆಲಸಿ ಕಾಲಾನಂತರ ಅಲ್ಲಿಯೇ ನಿರ್ವಾಣವಾದ ಸಂಗತಿಯನ್ನು ಸಾಧಾರವಾಗಿ ಉಲ್ಲೇಖಿಸುವ ಲೇಖಕರು ಕರ್ನಾಟಕದಲ್ಲಿ ಜೈನಧರ್ಮದ ನೆಲೆಯನ್ನು ಸುಮಾರು ೨೩೦೦ ವರ್ಷಗಳ ಹಿಂದಕ್ಕೆ ಗುರುತಿಸುತ್ತಾರೆ. ಕರ್ನಾಟಕ ರಾಜ್ಯದ ಪ್ರಮುಖ ರಾಜಮನೆತನ ಗಂಗರದು. ಜೈನಮತಾವಲಂಬಿಗಳಾದ ಇವರ ಆಳ್ವಿಕೆ ಸುಮಾರು ೭೦೦ ವರ್ಷಗಳಷ್ಟು ದೀರ್ಘವಾದುದು. ಸಿಂಹನಂದಿಯ ಆಶೀರ್ವಾದ ಬಲದಿಂದ ಸ್ಥಾಪನೆಯಾದ ಗಂಗರಾಜ್ಯ ದಕ್ಷಿಣದಲ್ಲಿ ಒಂದು ಪ್ರಬಲ ರಾಜ್ಯವಾಗಿ ಮೆರೆಯಿತು. ಕೊಂಗುಣಿವರ್ಮ, ಅವನೀತ, ದುರ್ವಿನೀತ, ಶಿವಮಾರ, ಗುತ್ತಿಗೆಯ ಗಂಗ, ರಾಚಮಲ್ಲ ಇವರು ಈ ಮನೆತನದ ಪ್ರಮುಖ ಅರಸರು. ಲೋಕ ಪ್ರಸಿದ್ಧ ಶ್ರವಣಬೆಳಗೊಳದ ಗೊಮ್ಮಟ ಮೂರ್ತಿಯ ನಿರ್ಮಾಣವು ನಡೆದದ್ದೂ ಗಂಗರಾಜರ ಕಾಲದಲ್ಲಿಯೇ.

ಪೂರ್ವ ಚಾಲುಕ್ಯರ ಅರಿಕೇಸರಿಯ ಆಸ್ಥಾನದಲ್ಲಿ ಪಂಪಕವಿ ಬೆಳೆದರೆ, ಪಶ್ಚಿಮ ಚಾಲುಕ್ಯರ ಮನೆತನದ ಸತ್ಯಾಶ್ರಯ ಇರಿವ ಬೆಡಂಗನ ರಾಜಾಶ್ರಯದಲ್ಲಿ ರನ್ನನು ಕವಿಚಕ್ರವರ್ತಿಯಾಗಿ ಸನ್ಮಾನಿತನಾದನು. ಅಂತೆಯೇ ಪುಷ್ಪದಂತ, ರವಿಷೇಣ, ಪೊನ್ನ ಮುಂತಾದ ಜೈನ ಕವಿಗಳಿಗೆ ರಾಷ್ಟ್ರಕೂಟರು ಪ್ರೋತ್ಸಾಹ ನೀಡಿದರು. ಹೊಯ್ಸಳರ ಗುರು ವಾದಿರಾಜ ಜೈನಾಚಾರ್ಯ. ಗುರುವಿನ ಆದೇಶದಂತೆ ಹುಲಿಯನ್ನು ಸೀಳಿದ ಹೊಯ್ಸಳ ಅದನ್ನೇ ರಾಜಲಾಂಛನವನ್ನಾಗಿ ಸ್ವೀಕರಿಸಿದರು. ರಾಣಿ ಶಾಂತಲೆ ಕೊನೆಯುಸಿರು ಎಳೆದದ್ದು ಜೈನಮತಕ್ಕೆ ನಿಷ್ಠಾವಂತಳಾಗಿ. ವಿಷ್ಣುವರ್ಧನನ ಅಪ್ರತಿಮ ಸೇನಾನಿ ಗಂಗರಾಜನು ಜೈನ ಮತಾವಲಂಬಿಯಾಗಿದ್ದವನು. 'ಜಿನಧರ್ಮ ಕ್ಷೀರಸಾಗರ' ಎಂದು ಅವನನ್ನು ಕೊಂಡಾಡಿದ್ದಾರೆ. ವಿಜಯನಗರದ ಅರಸರೂ ಜೈನಮತಕ್ಕೆ ಉತ್ತೇಜನ ನೀಡಿದ ನಿದರ್ಶನಗಳನ್ನು ಲೇಖಕರು ನೀಡಿದ್ದಾರೆ. ಬುಕ್ಕರಾಯನು ಜೈನ–ವೈಷ್ಣವರಲ್ಲಿದ್ದ ವಿರಸವನ್ನು ಕೊನೆಗಾಣಿಸಿದ್ದು, ಇರುಗಪ್ಪನೆಂಬ ಪ್ರಸಿದ್ಧ ಸೇನಾನಾಯಕ ಒಬ್ಬ ಜೈನನಾಗಿದ್ದದ್ದು ಕೆಲವು ಉದಾಹರಣೆಗಳು. "ಈ ರಾಜರ ಕಾಲದಲ್ಲಿ ಜೈನ ಸಾಹಿತ್ಯ, ಶಿಲ್ಪ, ಚಿತ್ರಕಲೆ ಕೊನರಿ ತೊನೆದಾಡಿದವು" ಎಂದು ಲೇಖಕರು ಜೈನಧರ್ಮದ ಉಚ್ಛ್ರಾಯ ಕಾಲವನ್ನು ಗುರುತಿಸಿದ್ದಾರೆ.

## ಜೈನ ವಾಸ್ತು ಹಾಗೂ ಶಿಲ್ಪಕಲೆ

"ತುಂಬು ಗಾಂಭೀರ್ಯ, ಸಮಸ್ತ ತ್ಯಾಗ, ಧ್ಯಾನಮುದ್ರೆ, ಸ್ನಿಗ್ಧತೆ, ತಪಸ್ಸಿನಿಂದ ತೋರ್ಪಡಿಸಬೇಕಾದ ತೇಜಸ್ಸು, ಪ್ರಸನ್ನತೆ ಮತ್ತು ಸಂಯಮ"–ಇವುಗಳನ್ನು ಜಿನಬಿಂಬದ ಮುಖಮುದ್ರೆಯಲ್ಲಿ ತೋರಿಸುವ ರೂವಾರಿಗಳ ಕೌಶಲ ಮೆಚ್ಚತಕ್ಕದ್ದು ಎಂದು ಕರ್ನಾಟಕ ವಾಸ್ತುಶಿಲ್ಪ ಹಾಗೂ ಶಿಲ್ಪಕಲೆಗೆ ಜೈನರು ನೀಡಿರುವ

ಅಪಾರ ಕೊಡುಗೆಯನ್ನು ವಿವರಿಸುತ್ತಾ ಲೇಖಕರು ವಿವಿಧ ಸ್ಥಳಗಳಲ್ಲಿರುವ ಜೈನ ಕ್ಷೇತ್ರಗಳ ಪರಿಚಯ ಮಾಡಿಸುತ್ತಾರೆ. ಶ್ರವಣಬೆಳಗೊಳ, ಕಾರ್ಕಳ, ಮೂಡಬಿದಿರೆ, ವೇಣೂರು ಮುಂತಾದ ಕ್ಷೇತ್ರಗಳಲ್ಲಿ ಕಾಣುವ ಶಿಲ್ಪ ಸೌಂದರ್ಯ ಮಾದರಿಯಾಗಿವೆ. ಇವು ಜೈನರಿಗೆ ಪವಿತ್ರವಾದ ಕ್ಷೇತ್ರಗಳಿದ್ದಂತೆ; ಕಲಾವಿದರಿಗೆ ಜ್ಞಾನದ ಆಗರವೂ ಆಗಿವೆ. ಮೂಡಬಿದಿರೆಯ ಸಾವಿರಕಂಬದ ಬಸದಿಯನ್ನು ಅಬ್ದುಲ್ ರಜ್ಜಾಕ್ ವಿಶ್ವದ ಒಂದು ಅದ್ಭುತವೆಂದು ವರ್ಣಿಸಿದ್ದಾನೆ. ಶಿಲ್ಪಿಗಳ ಅಸಾಮಾನ್ಯ ಪರಿಣತಿಗೆ ಇಲ್ಲಿ ತಲೆ ಬಾಗದವರೇ ಇಲ್ಲ. ಶ್ರವಣಬೆಳಗೊಳದ ಗೊಮ್ಮಟಮೂರ್ತಿ ಲೋಕಪ್ರಸಿದ್ಧವಾಗಿ ದೊಡ್ಡಬೆಟ್ಟದ ಮೇಲೆ ನಿಂತಿದೆ. ೫೭ ಅಡಿ ಎತ್ತರವಿರುವ ಈ ಸ್ನಿಗ್ಧ, ಮುಗ್ಧ ಮೂರ್ತಿಯನ್ನು ಕಡೆದ ರೂವಾರಿಯ ಅಸಾಧಾರಣ ಪ್ರತಿಭೆ ಕೆತ್ತಿಸಿದ ಗಂಗರ ಸೇನಾನಿ ಚಾವುಂಡರಾಯನ ಕೀರ್ತಿ ಪ್ರೋತ್ಸಾಹ ನೀಡಿದ ರಾಜರನ್ನು ಲೇಖಕರು ಕೊಂಡಾಡಿದ್ದಾರೆ.

## ಕನ್ನಡ ಸಾಹಿತ್ಯಕ್ಕೆ ಜೈನರ ಕೊಡುಗೆ

ಪಂಪ, ಪೊನ್ನ, ರನ್ನ–ಇವರು ಕನ್ನಡದ ರತ್ನತ್ರಯರು. ಜೈನಮತಾವಲಂಬಿಗಳಾದ ಇವರು ಜೀವಿಸಿದ್ದ ಕಾಲ ಕನ್ನಡ ಸಾಹಿತ್ಯದ ಸುವರ್ಣಯುಗವೆಂದು ಹೆಸರಾಗಿದೆ. ಸಂಸ್ಕೃತ, ಪ್ರಾಕೃತ ಹಾಗೂ ಪ್ರಾಂತೀಯ ಭಾಷೆಗಳಲ್ಲಿ ಪಂಡಿತರಾಗಿದ್ದ ಜೈನಾಚಾರ್ಯರು ಪ್ರಾಂತೀಯ ಭಾಷೆಗಳಲ್ಲೂ ಸಾಹಿತ್ಯ ರಚಿಸಲು ಪ್ರೋತ್ಸಾಹ ನೀಡಿದವರಲ್ಲಿ ಅಗ್ರಗಣ್ಯರು. ಇವರು ನೀಡಿದ ಸ್ಫೂರ್ತಿಯಿಂದ ಕನ್ನಡ ಸಾಹಿತ್ಯ ಬೆಳೆಯಿತು. ಜೈನಧರ್ಮ ಮೆಚ್ಚುಗೆಗೆ ಪಾತ್ರವಾಯಿತು. ರತ್ನತ್ರಯರಲ್ಲದೆ ಚಾವುಂಡರಾಯ, ನಾಗವರ್ಮ, ರತ್ನಾಕರವರ್ಣಿ ಮುಂತಾದವರು ಕನ್ನಡ ಸಾಹಿತ್ಯಕ್ಕೆ ಅಮೂಲ್ಯ ಕೊಡುಗೆ ನೀಡಿದ್ದಾರೆ. ಭಟ್ಟಾಕಲಂಕ, ಕೇಶಿರಾಜ ಇವರ ಅಪೂರ್ವ ಕೊಡುಗೆ ಕನ್ನಡ ಶಾಸ್ತ್ರ ಸಾಹಿತ್ಯವು ಎಂದೂ ಮರೆಯುವಂತಿಲ್ಲ. ಅಲ್ಲದೆ ಪುರಾಣ, ಛಂದಸ್ಸು, ವ್ಯಾಕರಣ, ಆಯುರ್ವೇದ, ಯಕ್ಷಗಾನ, ಜ್ಯೋತಿಷ್ಯ, ಅಶ್ವಶಾಸ್ತ್ರ–ಮುಂತಾದ ಶಾಸ್ತ್ರಗಳಲ್ಲಿ ಪ್ರಕಾಂಡ ಪಂಡಿತರಾದ ಜೈನ ವಿದ್ವಾಂಸರು ಅಪಾರವಾದ ಜ್ಞಾನರಾಶಿ ಬೆಳಸಿ ಹೋಗಿದ್ದಾರೆ. 'ಇವರು ಹೊಸತತ್ವ, ಸತ್ವ, ಮತ್ತು ತೇಜಸ್ಸನ್ನು ಕನ್ನಡಭಾಷೆಗೆ, ಸಾಹಿತ್ಯಕ್ಕೆ ತುಂಬಿಕೊಟ್ಟರು. ಯಾವುದೇ ಗಹನವಾದ ವಿಚಾರದ ಅಭಿವ್ಯಕ್ತಿಗೆ ಅನುವಾಗಬಲ್ಲ ಬಿಗಿ ಕನ್ನಡ ಭಾಷೆಗೂ ಇದೆಯೆಂಬುದನ್ನು ತೋರಿಸಿಕೊಟ್ಟರು. ಕನ್ನಡಿಗರಿಗೆ ಆತ್ಮವಿಶ್ವಾಸ ತುಂಬಿದರು. ದಾನಚಿಂತಾಮಣಿ ಅತ್ತಿಮಬ್ಬೆ, ಕಲಾಪ್ರಪೂರ್ಣೆ ಶಾಂತಲೆ ಮುಂತಾದವರು ನೀಡಿದ ಪ್ರೋತ್ಸಾಹದಿಂದ ಕನ್ನಡ ಸಾಹಿತ್ಯಕ್ಕೆ ದೊರೆತ ಉತ್ತೇಜನವನ್ನು ಲೇಖಕರು ವಿವರಿಸಿದ್ದಾರೆ.

ಕನ್ನಡಕ್ಕೆ ಸಂಸ್ಕೃತ ಪಾಕೃತ ಭಾಷೆಗಳ ಸತ್ವವನ್ನೂ ಸ್ವಾರಸ್ಯವನ್ನೂ ಎರಕ ಹಾಕಿದವರು, ಕನ್ನಡ ಭಾಷೆಗೆ ವೈಭವವನ್ನು ತಂದು ಇತರ ಭಾಷೆಗಳ ಮುಂದೆ ಮರ್ಯಾದೆ ತಂದುಕೊಟ್ಟವರು ಜೈನರು.

ಕರ್ನಾಟಕದಲ್ಲಿ ಜೈನಧರ್ಮ ಎಲ್ಲಾ ಕ್ಷೇತ್ರಗಳಲ್ಲೂ ಬೀರಿರುವ ಪ್ರಭಾವದ ಒಂದು ಪಕ್ಷಿನೋಟ ಕಿರಿಯರಿಗಾಗಿ ಬರೆದಿರುವ ಸುಮಾರು ೪೦ ಪುಟಗಳ ಈ ಪುಟ್ಟ ಪುಸ್ತಕ ನೀಡುತ್ತದೆ. ಲೇಖಕರಿಗೆ ವಿಷಯದಲ್ಲಿರುವ ಅಪಾರ ಪಾಂಡಿತ್ಯ, ಶ್ರದ್ಧೆ ಹಾಗೂ ಸರಳ ನಿರೂಪಣಾ ಶೈಲಿಯಿಂದ ಆದಷ್ಟು ಹೆಚ್ಚು ವಿಚಾರಗಳನ್ನು 'ಕಿರಿದರಲ್ಲಿ ಹಿರಿದನ್ನು' ಅಡಗಿಸಲು ಸಫಲರಾಗಿದ್ದಾರೆ.

ಹೀ. ಚಿ. ಶಾಂತವೀರಯ್ಯ

## ಸಾಹಿತ್ಯ ಚರಿತ್ರಕಾರರಾಗಿ

"ಪ್ರತಿಭಾನಂ ಕಾವ್ಯವಿದ್ಯಾಪ್ರಜಯ ಪರಿಚಯಂ ವೃದ್ಧ ಸೇವಾನುರಾಗಂ ಸತತಾಭ್ಯಾಸಪ್ರಯತ್ನಂ ಕವಿತೆಗೆ ನಿಯತಂ ಕಾರಣಂ" ಎಂಬ ಆರ್ಯೋಕ್ತಿ ಡಾ॥ ಹಂಪನಾ ಅವರನ್ನೇ ಕುರಿತು ಬರೆದಿರುವಂತಿದೆ. ಹಂಪನಾ ಅವರ ಪ್ರತಿಭೆ ಕಾವ್ಯ ಶಾಸ್ತ್ರದ ಪರಿಚಯ, ಹಿರಿಯರ ಸೇವೆ ಮತ್ತು ಸತತ ಅಭ್ಯಾಸ ಪ್ರಯತ್ನದಿಂದ ಜನಪ್ರಿಯ ಪ್ರಾಧ್ಯಾಪಕ, ಸಂಘಟನಾಚತುರ, ಸೇಹಿಗ, ಪ್ರಶಸ್ತಿವಿಜೇತ, ಪ್ರಬಂಧ, ಕಾದಂಬರಿ, ವಿಮರ್ಶೆ, ಜೀವನ ಚರಿತ್ರೆ, ಗ್ರಂಥ ಸಂಪಾದನೆ, ಅನುವಾದ, ಭಾಷಾ ವಿಜ್ಞಾನ ಹೀಗೆ ಹಲವಾರು ವಿಭಾಗದಲ್ಲಿ ನೂರಾರು ಗ್ರಂಥ ಗಳನ್ನು ರಚಿಸಿ ಖ್ಯಾತರಾಗಿದ್ದಾರೆ.

ಪುಸ್ತಕ ಸಾಹಿತ್ಯ ಚರಿತ್ರೆಕಾರರಾದ ಹಂಪನಾ ಅವರ ಪರಿಚಯವಿದು. ಬಿ. ಎ. (ಆನರ್ಸ್) ಮತ್ತು ಎಂ. ಎ. ಪದವಿ ತರಗತಿಯಲ್ಲಿ ಸಾಹಿತ್ಯ ಚರಿತ್ರೆಯನ್ನು ವಿಶೇಷವಾಗಿ ಅಧ್ಯಯನ ಮಾಡಿದ್ದಾರೆ. ಅವರ ಲೇಖನಗಳ ರಾಶಿಯಲ್ಲಿ ಸಾಹಿತ್ಯ ಚರಿತ್ರೆಗೆ ಸಂಬಂಧಿಸಿದ ಹಲವಾರು ಅಪರೂಪದ ಲೇಖನಗಳಿವೆ. ಸ್ವತಃ ಲೇಖಕರಾದ ಹಂಪನಾ ಅವರು ಸಾಹಿತ್ಯ ಚರಿತ್ರೆಯ ಲೇಖಕರು ಗಳಿಗೆ ಪ್ರೋತ್ಸಾಹಕರೂ ಪ್ರೇರಣೆಗರೂ ಆಗಿದ್ದಾರೆ. ಅವರ ಲೇಖನಿಯಿಂದ ಮೂಡಿಬಂದ ಸಾಹಿತ್ಯ ಚರಿತ್ರೆಯ ಲೇಖನಗಳು.

ರತ್ನಾಕರವರ್ಣಿ ಗುರುದೇವ ೧೯೬೦, ಕೇಶಿರಾಜ ಮತ್ತು ಶಬ್ದಮಣಿದರ್ಪಣ ವೀರಭಾರತಿ ೧೯೬೧, ರನ್ನಕವಿಯ ಕಾಲ ವಿಚಾರ ವೀರಭಾರತಿ ೧೯೬೧, ಮಂಜೇಶ್ವರದ ಗೋವಿಂದ ಪೈ ಸಮರಸ ೧೯೬೪, ಮಹಾಕವಿ ರತ್ನಾಕರ ಕನ್ನಡ ವಾಗ್ವಿಲಾಸ ವೈಭವ ೧೯೬೪, ವಿದ್ಯಾರಾಧನೆ, ಸನ್ಮತಿ ೧೯೬೪, ಆಚಾರ್ಯ ತೀನಂಶ್ರೀ, ಪ್ರಜಾವಾಣಿ ೧೯೬೬, ಬಿ ಎಂ ಶ್ರೀ ದರ್ಶನ ೧೯೬೭, ಬೊಮ್ಮಣ್ಣಕವಿ, ಕನ್ನಡ, ಸಾಹಿತ್ಯ ಪರಿಷತ್ಪತ್ರಿಕೆ ೧೯೬೭,

ಕನ್ನಡವನ್ನುದ್ಧರಿಸಿದ ಶಿವಶರಣರು ವಯಸ್ಕರ ಶಿಕ್ಷಣದ ವಿಶೇಷ ಸಂಚಿಕೆ ೧೯೬೭, ಚಂಪೂ ಸಾಹಿತ್ಯ, ಪ್ರಬುದ್ಧ ಕರ್ನಾಟಕ ೧೯೮೦, ವಿಶ್ವವಿಭೂತಿಗಳ ಸಾಲಿನಲ್ಲಿ ಬಸವಣ್ಣ ೧೯೬೮, ಜೆ. ಎಫ್. ಫ್ಲೀಟ್ ಜೀವನ ೧೯೫೯, ಚಾವುಂಡರಾಯ ಗುರುಕುಲ ೧೯೫೯, ಅಭಿನವ ಮಂಗರಸ, ವಿಶ್ವಕೋಶ ೧೯೫೯, ವಿಶ್ವಕವಿ ಪಂಪ ಜೀವನ ೧೯೭೧, ಚಂದ್ರಸಾಗರವರ್ಣಿ–ಬ್ರಹ್ಮಸಾಂಕ ಅಭಿನ್ನರೆ ವೀವೇಕಾಭ್ಯುದಯ ೧೯೭೧, ಚಂದ್ರಸಾಗರವರ್ಣಿ, ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ ೧೯೭೩, ಎಲ್. ವಿ. ರಾಮಸ್ವಾಮಿ ಅಯ್ಯರ್, ವಿಶ್ವಕೋಶ ೧೯೭೩, ನಾಗಕುಮಾರ ಚರಿತೆಗಳು, ವಿಶ್ವಕೋಶ ೧೯೭೩, ನೇಮಿನಾಥ ಪುರಾಣ. ಇಂಡಿಯಾ ಬುಕ್ ಹೌಸ್ ೧೯೭೪, ದುರ್ಗಸಿಂಹನ ಪಂಚತಂತ್ರ. ಮಂಗಳಾವಲೋಕನ ೧೯೭೬, ಕವಿಚರಿತ್ರೆಗೆ ತಿದ್ದುಪಡಿ. ಶ್ರೀಕಂಠತೀರ್ಥ ೧೯೭೬, ಪೊನ್ನ ಮತ್ತು ಬ್ರಹ್ಮಶಿವ, ಗುರುದೇವ ೧೯೭೭, ಪೊನ್ನ ಮತ್ತು ಶ್ರೀಷೇಣ, ಸನ್ಮತಿ ೧೯೭೮, ಕರ್ಣಪಾರ್ಯ, ಕನ್ನಡನುಡಿ ೧೯೮೨, ಕವಿಶಿಶುಮಾಯಣನ ಕಾಲ ಸಾಧನೆ ೧೯೮೨, ನಾಗವರ್ಮನ ಕಾಲ ವಿಚಾರ, ಪರಿಶೀಲನೆ ೧೯೮೨, ಮಂಗರಸನ ಕಾಲ ಸಣ್ಣ ಟಿಪ್ಪಣಿ, ದೇವನಂದಿ–ಪೂಜ್ಯಪಾದ ಆಚಾರ್ಯ ೧೯೮೩, ಧರ್ಮಾಮೃತ–ವಡ್ಡಾರಾಧನೆ, ಪೂಜ್ಯಪಾದ–ವಡ್ಡಾರಾಧನೆ. ವಡ್ಡಾರಾಧನೆಯ ಕಾಲ, ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ, ೧೯೮೩, ಭೋಜಪ್ರಬಂಧ–ವಡ್ಡಾರಾಧನೆ, ವಡ್ಡಾರಾಧನೆ–ಚಾವುಂಡರಾಯಪುರಾಣ. ವಡ್ಡಾರಾಧನೆ–ಅಸಗನ ಶಾಂತಿಪುರಾಣ, ಕನ್ನಡನುಡಿ ೧೯೮೩—ಹೀಗೆ ಹಲವಾರು ಲೇಖನಗಳನ್ನು ರಚಿಸಿರುವರಲ್ಲದೆ, ಪಂಪಭಾರತ ಸಂಗ್ರಹ ೧೯೬೪, ಜಯನೃಪ ಕಾವ್ಯ ಸಂಗ್ರಹ ೧೯೬೭, ಭರತೇಶ ವೈಭವ, (೧೯೬೭) ಸಾಳ್ವಭಾರತ ೧೯೭೬, ಧನ್ಯಕುಮಾರ ಚರಿತ್ರೆ ೧೯೭೬, ನಾಗಕುಮಾರ ಷಟ್ಪದಿ ೧೯೭೮, ರತ್ನಾಕರನ ಹಾಡುಗಳು ೧೯೭೯, ನೇಮಿನಾಥ ಪುರಾಣ ೧೯೮೧, ಶಾಂತಿಪುರಾಣ ೧೯೮೨, ಚಂದ್ರಸಾಗರವರ್ಣಿ ಕೃತಿಗಳು ೧೯೮೧ ಮೊದಲಾದ ಗ್ರಂಥಗಳನ್ನು ಸಂಪಾದಿಸುವಾಗ ಸಮಗ್ರವೂ, ಸಮಸ್ತವೂ ಆದ ಸಾಹಿತ್ಯ ಚರಿತ್ರೆಯನ್ನು ಇತ್ತಿದ್ದಾರೆ. 'ನಾಗಕುಮಾರ ಷಟ್ಪದಿ' ಗ್ರಂಥದ ಪ್ರಸ್ತಾವನೆಯಲ್ಲಿ ಇಪ್ಪತ್ನಾಲ್ಕು ಕಾಮದೇವರಲ್ಲಿ ಒಬ್ಬನಾದ ನಾಗಕುಮಾರನನ್ನು ಕುರಿತು ಸಂಸ್ಕೃತ, ಪ್ರಾಕೃತ ಭಾಷೆಗಳಲ್ಲಿ ಕಾವ್ಯಗಳಿವೆ. ಕನ್ನಡದಲ್ಲಿ ಕಾರ್ಕಳದ ಗೊಮ್ಮಟೇಶ ಚರಿತೆ-ಚದುರ ಚಂದ್ರಮ ೧೬೪೬, ಕಾಮನ ಚರಿತೆ–ಕಲ್ಯಾಣಕೀರ್ತಿ ೧೪೩೯, ಜೀವಂಧರ ಚರಿತೆ–ತೆರಕಣಾಂಬಿ ಬೊಮ್ಮರಸ ೧೪೮೫, ಜೀವಂಧರ ಚರಿತೆ-ಪೆನುಗೊಂಡೆಯ ಭಾಸ್ಕರ ೧೪೨೦, ಜೀವಂಧರ ಚರಿತೆ-ಹಾಡುವಳ್ಳಿಯ ಕೋಟೀಶ್ವರ ೧೫ನೆಯ ಶತಮಾನ, ಜೀವಂಧರ ಚರಿತೆ–ಬ್ರಹ್ಮಸೂರಿ ೧೮ನೆಯ ಶತಮಾನ, ಬಾಹುಬಲಿ ಚರಿತೆ-ಚಿಕ್ಕಣ್ಣ ೧೯ನೆಯ ಶತಮಾನ, ಭುಜಬಲಿ ಚರಿತೆ-ಪಂಚಬಾಣ ೧೬೧೪, ಬೆಳ್ಗೊಳದ ಗೊಮ್ಮಟೇಶಚರಿತೆ–ಅನಂತ ೧೭೦೦, ಸನತ್ಕುಮಾರ ಚರಿತೆ–ತೆಂಕಣಾಂಬಿ ಬೊಮ್ಮರಸ ೧೪೮೫, ಸನತ್ಕುಮಾರ ಚರಿತೆ–ಪಾಯಣಮುನಿ ೧೬೦೬. ಅಲ್ಲದೆ

ಭಾರತೀಯ ಭಾಷೆಯುಗಳಲ್ಲಿ ದೊರೆಯುವ ನಿರ್ವಾಣಕಾಂಡ-ಪ್ರಾಕೃತ, ಸಾವಯು ಧಮ್ಮದೋಹಾ ನಾಗದತ್ತ, ಪಂಚಮಿಚರಿಯುವ್ ತ್ರಿಭುವನ ಸ್ವಯಂಭು, ಣಾಯು ಕುಮಾರ ಚರಿಲು ಪುಷ್ಪದಂತ, ೯೭೨, ವಾಗಾರ್ಥ ಸಂಗ್ರಹ, ಕವಿ ಪರಮೇಷ್ಠಿ, ನಾಗಕುಮಾರ ಚರಿತೆ-ಜಯದೇವ, ನಾಗಕುಮಾರ ಚರಿತೆ, ಮಲ್ಲಿಷೇಣ, ನಾಗಕುಮಾರ ಚರಿತೆ-ಶ್ರೀಧರಸೇನ, ಪುಣ್ಯಾಸ್ರವ ಕಥಾಕೋಶ, ರಾಮಚಂದ್ರ ಮುಮುಸು, ಜೀವ ಸಂಬೋಧನೆ-ಬಂಧುವರ್ಮ ೧೨೦೦, ಪುಣ್ಯಾಸ್ರವ ಚಂಪು-ನಾಗರಾಜ ೧೩೩೧, ದ್ವಾದಶಾನು ಪ್ರೇಕ್ಷೆ-ವಿಜಯಣ್ಣ ೧೪೪೮ ; ಫಣಿಕುಮಾರ ಚರಿತೆ-ಕಲ್ಯಾಣಕೀರ್ತಿ ೧೪೨೯, ನಾಗಕುಮಾರ ಚರಿತ್ರೆ-ಬಾಹುಬಲಿ ವರ್ಧಮಾನ ೧೪೬೦, ನಾಗಕುಮಾರ ಚರಿತೆ-ಮಲ್ಲಿಭೂಷಣ ಭಟ್ಟಾರಕ ೧೪೫೩, ನಾಗಕುಮಾರ ಕಥಾ-ಧರ್ಮಧರ ಶ್ರೀ ಪಂಚಮಿಾ ನೋಂಪಿಯ ಕಥೆಗಳು-? ೫ ನೆಯ ಶತಮಾನ, ಜಿನಮುನಿ-ಚಂದ್ರ ಸಾಗರವರ್ಣಿ ೧೭೩೯, ನಾಗಕುಮಾರ ಚರಿತೆ-ಗೋಪಿಲಾಲ್ (ಹಿಂದಿ), ನಾಗದತ್ತ ಚರಿತ್ರ (ಪ್ರಾಕೃತ), ಹೀಗೆ ನಾಗಕುಮಾರ ಚರಿತೆಯನ್ನು ಸಮರ್ಥಿಸಿ. ತೌಲನಿಕ ಅಭ್ಯಾಸ ಮಾಡಿಕೊಟ್ಟಿದ್ದಾರೆ. ಒಂದು ಪ್ರೌಢ ಮಹಾಪ್ರಬಂಧದ ವಸ್ತುವನ್ನು ಅದು ವಿಶೇಷವಾಗಿ ಸಾಹಿತ್ಯ ಚರಿತ್ರೆಗೆ ಹೊಂದಿಕೊಂಡು ಒಂದು ಸಂಕ್ಷಿಪ್ತ ಸಾಹಿತ್ಯ ಚರಿತ್ರೆಯನ್ನೇ ಇತ್ತಿದ್ದಾರೆ.

ಹಂಪನಾ ಅವರು ಸಂಪಾದಿಸಿದ ಒಂದು ಗ್ರಂಥದ ಪ್ರಸಾವನೆಯಲ್ಲಿ ಬರುವ ಸಾಹಿತ್ಯ ಚರಿತ್ರೆಯ ವಿಹಂಗಮ ನೋಟವನ್ನು ಇಲ್ಲಿ ಕೊಟ್ಟಿದೆ. ಅಂದಮೇಲೆ ಅವರು ಸಂಪಾದಿಸಿದ ಎಲ್ಲ ಗ್ರಂಥಗಳಲ್ಲಿ ಬರುವ ಸಾಹಿತ್ಯ ಚರಿತ್ರೆಯ ಅಂಶಗಳನ್ನು ಒಂದೆಡೆಗೆ ಸೇರಿಸಿದರೆ 'ಕನ್ನಡ ಕವಿಚರಿತ್ರೆ'ಯ ಮೇಲೆ ಹೊಸ ಬೆಳಕು ಬೀರುತ್ತದೆ. ಡಾ. ಹಂಪನಾ ಅವರು ಸಮಗ್ರ ಜೈನ ಸಾಹಿತ್ಯ ಚರಿತ್ರೆ (ಎಲ್ಲ ಭಾಷೆಗಳು)ಯನ್ನು ಕನ್ನಡದಲ್ಲಿ ಪ್ರಕಟಿಸಿ ಸಾಹಿತ್ಯ ಚರಿತ್ರೆಕಾರರಲ್ಲಿ ಅಜಮಾಜರವಾದ ಯಶಸ್ಸನ್ನು ಪಡೆಯಲೆಂದು ಹಾರೈಸೋಣ.

ಎಂ. ಜಿ. ನಾಗರಾಜ್

# ಗೊಮ್ಮಟ ಬಾಹುಬಲಿ

'ಭಾರತ' ಚರಿತ್ರೆಯಲ್ಲಿ ಬಾಹುಬಲಿ ಏರಿದ ಔನ್ನತ್ಯ ಹತ್ತನೇ ಶತಮಾನದ ಕರ್ನಾಟಕದ ಕೊಡುಗೆ ಎನ್ನುವುದು ಸೂಕ್ತ. ಜೈನ ಧಾರ್ಮಿಕ ಪರಂಪರೆಯ ಕಾವ್ಯಗಳಲ್ಲಿ ಶ್ವೇತಾಂಬರ ಸಂಪ್ರದಾಯದ ಭರತನ ಸುತ್ತ ಮುತ್ತ ಸುಳಿಯುವ ಬಾಹುಬಲಿ, ಪಂಪನ ಕಾವ್ಯಶಿಲ್ಪದಲ್ಲಿ ಮಹತ್ತರವಾಗಿ ರೂಪುಗೊಂಡು ಚಾವುಂಡರಾಯನ ಮೂಲಕ ಅರಿಷ್ಟನೇಮಿಯ ಉಳಿಯಲ್ಲಿ 'ಗೊಮ್ಮಟ'ನಾಗಿ ಜಗತ್ ಪ್ರಸಿದ್ಧನಾದ.

ಹತ್ತನೆಯ ಶತಮಾನದ ಹಿಂದಿನ ಕಾಲದಲ್ಲಿ ಶಿಲ್ಪದಲ್ಲಿಯೂ ಅಂತಹ ಹೆಚ್ಚಿನ ಆದರ ಬಾಹುಬಲಿಗೆ ಕಂಡುಬಂದಂತಿಲ್ಲ. ಬಾದಾಮಿ ಹಾಗೂ ಐಹೊಳೆಯ ಗುಹಾ ದೇವಾಲಯಗಳಲ್ಲಿ, ಬಾಹುಬಲಿಯ ಮೊದಲ ಶಿಲ್ಪಗಳು ಉಬ್ಬು ಶಿಲ್ಪಗಳಾಗಿ ಕಂಡರಣೆಗೊಂಡಿವೆ. ಹುಂಮಚದಲ್ಲಿನ ದೇವಾಲಯದಲ್ಲಿಯೂ ಬೆಳುಗೊಳದಂತಹ ಭವ್ಯ ಸ್ವಂತತ್ರ ಶಿಲ್ಪವಾಗಿರಲಿಲ್ಲ. ಎಲ್ಲೋರದ ಬಾಹುಬಲಿಗೆ ಖಡ್ಗಾಸನವಿದ್ದರೂ ತ್ರಿಭಂಗ ಮುದ್ರೆಯಲ್ಲಿ ಸೇವೆಗೆ ಸಿದ್ಧವಿರುವ ಅಪ್ಸರೆಯರು ಕಂಡಸಲ್ಪಟ್ಟಿದ್ದಾರೆ. 'ಬಾಹುಬಲಿ'ಗೆ ಇದು ಅವಶ್ಯವಿತ್ತೇ ? ಇದನ್ನು ಮತ್ತೂ ಕೆದಕಿ ಹೋದರೆ ಭರತನಿಗೆ ಅನ್ವಯವಾಗುವ ಸಂದರ್ಭವು ಬಾಹುಬಲಿಗೆ ತಾಗಿಬರಲು ಕಾರಣವೇನು ? ಎಂಬುದೂ ಸಹಜ ಕುತೂಹಲ. ಅಪ್ಸರೆಯರ ಶಿಲ್ಪ ಏಕೆ ಬಾಹುಬಲಿಗೆ ಕಂಡರಣೆಯಾಗಿದೆ ಎಂದೂ ತಿಳಿಯಬೇಕು. ಪರಂಪರಾಗತ ಚಿತ್ರಣದಲ್ಲಿಯೂ ಭರತ ಯೋಗಿ ಹಾಗು ಭೋಗಿ. ಅಂತಹವನ ಬಳಿ ಅಪ್ಸರೆಯರ ಶಿಲ್ಪವಿರುವುದು ಸಹಜ. ಈ ಸಂದರ್ಭದಲ್ಲಿ ಗುಡ್ನಾಪುರ ಶಾಸನದ 'ಕಾಮ ಜಿನಾಲಯ'ದ ಪ್ರಸ್ತಾಪ ಮುಂದಾದರೂ ಸದ್ಯಕ್ಕೆ ಆ ಕುರಿತ ವಿವೇಚನೆಯನ್ನು ಮುಂದೂಡಬಹುದು. ಪ್ರಸ್ತುತ ಹಂಪನಾ ಅವರ 'ಗೊಮ್ಮಟ ಬಾಹುಬಲಿ' ಕೃತಿಯೂ ನಮ್ಮ ಮುಂದಿದೆ.

ಚಾವುಂಡರಾಯನಿಗೆ ಗೊಮ್ಮಟ ಬಾಹುಬಲಿಯ ಶಿಲ್ಪ ನಿರ್ಮಾಣದಲ್ಲಿ ಆಸಕ್ತಿ ಮೂಡಿದ್ದೇಕೆ ? ಎಂಬುದನ್ನು ಮೊದಲು ಗಮನಿಸಬೇಕು.

ಹೇಳಿಕೇಳಿ ಚಾವುಂಡರಾಯ ಗಂಗರಸರ ಮಹಾಸೇನಾನಿ. ಅಲ್ಲದೆ ಪಂಪನ ವೀರಯುಗ ಅವನ ಧಮನಿಯ ಅವಿಭಾಜ್ಯ ಅಂಗವಾಗಿತ್ತು. ಆದರೆ ಯುದ್ಧಾನಂತರದ ಕಾಯದ ವಿಶ್ರಾಂತಿಗೆ ಮಾನಸಿಕ ಶಾಂತಿಗೆ ಜೀವ ಮಿಡುಕುವುದು ಸಹಜ. ಅಶೋಕ ನಂತೆ ಕಳಿಂಗ ಯುದ್ಧದ ಪರಿಣಾಮದಂತಹ ಕಾರಣಗಳು ಚಾವುಂಡರಾಯನ ಬದುಕಿನಲ್ಲಿ ಕಂಡುಬಂದಿತೋ ಇಲ್ಲವೋ ಗೊತ್ತಿಲ್ಲ. ಅವನ ಇಳಿವಯಸ್ಸಿನಲ್ಲಿ ಯುದ್ಧಾನಂತರದಲ್ಲಿ ಮಾನಸಿಕ ಕ್ಲೇಶ ಭಾವನೆಗೆ ಸಹಜವಾಗಿ ಕ್ಷಮಾಂತರಂಗ ಒತ್ತು ತ್ತಿದ್ದಿರಬೇಕು. ಅದಕ್ಕೆ ಉಳಿದವರೆಲ್ಲರ ಅಂದರೆ ತಾಯಿ ಕಾಳಿಕಾದೇವಿ ಕಾಣಲಾಶಿಸಿದ ಪೌದನಪುರದ ಸುವರ್ಣ ಬಾಹುಬಲಿ, ಪತ್ನಿ ಅಂಜಲದೇವಿ, ಗುರು ನೇಮಿಚಂದ್ರರ ಸೂಚನೆ ಅವನ 'ಬಾಹುಬಲಿ' ಚಿಂತನೆಗೆ ಆಜ್ಯವಾದುವು. ಯುದ್ಧದಲ್ಲಿ ಸೋತ ಭರತನನ್ನೂ ಕ್ಷಮಿಸಿದ ಪಂಪನ ನಿರ್ಲಿಪ್ತ ಬಾಹುಬಲಿ ಅವನ ಮನಸ್ಸನ್ನು ಆ ಹೊತ್ತಿಗೆ ಬಹುವಾಗಿ ಆಕ್ರಮಿಸಿಬಿಟ್ಟ. ಶೈವ ವೈಷ್ಣವ ಪ್ರಾಬಲ್ಯದ ಎದುರು ಜಿನಧರ್ಮಸತ್ವವನ್ನು ತೋರಬೇಕೆನ್ನುವ ಮಹತ್ವಾಕಾಂಕ್ಷೆ ಅವನದಾಗಿರಬೇಕು. ಹೀಗಾಗಿ ಬಾಹುಬಲಿಯ ಭವ್ಯತೆಯನ್ನು ತಾನು ಬರೆದ ಪುರಾಣದಲ್ಲಿ ತೋರಬಯಸಿ ದಾಗ ತನ್ನ ಕಾವ್ಯ ಪ್ರಯತ್ನ 'ಪಂಪನ ಬಾಹುಬಲಿ'ಯ ಎತ್ತರಕ್ಕೆ ಏರದೇ ಹೋದದ್ದು ಕಸಿವಿಸಿ ಆಯಿತು. ಅಂತಾಗಿ ಪಂಪನ ಬಾಹುಬಲಿಯನ್ನು ಶಿಲ್ಪ ದಲ್ಲಾದರೂ ಮೀರಿಸಲು ಬಯಸಿದ. ಅದೃಷ್ಟವಾಗಿ ಅರಿಷ್ಟನೇಮಿ ದೊರೆತಿದ. ಆ ಭವ್ಯ ಬಾಹುಬಲಿ, ಚಾವುಂಡರಾಯನನ್ನು ಚಿರಸ್ಥಾಯಿ ಮಾಡಿದ. ಅರಿಷ್ಟನೇಮಿಯ ಮೂಲಕ ಚಾವುಂಡರಾಯ ಕೆತ್ತಿಸಿದ ಶಿಲ್ಪವಿಲ್ಲದಿದ್ದಲ್ಲಿ, ಕಾವ್ಯದ ಬಾಹುಬಲಿ ಆ ಎತ್ತರಕ್ಕೆ ಏರುತ್ತಿದ್ದನೆ ? ಕಾವ್ಯದಲ್ಲಿ ಸೋತ ಚಾವುಂಡರಾಯ ಶಿಲ್ಪದ ಮೂಲಕ ಗೆದ್ದ. ಅಲ್ಲದೆ ಗಂಗರಸರ ಜಿನಕನಸನ್ನು ನನಸಾಗಿಸಲು ಚಾವುಂಡರಾಯ ಸಂಕೇತ ವಾಗಿರಬೇಕು. ಇನ್ನೂ ವಿಕ್ರಮಾರ್ಜುನ ವಿಜಯದ ಅರ್ಜುನ ಈ ಬಾಹುಬಲಿಯ ಎತ್ತರಕ್ಕೆ ಏರಲಾಗಲಿಲ್ಲ ಅಲ್ಲವೆ ? ಹಾಗಿದ್ದಿದ್ದರೆ ಕುಮಾರವ್ಯಾಸನ ಕೃಷ್ಣನನ್ನು ಮೀರಿ ಜಿನಮಾನಸದಲ್ಲಿ ಆ ಅರ್ಜುನ ಪ್ರತಿಷ್ಠಿತನಾಗಬೇಕಿತ್ತು. ಈ ಹಿನ್ನೆಲೆಯಲ್ಲಿ ರತ್ನಾಕರವರ್ಣಿಯ ಭರತೇಶ, 'ಬಾಹುಬಲಿ'ಯನ್ನೂ ಮೀರಿ ಹೋಗಲಾಗದುದನ್ನು ಗಮನಿಸಬೇಕು. ಹಂಪನಾ ಅವರ 'ಗೊಮ್ಮಟ ಬಾಹುಬಲಿ' ಕೃತಿ ಈ ಕುರಿತೆಲ್ಲ ಮೌನವಾಗಿದೆ. ಓದುಗರ ಪರಿಶ್ರಮಕ್ಕೆ ಬಿಟ್ಟಿರುವಂತಿದೆ.

**ಭರತ-ಬಾಹುಬಲಿ ಪ್ರಾಚೀನತೆ**

ಎಲ್ಲೋರದ ಜೈನ ಗುಹಾಲಯದಲ್ಲಿ ಬಾಹುಬಲಿ ಶಿಲ್ಪವಿದೆ. ಕ್ರಿ. ಶ. ೮೯೮ ರಲ್ಲಿ ಶಾಂತರ ವಂಶದ ರಾಜ ವಿಕ್ರಮ ಹೊಂಬುಚದಲ್ಲಿ ಬೆಟ್ಟದ ಮೇಲೆ ಬಾಹುಬಲಿ

ದೇಗುಲ ಕಟ್ಟಿಸಿದ. ಎಂಟನೆಯ ಶತಮಾನದ ಪೇಲ್ಗುಡಿಯ ದೇಗುಲದಲ್ಲಿ ಚಾಳುಕ್ಯ, ರಾಷ್ಟ್ರಕೂಟ ಕಲಾಶೈಲಿಯ ದೇಗುಲ ಮಂಟಪದ ಗೋಡೆಯ ಮೇಲೆ ಬಾಹುಬಲಿಯ ನಾಲ್ಕು ಶಿಲ್ಪಗಳಿವೆ[1] ಅಂದರೆ ಶಿಲ್ಪದಲ್ಲಿ 'ಯಕ್ಷನ ಸ್ಥಾನ' ಪೊದಲಿನ ಬಾಹುಬಲಿಗೆ ಅರಿಷ್ಟನೇಮಿಯ 'ಬಾಹುಬಲಿ'ಯು ಬರುವ ಮುನ್ನ ಇದ್ದಿತೇ ಎಂಬ ಅನುಮಾನ ಕಾಡುತ್ತದೆ. ಅದೇನೇ ಇರಲಿ, ಪತ್ತನೇ ಶತಮಾನದ ಮುನ್ನ ಬಾಹುಬಲಿಯ ಪ್ರಸಿದ್ಧಿಯ ಮಟ್ಟ ಶಿಲ್ಪ ಸೌಷ್ಟವವನ್ನು ಮೇಲಿನ ಉದಾಹರಣೆಗಳೇ ಸ್ಪಷ್ಟಪಡಿಸುತ್ತವೆ. ಆದರೆ ೫-೬ನೇ ಶತಮಾನದ ಗುಡ್ನಾಪುರ ಶಾಸನದಲ್ಲಿ ಉಲ್ಲೇಖಿತವಿರುವ 'ಕಾಮಜಿನಾನಯ' ಬಾಹುಬಲಿಗಾಗಿ ನಿರ್ಮಿತವಾದ ದೇವಾಲಯ ಎಂದು ಊಹಿಸುವುದುಂಟು.[2] ಅಲ್ಲದೆ ಬಾಬುಬಲಿಯ ಆರಾಧನೆ ಶಿಲ್ಪನಿರ್ಮಾಣ ಆರಸೆಯ ಶತಮಾನದಲ್ಲಿ ಆರಂಭವಾಗಿತ್ತು ಎಂಬುದನ್ನು ಇದೇ ಹಿನ್ನೆಲೆಯಲ್ಲಿ ಹೇಳುವುದುಂಟು.[3] ಇದಕ್ಕೆ ಕಾರಣ, 'ಗೊಮ್ಮಟ' ಶಬ್ದಕ್ಕೆ 'ಮನ್ಮಥ'ನನ್ನು ಹೋಲೈಸಿಕೊಂಡಿರುವುದು. ಬಾಹುಬಲಿಯನ್ನು ಅವನ ಕಾಲದ ಕಾಮದೇವನೆಂದು ಪ್ರಚುರವಾಗಿದ್ದ ಎಂಬುದಕ್ಕೆ ಅಂಟಿಕೊಂಡಿರುವುದು. ಆದರೆ 'ಬಾಹುಬಲಿ' ಕುರಿತಂತೆ ಬಂದ ಚಿತ್ರಣಗಳನ್ನು ಗಮನಿಸಿದರೆ ಈ 'ಕಾಮಜಿನಾಲಯ' ಅವನಿಗೆ ಅನ್ವಯವಾದಂತೆ ತೋರದು. ಇದು ಆತನನ್ನು ಕುರಿತು ಧ್ಯಾನಿಸುವ ಯೋಗಮುದ್ರೆಯ ಖಡ್ಗಾಸನ ಬಾಹುಬಲಿಗೆ ಅನ್ವಯವಾಗುತ್ತದೆ ಎನ್ನುವುದಕ್ಕಿಂತ ಯೋಗಿ, ಭೋಗಿ ಭರತನಿಗೆ ಹತ್ತನೆಯ ಶತಮಾನದ ಪೂರ್ವದ ಭರತನ ಚಿತ್ರಣಕ್ಕೆ ಹೆಚ್ಚು ಅನ್ವಯವಾಗಬೇಕು. ಅಲ್ಲದೆ ಬಾಹುಬಲಿಯ ಭೋಗಜೀವನ ಚಿತ್ರಣ ಎಲ್ಲಿ ಉಲ್ಲೇಖವಾಗಿದೆ ? ಬಾಹುಬಲಿಯ ಕತೆಯು ಪೊದಲಿನ ಕಾವ್ಯಗಳಲ್ಲಿ ಬಂದಿರುವುದು ಭರತನ ಕತೆಗೆ ಆನುಷಂಗಿಕವಾಗಿ ಮಾತ್ರ.[4]

ಲೋಕಾಧಿಪತಿ ವೃಷಭದೇವರು ಭರತನಿಗೆ ನೀತಿಶಾಸ್ತ್ರ, ಸಂಗೀತಶಾಸ್ತ್ರ ಹೇಳಿದರೆ ಬಾಹುಬಲಿಗೆ ಕಾಮಶಾಸ್ತ್ರ, ಸ್ತ್ರೀಪುರುಷ ಲಕ್ಷಣ, ವೈದ್ಯಶಾಸ್ತ್ರವನ್ನ ಹೇಳಿದರು.[5]

1. ಹೆಚ್. ವಿ. ಶ್ರೀನಿವಾಸಮೂರ್ತಿ : 'ಕರ್ನಾಟಕ ಕಲೆ ಮತ್ತು ಶಿಲ್ಪದಲ್ಲಿ ಬಾಹುಬಲಿ', ಡಾ॥ ಜಿ. ಎಸ್. ಶಿವರುದ್ರಪ್ಪ (ಸಂ): ಶ್ರವಣಬೆಳಗೊಳ ಒಂದು ಸಮೀಕ್ಷೆ, ಬೆಂಗಳೂರು ವಿಶ್ವವಿದ್ಯಾಲಯ, 1983, ಪು. 46
2. ಹಂಪ. ನಾಗರಾಜಯ್ಯ : ಗೊಮ್ಮಟ ಬಾಹುಬಲಿ, ಬಾಪ್ಕೊ, ಬೆಂಗಳೂರು, 1981, ಪು. 31
3. ಅದೇ, ಪು. 31
4. ಡಾ॥ ಪಿ. ವಿ. ನಾರಾಯಣ: ಕನ್ನಡ ಕಾವ್ಯಪರಂಪರೆಯಲ್ಲಿ ಬಾಹುಬಲಿ, ಡಾ॥ ಜಿ.ಎಸ್. ಎಸ್. ಅದೇ, ಪು. 121
5. ಮಿರ್ಜಿ ಅಣ್ಣಾಜಿರಾಯ : ಮಹಾಪುರಾಣ ಸಾರ, ಸೇಡಬಾಳ, 1962, ಪೀಠಿಕೆ ಪು. 67

ಭರತೇಶ್ವರ ತನ್ನ ಸ್ತ್ರೀರತ್ನ ಸುಭದ್ರಾದೇವಿಯಲ್ಲಿ ಹತ್ತು ಪ್ರಕಾರವಾಗಿ ಹೇಳಲ್ಪಟ್ಟ ಸಾಧನಗಳಿಂದ ಕ್ರೀಡಿಸಿದನು. ತೃಪ್ತಿಯನ್ನುಂಟುಮಾಡುವ ಹತ್ತು ವಿಧವಾಗಿ ಭೋಗಾಂಗಗಳನ್ನು ಅನುಭವಿಸಿದ.[6] ಭರತ ಚಕ್ರೇಶ್ವರನು ಮೋಕ್ಷವೇ ಉತ್ತಮ ಫಲವಾಗಿರುವ ನಲವತ್ತೆಂಟು ದೀಕ್ಷಾನ್ವಯ ಕ್ರಿಯೆಗಳನ್ನು ದ್ವಿಜರಿಗೆ ಹೇಳಿದನು.[7] ಭರತನು ಮೊದಲು ಹೇಳಲ್ಪಟ್ಟ ಕ್ರಮಗಳ ಅನುಷ್ಠಾನ ಮಾಡುವುದಕ್ಕೋಸ್ಕರ ಮಂತ್ರರಚನೆಯನ್ನು ಹೇಳಿದನು.[8] ಜೊತೆಗೆ ಜೈನರ ಮಹಾಪುರಾಣದ ರೀತ್ಯ ವೃಷಭ ದೇವನ. ನಂತರ ಭರತ ಚಕ್ರವರ್ತಿಯದು ಅದ್ವಿತೀಯ ಸ್ಥಾನ, ಆದಿಪುರಾಣದಲ್ಲಿ. ಜೈನೇತರ ಪುರಾಣದಲ್ಲಿ, ಉಪನಿಷತ್ತುಗಳಲ್ಲಿಯೂ ಭರತನಿಗೆ ಮಹತ್ವದ ವ್ಯಕ್ತಿತ್ವ. ತ್ರಿಷಷ್ಠಿ ಶಲಾಕ ಪುರುಷರಲ್ಲಿಯೂ ಒಬ್ಬನಾಗಿದ್ದಾನೆ. ಒಂದು ಕಾಲಕ್ಕೆ ಭೋಗಜೀವನ ದಲ್ಲಿದ್ದು, ನೀಲಾಂಜನೆಯ ನೃತ್ಯದಿಂದ ವೃಷಭದೇವನಿಗೆ ವೈರಾಗ್ಯ ಬಂದು ಆತ್ಮ ಸಾಧನೆಗೆ ತೊಡಗಿದ. ಕೇವಲ ಜ್ಞಾನ ಪಡೆದ. ಹೀಗೆಯೇ ಭರತಕೂಟ ರಾಜ್ಯಭೋಗ ಗಳನ್ನು ಪಡೆದು ಕೊನೆಗೆ ತಪಸ್ಸನ್ನು ಆಚರಿಸಿ ಕೇವಲ ಜ್ಞಾನ ಹೊಂದಿ ಮುಕ್ತನಾದವ.[9] ಅದೇ ಬಾಹುಬಲಿಗೆ ಕಾಮಶಾಸ್ತ್ರವನ್ನ ಭೋಧಿಸಲ್ಪಟ್ಟರು ಇಂತಹ ಯಾವ ಭೋಗ ಸುಖಗಳಲ್ಲಿ ತೊಡಗಿದುದರ ಉಲ್ಲೇಖ ಕಾಣದು. ಯೋಗಕ್ಕೆ ಸೀಮಿತಗೊಂಡ ಬದುಕು ! ಅಲ್ಲದೆ ಭರತನೂ ಸ್ವುರದ್ರೂಪಿಯೆ ! ಅಂದರೆ ಜಿನತ್ವ ಹಾಗೂ ಭೋಗತ್ವ ಸಮನಿಸಿಕೊಂಡಿದ್ದವ ಭರತ.

ಈ ಹಿನ್ನೆಲೆಯಲ್ಲಿ ಹತ್ತನೆಯ ಶತಮಾನದ ಪೂರ್ವದಲ್ಲಿನ 'ಕಾಮಜಿನಾಲಯ' 'ಬಾಹುಬಲಿ'ಗೆ ಹಂಪನಾ ಅವರ ಸೂಚನೆಯನ್ನು ಅನ್ವಯವಾಗಿಸುವುದು ಸೂಕ್ತ ವಾಗದು ಎನ್ನಿಸುತ್ತದೆ. ಪುರಾಣದ ಮಹತ್ವವೂ ಭರತನಿಗಿದ್ದಷ್ಟು ಇರಲಿಲ್ಲ. ಇನ್ನು ಸ್ವತಃ ವೃಷಭದೇವರೇ ನೀತಿ, ಯೋಗ, ಸಂಹಿತೆ ಬಲ್ಲಿದರಾಗಿದ್ದಂತೆಯೇ ಕಾಮಶಾಸ್ತ್ರ ವನ್ನೂ ತಿಳಿದಿದ್ದವರು. ಅಂತಾಗಿ 'ಕಾಮ ಜಿನಾಲಯ' ಭರತನಿಗೆ ಅನ್ವಯವಾಗಿರ ಬೇಕು. ಅಥವಾ ಜೈನಪರಂಪರೆಯ ಭೋಗ–ಯೋಗ ಸಮನ್ವಯದ ಸಂಕೇತವಾಗಿ ನಿಂತಿದ್ದಿರಬೇಕು. ಕಾಮಜ್ಞಾನ ಬೋಧಿಸಲ್ಪಟ್ಟಿದ್ದರೂ 'ಕುಮಾರ ಬಾಹುಬಲಿ'ಯೇ ಆಗಿದ್ದ ಬಾಹುಬಲಿಗೇ ಅಂತಾಗಿ ಅನ್ವಯವೆನಿಸದು.

ಹತ್ತನೇ ಶತಮಾನದವರೆಗೆ 'ಬಾಹುಬಲಿ' ಎಂದು ಮಾತ್ರ ಬಳಕೆಯಲ್ಲಿದ್ದ ಹೆಸರು ಚಾವುಂಡರಾಯ. ಅರಿಷ್ಟನೇಮಿಯ ನಿರ್ಮಾಣ ಶಿಲ್ಪದೌನ್ನತ್ಯದ ಕಾರಣ 'ಗೊಮ್ಮಟ' ಎಂಬ ಹೆಸರು ವ್ಯಾಪಕವಾಗಿ ರೂಢಿಗೆ ಬಂದಿತು. 'ಔನ್ನತ್ಯದ'

---

5ಅ. ಮಿರ್ಜಿಅಣ್ಣಾಜಿರಾಯ : ಡಿ. ಎ. ಬೋಗಾರ, ಅದೇ, ಪು. 132
6. ಅದೇ, ಪು. 142
7. ಅದೇ, ಪು. 149
8. ಅದೇ, ಪೀಠಿಕೆ, ಪು. 14

ಅರ್ಥದಲ್ಲಿ ಮೂಡಿಬಂದ 'ಗೊಮ್ಮಟ' ಶಬ್ದಕ್ಕೆ 'ಮನ್ಮಥ' ಶಬ್ದದ ಸಾಮೀಪ್ಯದ ಕಾರಣ. ಬಾಹುಬಲಿಗೆ 'ಕಾಮ'ದೇವನನ್ನಾಗಿ ಆರೋಪಿಸುವುದು ಸೂಕ್ತವಾಗದು. ಅಂದರೆ 'ಕಾಮಜಿನಾಲಯ' ಗೊಮ್ಮಟ–ಮನ್ಮಥ ಶಬ್ದಗಳ ಕಾರಣ ಬಾಹುಬಲಿಗೆ ಆರೋಪಿಸುವ ನಿಷ್ಪತ್ತಿ ಮೂಡಿಬರದೆಂದಾಯಿತು. ಚಾವುಂಡರಾಯನಿಗೆ 'ಗೊಮ್ಮಟ' ಹೆಸರು ರೂಢಿಯಲ್ಲಿದ್ದುದು ಮೇಲಿನ ನಿರೂಪಣೆಗೂ ಇಂಬಾಗುತ್ತದೆ.

ಇನ್ನು 'ಬಾಹುಬಲಿ'ಯ ಭವ್ಯ ಮೂರ್ತಿ, ಗೊಮ್ಮಟೇಶ್ವರನಾಗಲು ಕಾರಣಗಳೂ ಸಾಕಷ್ಟಿದೆ. ಆದರೆ ಗೊಮ್ಮಟೇಶ್ವರನಲ್ಲಿ ಕೇವಲ 'ಈಶ್ವರ'= ಒಡೆಯ ಎನ್ನುವ ಅರ್ಥದಲ್ಲಿ ಮಾತ್ರ ನೋಡುವ ಪ್ರಯತ್ನವೂ ನಡೆದಿದೆ.[9] ಹಾಗಿದ್ದರೆ ಗೊಮ್ಮಟಸ್ವಾಮಿ, 'ಗೊಮ್ಮಟ ಪ್ರಭು' ಎಂಬುದೇ ಹೆಚ್ಚು ಬಳಕೆ ಆಗಬೇಕಿತ್ತು. ಶಿವನ ಪರ್ಯಾಯನಾಮ 'ಈಶ್ವರ' ಎಂದಿರುವ ಕಾರಣ ಶಿವಲಿಂಗವನ್ನು ಪ್ರತಿಷ್ಠಾಪಿಸಿದವರ ಹೆಸರಿನೊಡನೆ 'ಈಶ್ವರ' ಶಬ್ದ ಸೇರಿಕೊಂಡು ರೂಢಿಗೆ ಬರುತ್ತಿದ್ದುದು ಸಹಜವಾಗಿತ್ತು. ಅದೇ ವೈಷ್ಣವ ಪರಂಪರೆಯ ದೇವರುಗಳನ್ನು ಗಮನಿಸಿದರೆ 'ನಾರಾಯಣಸ್ವಾಮಿ', ಅಪ್ರಮೇಯಸ್ವಾಮಿ, 'ರಂಗನಾಥ' ಎಂಬ ಹೆಸರುಗಳೇ ಪ್ರಚಲಿತ, ಬದಲು 'ನಾರಾಯಣೇಶ್ವರ' ಹೆಸರು ಕೇಳಿಬರದು. ಆದ್ದರಿಂದ 'ಈಶ್ವರ' ಪದ ಕೇವಲ 'ಒಡೆಯ' ಸೂಚಕ ಪದವಾಗಿರದೆ 'ಶಿವಲಿಂಗ' ಸೂಚಕ ಪದವಾಗಿಯೇ ಹೆಚ್ಚು ಪ್ರಚಲಿತವಾಗಿದೆ. 'ಗೊಮ್ಮಟೇಶ್ವರ' ಶಬ್ದವೂ ಬಹುಶಃ ಗೊಮ್ಮಟನನ್ನು ಇಂದ್ರಗಿರಿಯ ಮೇಲೆ ಶಿವಲಿಂಗಾಕೃತಿಯ ಶಿಲಾಕೋಡಿನಿಂದ ಮೂಡಿಸಿದ ಕಾರಣ 'ಗೊಮ್ಮಟೇಶ್ವರ' ಹೆಸರು ಪ್ರಚಲಿತವಾಗಿರಬೇಕು.

ಶ್ರವಣಬೆಳಗೊಳದ ಜೈನ ಸ್ತ್ರೀ ಸಮಾಜದವರಿಂದ 1965ರಲ್ಲಿ ಪ್ರಕಟಗೊಂಡ ಲಾವಣಿಕಾರ ಸಂಜೀವಯ್ಯ ಬರೆದ 'ಬಾಹುಬಲಿ ಲಾವಣಿ'ಯಲ್ಲಿ ಶ್ರವಣಬೆಳಗೊಳದ ಗೊಮ್ಮಟೇಶ್ವರನನ್ನು ಕುರಿತಂತೆ, 'ಶಿವಸಾಯುಜ್ಯದ ಅರ್ಹಸ್ವರೂಪಿಯ ನೋಡಲು ಕಾಂತಿಯು ಲಭಿಸುವುದು ಎಂದಿದ್ದಾನೆ.[10] ಈ ಮಾತು ಗಮನಾರ್ಹ. ಅಲ್ಲದೆ ಚಾವುಂಡರಾಯ ಕಂಡ ಕನಸು ಹಾಗೂ ತಾಯಿ ಕಾಳಲಾದೇವಿ ಕಂಡ ಕನಸುಗಳಲ್ಲಿ ಯಕ್ಷಿಣಿಯರಾದ ಪದ್ಮಾವತಿ ಮತ್ತು ಕೂಷ್ಮಾಂಡಿನಿದೇವಿ ಇವರುಗಳು ಪ್ರತ್ಯಕ್ಷರಾಗಿ ಪೌಬನಪುರಕ್ಕೆ ಹೋದರೆ ಬಾಹುಬಲಿ ಮೂರ್ತಿಯ ದರ್ಶನವು ಗಿಡಗಂಟಿಗಳು ಆವರಿಸಿರುವ ಕಾರಣ ಸಾಧ್ಯವಾಗದು. ಇಂದ್ರಗಿರಿಯ ಗೊಮ್ಮಟಕ್ಕೆ ಬಾಣ ಹೊಡೆದರೆ

9 ಡಾ॥ ಪಿ. ವಿ. ನಾರಾಯಣ : 'ಕನ್ನಡ ಕಾವ್ಯ ಪರಂಪರೆಯಲ್ಲಿ ಬಾಹುಬಲಿ', ಡಾ॥ ಜಿ. ಎಸ್. ಶಿವರುದ್ರಪ್ಪ (ಸಂ) ಅದೇ, ಪುಟ. 122

10 ಡಾ॥ ಬಿ. ವಿ. ಶಿರೂರ : 'ಶ್ರವಣಬೆಳಗೊಳ ಮತ್ತು ಕನ್ನಡ ಕವಿಗಳು' ಡಾ॥ ಜಿ. ಎಸ್. ಎಸ್. (ಸಂ) ಅದೇ, ಪು. 84

ಬಾಹುಬಲಿಯು ಅಲ್ಲಿಯೇ ಪ್ರಕಟವಾಗುವುದೆಂದು ಹೇಳಿದರೆಂಬ ಲಿಖಿತ ಆಖ್ಯಾಯಿಕೆಗೆ ಇದೆ. ತದನುಗುಣವಾಗಿ ಚಾವುಂಡರಾಯನು ಇಂದ್ರಗಿರಿಯ ತುತ್ತತುದಿಗೆ ಗುರಿ ಇಟ್ಟು ಬಾಣವನ್ನು ಬಿಟ್ಟಾಗ ಅಲ್ಲಿ ಬಾಹುಬಲಿಯ ಮೂರ್ತಿ ತಲೆಯೂ ಪ್ರಕಟವಾಯಿತು. ನಂತರ ಚಾವುಂಡರಾಯ ಶಿಲ್ಪಿಗಳಿಂದ ಮೂರ್ತಿ ಕೆತ್ತಿಸಿ ಪ್ರತಿಷ್ಠಾಪಿಸಿದ[10ಅ] ಎಂಬುದು ಮೇಲಿನ ವಿವೇಚನೆಗೆ ಒತ್ತು ಕೊಡುತ್ತದೆ.

'ಜಿನೇಶ್ವರ' ಪದ ಪ್ರಯೋಗವು ಜೈನರು ನಾಗಕುಲದವರು,[11] ಎಂಬುದಕ್ಕೆ ಪೂರಕವಾಗಬಹುದು. 'ವೃಷಭ' ಪರಂಪರೆಯೂ ಶಿವನಿಂದಲೇ ಆರಂಭ. ಜಿನ ಧರ್ಮದ ಜಿನಮೂರ್ತಿಗಳ ಮೂಲ ಆಕೃತಿಗಳು ಸೈಂಧವ ಸಂಸ್ಕೃತಿಯ ಅವಶೇಷದಲ್ಲಿ ಸಿಗುತ್ತವೆ.[12] ಇಪ್ಪತ್ತುನಾಲ್ಕು ಜನರಲ್ಲಿ ಆದಿನಾಥ ಋಷಭ ತೀರ್ಥಂಕರ. ಆದಿನಾಥನ ಲಾಂಛನ 'ವೃಷಭ'. ಆದಿನಾಥ ವೃಷಭ ಕೈಲಾಸದಲ್ಲಿ ನಿರ್ವಾಣ ಹೊಂದಿದ. ಆತನ ಮಗ ಭರತನು ಋಷಭ ಮೂರ್ತಿಯನ್ನು ಪ್ರತಿಷ್ಠಿಸಿ ಗುಡಿ ಕಟ್ಟಿಸಿದ. ಋಷಭನಾಥನು ಪರಿನಿರ್ವಾಣ ಹೊಂದಿದ ಶಿವರಾತ್ರಿಯ ದಿನವು ಶೈವರಿಗೂ ಪವಿತ್ರವೆ.[13] ಶೈವರಿಗೂ ಜೈನರಿಗೂ ಬಹಳ ಮಟ್ಟಿಗೆ ಶಿವನ ಕಲ್ಪನೆಯಲ್ಲಿ ಒಮ್ಮತವಿದೆ. ಋಗ್ವೇದದಲ್ಲಿ ರುದ್ರನನ್ನು ಅನೇಕ ವೇಳೆ ವೃಷಭನೆಂದು ಕರೆಯಲಾಗಿದೆ. ಶೈವರಾದ ವ್ರಾತ್ಯರಲ್ಲಿ ಉತ್ತಮ ತರಗತಿಯವರಿಗೆ ಅರ್ಹಂತರೆಂದು ಹೆಸರು. ಜೈನರು ಮಹಾ ವೀರಾದಿ ಜಿನೇಶ್ವರರನ್ನು ಅರ್ಹಂತರು ಎನ್ನುವರು. ಋಷಭಮೂರ್ತಿಯ ಪೀಠದಲ್ಲಿ ಸಾಮಾನ್ಯವಾಗಿ ಕೆತ್ತಲ್ಪಡುವ ಲಾಂಛನವೇ 'ವೃಷಭ'. ಋಷಭನಾಥನು ಸಂಸಾರ ತ್ಯಜಿಸಿ ನಗ್ನನಾಗಿ ಚರಿಸುತ್ತಿದ್ದುದರಿಂದ 'ದಿಗಂಬರ ಮುನಿ' ಎಂಬ ಹೆಸರು ಬಂದಿತು. ಅದೇ ಹೆಸರು ಶಿವನಿಗೂ ಇರುವುದು ಗಮನಾರ್ಹ.[14] ಜೈನ ಶೈವ ಧರ್ಮಗಳ ಸಂಬಂಧ ಪುರಾತನ.[15] ಹಳೆಯ ತಮಿಳು ನಿಘಂಟು 'ದಿವಾಕರರ್', ಶೈವ ಜೈನರ ಹೊಂದಾಣಿಕೆಯನ್ನು ತೋರಿಸಿದೆ. ವೃಷಭದೇವ ಐದುಜನ ಗೋತ್ರಪುರುಷರಲ್ಲಿ ಒಬ್ಬ. ನಾಲ್ಕನೆಯ ಶಿವಾಚಾರ್ಯ. ಗೂಳಿ ಅಲ್ಲ, ಮಹಾಪಂಡಿತ, ಪ್ರತಿಭಾನ್ವಿತ, ಧಾರ್ಮಿಕ ಸಂತತಿಯ ಕರ್ತೃ. ರುದ್ರದೇವನ

---

10ಅ ಟಿ. ಕೆ. ತುಕೋಲ : 'ಶ್ರವಣಬೆಳಗೊಳ ಗೊಮ್ಮಟೇಶ್ವರ' ಡಾ॥ ಜಿ. ಎಸ್. ಎಸ್. (ಸಂ) ಅದೇ, ಪು. 137

11–12 ಪ್ರೊ॥ ಎಸ್. ಕೆ. ರಾಮಚಂದ್ರರಾವ್ : ಮೂರ್ತಿ ಶಿಲ್ಪ, ನೆಲೆ–ಹಿನ್ನೆಲೆ, ಬೆಂಗಳೂರು ಪು. 331

13 ಟಿ. ಎನ್. ಮಲ್ಲಪ್ಪ, ವೀರಶೈವ ಧರ್ಮದ ಉಗಮ ಮತ್ತು ಪ್ರಗತಿ ಪು. 98–99

14 ಟಿ. ಎನ್. ಮಲ್ಲಪ್ಪ. ಅದೇ ಪು. 98–99

15 K. A. Neelakantha Sastri Cultural Heritage of India. vol. 1-2

ಅವತಾರವೂ ಹೌದು. ವೃಷಭ ಎಂದರೆ ಧರ್ಮವನ್ನು ದೀಪ್ತಿಸುವಾತನು. 16 ಜೈನರಿಗೆ ಶೈವರಿಗೆ ತಿಷಷ್ಟಿ ಪುರಾತನರು ಪೂಜ್ಯರಾಗಲು ಕಾರಣವೂ ಹೀಗಿದೆ. ಅಂದರೆ ಸಿಂಧೂ ತೀರದ ರುದ್ರಗಣಂಗಳು ಮರುದ್ಗಣರಲ್ಲಿಯೇ 'ವೃಷಭ' ಮತ ಪ್ರಚಾರದಲ್ಲಿದ್ದಿರಬೇಕು. ವೀರಶೈವರಿಗೆ,—ಜೈನರಿಗೂ ಸಹ,—ಅರವತ್ತಮೂರು ಸಂಖ್ಯೆಯಲ್ಲಿ ಗೌರವವಿದೆ. ಪುರಾತನರನ್ನು ಗೌರವಿಸಲು ಆರಿಸಿಕೊಳ್ಳುವಾಗ ವೀರಶೈವರೂ ಶಲಾಕಾ ಪುರುಷರನ್ನು ಗೌರವಿಸಲು ಆರಿಸಿಕೊಳ್ಳುವಾಗ ಜೈನರೂ ಸಂಖ್ಯೆ ಅರವತ್ತಮೂರಕ್ಕೆ ಪ್ರಾಶಸ್ತ್ಯ ಕೊಟ್ಟಿದ್ದಾರೆ.16ಅ ಮರುದ್ಗಣವೇ ಯಜ್ಞ ವಿರೋಧಿ ವ್ರಾತ್ಯರು. ಈ ವ್ರಾತ್ಯರಲ್ಲಿಯೇ ಜಿನ ಮತ್ತು ಬುದ್ಧರು ಜನಿಸಿದರು ಎಂದು ಇತಿಹಾಸ ಸಂಶೋಧಕ ರಾಜವಾಡ ಅವರು ಬರೆದಿದ್ದಾರೆ.17 ಈ ಅಂಶಗಳಿಂದ 'ಗೊಮ್ಮಟೇಶ್ವರ' ಶಬ್ದಕ್ಕೆ ಶಿವನ ಸಂಬಂಧವೂ ಇದೆ ಎಂದು ಗೋಚರ ವಾಗುತ್ತದೆ. ಕೇವಲ 'ಒಡೆಯ' ಎಂಬ ಅರ್ಥದ ನಂಟು ಮಾತ್ರವೇ ಅದಕ್ಕಿಲ್ಲ.

ಕರ್ನಾಟಕಕ್ಕೆ ಜಗತ್ತು ಋಣಿಯಾದದ್ದು ಪುರಾಣದ ಬಾಹುಬಲಿಯಿಂದಲ್ಲ; ಪಂಪ ಹಾಗೂ ಅರಿಷ್ಟನೇಮಿಯ ಜೀವಂತ ಕಲಾಮೇರು ಬಾಹುಬಲಿಯಿಂದ, ಚಾವುಂಡರಾಯನ ಜಿನಮನದ ಕನಸಿನಿಂದ. ಒಂದು ಅಂಶ ಗಮನದಲ್ಲಿರಬೇಕು – ಬಾದಾಮಿ ಚಾಲುಕ್ಯರ ಕಾಲದ ಬಾಹುಬಲಿಯ ಮೊದಲ ಶಿಲ್ಪಗಳು ಲಭ್ಯವಾದರೂ ಕಾಯೋತ್ಸರ್ಗ ಭಾವವಿದ್ದರೂ ಪಂಪ ಅರಿಷ್ಟನೇಮಿ ಬರುವತನಕ ಭರತನ ಮೌಲ್ಯ ಕೆಳಗಿಳಿಯದಿರುವುದು ಕಾಣುತ್ತದೆ. ನಂತರ ರತ್ನಾಕರವರ್ಣಿಯ ಭರತೇಶ ಬಂದರೂ ಪಂಪ, ನೇಮಿಗಳ ಮರುಹುಟ್ಟು ಒದಗದೆ ಭರತ ಹಿಂದಕ್ಕೆ ನಿಂತ.

ಜೈನಧರ್ಮವು ಶಾಕ್ತಪಂಥ ಮತ್ತು ಹದಿನಾರು ವಿದ್ಯಾದೇವಿಯರ ಅಥವಾ ಮಹಾವಿದ್ಯರ ಪೂಜೆಯನ್ನು ಸಮೀಕರಿಸಿಕೊಂಡಮೇಲೆ ನಿಷ್ಠುರವಾದ ನಿಲುವಿಗೆ

---

16 ಡಾ॥ ಶ್ರೀ ಜ. ಚ. ನಿ : ಜಿಗುರಿಟ್ಟ ಚಿಂತನ, ಪು. 190

16ಅ ಟಿ. ಎನ್. ಮಲ್ಲಪ್ಪ, ಅದೇ, ಪು. 63, ಅಲ್ಲದೆ ಈ ಸಂದರ್ಭದಲ್ಲಿ ಒಂದು ಮಾತು : ವಿವಿಧ ನೆಲೆಗಳಲ್ಲಿ ಅರವತ್ತಮೂರು ಮಠಗಳ ಸ್ಥಾಪನೆ ಎನ್ನುವುದೂ, ಈ ಸಂಖ್ಯೆಯ ಮೇಲಿನ ಪ್ರಶಸ್ತಿ ಮೌಲ್ಯದ ಕಾರಣವೂ ಆಗಿರಬಹುದು. ಒಂದು ಕಾಲಕ್ಕೆ ಈ ಪುರಾತನರ ಹೆಸರಿನಲ್ಲಿಯೇ ಮೂಲ ಮಠಗಳು ಸ್ಥಾಪಿತವಾಗಿದ್ದಿರಬೇಕು. ಆ ಮಠಗಳ ಶಾಖೆಗಳಿಗಾಗಿ ಹದಿನಾರು ನಾಡುಗಳಲ್ಲಿ ಬೆಳೆದು ಸಾವಿರದೆಂಟು ಮಠಗಳ 'ಗುರು' ಜಗದ್ಗುರುತ್ವವನ್ನೂ ಪೋಷಿಸಿರಬೇಕು. ನಂತರ ವಿವಿಧ ಮಠಗಳ ಪ್ರಾಬಲ್ಯಕ್ಕನುಗುಣ ವಾಗಿ ಉಳಿದವು ಐಕ್ಯವಾಗಿರಬೇಕು ಅಥವಾ ಒಂದೊಂದು ಪೀಠದ ಶಾಖೆಗಳು 63 ಇರಬೇಕು ಎಂಬ ನಿಯಮವು ರೂಢಿಯಾಗಿ ನಂತರ ಮೂಡಿರಬೇಕು. ಜೈನ ಬಸದಿಗಳ ಸಂಖ್ಯೆಯಲ್ಲಿಯೂ ಈ ತತ್ವ ಅನ್ವಯವೇ ಎಂಬುದನ್ನು ಶೋಧಿಸಬೇಕು.

17 ಟಿ. ಎನ್. ಮಲ್ಲಪ್ಪ, ಅದೇ, ಪು. 103

ಬದಲಾಗಿ ಸುಲಭ ಸಂವೇದಿಯಾದ ನಿರೂಪಣೆಯತ್ತ ಜೈನ ಕಲಾಕಾರರು ವಾಲಿದರೆಂದು ಡಾ॥ ರಾಧಾಕಮಲ್ ಮುಖರ್ಜಿಯವರ ಅಭಿಪ್ರಾಯ.[18] ದೊಡ್ಡ ಬೆಟ್ಟವು ೪೭೦ ಅಡಿ ಎತ್ತರ ಅದರ ದುಂಡು ತುದಿಯ ಮೇಲೆ ಈ ಶಿಲ್ಪ ೫೭ ಅಡಿ ಏಕಶಿಲಾಮೂರ್ತಿ, ಮೂಲ ಬಂಡೆಯಿಂದ ಪ್ರತ್ಯೇಕಗೊಂಡಿದ್ದರೂ ಪೀಠದಿಂದ ಮೊಣಕಾಲುಗಳವರೆಗೆ ಹಿಂಭಾಗ ಹಾಗು ಪಾರ್ಶ್ವಗಳಲ್ಲಿ ಮೂಲಬಂಡೆಯ ಆಸರೆ ಯನ್ನೇ ಹೊಂದಿದೆ.[19] ಗೊಮ್ಮಟ ಶಿರದ ಅಂದದ ಭಾವಪೂರ್ಣ ಕೆತ್ತನೆ, ಗುಂಗುರು ಕೇಶ, ಗಮನಿಸಿದರೆ ಬುಡದಿಂದ ತುದಿವರೆಗೆ ಸುಮಾರು ೫೮–೬೦ ಅಡಿ ಎತ್ತರದ ಶಿಲಾಕೋಡು ಗೊಮ್ಮಟನಿಗೆ ರೂಪ ನೀಡಲು, ಪೌದನಪುರದತ್ತ ಲಿರ್ಜಾನ್ ಉತ್ತರಾಭಿಮುಖ ಕೆತ್ತನೆಗೆ ಅನುವಾಗಿದ್ದಿರಬೇಕು ಎನಿಸುತ್ತದೆ.

ಈ ಹಿನ್ನೆಲೆಯಲ್ಲಿ ಹಂಪನಾ ಅವರ ಕೃತಿ 'ಗೊಮ್ಮಟ ಬಾಹುಬಲಿ'ಯನ್ನು ಗಮನಿಸಿದಾಗ, ಅದು ಬಾಹುಬಲಿ ಪ್ರಶಸ್ತಿ ಕೃತಿ ಎನಿಸುವುದು ಸಹಜ. ಆದರೂ ಓದುಗರ ಚಿಂತನೆಗೆ ವೇದಿಕೆಯನ್ನು ತೆರೆದು ಇಟ್ಟಿದ್ದಾರೆ–ಎಂಬುದು ಸಮಾಧಾನದ ಅಂಶ. ಬಾಹುಬಲಿ ನಿಂತ ನೆಲೆಯಿಂದ 'ಪುರಾಣ, ಶಿಲ್ಪ, ಕಾವ್ಯ, ಭಕ್ತಿ' ಅಂಕಣಗಳಲ್ಲಿ ವಿಶ್ಲೇಷಿಸಿ ಒಳತಿರುಳಲ್ಲಿ ಬಾಹುಬಲಿ ಪ್ರಶಸ್ತ ಮಾಡಿದರೂ, ಅಂತ್ಯದಲ್ಲಿ ಭರತ ನಿಗಿಷ್ಟು ಅನುಕಂಪದ ಹಸಾದವಿತ್ತು, ಕಾವ್ಯದ ಅನಾದರದಂತೆ ಶಿಲ್ಪದ ಅನಾದರವೆಂಬ ಬಗ್ಗೆ ದನಿ ಮಾಡಿದ್ದಾರೆ. ಬಾಹುಬಲಿ ಕುರಿತಂತೆ ನಮ್ಮ ಗೌರವದ ಉದ್ದೀಪನೆ ವೃದ್ಧಿಂಗತವಾಗಿ ದಕ್ಕುವಂತೆ ನೋಡಿಕೊಂಡಿರುವುದೂ ಗಮನಾರ್ಹ.[20] ಬಾಹುಬಲಿ ಯತ್ತ ಅವರ ಒಲವಿನ ಲೇಪನ ವಜ್ರಗಾರೆಯದು. ಪ್ರಸಿದ್ಧಿಗೊಂಡ ಅತ್ಯುನ್ನತ ಭವ್ಯ ವ್ಯಕ್ತಿತ್ವಕ್ಕೆ ತಮ್ಮ ಆರಾಧನೆಯ ಸೊಂಪನ್ನೂ ಸೆಲೆಯಾಗಿ ಹರಿಸಿದ್ದಾರೆ. ಅಂತಾಗಿ ಕೃತಿಯ ಅಧ್ಯಾಯಗಳು ನಮ್ಮ ಮುಂದೆ ನಿಲ್ಲುವುದು ಹೀಗೆ :

18 ಹೆಚ್. ವಿ. ಶ್ರೀನಿವಾಸಮೂರ್ತಿ : ಕರ್ನಾಟಕದ ಕಲೆ ವತ್ತು ಶಿಲ್ಪದಲ್ಲಿ ಬಾಹುಬಲಿ, ಡಾ॥ ಜಿ. ಎಸ್. ಎಸ್. (ಸಂ) ಅದೇ, ಪು. 41

19 ಅದೇ, ಪು. 42

20 ಈ ಸಂದರ್ಭದಲ್ಲಿ ಒಂದು ಗಮನಾರ್ಹ ವಿವೇಚನೆಯನ್ನೂ ಅವಲೋಕಿಸಬೇಕು. ಡಾ॥ ಪಿ. ವಿ. ನಾರಾಯಣ 'ಕನ್ನಡ ಕಾವ್ಯ ಪರಂಪರೆಯಲ್ಲಿ ಬಾಹುಬಲಿ' (ಡಾ॥ ಜಿ. ಎಸ್. ಎಸ್. (ಸಂ) ಶ್ರವಣಬೆಳಗೊಳ ಒಂದು ಸಮೀಕ್ಷೆ, ಪು. 128)ಯ ಕುರಿತು ವಿವೇಚಿಸುತ್ತ ಹೇಳುತ್ತಾರೆ. ರತ್ನಾಕರವರ್ಣಿಯ ವೀರಶೈವಕ್ಕೆ ಹೋದದ್ದು ಭರತೇಶ ವೈಭವಕ್ಕೆ ಕುತ್ತಾಯಿತು. ಜೈನರಿಂದ ತಿರಸ್ಕರಿಸಲ್ಪಟ್ಟಿತು. ಅಂದರೆ ಭರತೇಶ ವೈಭವವನ್ನು ಜೈನರು ತಿರಸ್ಕರಿಸಿದ ಮೇಲೆ ರತ್ನಾಕರವರ್ಣಿ ವೀರಶೈವಕ್ಕೆ ಹೋದ. ಅದರಿಂದ ಜೈನರ ಕೋಪಕ್ಕೆ ಮತ್ತಷ್ಟು ಪಾತ್ರನಾದ. ಅಂದರೆ ಸಾಮಾಜಿಕ ತಿರಸ್ಕಾರದ ಕಾರಣ ಭರತೇಶ ವೈಭವದ ಭರತ ಕುಬ್ಜನಾದ. ಪುರಾಣದ ಬಲವೂ ಭರತನನ್ನು ಎತ್ತಿ ನಿಲ್ಲಿಸಲಿಲ್ಲ.

ಅಧ್ಯಾಯ ೧ರಲ್ಲಿ ಗೊಮ್ಮಟ ಜಿನನಿರುವ ಶಿಲ್ಪಕ್ಷೇತ್ರ ಪ್ರಾಮುಖ್ಯತೆ 'ಕಳ್ವಪ್ಪು'ನಿಂದ ಶ್ರವಣಬೆಳಗೊಳ ಆಗುವವರೆವಿಗೂ ಹೆಸರಿನ ಇತಿಹಾಸ,ನಿಷ್ಪತ್ತಿ,ಗುರುಪರಂಪರೆ ಕುರಿತಂತೆ ವಿವರವಾಗಿ ಬಣ್ಣಿಸಿದ್ದಾರೆ. ಜೈನ ಪುರಾಣಗಳಲ್ಲಿ ಬಾಹುಬಲಿಗೆ ಹತ್ತನೆಯ ಶತಮಾನದವರೆವಿಗೂ ಇದ್ದ 'ಬಾಹುಬಲಿ' ಹೆಸರನ್ನು ಹಿಂದೆ ಹಾಕಿ 'ಗೊಮ್ಮಟ' ಎಂಬ ಹೆಸರು ಜನಪ್ರಿಯವಾದ ಬಗ್ಗೆ ಹೇಳುತ್ತ ಆ ಕಾಲದ (ಮನ್ಮಥ) ಕಾಮದೇವ ನಾಗಿದ್ದ ಎಂಬ ಜೈನಪುರಾಣದ ವಿಷಯ ಪ್ರಸ್ತಾಪಿಸಿದ್ದಾರೆ. ಆದರೆ ಈ 'ಮನ್ಮಥ' ಶಬ್ದಕ್ಕೆ ಸಮಾಂತರ ಸಂವೇದಿ ಎಂದು 'ಗೊಮ್ಮಟ' ಶಬ್ದವನ್ನು ಅನ್ವಯ ಮಾಡಿರುವುದಕ್ಕೆ ಸಾಕಷ್ಟು ಸಮರ್ಥನೆ ಬೇಕು ಎನಿಸುತ್ತದೆ. ಕಾರಣ ಆದಿತೀರ್ಥಂಕರ ವೃಷಭ ದೇವನಿಗೆ, ಶ್ವೇತಾಂಬರ ಸಂಪ್ರದಾಯದ 'ಭರತ' ನಿಗೆ ಅನ್ವಯವಾಗಿದ್ದಿರಬಹುದು ಎಂಬುದರ ವಿವೇಚನೆಯನ್ನು ನಡೆಸಬೇಕಿತ್ತು ಎನಿಸುತ್ತದೆ. ಪಂಪ ಚಿತ್ರಿಸಿದ್ದು 'ಬಾಹುಬಲಿ ಕುಮಾರ' ನನ್ನಲ್ಲವೆ ! ಅಂದರೆ ದಿಗಂಬರ ಸಂಪ್ರದಾಯದಲ್ಲಿ 'ಕಾಮದೇವ' ಅಂಶಕ್ಕೆ ಒತ್ತು ಲಘುವಾಗಿರಬೇಕಲ್ಲವೆ ? !

ಅಧ್ಯಾಯ ೨ರಲ್ಲಿ ಜೈನ ಪುರಾಣಗಳಲ್ಲಿ ಚಿತ್ರಿತವಾಗಿರುವ ಆದಿದೇವ ವೃಷಭದೇವ ಸಂತತಿಯಪುತ್ರನಾದಬಾಹುಬಲಿಯಸಂಬಂಧಗಳನ್ನು ಚೊಕ್ಕವಾಗಿ ತಿಳಿಸುವ ಕತೆಯನ್ನು ಸಂಗ್ರಾಹ್ಯವಾಗಿ ಹೇಳಿದ್ದಾರೆ. ಅಲ್ಲಿ ಬರುವ ವಾಕ್ಯವೊಂದು ಹೀಗಿದೆ:"ಭರತಚಕ್ರವರ್ತಿಗೆ ಎರಡು ಮಂಗಳಕಾರ್ಯಗಳು ಏಕಕಾಲದಲ್ಲಿ ಉಂಟಾದುವು : ಪುತ್ರರತ್ನ ಜನನ ಮತ್ತು ಆಯುಧಾಗಾರದಲ್ಲಿ ಚಕ್ರರತ್ನದ ಉದ್ಭವ, ಚಕ್ರರತ್ನ ಉದ್ಭವ ಎಂದರೆ ಚಕ್ರವರ್ತಿ ದಿಗ್ವಿಜಯಕ್ಕೆ ಹೊರಡಬೇಕೆಂಬುದಕ್ಕೆ ಸಂಕೇತ" ಈ ಸಂಗತಿಯ ವಿವೇಚನೆ ತುಸು ಅಗತ್ಯವಿತ್ತು ಎನಿಸುತ್ತದೆ. ನಡೆದಿರುವುದು ಮಂಗಳಕಾರ್ಯ, ಪೌರಾಣಿಕ ಸಮ್ಮತಿಯಂತೆಯೂ ಚಕ್ರವರ್ತಿ ದಿಗ್ವಿಜಯಕ್ಕೆ ತಯಾರಾಗಬೇಕಿರುವುದೂ ಆಗಿದೆ. ಅಂದಮೇಲೆ ಈ ಅಂಶ ಬಾಹುಬಲಿಗೆ ಮನನವಾಗಬೇಕಿತ್ತಲ್ಲವೆ ? ಹೀಗಿದ್ದೂ ಚಕ್ರರತ್ನ ಸ್ಥಾನಕ್ಕೆ ಬಾಹುಬಲಿ ಕಾರಣನಾದದ್ದು ಭರತನ ಅಹಂಕಾರವನ್ನ ತಪ್ಪಿಸಲೆಂದಿದ್ದರೂ ಅದರ ಮನವರಿಕೆಯನ್ನು ಬಾಹುಬಲಿ ಮಾಡಿಕೊಡಲು ಯುದ್ಧಕ್ಕೆ ಸಿದ್ಧನಾದದ್ದು ಏಕೆ ? ಮಾನವ ಸಹಜ ಯುವ ಪ್ರವೃತ್ತಿ 'ದುಡುಕು' ಅಲ್ಲದೆ ಮಲತಾಯಿಯ ಪುತ್ರತ್ವವೂ ಕಾರಣವಾಗಿತ್ತೇ ಎಂಬ ಅನುಮಾನಗಳ ಪರಿಹಾರದ ವಿವೇಚನೆ ಇಲ್ಲಿ ಬೇಕಿತ್ತು. ಅಲ್ಲದೆ ತಪದೊಳ್ ನಿಂದು ನಿನ್ನ ನೆಲದೊಳ್‌ನಿಂದನೆಂಬ ಮನೆ ಕಷಾಯದ ಬಾಹುಬಲಿಯ ಯುದ್ಧಾನಂತರದ ಅತೀವ ಸಾಧುತ್ವಕ್ಕೆ ಬಾಗಿದ ಭರತ ಚಕ್ರವರ್ತಿ ತಮ್ಮನಿಗೆ ಮುಕ್ತಿದೊರೆಯದಿರುವುದಕ್ಕೆ ವ್ಯಥಿತನಾಗಿ ವೃಷಭಸ್ವಾಮಿಯನ್ನು ಕೇಳುವಲ್ಲಿ 'ಕಾಲ್ಗೆರಗಲೊಡಂ ಕೇವಲ . . . ಜ್ಞಾನಮುಕ್ಕುಂ' ಎಂದು ಆದೇಶಿತನಾದ. ಭರತ ಹಾಗೆಯೇ ನಡೆದುಕೊಂಡ. ಭರತಚಕ್ರಿಗೆ ತಮ್ಮನ ಕುರಿತ ಕಳಕಳಿ ಎಷ್ಟೊಂದು ಉಜ್ವಲವಾದುದು ಎಂದು ಮನತಟ್ಟುತ್ತದೆ. ಇಂತಹ ವ್ಯಕ್ತಿತ್ವಗಳ ಲೌಕಿಕ ಭಾವಗಳ ನಡುವೆ ಓದುಗನಿದ್ದಾಗ, ಪಂಪನಾ ಉಲ್ಲೇಖಿಸಿರುವ ವಿವರಗಳು ಭರತಚಕ್ರವರ್ತಿಯ

ದಿಗ್ವಿಜಯ, ಚಕ್ರರತ್ನದ ಅಸ್ಖಲಿತತೆಗೆ ಬಾಹುಬಲಿಯ ಪ್ರತಿಭಟನೆ, ಸಂಧಿ ಪ್ರಸ್ತಾಪ ಯುದ್ಧದ ಅನಿವಾರ್ಯತೆ ಧರ್ಮಯುದ್ಧದ ಅವಶ್ಯಕತೆ, ಚಕ್ರಪ್ರಯೋಗ, ಬಾಹುಬಲಿ ದೀಕ್ಷೆ ಕುರಿತಂತೆ ಪುರಾಣಕೃತಿಗಳ ಅಭಿವ್ಯಕ್ತಿಯನ್ನು ಮೂಡಿಸಿದ ಚಿತ್ರ ಮಾತ್ರ ಕಾಣಿಸುತ್ತದೆ.

ಅಧ್ಯಾಯ ೩ರಲ್ಲಿ ಗೊಮ್ಮಟಮೂರ್ತಿಯ ಶಿಲ್ಪ ಪರಂಪರೆಯನ್ನು ಗುರುತಿಸುತ್ತ ಗುಮ್ನಾಪುರ ಶಾಸನದಲ್ಲಿ ಬರುವ ಕಾಮಜಿನಾಲಯದ ಪ್ರಸ್ತಾಪ ಮಾಡಿದ್ದಾರೆ ಬಾಹುಬಲಿಯ ಆರಾಧನೆಯನ್ನು ಪ್ರಾಚೀನ ಕರ್ನಾಟಕಕ್ಕೆ ಸಂಬಂಧಿಸಿದಂತೆ ಗುರುತಿಸುತ್ತ ತಮ್ಮ ಅಭಿಪ್ರಾಯಗಳನ್ನು ಹಂಪನಾ ಮಂಡಿಸಿದ್ದಾರೆ. ಆದರೆ ಅದು ತೆಳುನೋಟವಾದಂತಿದೆ. ಹತ್ತನೆಯ ಶತಮಾನದಲ್ಲಿ ಬಾಹುಬಲಿಯ ಶಿಲ್ಪದಲ್ಲಿ ಆದ ಬದಲಾವಣೆಗಳನ್ನು ಸೂಕ್ಷ್ಮವಾಗಿ ಹಂಪನಾ ಅವರು ಗ್ರಹಿಸಿದ್ದರೂ ಭರತ-ಬಾಹುಬಲಿ ಶಿಲ್ಪಗಳ ಮೂಲ ವ್ಯತ್ಯಾಸದ ತೌಲನಿಕ ವಿವೇಚನೆಯನ್ನು ಮಾಡಬೇಕಿತ್ತು, ದೊಡ್ಡ ಬೆಟ್ಟದ ಮೇಲೆ 'ಬಾಹುಬಲಿ' ಮೂರ್ತಿ ಕಂಡರಣೆ ಆದ ಬಗ್ಗೆ ಅಗತ್ಯವಿದ್ದ ಅನೇಕ ಪ್ರಶ್ನೆಗಳತ್ತ ಗಮನ ಸೆಳೆದಿಲ್ಲ. ಆದರೆ ಬಾಹುಬಲಿ ಮೂರ್ತಿಯ ಶಿಲ್ಪವಿವರಗಳನ್ನು ನೀಡುತ್ತ ಕುರಿತ ಕಾವ್ಯದ ಭಾಗಗಳನ್ನು ಸಂಪಾದಿಸಿದ್ದಾರೆ. ಜೊತೆಗೆ ಕರ್ನಾಟಕದ ವಿವಿದ ಎಡೆಗಳಲ್ಲಿ ಉದಾ; ನೆಪ್ಪೂರು, ಕಾರ್ಕಳ, ವೇಣೂರು, ಧರ್ಮಸ್ಥಳ, ಹೊಸಕೋಟೆ-ಮುಂತಾದ ಕಡೆಗಳಲ್ಲಿನ ಬಾಹುಬಲಿಯ ಪ್ರತಿಷ್ಠಾ ವಿವರಗಳನ್ನು ಸ್ಥೂಲವಾಗಿ ನೀಡಿದ್ದಾರೆ. ಅಲ್ಲದೆ ಮೈಸೂರಿನಿಂದ ಸುದೂರದ ಶ್ರಮಣಗುಡ್ಡ ಗೊಮ್ಮಟಗಿರಿಕ್ಷೇತ್ರದ ೧೮ ಅಡಿ ಎತ್ತರದ ಬಾಹುಬಲಿಯನ್ನು ಬಹುಶಃ ಈ ಭಾಗದಲ್ಲಿ ಆಳುತ್ತಿದ್ದ ಚೆಂಗಾಳ್ವ ಮನೆತನದವರು ೧೨ ಅಥವಾ ೧೩ನೆಯ ಶತಮಾನದ ಹೊಯ್ಸಳರ ಕಾಲದಲ್ಲಿ ಪ್ರತಿಷ್ಠಾಪಿಸಿರಬಹುದು ಎಂದಿದ್ದಾರೆ. ಆದರೆ ಚೆಂಗಾಳ್ವರು ೧೨ನೆಯ ಶತಮಾನದಲ್ಲಿ ಚೋಳರ ಮಾಂಡಲಿಕರಾಗಿದ್ದರು ಹಾಗೂ ಕ್ರಿ. ಶ. ೧೨೪೫ರ ಸುಮಾರಿನಲ್ಲಿ ವೀರಶೈವಧರ್ಮವನ್ನು ಅವಲಂಬಿಸಿದರು.20 ಅ ೧೧ನೆಯ ಶತಮಾನದಲ್ಲಿಯೇ ವೀರಶೈವಧರ್ಮವನ್ನು ಅವಲಂಬಿದರು ಎಂಬ ವಾದವೂ ಇದೆ. ಅಂದಮೇಲೆ ಹೊಸ ಧರ್ಮವನ್ನವಲಂಬಿಸಿದ ಹುರುಪಿನಲ್ಲಿ ಜಿನಮೂರ್ತಿಯನ್ನು ಸ್ಥಾಪಿಸುವ ಕಾಳಜಿ ಇತ್ತು ಎನ್ನುವುದನ್ನು ಒಪ್ಪಲು ಕಷ್ಟವಾಗುತ್ತದೆ. ಇಲ್ಲವೆಂದರೆ ಕೊಡಗಿನ ಭಾಗದಲ್ಲಿದ್ದ ಚೆಂಗಾಳ್ವರು ಮಾತ್ರ ವೀರಶೈವರಾಗಿ, ಮೈಸೂರಿನ ಭಾಗದವರು ಜೈನರಾಗಿಯೇ ಉಳಿದು ಮೇಲಿನ ಜಿನಪ್ರತಿಷ್ಠೆಗೆ ಮುಂದಾದರು ಎಂಬ ಬಗ್ಗೆ ನಿಖರತೆ ಇಲ್ಲ. ಹಾಗೆ ನೋಡಿದರೆ ಸಂಜರಾಯ ಪಟ್ಟಣದಲ್ಲಿ ಶಿಥಿಲವಾಗಿ ಬಿದ್ದಿರುವ ಆಸೀನ ಜಿನಬಿಂಬ ಚೆಂಗಾಳ್ವರ ಮೊದಲಿನ ರಚನೆಯೆ ಆಗಿರಬಹುದು.

---

20ಅ : Gazetteer of india, Mysore State. Coorg Dt. 1965, p 48

ಧರ್ಮಸ್ಥಳದ ೫೨ ಅಡಿ ಎತ್ತರದ ಮೂರ್ತಿಯ ನಿರ್ಮಾಣಕಾರ್ಯ ೧೯೬೭ ರಲ್ಲಿ ಆರಂಭವಾಗಿ ಎಲ್ಲ ತಾಂತ್ರಿಕ ಸೌಲಭ್ಯವಿದ್ದೂ ೧೯೭೩ರಲ್ಲಿ ಆರು ವರ್ಷಗಳ ಅವಧಿ ಪೂರೈಸಿದೆ. ಆದರೆ ಬೆಳಗೊಳದ ಈ ಭವ್ಯಗೊಮ್ಮಟ ೯೭೮–೯೮೧ ರ ಅವಧಿಯಲ್ಲಿ ಪೂರೈಸಿತು ಎನ್ನುವುದನ್ನೂ ನಂಬುವುದು ಕಷ್ಟ. ಚಾವುಂಡರಾಯನಿಗೆ ಬಾಹುಬಲಿ ಶಿಲ್ಪ ಪೂರ್ಣವಾಗುವವರಿವಿಗೂ ಉಲ್ಲೇಖ ಮಾಡಬಾರದೆಂಬ ಸಂಕಲ್ಪ ವಿದ್ದಿರಬೇಕು. ಅರಿಷ್ಟನೇಮಿಯಂತಹ ಶಿಲ್ಪಿಯ ಶರತ್ತೂ ಹಾಗಿದ್ದಿರಬೇಕು. ಅಲ್ಲದೆ ನಿರ್ಮಾಣ ಕಾರ್ಯ ೯೮೩ ರವರೆಗೂ ಎಳೆದು ಹೋಗಿರಬೇಕು. ಅರ್ಥಾತ್ ನಿರ್ಮಾಣಕಾರ್ಯಕ್ಕೆ ಸಾಕಷ್ಟು ಕಾಲ ತಗುಲಿದ್ದರೂ ಪ್ರತಿಷ್ಠಾಪನ ಕಾರ್ಯ ೯೮೧ ರಿಂದ ೯೮೩ ರ ಅವಧಿಯಲ್ಲಿ ನಡೆದಿರುವುದೇ ಸೂಕ್ತವೆನಿಸುತ್ತದೆ. ಹಂಪನಾ ಅವರು ಈ ದಿಸೆಯಲ್ಲಿ ಹೆಚ್ಚು ವಿವರಗಳನ್ನು ನೀಡಿ ವಿವೇಚನೆ ನಡೆಸಿದ್ದಿದ್ದರೆ ಚೆನ್ನಿತ್ತು. ಇನ್ನು ರನ್ನ ಚಾವುಂಡರಾಯ ಪುರಾಣದ ಕರ್ತೃವಾಗಿದ್ದರೆ ಶಿಲ್ಪ ನಿರ್ಮಾಣ ಕಾರ್ಯದ ಉಲ್ಲೇಖ ಮರೆತ ಕಾರಣವೂ ತಿಳಿಯದಾಗುತ್ತದೆ.

ಅಧ್ಯಾಯ ೪ ರಲ್ಲಿ ಗಂಗರ ದೊರೆ ರಾಚಮಲ್ಲನ ಮಹಾಸೇನಾನಿ ಕವಿ, ಕಲಿ, ಮೇಧಾವಿ, ಧರ್ಮಪರಾಯಣ, ಮಾತೃಭಕ್ತ ಪ್ರಭು ವಿಶ್ವಾಸಿ ಚಾವುಂಡರಾಯನ ವ್ಯಕ್ತಿತ್ವದ ಎಳೆ ಬಿಡಿಸುತ್ತ ಅವನು 'ಗೊಮ್ಮಟ ಮೂರ್ತಿ'ಯನ್ನು ಮೂಡಿಸಿದ ಬಗ್ಗೆ ಪ್ರಸ್ತಾಪಿಸಿದ್ದಾರೆ. ಅವನ ಜೀವಿತ ಕಾಲ ಕ್ರಿ. ಶ. ೯೩೦–೯೯೦ ರ ಅವಧಿಯಲ್ಲಿ 'ಲೌಕಿಕಕ್ಕೆ ಅಲೌಕಿಕವನ್ನೂ ಜೀವನದಲ್ಲಿ ಮೇಳೈಸಿದ' ಅವನ ಬದುಕಿನ ಮಾದರಿ ಹುಟ್ಟು, ಮನೆತನ ಮಾತೆ, ಸತಿ ಅವರುಗಳ ಉಲ್ಲೇಖ ಮಾಡಿದ್ದಾರೆ, ಚಾವುಂಡ ರಾಯನನ್ನು ಸ್ತುತಿಸಿರುವ ಕವಿಗಳ ಕಾವ್ಯ, ರಚಿತವಾದ ಚಾವುಂಡರಾಯ ಪುರಾಣದ ಪದ್ಯ ಸಹಿತ ನೀಡಿದ್ದಾರೆ. ಸಮ್ಯಕ್ತ್ವ ರತ್ನಾಕರ ಶ್ರೀ ಮಚ್ಚಾವುಂಡರಾಜನಿಗೆ ಕ್ಷತ್ರಿಯ ಮಂಡಲಿಯಲ್ಲಿದ್ದ ಪ್ರತಿಷ್ಠಿತ ಸ್ಥಾನವನ್ನೂ ನಮ್ಮ ಮನಸ್ಸಿಗೆ ತಟ್ಟುವಂತಹ ಪದ್ಯಗಳ ಮೂಲಕ ಔಚಿತ್ಯ ಪೂರ್ಣವಾಗಿ ಸೋದಾಹರಿಸಿದ್ದಾರೆ. ಇನ್ನೂ ಬಾಹುಬಲಿ ಶಿಲ್ಪ ನಿರ್ಮಾಣದ ಬಗ್ಗೆ ಚಾವುಂಡರಾಯ ಪುರಾಣದಲ್ಲಿ ಚಕಾರವಿಲ್ಲದಿದ್ದರೂ ಬಾಹುಬಲಿ ಕುರಿತಂತೆ ಆರಾಧನೆ ಇದೆಯಲ್ಲ! ಅಲ್ಲದೆ ರನ್ನ ಗೆಳೆಯ ಚಾವುಂಡರಾಯನಿಗಾಗಿ ಚಾವುಂಡರಾಯಪುರಾಣ ಬರೆದು ಕೊಟ್ಟಿದ್ದ ಎನ್ನುವುದಾದರೆ 'ಬಾಹುಬಲಿ' ಚಿತ್ರಣದಲ್ಲಿ 'ರನ್ನವಂತಿಕೆ' ಕಾವ್ಯದಲ್ಲಿ ಪಕೆ ಮೂಡಿಬರಲಿಲ್ಲ ಎಂಬ ಪ್ರಶ್ನೆಯ ಜೊತೆಗೆ ಬಾಹುಬಲಿ ಕುರಿತಂತೆ ಚಾವುಂಡರಾಯನಿಗಿದ್ದ ಭಕ್ತಿ-ಅಭಿಮಾನಗಳ ತನ್ಮಯತೆ ಅವನಿಗಿರಲಿಲ್ಲವೆ ? ಎಂಬ ಅನುಮಾನಕ್ಕೂ ಕಾರಣವಾಗುತ್ತದೆ. ಹಂಪನಾ ಈ ವಿವೇಚನೆಯತ್ತ ಆಲೋಚಿಸಿಲ್ಲವೆನ್ನುವಂತಿದೆ.

ಅಧ್ಯಾಯ ೫ ರಲ್ಲಿ ಹಳಗನ್ನಡ ಕವಿಗಳು ಕಂಡ ಬಾಹುಬಲಿಯ ಚಿತ್ರಣಗಳ ಉಲ್ಲೇಖ ನೀಡಿದ್ದಾರೆ. ಆದರೆ ಈ ಸಾಲಿನಲ್ಲಿ ಮುಂದೆ ಬಂದ ಬೊಪ್ಪಣ ಪಂಡಿತನ 'ಗೊಮ್ಮಟ ಜಿನಸ್ತುತಿ'ಯ 'ಅತಿ ತುಂಗಾ ಕೃತಿಯಾದ ಈ 'ವಿಳಸತ್ ಪ್ರತಿಷ್ಠೆ'ಯಲ್ಲಿ

ವಿವರಗಳ ಪದ್ಯಗಳ ಉಲ್ಲೇಖ ಸಮುಚಿತವಾಗಿದೆ. ಭರತೇಶ ವೈಭವ ಇದನ್ನು ಮೀರಿ ನಿಲ್ಲಲಾಗದೆ ಜಿನಮಾನಸದಲ್ಲಿ ತುಂಬಿ ಬರಲಾಗಲಿಲ್ಲ. ಇದಲ್ಲದೆ ಚಿಕ್ಕಣ್ಣ ಪಂಡಿತ, ಪಂಚಬಾಣಕವಿ, ಚಂದ್ರಮಕವಿ-ಮುಂತಾದವರು ಕಾವ್ಯದ ವಿವಿಧ ಛಂದಸ್ಸು ಪ್ರಕಾರಗಳಲ್ಲಿ ರಚಿಸಿದ ಸಾಲುಗಳನ್ನು ಓದುಗರಿಗೆ ಒದಗಿಸಿಕೊಟ್ಟಿರುವುದು ಬಾಹುಬಲಿ ಕುರಿತು ಬಂದ ಕಾವ್ಯ ಪ್ರಮಾಣದ ಸಾಕ್ಷಿ ಹಾಗು ಅಗತ್ಯ ಔಚಿತ್ಯವಾಗಿದೆ.

ಅಧ್ಯಾಯ ೬ ರಲ್ಲಿ ಹೊಸಗನ್ನಡ ಕವಿಗಳು ಬಾಹುಬಲಿಯ ಭವ್ಯತೆಗೆ ಸ್ಪಂದಿಸಿದ ಕಾವ್ಯದ ಸಾಲುಗಳು ಚೊಕ್ಕವಾಗಿ ಸೋದಾಹರಣವಾಗಿವೆ. 'ಗೊಮ್ಮಟ' ಭಾವ ಅವರಲ್ಲಿ ದಟ್ಟವಾಗಿ ಮೂಡಿರುವುದು ಗಣನೀಯವಾಗಿ ಗೋಚರಿಸುತ್ತದೆ. ಗೋವಿಂದಪೈ ಅವರ 'ಶ್ರೀ ಗೊಮ್ಮಟ ಜಿನಸ್ತುತಿ'ಯ ಕುವೆಂಪು ಅವರ ಗೊಮ್ಮಟ ಮೂರ್ತಿ ಕುರಿತ ಕವಿತೆಗಳಲ್ಲಿ ಬೌದ್ಧಿಕ ರಸಾವೇಶದ ಸುಂದರ ಲಲಿತ ಗಂಭೀರ ಸಾಲುಗಳು 'ಗೊಮ್ಮಟ'ನ ಭವ್ಯತೆಯನ್ನು ಎತ್ತಿ ತೋರುತ್ತವೆ. ಡಿ. ವಿ. ಜಿ ಅವರ ಭಾರತ ಸಂಸ್ಕೃತಿಯ ಅಂತಸತ್ತ್ವದ ಮೂರ್ತಿ ಬಾಹುಬಲಿ ಕುರಿತ ಪದ್ಯಗಳು ನಮ್ಮ ಮುಂದೆ ಕಂಗೊಳಿಸುತ್ತವೆ. ಇವುಗಳು ನಮ್ಮ ಎದೆಯಲ್ಲಿ ಬಾಹುಬಲಿಯ 'ಭಾವಗೊಮ್ಮಟ' ಶಿಲ್ಪವನ್ನು ಕಡೆಯುವುದರಲ್ಲಿ ಸಾರ್ಥಕವಾಗಿವೆ. ಜಿ. ಪಿ. ರಾಜ ರತ್ನಂ ಅವರ'ಶ್ರೀ ಬಾಹುಬಲಿ ವಿಜಯಂ' ನಾಟಕ ಕುರಿತಂತೆ ಡಾ॥ ಪ್ರ. ತಿ. ನ ಬರೆದ ವಿಮರ್ಶೆಯ ಸಾಲುಗಳು ನಾಟಕದ ಪ್ರಭಾವ, ಪಾತ್ರದ ಸೊಬಗಿನ ಚಿತ್ರಣವನ್ನು ತುಂಬಿ ಕೊಡುವುದು ಢಾಳವಾಗಿ ಕಾಣುತ್ತದೆ. ಹತ್ತನೆಯ ಶತಮಾನದ ಗೊಮ್ಮಟ ಪ್ರಭಾವದಿಂದಾದ ಪರಿಣಾಮಗಳ ದಿಕ್ಸೂಚಿ ಇದು. ಹಂಪನಾ ಅವರು ಈ ತಮ್ಮ ಗೊಮ್ಮಟ ಪ್ರಶಸ್ತಿ ಕೃತಿಯಲ್ಲಿ ನಿಲುವಿಗೆ ಅನುಗುಣವಾಗಿ ಓದುಗರ ಮನಸ್ಸಿನ ತುಂಬ ಗೊಮ್ಮಟನನ್ನ ನಿಲ್ಲಿಸಿದ್ದಾರೆ. ಆದರೆ ಭರತ, ಬಾಹುಬಲಿಗಳ ಕುರಿತಂತೆ ಉಲ್ಲೇಖಿಸಿರುವ ಗಮನಾರ್ಹ ಸಾಲುಗಳು ಎಚ್ಚರದ ಸಂಕೇತವಾಗಿ ವಿಚಾರವಂತರ ಹಾಗು ಕಾವ್ಯ ಕುತೂಹಲಿಗಳಿಗೆ ಉಣಬಡಿಸಿರುವ ನಿವೇದನವೂ ಆಗಿದೆ:

"ಉದಾತ್ತವಾದ ವ್ಯಕ್ತಿಗಳು ಈ ಅಣ್ಣ ತಮ್ಮಂದಿರು, ಅಣ್ಣನ ಅಹಂಕಾರ ತಮ್ಮನಿಂದ ನಿರಸನವಾಗುತ್ತದೆ. ತಮ್ಮನ ಮನ ಕಷಾಯ ಅಣ್ಣನಿಂದ ತೊಲಗುತ್ತದೆ, ಒಬ್ಬನಿಂದ ಮತ್ತೊಬ್ಬ ಪರಿಶೋಭಿತವಾಗಿ ಇಬ್ಬರೂ ಜ್ಞಾನಿಗಳಾಗಿ ಸುಖವನ್ನು ಪಡೆಯುತ್ತಾರೆ."

ಪೌರಾಣಿಕವಾಗಿ, ಧಾರ್ಮಿಕವಾಗಿ ಪರಂಪರೆಯಲ್ಲಿ ಹಾಗು ಕಾವ್ಯಗಳಲ್ಲಿ ಈ ಭವ್ಯ ವ್ಯಕ್ತಿಗಳ ಬಗ್ಗೆ ಇರುವ ಪರಿಕಲ್ಪಿತಗಳನ್ನ ಗುರುತಿಸಿ ಒಂದು ಸುಂದರ ತೋಲನ ವನ್ನ ನೀಡಿದ್ದಾರೆ ಎಂಬ ಆಶಯ ನಮ್ಮಲ್ಲಿ ಹುಟ್ಟುವ ಅವಸರದಲ್ಲಿ ವೈಚಾರಿಕ ಎಳೆಯೊಂದು ಸದ್ದಿಲ್ಲದೆ ಮುಂದೆ ನಿಲ್ಲುತ್ತದೆ.

ಪಂಪ, ಚಾವುಂಡರಾಯರ ಸಾಲಿನಲ್ಲಿ ಹಂಪನಾ ಕೂಡ ಬಾಹುಬಲಿಯ ಪರ ಪಕಾಲತ್ತನ್ನು ವಹಿಸಿರುವುದು ಸಹಜವಿರಬಹುದು. ರತ್ನಾಕರವರ್ಣಿಯ ಭರತೇಶ

ಇಂಥಾ ಕಾವ್ಯವನ್ನು ಸಂಪಾದಿಸಿ-ಸಂಗ್ರಹಿಸಿ ಅದಕ್ಕೆ ವಿಪುಲವಾದ ಪೀಠಿಕೆಯನ್ನು ಡಾ॥ ಹಂಪನಾ ಅವರು ಬರೆದಿದ್ದಾರೆ. ಅದರಲ್ಲಿ ಮಂಗರಸನ ಎಲ್ಲಾ ಕೃತಿಗಳ ವೈಚಿತ್ರ್ಯ ಅಗತ್ಯ ಕಾಣದಿರಬಹುದು. ಆದರೆ 'ಭರತ'ನ ಕುರಿತು ಹೇಳುವಲ್ಲಿ ಹಂಪನಾ ಅವರಿಗೆ ದಟ್ಟ ಅನುಕಂಪವಿದೆ, ಅವಿಚ್ಛಿನ್ನ ಆತ್ಮೀಯತೆ ಇಲ್ಲ.

ಅಧ್ಯಾಯ ೭ರಲ್ಲಿ 'ಭರತ'ನ ಬಗ್ಗೆ ಅನುಕಂಪ ಮಾತ್ರ ಮೂಡುವಂತೆ ವಿಮರ್ಶಾ ಕೈಂಕರ್ಯ ಹಾಗು ಉದಾಹರಣೆಗಳನ್ನು ಸೀಮಿತಗೊಳಿಸಿಬಿಟ್ಟಿದ್ದಾರೆ. ದೊಡ್ಡ ಬೆಟ್ಟ ಮತ್ತು ಚಿಕ್ಕ ಬೆಟ್ಟಗಳಲ್ಲಿನ ಲಭ್ಯ ಭರತನ ಶಿಲ್ಪಗಳ ಕುರಿತು ಸಂಶೋಧಿತ ವಿವರಗಳನ್ನು ನೀಡಿದ್ದರೆ ಘನವಾಗುತ್ತಿತ್ತು. 'ದಿಗಂಬರ' ಸಂಪ್ರದಾಯದ ಪತಾಕೆಯ ಏರುವೆತ್ತರದಲ್ಲಿ ಅವರ ವಿಹಂಗಮ ನೋಟ ಕೇಂದ್ರೀಸೃತವಾಗಿ ಬಿಟ್ಟಿದೆ. ಅಂತಾಗಿ 'ಗೊಮ್ಮಟ ಬಾಹುಬಲಿ' ಗೊಮ್ಮಟ ಪ್ರಶಸ್ತಿಯ ವರ್ಣನೆಯಾಗಿಬಿಟ್ಟಿದೆ. ಕೃತಿಯ ಶೀರ್ಷಿಕೆಯೂ 'ಗೊಮ್ಮಟ ಬಾಹುಬಲಿ' ತಾನೆ!

ಈ ನಡುವೆ ಒಂದು ಮಾತು. ಬಾಹುಬಲಿ ತನ್ನ ಅವಿನಯವನ್ನು ಒಪ್ಪಿ ತಾನು ಸಹಜ ಮಾನವನೆಂದು ತೋರಿಕೊಂಡ. ಎಂತಹ ಸಂತನಿರಲಿ, ಮಹಂತನಿರಲಿ ಬಿಡದ ಸ್ವಭಾವವಿದು. ಸಂಭವಿಸಿದ ಒಂದು ಅವಿನಯಕ್ಕೆ ಬಾಹುಬಲಿ ನಿಂತ ಪ್ರತಿಮಾಯೋಗ ಚಿರಂತನ ಅಂದ ಮೇಲೆ ಜಗತ್ತಿನ ಅವಿನಯಗಳು ತೊಲಗಲು ಏಸೊಂದು ತಪ ಬೇಕು ? ಹಾಗಾಗಿ ಜಗತ್ತಿನ ಜೀವಿಗಳಲ್ಲಿ ಅವಿನಯ ತವಿದುಕೊಳ್ಳುವವರ ಧೀಮಂತ ಪ್ರತಿನಿಧಿಯಾಗಿ ಬಾಹುಬಲಿ ಚಿರಂತನ ನಿಂತನೆ ? ದುರ್ಬಲರ ಸಹಜ ದೋಷ ಪರಿಹಾರಕ್ಕೆ ಬಾಹುಬಲಿ ಪ್ರತೀಕವಾಗಿ ನಿಂತನೆ ? ಹಾಗಾಗಿ ಲೇಸ ಬಯಸುವವರ ಸಾಲಿನಲ್ಲಿ ಮುಂದಾಳು ಬಾಹುಬಲಿ. ಲೋಕದ ಕಷ್ಟನೆಲ್ಲ ಬಗೆಹರಿಸುವ ದೇವರಕಷ್ಟ ಕಂಡು ಎದೆಯು ಕಂಬನಿ ಹರಿಸುವ ಪು.ತಿ.ನ 'ಆರ್ದ್ರ'ನಾಗಿ ಈ ಬಾಹುಬಲಿಯನ್ನ ಕಂಡಾಗ ನೆನಪಿಗೆ ಬರುತ್ತಾನೆ. ಒಂದು ರೀತಿಯಲ್ಲಿ ಗೆದ್ದ ಬಾಹುಬಲಿ ವಿರಕ್ತನಾಗಿ ಬಾಗಿದ. ಅಪಮಾನದಿಂದ ಸೋತ ಭರತ ಚಕ್ರವರ್ತಿ ವೃಷಭ ಪ್ರೇರಿತ ಅರಿವಿನಿಂದಾಗಿ ಮೇಲೇರಿದ. ಇದೇನೇ ಇರಲಿ 'ಗೊಮ್ಮಟ ಬಾಹುಬಲಿ'ಯ ಚಿತ್ರವು ಓದುಗರ ಮುಂದೆ ದಟ್ಟವಾಗಿ ನಿಲ್ಲುವಂತೆ ಮಾಡುವ ಪ್ರಯತ್ನ ಹಂಪನಾ ಅವರದು. ಈ ಕೃತಿ ಅವರ ಕಡೆಯಿಂದ ರೂಪುಗೊಂಡ ಒಂದು ಸಂಕೃತಿ ಜಿನಸಂಸ್ಕೃತಿಯ ಸುಪುಷ್ಟ ಕೃತಿ.

ಸರಿತಾ ಜ್ಞಾನಾನಂದ

## ಜಯನೃಪ ಕಾವ್ಯ ಸಂಗ್ರಹ

ಜನ್ನನ ಜಾಣ್, ಮಧುರನ್ ಮಾಧುರ್ಯಂ, ರನ್ನನ ರಸಿಕತ್ವಂ ಗುಣವರ್ಮನ ಬಿನ್ನಾಣಂ, ಶ್ರೀವಿಜಯನ ಬಗೆ, ಸುಜನೋತ್ತಂಸನ ರೀತಿ,ಪೊನ್ನನ ಹೊಸದೇಸೆಯ ನುಡಿ,ನೇಮಿಯ ಕನ್ನಡದೊಳ್ಪು, ಅಭಿನವ ಪಂಪನ ಬಗೆಯನ್ನೀ ಪೇಳ್ದ ಕೃತಿ'ಜಯನೃಪ ಕಾವ್ಯ'. ಇದರ ಕರ್ತೃ ಮೂರನೆಯ ಮಂಗರಸ ಕವಿ. ಈತನ ಆರು ಕಾವ್ಯಗಳಲ್ಲಿ ಜಯನೃಪ ಕಾವ್ಯವೂ ಒಂದು. ಇತರ ಕಾವ್ಯಗಳು- ಸಮ್ಯಕ್ತ್ವ ಕೌಮುದಿ (ವಾರ್ಧಕ ಷಟ್ಪದಿ-೭೮೫ ಪದ್ಯಗಳು), ಶ್ರೀಪಾಲಚರಿತೆ (ಸಾಂಗತ್ಯ-೧೫00 ಪದ್ಯಗಳು), ಜಯನೃಪ ಕಾವ್ಯ (ಪರಿವರ್ಧಿನಿ ಷಟ್ಪದಿ-೧೧೪೫), ನೇಮಿಜಿನೇಶಸಂಗತಿ (ಸಾಂಗತ್ಯ-೫೦೩೫), ಸೂಪಶಾಸ್ತ್ರ (ವಾರ್ಧಕ ಷಟ್ಪದಿ-೪೫೦) ಮತ್ತು ಪ್ರಭಂಜನ ಚರಿತೆ(ಸಾಂಗತ್ಯ-೬೦೬)ಹಲವು ಶಾಸನಗಳಲ್ಲಿ ದೇವಾಲಯ, ಕೆರೆ ಇತ್ಯಾದಿಗಳನ್ನು ನಿರ್ಮಿಸಿ ಜನರಿಗೆ ಉಪಕಾರಿ ಎಂದು ಖ್ಯಾತನಾಗಿದ್ದ ಕವಿಯು ಕಲಹಳ್ಳಿಯ ಮಹಾಪ್ರಭೂ ವಿಜಯ ಭೂವಧೂ ವಲ್ಲಭನ ತನುಜಾತ ಜಿನಪದಾಂಬುಜ ಭೃಂಗನೆಲ್ಲಕಲೆಯಲ್ಲಿ ಬಲ್ಲಿದನು ಮಂಗರಸ ಎಂದು ತನ್ನ ಬಗ್ಗೆ ಸಮ್ಯಕ್ತ್ವ ಕೌಮುದಿಯಲ್ಲಿ ಹೇಳಿದ್ದಾನೆ.ಈತ ಎಲ್ಲ ಕಲೆಯಲ್ಲೂ ಬಲ್ಲಿದನೇ ಆಗಿರಬೇಕು. ಏಕೆಂದರೆ ಸೂಪಶಾಸ್ತ್ರವೂ ಈತನ ಕೃತಿ. ಪಾಕಶಾಸ್ತ್ರದ ಈ ಕೃತಿಯು ಅನೇಕ ಅಚ್ಚ ಕನ್ನಡಪದಗಳಿಗೆ ಆಕರವಾಗಿದೆ. ಕಥೆ ಹೇಳುವ ಕಲೆಯಲ್ಲಂತು ನಿಸ್ಸೀಮ. ತಾಲೊಳಗಯಿದಾರೆಯ ಸಕ್ಕರೆಯಂ ಓತೋದೆವೆರಸುವ ತೆಱದಿಂ ನವ ರಸ ರೀತಿ ವಡೆದ ಸಕ್ಕದದೊಳು ಕನ್ನಡವಾತಂ ಸಮ್ಮಿಶ್ರ ಬೆರೆಸಿ ಸೊಗಸಾಗಿ ಕಥೆ ಹೇಳುತ್ತಾನೆ. ಹುಟ್ಟು, ಸಾವು ಮತ್ತೆ ಮರುಹುಟ್ಟು ಸಾವುಗಳೆಂಬ ಜನ್ಮಾಂತರದ ಭವಾವಳಿಯ ಕಥೆ ಈತನ ಕಾವ್ಯದಲ್ಲಿ ಕಮನೀಯವಾಗಿದೆ.

ಮಂಗರಸನ ಎಲ್ಲಾ ಕಾವ್ಯಗಳಿಗೂ ಮಹಾಪುರಾಣವೇ ಆಧಾರ. ಅದರ ಕಥೆಯನ್ನೇ ವಿಸ್ತರಿಸಿ, ಗೌಣ ಪಾತ್ರಗಳನ್ನು ಪ್ರಧಾನ ಪಾತ್ರಗಳನ್ನಾಗಿ ಮಾಡಿ ಮೂಲದ ಕಿರು ತೊರೆಯನ್ನು ಹೆದ್ದೊರೆಯಾಗಿಸಿದ್ದಾನೆ.

ಹದಿನಾರು ಸಂಧಿಗಳ ಈ ಕಾವ್ಯವು ಇತರ ಜೈನ ಕಾವ್ಯಗಳಂತೆ ಪಂಚ ಪರಮೇಷ್ಟಿಗಳ ಪ್ರಾರ್ಥನೆ, ಪೂರ್ವಕವಿ ಪ್ರಶಂಸೆ, ಸ್ವಕೀಯ ವಿವರಣೆ ನೀಡಿದ ನಂತರ ಮಹಾರಾಜ ಜಯಕುಮಾರ ಆತನ ರಾಣಿ ನಾಗದೇವ ಆತನ ಪತ್ನಿಯರ ವೃಷಭ ದೇವನ ಭವಾವಳಿಯ ಕಥೆಗಳನ್ನು ರಮ್ಯವಾಗಿ ಚಿತ್ರಿಸಿದ್ದಾನೆ.

ಜಯಕುಮಾರ ಆದಿತೀರ್ಥಂಕರರ ಕಾಲದ ಒಬ್ಬ ಮಹಾಶೂರನಾದ ದೊರೆ. ನೃಪಶಾರ್ದೂಲವಾಗಿದ್ದವನು. ಭರತ ಚಕ್ರವರ್ತಿಯ ದಿಗ್ವಿಜಯ ಕಾಲದಲ್ಲಿ ವೀರ ಪಟ್ಟವನ್ನು ಕಟ್ಟಿಸಿಕೊಂಡು ತನ್ನ ಸಾಹಸವನ್ನು ತೋರಿದವನು. ಮೇಘಸ್ವರ, ಮೇಘ ನಾದ ಎಂಬ ಬಿರುದುಗಳಿಂದ ಮೆರೆದವನು. ಭರತೇಶ ಇವನ ಬಗ್ಗೆ 'ನನಗೆ ಪ್ರಾಪ್ತ ವಾದ ಚಕ್ರವರ್ತಿ ಪದವಿ ಜಯಕುಮಾರನ ಪರಾಕ್ರಮದಿಂದ ಬಂದುದೇ ಹೊರತು ಚಕ್ರದಿಂದಾಗಲೀ ಸೈನ್ಯದಿಂದಾಗಲೀ ಪಕ್ಕೀಂದಾಗಲೀ ನನ್ನಿಂದಾಗಲೀ ಅಲ್ಲ' ಎಂದು ಕೊಂಡಾಡಿದ್ದಾನೆ. ಪ್ರಥಮ ತೀರ್ಥಂಕರ ಗಣಧರರಲ್ಲಿ ಜಯಕುಮಾರನೂ ಒಬ್ಬ. ಅಷ್ಟೇ ಅಲ್ಲದೆ ಸ್ವಯಂವರ ಪದ್ಧತಿಯಲ್ಲಿ ವಿವಾಹ ಮಾಡಿಕೊಂಡವರಲ್ಲಿ ಜಯಕುಮಾರ ಮೊದಲನೆಯವನು.

ಬಾಣನು ಕಾದಂಬರಿಯಲ್ಲಿ ಬಳಸಿಕೊಂಡಿರುವ ತಂತ್ರ ಇಲ್ಲೂ ಬಳಸಲಾಗಿದೆ. ಅದರೊಂದಿಗೆ ಕತೆಗಾರಿಕೆ, ಶೈಲಿ ಮತ್ತು ವರ್ಣನೆಗಳು ಕಾವ್ಯದ ಜೀವನಾಡಿಗಳಾಗಿ ಮಿಡಿದಿವೆ. ಕಾವ್ಯದಲ್ಲಿ ನಿರಂತರವಾಗಿ ಹದವರಿತ ಸಂಸ್ಕೃತ-ಕನ್ನಡಗಳ ಜೋಡಣೆ ಕಾಣಿಸುತ್ತದೆ. ಮನೋಜ್ಞವೂ ಮಧುರವೂ ಆದ ಶೈಲಿ, ಗಾದೆಗಳೂ ನಾಣ್ಣುಡಿ ಗಳೂ ವಿಪುಲವಾಗಿ ಬಳಸಿಕೊಂಡು ಕಾವ್ಯಪ್ರವಾಹ ಹರಿಸುವ ಗಾರುಡಿಗ ಕವಿ. ಯುದ್ಧ, ಪ್ರಕೃತಿ, ಪ್ರಾಣಿ-ಪಕ್ಷಿಗಳನ್ನು ತುಂಬಾ ಸಹಜವಾಗಿ ಹಾಗೂ ಆತ್ಮೀಯವಾಗಿ ಬಣ್ಣಿಸಿದ್ದಾನೆ. ಉಪಮಾನ ಉಪಮೇಯಗಳಿಗೂ ಕೊರತೆಯೇ ಇಲ್ಲ-

> ತಾವರೆಯಲರಂ ತರುಣಾಶೋಕದ
> ಪೂವಂ ಕನ್ನೆಯ್ದಿಲ ಬಿರ್ ಮುಗುಳಂ
> ಮಾವಿನ ನನೆಯುಂ ಮಲ್ಲಿಗೆಯುರಲಂ ಪದಕಿಟ್ಟ ಅಗಿದನು।
> ಅವರ್ಗೆಯಾ ಹವದೊಳಗಣ್ಮದೆ
> ಭಾವೋದ್ಭವ ನೈಗಣೆಗಳ ನೊಪ್ಪಿಸಿ
> ಯಾವಸಿರಿದ ಭೀರುತೆಯುಂ ಬಂದು ಪದಕ್ಕೆ ಆಗುವತೆ ಅಡಿ।

ಪ್ರಾಸ ಬದ್ಧವಾದ ಛಂದೋಲಯ, ವಿಪುಲ ಪದಕೋಶದಿಂದ ತುಂಬಿದ ಕಾವ್ಯ ಶೋಭಾಯಮಾನವಾಗುತ್ತದೆ.

ಇಣುಕು ನೋಟ ದೊರೆಯುತ್ತದೆ. ಕವಿಯ ಕಾಲವನ್ನು ನಿಷ್ಕರ್ಷೆ ಮಾಡಲು ಹಲವು ಆಕರಗಳನ್ನು, ಆಧಾರಗಳನ್ನು ಕೊಟ್ಟಿದ್ದಾರೆ. ಅವನ ಕಾಲ ಸುಮಾರು ೧೫ನೆಯ ಶತಮಾನ ಎಂದು ತೀರ್ಮಾನಿಸಿದ್ದಾರೆ. ಕವಿಯ ವಂಶವೃಕ್ಷವನ್ನು ಡಾ॥ ಹಂಪನಾ ಅವರು ಇತರ ಕಾವ್ಯಗಳಲ್ಲಿ ದೊರೆಯುವ ಆಧಾರಗಳಿಂದ ರಚಿಸಿದ್ದಾರೆ.

೧೧೪೫ ಪದ್ಯಗಳಲ್ಲಿ ವಿಪುಲವಾಗಿ ವಿವರಿಸಲ್ಪಟ್ಟಿರುವ ಕಾವ್ಯವನ್ನು ಕೇವಲ ೨೩೬ ಪದ್ಯಗಳಲ್ಲಿ ಸಂಗ್ರಹಿಸಿ ನೀಡಿರುವುದರೊಂದಿಗೆ ಸಂಪಾದಕರು ಅಷ್ಟೇ ಚೊಕ್ಕವಾಗಿ ಜಯಕುಮಾರನ ಕಥೆಯನ್ನು ತುಂಬ ಸಂಗ್ರಹವಾಗಿ ಹೇಳಿದ್ದಾರೆ. ಅವರದೇ ಮಾತಿನಲ್ಲಿ ಕಥಾಸಾರ ಇಂತಿದೆ:

ಕುರುಜಂಗಾಲವೆಂಬ ದೇಶ. ಅದರಲ್ಲಿ ಹಸ್ತಿನವೆಂಬ ಪಟ್ಟಣ. ಆ ಪಟ್ಟಣಕ್ಕೆ ಸೋಮಪ್ರಭ ದೊರೆ. ಲಕ್ಷ್ಮೀಮತಿ ಅವನ ರಾಣಿ. ಇವರಿಗೆ ಜಯ, ವಿಜಯ ಇತ್ಯಾದಿ ಹದಿನಾಲ್ಕು ಮಂದಿ ಪುತ್ರರು. ಸೋಮಪ್ರಭ ವೈರಾಗ್ಯಪರನಾಗಿ ಹಿರಿಯನಾದ ಜಯಕುಮಾರನಿಗೆ ರಾಜ್ಯವನ್ನೊಪ್ಪಿಸಿ ದೀಕ್ಷೆ ಪಡೆದನು. ಶೀಲಗುಪ್ತರೆಂಬ ಮುನಿಗಳಿಂದ ಧರ್ಮಬೋಧನೆಯನ್ನು ಜಯಕುಮಾರನು ಕೇಳುತ್ತಿದ್ದಾಗ ಎರಡು ಹಾವುಗಳು ಈ ಧರ್ಮಭೋಧನೆಯನ್ನು ಕೇಳಿದವು. ಮುಂದೆ ಸಿಡಿಲ ಹೊಡೆತಕ್ಕೆ ಗಂಡು ನಾಗ ಸತ್ತಾಗಿ ನಾಗದೇವನಾದನು. ಹೆಣ್ಣು ಹಾವು ಬೇರೊಂದು ನಾಗನೊಡನೆ ಇದ್ದುದ್ದು ನೋಡಿ ಜಯಕುಮಾರ ಕೋಪದಿಂದ ಕೈಯಲ್ಲಿದ್ದ ನೀಲಕಮಲದಿಂದ ಹೊಡೆದನು. ಈ ಸದ್ದಿಗೆ ಬೆದರಿ ಓಡಿದ ಹಾವುಗಳು ಆಳುಗಳ ಕೈಗೆ ಸಿಕ್ಕಿ ಹತವಾದವು. ಹೆಣ್ಣು ಹಾವು ಪಶ್ಚಾತ್ತಾಪದಿಂದ ತನ್ನ ಮೊದಲ ಗಂಡನ ಹೆಂಡತಿಯಾಗಿ ಹುಟ್ಟಿ ಜಯ ಕುಮಾರನಿಂದ ತನಗಾದ ತೊಂದರೆಯನ್ನು ತಿಳಿಸಿದಳು. ನಾಗದೇವನು ಜಯಕುಮಾರ ನನ್ನು ಶಿಕ್ಷಿಸಬೇಕೆಂದು ಹೋದಾಗ ತನ್ನ ಮಡದಿ ಶ್ರೀದೇವಿಗೆ ಜಯಕುಮಾರ ಹೆಣ್ಣು ಹಾವಿನ ನಡತೆ ವಿವರಿಸುತ್ತಿದ್ದ. ಅದನ್ನು ಕೇಳಿ ನಾಗದೇವ ಕೃತಜ್ಞತೆಯಿಂದ ಸಂಪ್ರೀತ ನಾಗಿ ಕಷ್ಟಕಾಲದಲ್ಲಿ ತನ್ನನ್ನು ಸ್ಮರಿಸಿಕೊಂಡರೆ ನೆರವಾಗುವುದಾಗಿ ಹೇಳಿ ತೆರಳಿದನು.

ಕಾಶಿ ಎಂಬ ದೇಶದಲ್ಲಿ ವಾರಣಾಸಿ ಎಂಬ ನಗರ. ಅಕಂಪನ ಅದರ ಅರಸ; ಸುಪ್ರಭೆ ಅರಸಿ, ಅವರಿಗೆ ಹೇಮಾಂಗದ ಮುಂತಾದ ಸಾವಿರ ಮಂದಿ ಮಕ್ಕಳು. ಸುಲೋಚನಾ ಮತ್ತು ಲಕ್ಷ್ಮೀಮತಿ ಎಂಬ ಇಬ್ಬರು ಪುತ್ರಿಯರು. ಮಂತ್ರಿಯ ಸಲಹೆಯಂತೆ ಅಕಂಪನ ತನ್ನ ಮಗಳಾದ ಸುಲೋಚನೆಯ ಸ್ವಯಂವರವನ್ನು ಏರ್ಪಡಿಸಿದ, ಅನೇಕ ರಾಜಮಹಾರಾಜರುಗಳಲ್ಲಿ ಮನ್ಮಥಾಕಾರನಾಗಿದ್ದ ಜಯಕುಮಾರನನ್ನು ಮೆಚ್ಚಿ ಮದುವೆಯ ಮಾಲೆಯನ್ನು ಹಾಕಿ ವರಿಸಿದಳು. ದುರ್ಮರ್ಷನೆಂಬ ದುಷ್ಟದೊರೆ ಇದರಿಂದ ಮತ್ಸರಗ್ರಸ್ತನಾಗಿ ಭರತಚಕ್ರೇಶನ ಮಗನಾದ ಅರ್ಕಕೀರ್ತಿಯನ್ನು ಪ್ರಚೋದಿಸಿ ಅಕಂಪನನ ಮೇಲೆ ಯುದ್ಧಕ್ಕೆ ಸಜ್ಜುಗೊಳಿಸಿದ. ಚಕ್ರವರ್ತಿಯ ಮಗ ಚತುರಂಗ ಬಲದೊಂದಿಗೆ

ಬಂದಾಗ ಅಕಂಪನ ಗಾಬರಿಗೊಂಡ. ಜಯಕುಮಾರ ಸಂತೈಸಿ ತಾನೇ ತನ್ನ ತಮ್ಮಂದಿರೊಂದಿಗೆ ಸೈನ್ಯವನ್ನು ರಣರಂಗಕ್ಕೆ ಕರೆದೊಯ್ದು.

ರಣಭೂಮಿಯಲ್ಲಿ ನಾಗದೇವನು ಪ್ರತ್ಯಕ್ಷನಾಗಿ ಅರ್ಧಚಂದ್ರ ಮತ್ತು ನಾಗಪಾಶ ಎಂಬ ಎರಡು ಅಸ್ತ್ರಗಳನ್ನು ಕೊಟ್ಟು ಹೋದ. ಅವನ್ನು ಬಳಸಿ ಜಯಕುಮಾರನು ಅರ್ಕಕೀರ್ತಿಯನ್ನು ವಿರಥನಾಗಿಸಿ, ಬಂಧಿಸಿಕೊಂಡು ಅಕಂಪನನಿಗೆ ಒಪ್ಪಿಸಿದನು. ಅಕಂಪನು ಅರ್ಕಕೀರ್ತಿಯನ್ನು ಮುಕ್ತಗೊಳಿಸಿ, ಒಳ್ಳೆಯ ಮಾತನಾಡಿ ಸತ್ಕರಿಸಿ ತನ್ನ ಎರಡನೆಯ ಮಗಳಾದ ಲಕ್ಷ್ಮೀಮತಿಯನ್ನು ಕೊಟ್ಟು ಮದುವೆ ಮಾಡಿದನು.

ಸುಲೋಚನೆಯೊಂದಿಗೆ ಜಯತ್ಕುಮಾರ ತನ್ನ ಅರಮನೆಗೆ ಹೊರಟಾಗ ಗಂಗಾ ತಟದಲ್ಲಿ ಶಿಬಿರ ಮಾಡಿದನು. ಅಲ್ಲಿಂದ ಅಯೋಧ್ಯೆಗೆ ಹೋಗಿ ಭರತೇಶನನ್ನು ಕಂಡು ನಮಸ್ಕರಿಸಿ ಗಂಗಾನದಿಯನ್ನು ದಾಟುತ್ತಿರುವಾಗ ಅವರು ಕುಳಿತಿದ್ದ ಆನೆಯ ಕಾಲನ್ನು ಹಿಂದಿನ ಜನ್ಮದಲ್ಲಿದ್ದ ಸೇಡಿನ ಫಲವಾಗಿ ಕಾಳಿಯೆಂಬ ದೇವಿ ಮೊಸಳೆಯ ರೂಪದಲ್ಲಿ ಹಿಡಿದು ನದಿಯೊಳಕ್ಕೆ ಎಳೆಯತೊಡಗಿಸಿದಾಗ ಸುಲೋಚನೆಯು ಪಂಚ ನಮಸ್ಕಾರ ಮಂತ್ರವನ್ನು ಪಠಿಸಿ ಕ್ಷೇಮವಾಗಿ ದಡವನ್ನು ಎಲ್ಲರೂ ತಲುಪುವಂತೆ ಮಾಡುತ್ತಾಳೆ.

ಅನುರಾಗದಿಂದ ಬದುಕುತ್ತಿರುವ ಒಮ್ಮೆ ಜಯಕುಮಾರ ಹಾರಿ ಹೋಗುತ್ತಿದ್ದ ಖಗ ದಂಪತಿಗಳನ್ನು ನೋಡಿ 'ಹಾ ಪ್ರಭಾವತಿ' ಎಂದು ಕೂಗಿ ಮೂರ್ಛೆ ಹೋದನು. ಅದೇ ತೆರನಾಗಿ 'ಹಾ ನನ್ನ ರತಿವರನೇ' ಎಂದು ಚೀರುತ್ತ ಸುಲೋಚನೆಯೂ ಮೂರ್ಛಿತಳಾದಳು. ಅವರಿಗೆ ಪೂರ್ವಜನ್ಮದ ಸ್ಮರಣೆಯಾಯಿತು. ಆಗ ಸುಲೋಚನೆ ಭವಾಂತರವನ್ನು ಬಿಡಿಸಿದಳು:

ಪುಂಡರೀಕಿಣಿ ಪಟ್ಟಣದ ಪ್ರಭು ಪ್ರಜಾಪಾಲ, ಅಲ್ಲಿನ ರಾಜಶ್ರೇಷ್ಠಿ ಕುಬೇರ ಮಿತ್ರ, ಅವನ ಮಡದಿ ಧನವತೀ, ಅವರ ಮನೆಯಲ್ಲಿ ರತಿವರ ಮತ್ತು ರತಿಷೇಣೆ ಎಂಬ ಪಾರಿವಾಳ ದಂಪತಿಗಳಿದ್ದವು. ಅರಮನೆಗೆ ಮುನಿಗಳು ಬಂದಾಗ ರತಿವರ ಪಾರಿವಾಳವು ಅವರ ಪಾದಧೂಳಿಯನ್ನು ತನ್ನ ರೆಕ್ಕೆಗಳಿಂದ ಹೊಡೆದು ಸ್ವಾಗತಿಸಿ ಧರ್ಮೋಪದೇಶವನ್ನು ಪಡೆದುದರ ಫಲವಾಗಿ ಈ ಜನ್ಮದಲ್ಲಿ ಜಯತ್ಕುಮಾರ ನಾಗಿದ್ದನು. ರತಿಷೇಣೆ ಎಂಬ ಹಕ್ಕಿಯೇ ಸುಲೋಚನೆ, ಪಾರಿವಾಳದ, ಜನ್ಮದ ನಂತರ ಹಿರಣ್ಯವರ್ಮ ಪ್ರಭಾವತಿಯರಾಗಿದ್ದದ್ದು ಸುಲೋಚನೆ ತಿಳಿಸುತ್ತಾಳೆ. ಅನಂತಕಾಲ ಜಯಕುಮಾರ ರಾಜ್ಯವಾಳಿ ನಂತರ ತನ್ನ ಮಗ ಅನಂತವೀರ್ಯ ನೆಂಬ ಪಟ್ಟಕಟ್ಟಿ ವೃಷಭಸ್ವಾಮಿಯ ಒಬ್ಬ ಗಣಧರನಾದನು. ಸುಲೋಚನೆ ಅಚ್ಯುತ ಕಲ್ಪದಲ್ಲಿ ದೇವನಾಗಿ ಹುಟ್ಟಿದಳು. ಈ ಕಥೆ ಅನೇಕ ವಿವರಗಳು ಉಪಕತೆಗಳೊಂದಿಗೆ ರಮ್ಯವಾಗಿ ಹೆಣೆದುಕೊಂಡಿವೆ.

ಡಾ॥ ಹಂಪ. ನಾಗರಾಜಯ್ಯ ಅವರು ತುಂಬಾ ಸಮರ್ಥವಾಗಿ ಸಂಪಾದಿಸಿದ್ದಾರೆ. ಅನೇಕ ಪ್ರಕಟಿತ ಆಕರಗಳ, ಅಪ್ರಕಟಿತ ಕೃತಿಗಳ ಅಧ್ಯಯನದ ಫಲವಾಗಿ ರೂಪಿಸಿರುವ ಸಮಗ್ರ ಪೀಠಿಕೆ ಮೂರನೆಯ ಮಂಗರಸ ಬಗ್ಗೆ ಅಪೂರ್ವ ಮಾಹಿತಿ ನೀಡುವ ಬರಹ. ಕವಿಯ ಪರಿಚಯ ಆತನ ಪ್ರಕಟಿತ-ಅಪ್ರಕಟಿತ ಕೃತಿಗಳ ಪರಿಚಯ ಇಲ್ಲಿ ದೊರೆಯುತ್ತದೆ.

ಗ್ರಂಥ ಸಂಪಾದನೆಯು ಹೇಗೆ ಮಾಡಬೇಕೆಂಬುದಕ್ಕೆ ಅನುಕರಣೀಯವಾಗಿರುವಂತೆ ರೂಪಿಸಲಾಗಿರುವ ಜಯನೃಪ ಕಾವ್ಯಸಂಗ್ರಹವು ಕನ್ನಡ ಸಾಹಿತ್ಯಕ್ಕೆ ಡಾ। ಹಂಪನಾ ಅವರು ನೀಡಿರುವ ಅಮೂಲ್ಯ ಕೊಡುಗೆ.

ಎಚ್. ದಂಡಪ್ಪ

# ವಿಖ್ಯಾತ ವಿಜ್ಞಾನಿ ರಾಮನ್

ಭೂಮಿಯ ಮೇಲೆ ಅವತರಿಸಿದ ಮನುಷ್ಯರೆಲ್ಲರೂ ಕಾಲಗರ್ಭದಲ್ಲಿ ಸೇರಿ ಹೋಗಿದ್ದಾರೆ, ಸೇರಿ ಹೋಗುತ್ತಿದ್ದಾರೆ. ಆದರೆ ಕಾಲನ ಗರ್ಭದಲ್ಲಿ ಸೇರಿಹೋದ ವ್ಯಕ್ತಿಗಳಲ್ಲಿ ಕೆಲವರು ಮಾತ್ರ ತಮ್ಮ ಕಾರ್ಯ ಸಾಧನೆಗಳಿಂದಾಗಿ ಲೋಕಕ್ಕೆ ಮಾಡಿರುವ ಕಲ್ಯಾಣ ಕಾರ್ಯಗಳಿಂದಾಗಿ 'ಅಮರ'ರಾಗಿ ಉಳಿದಿದ್ದಾರೆ. 'ಅಮರತ್ವ' ಎಂದಾಕ್ಷಣ ಆ ವ್ಯಕ್ತಿ ಭೌತಿಕವಾಗಿ ಅಸ್ತಿತ್ವದಲ್ಲಿರುತ್ತಾನೆಂದಲ್ಲ. ಆ ವ್ಯಕ್ತಿಯ ಸಾಧನೆಗಳು ಲೋಕ ಕಲ್ಯಾಣದ ಕಾರ್ಯಕ್ರಮಗಳು, ಚಿಂತನೆ ಆದರ್ಶ ತತ್ವಗಳು ಮುಂದಿನ ಪೀಳಿಗೆಗೆ ಉಳಿದು ಬರುತ್ತಿರುತ್ತವೆ. ಇದನ್ನೇ 'ಅಮರತ್ವ' ಎಂದು ಕರೆಯಲಾಗಿದೆ. ಇಂತಹ ವ್ಯಕ್ತಿಗಳ ಬದುಕು ನೀತಿ ಆದರ್ಶ ತತ್ವಗಳು ಮುಂದಿನ ಪೀಳಿಗೆಗೆ ಮಾರ್ಗದರ್ಶಕವಾಗುತ್ತವೆ. ಹಿಂದಿನವರ ಒಳ್ಳೆಯ ತತ್ವ ಆದರ್ಶಗಳನ್ನು ಮುಂದಿನ ಪೀಳಿಗೆ ಗಮನಿಸಿ ಅವರನ್ನು ಮಾದರಿಗಳನ್ನಾಗಿಸಿಕೊಳ್ಳುತ್ತಾರೆ. ಆ ಮೂಲಕ ಹೊಸ ವಿಚಾರಗಳನ್ನು ಕಂಡುಕೊಂಡು ತಮ್ಮ ಬದುಕನ್ನು ಸಹನೀಯವಾಗಿಸಿಕೊಳ್ಳುವುದರ ಜೊತೆಗೆ ಸುಂದರವಾಗಿಟ್ಟುಕೊಳ್ಳಲು ಪ್ರಯತ್ನಿಸುತ್ತಾರೆ. ಈ ಮೂಲಕ ಸಮಾಜದ ಸ್ವಾಸ್ಥ್ಯ ಉಳಿದು ಸಮಾಜ, ಸಂಸ್ಕೃತಿ ಆರೋಗ್ಯಕರವಾಗಿರುತ್ತದೆ. ಇಂತಹ ಆರೋಗ್ಯಕರವಾದ ಸಮಾಜದ ನಿರ್ಮಾಣವೇ ಎಲ್ಲಾ ಮಹನೀಯರ ಗುರಿಯಾಗಿದ್ದು ಅವರು ತಮ್ಮ ಜೀವನದ ಉದ್ದಕ್ಕೂ ಅದಕ್ಕಾಗಿ ಶ್ರಮಿಸಿರುತ್ತಾರೆ.

ಯಾರೇ ಆಗಲಿ ಹುಟ್ಟಿನಿಂದಲೇ ಅಸಾಮಾನ್ಯರಾಗಿ ಹುಟ್ಟಿರುವುದಿಲ್ಲ, ಸಾಮಾನ್ಯ ಮನುಷ್ಯರಂತೆಯೇ ಹುಟ್ಟಿ ಮಾನವಸಹಜವಾದ ದೌರ್ಬಲ್ಯಗಳೊಂದಿಗೆ ಬೆಳೆಯುತ್ತಾ ತಮ್ಮ ಮನಸ್ಸನ್ನು ಸಂಸ್ಕರಿಸಿಕೊಳ್ಳುತ್ತಾ ತಮ್ಮ ಶ್ರದ್ಧೆ,

ಸತತ ಪರಿಶ್ರಮ, ಪ್ರತಿಭೆ, ಸಾಧನೆಗಳಿಂದ ಅಸಾಮಾನ್ಯ ಸ್ಥಿತಿಗೇರುತ್ತಾರೆ. ಅವರ ಕಾರ್ಯಗಳೂ ಕೂಡಾ ಮನುಷ್ಯನ ಬದುಕಿಗೆ ಉಪಯುಕ್ತವಾಗಿರುತ್ತವೆ, ಅನುಕರಣೀಯವಾಗಿರುತ್ತವೆ, ಇಂತಹ ವ್ಯಕ್ತಿಗಳ ಜೀವನ-ಸಾಧನೆ, ಸಿದ್ಧಿಗಳು ಮೊದಲೇ ತಿಳಿಸಿದಂತೆ ಮುಂದಿನ ಜನಾಂಗಕ್ಕೆ ಮಾರ್ಗದರ್ಶಕವಾಗಿರುತ್ತವೆ. ಆದುದರಿಂದ ಅವರ ಜೀವನ ಸಾಧನೆಗಳನ್ನು ದಾಖಲಿಸಬೇಕಾಗುತ್ತದೆ. ಈ ಕಾರಣದಿಂದ 'ಜೀವನ ಚರಿತ್ರೆ'ಗಳನ್ನು ಬರೆಯಲಾಗುತ್ತದೆ.

ಜೀವನ ಚರಿತ್ರೆಯನ್ನು ಬರೆಯುವಾತನು ತಾನು ಆರಿಸಿಕೊಂಡ 'ವ್ಯಕ್ತಿ'ಯನ್ನು ಅಸಾಮಾನ್ಯನಂತೆ ಚಿತ್ರಿಸಬಾರದು. ಆ ರೀತಿ ಚಿತ್ರಿಸಿದರೆ ಜೀವನಚರಿತ್ರೆಯ ಉದ್ದೇಶವು ನೆರವೇರುವುದಿಲ್ಲ. ಉದಾಹರಣೆಗೆ ಮಹಾತ್ಮ ಗಾಂಧೀಜಿಯವರ ಬಾಲ್ಯವನ್ನು ಚಿತ್ರಿಸುವಾಗ ಅಸಾಮಾನ್ಯನಂತೆ, ಪವಾಡ ಪುರುಷನಂತೆ ಚಿತ್ರಿಸಿದರೆ ಅವರು ನಮ್ಮಿಂದ ದೂರವಾಗುಳಿಯುತ್ತಾರೆ, ಗಾಂಧೀಜಿಯವರ ತತ್ವ ಆದರ್ಶಗಳೂ ಕೂಡಾ ದೂರ ವಾಗುತ್ತವೆ. ಈ ಕಾರಣದಿಂದಲೇ ಹಿಂದಿನ ಕನ್ನಡ ಕವಿಗಳು ಮಹಾ ವ್ಯಕ್ತಿಗಳ ಜೀವನ ಸಾಧನೆಗಳನ್ನು ಕುರಿತು ರಚಿಸಿರುವ ಗ್ರಂಥಗಳು ನಮಗೆ ಹತ್ತಿರವಾಗದೆ ಹೋಗಿವೆ : ಉದಾಹರಣೆಗೆ. ಬಸವರಾಜ ದೇವರ ರಗಳೆ, ಬಸವ ಪುರಾಣ, ಪ್ರಭುಲಿಂಗಲೀಲೆ-ಇತ್ಯಾದಿ ಇವರೆಲ್ಲರ ಬಗ್ಗೆ ನಮಗೆ ಪೂಜ್ಯಭಾವನೆ ಬರುತ್ತದೆಯೇ ಹೊರತು ಅನುಕರಣೀಯರೆಂಬ ಭಾವನೆ ಬರುವುದಿಲ್ಲ.

ಈ ಹಿನ್ನೆಲೆಯಲ್ಲಿ ಡಾ|| ಹಂಪನಾ ಅವರು ಬರೆದಿರುವ ವಿಖ್ಯಾತ ವಿಜ್ಞಾನಿ ಸಿ. ವಿ. ರಾಮನ್ ಅವರ ಜೀವನ ಚರಿತ್ರೆಯನ್ನು ಗಮನಿಸಬೇಕು. ಆಗ ಆ ಕೃತಿಯ ಮಹತ್ವದ ಅರಿವಾಗುತ್ತದೆ. ಡಾ|| ಹಂಪನಾ ಅವರು ರಾಮನ್‌ರ ಜೀವನ ಸಾಧನೆ ಗಳನ್ನು ವಿವರಿಸುವ ಸಂದರ್ಭದಲ್ಲಿ ಯಾವುದೇ ರೀತಿಯ ಉತ್ಪ್ರೇಕ್ಷೆ, ಭಾವಾವೇಶಕ್ಕೆ ಒಳಗಾಗದೆ ಸಾಮಾನ್ಯ ಮನುಷ್ಯನೊಬ್ಬ ಹೇಗೆ ಅಸಾಮಾನ್ಯ ಸ್ಥಿತಿಯನ್ನು ತಲುಪಿದ ನೆಂಬ ವಿವರಗಳನ್ನು ಸರಳವಾಗಿ, ಆಕರ್ಷಕವಾಗಿ ನಿರೂಪಿಸಿದ್ದಾರೆ. ಕನ್ನಡದಲ್ಲಿ ಜೀವನ ಚರಿತ್ರೆಗಳೇ ಇಲ್ಲದಿರುವ ಸಂದರ್ಭದಲ್ಲಿ ಇಂತಹದೊಂದು ಪುಟ್ಟ ಕೃತಿಯನ್ನು ರಚಿಸಿ ಕನ್ನಡಿಗರ ಕೈಗೆ ಕೊಟ್ಟಿರುವ ಹಂಪನಾ ಅವರ ಕಾರ್ಯ ಸ್ತುತ್ಯರ್ಹವಾದದ್ದು.

ಡಾ॥ ಚಂದ್ರಶೇಖರ ಕಂಬಾರ

# ಯಕ್ಷ ಯಕ್ಷಿಯರು

ನನ್ನ ಮಿತ್ರರಾದ ಶ್ರೀ ಹಂಪ. ನಾಗರಾಜಯ್ಯನವರು 'ಯಕ್ಷ ಯಕ್ಷಿಯರು' ನನ್ನ ಕುತೂಹಲವನ್ನು ಕೆರಳಿಸಿದ ವಿಷಯ. ಯಕ್ಷಗಾನದ ಬಗ್ಗೆ ಅಧ್ಯಯನ ನಡೆಸುವ ಯಾರಿಗೇ ಆಗಲಿ 'ಯಕ್ಷ' ಪದ ಒಗಟಾಗಿ ಎದುರಾಗುತ್ತದೆ. ಯಕ್ಷಗಾನವೆಂಬುದು ಸಂಸ್ಕೃತ ರೂಪವಾದರೂ ಸಂಸ್ಕೃತ ವಾಙ್ಮಯದಲ್ಲಿ ಸಂಗೀತ ಅಥವಾ ನಾಟಕ ಸಾಹಿತ್ಯದಲ್ಲಿ ಇದರ ಉಲ್ಲೇಖವಿಲ್ಲ. ಇನ್ನು ಹಳೆಗನ್ನಡದಲ್ಲಿ ಎಕ್ಕಡಿಗರು, ಎಕ್ಕಲಗಾನ, ಯಕ್ಷಾಂದೋಳನದಂಥ ಪದಗಳಿವೆ. 'ಯಕ್ಷರಾತ್ರಿ' ಎಂಬೊಂದು ಆಚರಣೆ ದಕ್ಷಿಣ ಕನ್ನಡದಲ್ಲಿ ಈಗಲೂ ಇದೆ. ಶ್ರೀಲಂಕಾದಲ್ಲಿ ಯಕ್ಷ ನೃತ್ಯಗಳಿವೆ. ಇವುಗಳ ಮೂಲವನ್ನು ಶ್ರೀಮನಮೋಹನ್ ಘೋಷ್ ಅವರು ಹರಪ್ಪಾ ಮೊಹೆಂಜೋದಾರೋ ಸಂಸ್ಕೃತಿಯಲ್ಲಿ ಗುರುತಿಸಿದ್ದಾರೆ. ಭರತನ ನಾಟ್ಯಶಾಸ್ತ್ರದಲ್ಲಿ ಭಾಗವಹಿಸುವ ಅವಕಾಶಕ್ಕೆ ಎರವಾದ ಯಕ್ಷರು, ದೈತ್ಯರ ಗುರು ಶುಕ್ರಾಚಾರ್ಯರ ಬಳಿ ಈ ವಿದ್ಯೆ ಕಲಿತು ಪ್ರಚಾರ ಪಡಿಸಿದರೆಂಬ ಕಥೆಯಿದೆ. ಇದು ಪೂರ್ವದಲ್ಲಿ ಸಂಗೀತ ಪದ್ಧತಿಯಾಗಿದ್ದ ಬಗ್ಗೆ ಡಾ॥ ವಿ. ರಾಘವನ್ ಅವರೂ ಡಾ॥ ಕಾರಂತರೂ ವಿವರವಾಗಿ, ಸಾದಾರವಾಗಿ ಚರ್ಚಿಸಿದ್ದಾರೆ.

ಯಕ್ಷಗಾನ ಭರತನ ನಾಟ್ಯಶಾಸ್ತ್ರಕ್ಕಿಂತ ಭಿನ್ನವಾದ ಕಲೆ. ದಕ್ಷಿಣದ ಕಲೆ. ಬಹುಶಃ ದ್ರಾವಿಡರ ಕಲೆ. ಇದಕ್ಕೆ ಪೂರಕವಾದ ಅಂಶಗಳನ್ನು ಶ್ರೀ ನಾಗರಾಜಯ್ಯ ಗುರುತಿಸಿದ್ದಾರೆ. ಯಕ್ಷರು ದ್ರಾವಿಡರೂ ಆಗಿರಬೇಕೆಂಬ ಅನುಮಾನಗಳನ್ನು ದೃಢಪಡಿಸುತ್ತ. ಯಕ್ಷರು ಆರ್ಯೇತರರೆಂಬ ಗಂಧರ್ವರಂಥ ಪ್ರತ್ಯೇಕ ಜನಾಂಗವೆಂಬ ಬಗ್ಗೆ ಹಿಂದಿನ ದಾಖಲೆಗಳಲ್ಲಿ ಒಮ್ಮತವಿದ್ದಂತಿದೆ. ಪ್ರಾಚೀನ ಕೃತಿಗಳಲ್ಲಿ ಬರುವ "ವೃಕ್ಷವಾಸಿಗಳು, ಲಂಕೆಯ ಕೈಲಾಸವಾಸಿಗಳು, ಆದಿವಾಸಿಗಳು, ಸಂಗೀತಜ್ಞರು, ನೃತ್ಯ ಸಂಗೀತ ಪ್ರಿಯರು, ರಾಕ್ಷಸರ ಪರವಾಗಿ ಇದ್ದವರು, ಕೆಂಪು

ಕಣ್ಣಿನವರು, ಕಪ್ಪು ಮೈ ಬಣ್ಣದವರು" ಮುಂತಾದ ವಿಶೇಷಣಗಳತ್ತ ನಮ್ಮ ಲಕ್ಷ್ಯ ಸೆಳೆದು ಯಕ್ಷರು ದ್ರಾವಿಡರಾಗಿರುವ ಸಾಧ್ಯತೆಗಳೂ ಇವೆ, ಹಾಗೂ ಅವೇ ಹೆಚ್ಚು ಖಚಿತವಾಗಿರುವಂತಿವೆಯೆಂದೂ ಹೇಳುತ್ತಾರೆ. ಅವರ ಬಗೆಗಿನ ಆರ್ಯರ ಧೋರಣೆ ಬರಬರುತ್ತ ಹೇಗೆ ಬದಲಾಯಿತೆಂದು ತೋರಿಸಿದ್ದಾರೆ. ಪ್ರತ್ಯೇಕ ಅಸ್ತಿತ್ವದ ಕಾಡು ಜನಾಂಗದವರಾಗಿದ್ದವರ ಮುಂದೆ ನಾಗರಿಕರಲ್ಲಿ ಸೇರಿ, ಮೂಲದ ಅವರ ಗುಣ ವಿಶೇಷಗಳು ಕಲ್ಪನೆಗಳಾಗಿ ಸಂಕೇತಗಳಾಗಿ ಉಳಿದುಕೊಂಡುಬಂದುವು ? ಯಾಕೆಂದರೆ ಸತ್ತ ನಂತರದ ಒಂದು ಸ್ಥಿತಿಯಾಗಿ ಕನ್ನಡದ ಭೂತಗಳಂತೆ ಭಯಮೂಲದ ಪ್ರಚಂಡ ಶಕ್ತಿಯ ದೇವತೆಯಾಗಿಯೂ ಅವರು ಅನಂತರದಲ್ಲಿ ಪೂಜೆಗೊಂಡಿದ್ದಾರೆ.

ಜೈನ, ಬೌದ್ಧರಲ್ಲಿಗೆ ಈ ಯಕ್ಷ ಕಲ್ಪನೆಯ ಪ್ರವೇಶವಾದುದು ಜನಸಾಮಾನ್ಯರ ಪ್ರಭಾವದಿಂದ-ಎಂಬುದು ಸ್ಪಷ್ಟ. ಹಂಪನಾರವರೇ ಪ್ರಾರಂಭದಲ್ಲಿ ಹೇಳಿರುವಂತೆ ಯಕ್ಷರನ್ನು ಕುರಿತ ವಿವರಗಳನ್ನು ಜೈನ, ಜೈನೇತರ ಎಂಬ ವಿಭಜನೆಯ ಕ್ರಮದಲ್ಲಿ ಸಮೀಕ್ಷಿಸಬಹುದು. ಇಲ್ಲಿ ಜೈನ ವಿವರಗಳನ್ನು ಮುಖ್ಯವಾಗಿ ಅಧ್ಯಯನ ಮಾಡಿದ್ದಾರೆ. ಜೈನ ಸಾಹಿತ್ಯ ಹಾಗೂ ಶಿಲ್ಪಗಳಲ್ಲಿರುವ ಯಕ್ಷ ಕಲ್ಪನೆಯ ಹುಟ್ಟು ಬೆಳವಣಿಗೆಗಳನ್ನು ಆಮುಲಾಗ್ರ ಚರ್ಚಿಸಿದ್ದಾರೆ. ದಿಗಂಬರ ಹಾಗೂ ಶ್ವೇತಾಂಬರ ಕಲ್ಪನೆಗಳ ಸಾಮ್ಯ-ವೈಷಮ್ಯಗಳನ್ನು ಗುರುತಿಸಿದ್ದಾರೆ. ಹೀಗೆಯೇ ಜೈನೇತರ ಸಮೀಕ್ಷೆಯೂ ಒಂದು ಬಂದರೆ ಆಗ ಹೋಲಿಕೆಯಿಂದ ಇನ್ನೂ ಮಹತ್ವದ ತೀರ್ಮಾನ ಗಳಿಗೆ ನಿಲುಕಬಹುದು.

ಇಷ್ಟು ನಿಜ. ಯಕ್ಷ, ಯಕ್ಷಿಣಿ, ಜೈನ, ಶಿಲ್ಪ, ದ್ರಾವಿಡ, ಯಕ್ಷಗಾನ- ಮುಂತಾದವುಗಳ ಬಗ್ಗೆ ಅಧ್ಯಯನ ಮಾಡುವವರಿಗೆ ಇದೊಂದು ಆಧಾರಗ್ರಂಥ. ಅಧಿಕಾರಿಕವಾದ ವಿಪುಲ ಸಾಮಗ್ರಿಯ ಅನೇಕ ಚಿತ್ರಗಳ ಪುಸ್ತಕ ಒಂದು ಅನನ್ಯ ಕೃತಿ; ಕನ್ನಡದಲ್ಲಂತೂ ಇದೇ ಪ್ರಥಮ. ಇದಕ್ಕಾಗಿ ಶ್ರೀ ಹಂಪ. ನಾಗರಾಜಯ್ಯನವರನ್ನು ಅಭಿನಂದಿಸುತ್ತೇನೆ.



ಚಿಕ್ಕಣ್ಣ ಯಣ್ಣೆಕಟ್ಟೆ

## ನಾಗಶ್ರೀ

ಹಿಂದೂ ಧರ್ಮದಲ್ಲಿ ಮನೆ ಮಾಡಿಕೊಂಡಿದ್ದ ಹಲವಾರು ಕಂದಾಚಾರಗಳನ್ನು ಧಿಕ್ಕರಿಸಿ, ಈ ಧರ್ಮದ ಮತ್ತೊಂದು ಕವಲಾಗಿ, ಜನತೆಯನ್ನು ಹೊಸಹಾದಿಯತ್ತ ಕರೆದೊಯ್ದುದ್ದು ಜೈನಧರ್ಮ. ಹಾಗೆಯೇ ಕನ್ನಡ ಸಾಹಿತ್ಯ ಶ್ರೀಮಂತವಾಗಲು ಭದ್ರವಾದ ತಳಪಾಯವನ್ನು ಹಾಕಿ ಬೆಳೆಸಿದವರು ಜೈನ ಕವಿಗಳು ಎಂದರೆ ಅತಿಶಯೋಕ್ತಿಯೇನಲ್ಲ. ಪಂಪನಿಂದ ಮೊದಲ್ಗೊಂಡು ರತ್ನಾಕರ ವರ್ಣಿಯವರೆಗೆ ಮಹಾಗ್ರಂಥಗಳನ್ನೇ ಜೈನ ಕವಿಗಳು ನೀಡಿ ಕನ್ನಡ ಸಾಹಿತ್ಯವನ್ನು ಶ್ರೀಮಂತಗೊಳಿಸಿದ್ದಾರೆ.

ಡಾ॥ ಹಂಪನಾ ಅವರ 'ನಾಗಶ್ರೀ' ಕಾದಂಬರಿ ಪೌರಾಣಿಕ ವಸ್ತುವನ್ನುಳ್ಳದ್ದು. ವಡ್ಡಾರಾದನೆಯಲ್ಲಿ ಬರುವ ಭವಾವಳಿಗಳ ಕತೆಯನ್ನು ಆಯ್ದುಕೊಂಡು ಇದರಲ್ಲಿ ಕೇಂದ್ರ ಪಾತ್ರವಾದ 'ನಾಗಶ್ರೀ'ಯನ್ನೇ ಕಾದಂಬರಿಯ ಶೀರ್ಷಿಕೆಯನ್ನಾಗಿಸಿ ಕಾದಂಬರಿ ರಚಿಸಿದ್ದಾರೆ. ನಾಗಶ್ರೀ ಕಾದಂಬರಿ ಹತ್ತು ಸ್ಥಿರ ಶೀರ್ಷಿಕೆಗಳನ್ನು ಒಳಗೊಂಡಿದ್ದು ಒಂದೊಂದರಲ್ಲೂ ಕಥಾಭಿತ್ತಿ ಪೊಟಕಾಗದೆ ಮುಂದೆ ಸರಿಯುವುದರಿಂದಲೇ ಕಾದಂಬರಿ ಸುಲಭವಾಗಿ ಓದಿಸಿಕೊಂಡು ಹೋಗುವ ತಂತ್ರವನ್ನು ಕಾದಂಬರಿಕಾರರು ಯಶಸ್ವಿಯಾಗಿ ಉಪಯೋಗಿಸಿಕೊಂಡಿದ್ದಾರೆ. ಹಂಪನಾ ಅವರು ಮುನ್ನುಡಿಯಲ್ಲಿ 'ಇದು ನನ್ನ ಮೊದಲ ಕೃತಿ ಎಂದು ಕತೆಯ ಚಲುವೆಲ್ಲವೂ ಮೂಲಕ್ಕೆ ಸೇರಿದ್ದು ಹೊರಗಣ ಒಪ್ಪ ಓರಣ ಮಾತ್ರ ಲೇಖಕನದು' ಎಂದು ವಿನಯವಾಗಿ ಹೇಳಿ ಕೊಂಡಿದ್ದಾರೆ. ಆದರೆ ಕಾದಂಬರಿಯನ್ನು ಓದಿ ಮುಗಿಸುವ ವೇಳೆಗೆ ಇದು ಇವರ ಮೊದಲ ಕೃತಿಯೆ ? ಅನ್ನುವ ಗುಮಾನಿ ಸುರುವಾಗಿ ಬೆಳೆದ ಚಿಂತನಶೀಲ ಲೇಖಕನ ಮೂಸೆಯಿಂದ ಮೂಡಿದ ಕೃತಿರತ್ನ ಅನ್ನುವುದು ಆಮೇಲೆ ಅರಿವಾಗುವುದು.

'ಮಂತ್ರಿ ಮಕ್ಕಳು' ಕಾದಂಬರಿಯ ಮೊದಲ ಅಧ್ಯಾಯ. ಕೌಸಂಬಿಪುರದ ಅರಸ 'ಅತಿಬಳ' ಮಹಾರಾಜಯೋಗ್ಯಪುರುಷ. ಜನಪದರಿಂದ ಮನ್ನಣೆಗೆ ಪಾತ್ರನಾದವನು. ಕಾರಣ ಯುದ್ಧದ ಭಯವಿಲ್ಲ, ಕ್ಷಾಮದ ಯೋಚನೆ ಇಲ್ಲ. ಈತನ ಆಪ್ತಮಂತ್ರಿ ಸೋಮಶರ್ಮ, ಮಡದಿ ಕಾಶ್ಯಪಿ, ಪಂಡಿತ ದಂಪತಿಗಳ ಅನುಪಮ ಮೈತ್ರಿ. ಇವರ ಸಿಹಿ ಬಾಳಿನಲ್ಲಿ ಬರಸಿಡಿಲು ಬಡಿದದ್ದು ಅವರಿಗೆ ಹುಟ್ಟಿದ್ದ ಇಬ್ಬರು ಪೋಲಿ ಹುಡುಗರಿಂದ ಶಾಸ್ತ್ರ ಧರ್ಮ ಗ್ರಂಥ ಅಂತಿರಲಿ ವ್ಯವಹಾರಿಕ ಪ್ರಜ್ಞೆಯನ್ನು ಬೆಳೆಸಿಕೊಳ್ಳದೆ ಉಂಡುಂಡು ಅಡ್ಡಾದಿಡ್ಡಿಯಾಗಿ ಬೆಳೆದರು. ಇದರ ಕೊರಗು ಚಿಂತೆಯಾಗಿ, ಆ ಚಿಂತೆಯೇ ಚಿತೆಯಾಗಿ ಅದರಲ್ಲಿ ದಹಿಸಿದನು ಸೋಮಶರ್ಮ. ಇದನ್ನೇ ಬರಸಿಡಿಲು ಎಂದು ನಾನು ಮೊದಲು ಹೇಳಿದ್ದು. ರಾಜ ಅತಿಬಳ ಕೊಂಚ ಔದಾರ್ಯ ಪುರುಷ ಹಿಂದು ಮುಂದು ನೋಡದೆ ತಂದೆಯ ಸ್ಥಾನವನ್ನು ಈ ಮಂತ್ರಿ ಮಕ್ಕಳಿಗೆ ನೀಡಿ ಉಪಕರಿಸಿದ. ಕಾಶ್ಯಪಿಗೆ ವಿಧುವೆಯ ನೋವು ಕಾಡಿತಾದರೂ, ಮಕ್ಕಳು ತಂದೆಯ ಸ್ಥಾನ ಉಳಿಸಿದರೆಂದು ಕಿಂಚಿತ್ ಖುಷಿಯಾಯ್ತಿ ಆದರೆ ಇದು ಗಾಯವಾಗುವ ಮುನ್ನವೇ ಬರೆಬೀಳುತ್ತದೆಂದು ಆಕೆ ಎಣಿಸಿರಲಿಲ್ಲ. ಅತಿಬಳ ರಾಜನ ಆಸ್ಥಾನಕ್ಕೆ ಬಂದ ವಿಜಯ ಜಿಹ್ವೆನೆಂಬ ಪಂಡಿತ ಒಂದು ಸವಾಲು ಹಾಕಿ ನನ್ನನ್ನು ವಾದದಲ್ಲಿ ಸೋಲಿಸುವರ್‍ಯಾರಿದ್ದಾರೆ ನಿಮ್ಮಲ್ಲಿ ಅಂದು ಪ್ರಶ್ನಿಸಿದ. ಮಂತ್ರಿ ಮಕ್ಕಳಿಗೆ ಎದೆ ದಸಕ್ ಎಂದಿತು. ಅರಸ ಏಳಿ ಏಕೆ ಸುಮ್ಮನಿರುವಿರಿ ಎಂದಾಗ ವಿಧಿ ಇಲ್ಲದೆ ನೆಲ ಕೆರೆಯ ಬೇಕಾಯಿತು. ಪಂಡಿತ ಪುತ್ರರ ಈ ಪಾಡು ಆಸ್ಥಾನದ ಕೆಲವರಿಗೆ ಹಂಡೆ ಹಾಲು ಕುಡಿದಂತಾಯತು. ತಪ್ಪೊಪ್ಪಿಕೊಂಡ ಅರಸ 'ವಿಜಯ ಜಿಹ್ವೆಗೆ' ಸನ್ಮಾನ ಮಾಡಿ, ಈ ಮೂರ್ಖರಾದ ಅಗ್ನಿಭೂತಿ ವಾಯುಭೂತಿಯರನ್ನು ಆಸ್ಥಾನದಿಂದ ಉಚ್ಚಾಟಿಸಿದ. ಮಕ್ಕಳು ಹಿಂದಲೇ ಬಂದ ದುರಂತದ ಸುದ್ದಿಯಿಂದ ಕಾಶ್ಯಪಿ ನಲುಗಿ ಹೋದಳು. ಆದರೆ ಈ ಮೂರ್ಖರು ಈಗ ಎಚ್ಚೆತ್ತು ವಿದ್ಯಾವಂತರಾಗುವ ಸನ್ನಾಹ ನಡೆಸಿದ್ದು ಮೆಚ್ಚತಕ್ಕದ್ದು. ತಾಯಿಯಿಂದ ಸೋದರ ಮಾವನಿಗೆ ಶಿಪಾರಸ್ಸು ಪತ್ರ ವೊಂದನ್ನು ಬರೆಸಿಕೊಂಡು ಮಗದ ದೇಶದ ರಾಜಧಾನಿಯಾದ 'ರಾಜಗೃಹ' ದ ಮಹಾಮಂತ್ರಿ ಸೂರ್ಯಮಿತ್ರನ ಬಳಿಗೆ ಬರುತ್ತಾರೆ. ಇವರ ಮೂರ್ಖತನ ಸೂಕ್ಷ್ಮವಾಗಿ ಅರಿತ ಸೂರ್ಯಮಿತ್ರ–ಸಂಬಂಧ ಕಟ್ಟುಪಾಡಿಲ್ಲ ವಿದ್ಯಾರ್ಥಿಗಳಾದರೆ–ವಿದ್ಯೆ ನೀಡಬಲ್ಲೆ ಎಂದು ಷರತ್ತಿನ ಮೇಲೆ ವಿದ್ಯಾವಂತರನ್ನಾಗಿಸುವುದು. ಸಲಿಗೆ ಸದರಕ್ಕೆ ತಿರುಗಿ ದುರಂತದ ಹಾದಿ ಹಿಡಿಯುತ್ತದೆ ಅನ್ನುವುದನ್ನು ಕಾದಂಬರಿಕಾರರು ಸೂರ್ಯಮಿತ್ರನ ಬಾಯಲ್ಲಿ ಹೇಳಿಸಿರುವುದು ಮೆಚ್ಚತಕ್ಕದ್ದು. ಪರಿಪರಿಯ ಕಷ್ಟ ಪಟ್ಟು ಹಿಂತಿರುಗುವಾಗ ಸೂರ್ಯಮಿತ್ರ ನಮ್ಮ ಸಂಬಂಧದ ಗುಟ್ಟನ್ನು ಬಯಲು ಮಾಡಿ ಕಳುಹಿಸಿ ಕೊಡುತ್ತಾನೆ. ಇಲ್ಲಿ ಉದ್ದೇಶ ಒಂದೇ ಆದರೂ ವಾಯುಭೂತಿ ಹಾಗು ಅಗ್ನಿಭೂತಿ ಇವರಲ್ಲಾದ ಬದಲಾವಣೆಯ ಮರ ಒಂದೇ ಹೌದು, ಆದರೆ ಅದರಲ್ಲಿ ಬಿಡುವ ಫಲ ವೆಲ್ಲ ಒಂದೇ ರೀತಿಯ ಸವಿ ಕೊಡಲು ಸಾಧ್ಯವೆ ? ಇದೇ ಮಾತು ಈ ಹುಡುಗರಿಗೆ

ಅನ್ವಯಿಸುತ್ತದೆ. ವಾಯುಭೂತಿ ಗುರು, ಸೋದರಮಾವನನ್ನು ಪರಿಪರಿಯಾಗಿ ನಿಂದಿಸುತ್ತಾನೆ. ಅಗ್ನಿಭೂತಿ ಬದಲಿಗೆ ಕೃತಜ್ಞತೆ ಹೇಳುತ್ತಾನೆ. ತಮ್ಮ ಮೂಲ ಸ್ಥಾನಕ್ಕೆ ಬಂದು ಅತಿಬಲ ಎದುರು ಪಾಂಡಿತ್ಯ ಪ್ರದರ್ಶಿಸಿ ಮರಳಿ ಗದ್ದಿಗೆ ಪಡೆಯುವುದು, ಯತ್ನದಿಂದ ಎಂಥ ಸಾಧನೆಯನ್ನಾದರೂ ದಕ್ಕಿಸಿಕೊಳ್ಳಬಹುದು ಅನ್ನುವುದನ್ನು ರುಜುವಾತುಗೊಳಿಸುತ್ತಾರೆ.

ಸೂರ್ಯಮಿತ್ರ ಕೊಂಚ ಕಪಟಿಯಾಗಿ ಕಂಡು ಬಂದರೂ ಮುಂದೆ ಸಿದ್ಧಿಯ ಸಾಧಕನಾಗಿ ಯತಿ ಶ್ರೇಷ್ಠನಾಗಿ ದಿವ್ಯಜ್ಞಾನಿಯಾಗುತ್ತಾನೆ. ಅದಕ್ಕೆ ಮೂಲಕಾರಣ ಉಂಗುರ ಕಳೆದು ಹೋದ ಪ್ರಸಂಗ. ಸುಧರ್ಮಾಚಾರ್ಯರಿಂದ ಧರ್ಮದೀಕ್ಷೆ ತೆಗೆದುಕೊಂಡು ಧರ್ಮ ಪ್ರಸಾರಮಾಡುತ್ತಾ ತನ್ನ ಶಿಷ್ಯರ ನಾಡಿಗೆ ಬರುತ್ತಾನೆ. ಮೊದಲು ಅಗ್ನಿಭೂತಿ ಗುರುವನ್ನು ದೈನ್ಯತೆಯಿಂದ ಸತ್ಕರಿಸಿ, ತಮ್ಮ ಕೃಪೆಯಿಂದ ಇದೆಲ್ಲ ಅನ್ನುವುದನ್ನು ಒಪ್ಪಿಕೊಳ್ಳುತ್ತಾನೆ. ಆದರೆ ವಾಯುಭೂತಿಯದು ವ್ಯತಿರಿಕ್ತ ಬದುಕು. ಇವನಿಗೇನು ಅಹಂಭಾವ ಇಳಿದಿಲ್ಲ ಗುರುಗಳು ಬಂದರೂ ಬಗೆ ಬಗೆಯಾಗಿ ನಿಂದಿಸುತ್ತಾನೆ. ಇದರಿಂದ ನೊಂದ ಅಗ್ನಿಭೂತಿಯೂ ದೀಕ್ಷೆ ತೆಗೆದುಕೊಂಡು ಯತಿಯಾಗುತ್ತಾನೆ.

ಅತ್ತಿಗೆ ಬಂದು, ಗುರುವನ್ನು, ನಿನ್ನ ಅಣ್ಣನನ್ನು ಈ ಪರಿಯ ಸ್ಥಿತಿಗೆ ತಂದದ್ದು ಸರಿಯೆ ಎಂದು ಅಲೌಕಿಕ ಪ್ರಶ್ನೆ ಹಾಕುತ್ತಾಳೆ. ಆದರೆ ಕಟುಕನ ಮುಂದೆ ಬಸವನ ಪುರಾಣವೆ ? ಎನ್ನುವಂತಾಗಿ ಇವಳನ್ನು ಒದ್ದು ಶಿಕ್ಷೆ ನಿಡುತ್ತಾನೆ. ಆಕೆ ಕೊಡುವ ಉತ್ತರ ಮುಂದಿನ ಜನ್ಮದಲ್ಲಾದರೂ ಸರಿಯಾಗಿ ನಿನ್ನ ಕಾಲನನ್ನು ನನ್ನ ಮಕ್ಕಳ ಸಮೇತ ಸೀಳಿ ತಿನ್ನುವೆನು ಅನ್ನುವ ಮಾತು ಮುಂದೆ ಸತ್ಯವಾಗಿಯೇ ಪರಿಣಮಿಸುತ್ತದೆ.

ಗುರುವನ್ನು ನಿಂದಿಸಿದ್ದ ಫಲವಾಗಿ ವಾಯುಭೂತಿ ಕಾಲಿಗೆ ಹುಳುಹತ್ತಿ ಸತ್ತು ಅದೇ ಊರಿನ ದೊಂಬರ ಮನೆ ಹೆಣ್ಣು ಕತ್ತೆಯಾಗಿ ಹುಟ್ಟಿ ಭಾರ ಹೊತ್ತುಸತ್ತು ಹಂದಿಯಾಗಿ, ನಾಯಿಗೂಳಿಗಳಿಂದ ತಿವಿಸಿಕೊಂಡು ಸತ್ತು ಬೇಡನ ಮನೆಯಲ್ಲಿ ಹೆಣ್ಣು ನಾಯಾಗಿ ಹುಟ್ಟಿ ಉಳಿದ ನಾಯಿಗಳು ಸೀಳಿ ಹಾಕಿ ಕೊನೆಗೆ ಕುರುಡಿಯಾಗಿ, ದುರ್ಗಂಧೆಯಾಗಿ ಮೈಯಲ್ಲಿ ಹುಳು ತಿಂದು ನೋಡಿದವರಿಗೆ ಹೇಸಿಕೆ ಬರುವಂತೆ ಇವಳ ರೂಪ. ಯತಿಯಾದ ಅಗ್ನಿಭೂತಿ ಭಿಕ್ಷಾನ್ನಕ್ಕಾಗಿ ಈ ಊರಿಗೆ ಬಂದಾಗ ದಾರಿಯಲ್ಲಿ ಅವರಿವರು ತಿಂದು ಬಿಸುಟ ನೇರಳೆಹಣ್ಣನ್ನು ತಡಕಿ ತಡಕಿ ತಿಂದು-ಜೀವನ ಮರೆಯುತ್ತಿದ್ದಳು. ಅಗ್ನಿಭೂತಿಗೆ ಇವಳ ಬಗೆಗೆ ಅನುಕಂಪ ಮೂಡುತ್ತದೆ. ದಿನವೆಲ್ಲ ಅಲ್ಲಿಯೇ ಕಳೆಯುತ್ತಾನೆ. ಗುರುಗಳಾದ ಸೂರ್ಯಮಿತ್ರರಿಗಿದು ಅರಿವಿಗೆ ಬಂದಿದೆ. ಶಿಷ್ಯ ವಿಚಾರಿಸಿದಾಗ ಅವನ ಮಾಹಿತಿ ನೀಡುತ್ತಾರೆ. ಕಣ್ಣರಿಯದಿದ್ದರು ಕರುಳರಿಯದೆ ಅನ್ನುವುದನ್ನು ಈ ಸಂದರ್ಭದಲ್ಲಿ ಅಗ್ನಿಭೂತಿ ಆ ದುರ್ಗಂಧಿಗೆ ದೀಕ್ಷಾಬೋಧನೆಯನ್ನು ಹೇಳಿ ಉದ್ಧರಿಸುವುದನ್ನು ಕಂಡಾಗ ಅರಿವಾಗುತ್ತದೆ.

ಗುರುದೀಕ್ಷೆಯು ಸೋಂಕಿನಿಂದ ವಾಯುಭೂತಿ ಮತ್ತು ಚಂಪಾನಗರದ ರಾಜ ಸಾಪ ನಾಗಶರ್ಮ ತ್ರಿವೇದಿಯವರ ಅರಕೆಯ ಪುತ್ರಿಯಾಗಿ 'ನಾಗಶ್ರೀ' ಎಂಬ ಅಂಕಿತದಿಂದ ಪ್ರಸಿದ್ಧಿ ಹೊಂದುವಳು. ನಾಗರಮಹಿಮೆಯಿಂದ ಹುಟ್ಟಿದ ಈ ಹುಡುಗಿ ನಾಗರಪೂಜೆಗೆಂದು ಬಂದಾಗ ಪಕ್ಕದಲ್ಲಿಯೇ ಇದ್ದ ಯತಿಗಳಾದ ಸೂರ್ಯ ಮಿತ್ರ ಹಾಗೂ ವಾಯುಭೂತಿಯರನ್ನು ಕಂಡು ಅವಳಲ್ಲಿ ಭಕ್ತಿ ಭಾವನೆ ಮೂಡಿ ತಾನು ಜಿನದೀಕ್ಷೆಯನ್ನು ಸ್ವೀಕರಿಸುತ್ತಾಳೆ. ಮನೆಗೆ ಬಂದು ತಂದೆ ನಾಗಶರ್ಮರಿಗೆ ವಿವರಿಸಿದಾಗ ಕೆಂಡದಂತ ಕೋಪ ಬರುತ್ತದೆ. ಶ್ರೇಷ್ಠ ಬ್ರಾಹ್ಮಣರಾದ ನಾವು 'ಸವಣವ್ರತ' ಸ್ವೀಕರಿಸುವುದೆ? ಖಂಡಿತ ಸಲ್ಲದು. ಮೊದಲು ಇದನ್ನು ತ್ಯಜಿಸು ಎಂದಾಗ ವಿವೇಕಿ 'ನಾಗಶ್ರೀ' ಅಪ್ಪಾಜಿ ಈ ವ್ರತಗಳನ್ನು ನಾನು ಏಕಾಏಕಿಯಾಗಿ ಬಿಸುಡುವಂತಿಲ್ಲ. ಗುರುಗಳಲ್ಲಿಗೆ ಹೋಗಿ ಬಿಡಬೇಕು ಎಂದಾಗ ಹಾಗೆಯೇ ಆಗಲಿ ಎಂದು ತಂದೆ-ಮಗಳು ಪಯಣ ಬೆಳೆಸುತ್ತಾರೆ. ದಾರಿಯಲ್ಲಿ ಕಳ್ಳ, ಸುಳ್ಳ, ವ್ಯಭಿಚಾರಿ ಮುಂತಾದ ತಪ್ಪಿನಿಂದ ಪಡುತ್ತಿರುವ ಪಾಡನ್ನು ಗಮನಿಸಿ ನಾಗಶ್ರೀ ತಾನು ಈ ರೀತಿ ಮಾಡುವುದಿಲ್ಲವೆಂದು ವ್ರತ ಕೈಗೊಂಡಿರುವೆ ಎಂದಾಗ ತಂದೆ ಆಗಲಿ ಅದನ್ನು ಇಟ್ಟು ಉಳಿದವನ್ನು ಬಿಸಾಡು ಎಂದು ಹೇಳಿ ಗುರು ಸಾನಿಧ್ಯಕ್ಕೆ ಬರುತ್ತಾರೆ. ನಾಗಶ್ರೀ ಸಂಭಾವಿತೆ, ಗುರುವಿಗೆ ನಮಿಸಿ ಅವರ ಪಕ್ಕದಲ್ಲೇ ಕುಳಿತುಕೊಳ್ಳುವಳು. ಇದು ಎಲ್ಲರೊಳಗೊಂದಾಗುವ ಮನೋಭಾವನೆಯನ್ನು ಸೂಚಿಸುವ ಕಾದಂಬರಿಯ ಶ್ರೇಷ್ಠ ಗುಣ.

ಮಗಳ ಈ ಪರಿಯ ವರ್ತನೆಯಿಂದ ನೊಂದ ನಾಗಶರ್ಮ ಕೆಂಡ ಕಾರುತ್ತಾನೆ ಯತಿಗಳ ಮೇಲೆ. ಅಲ್ಲದೆ ಈ ಮಗು ನನ್ನದೆ ಎಂದು ಸೂರ್ಯಮಿತ್ರ ಹೇಳುವ ಮಾತು ಮತ್ತಷ್ಟು ಕೋಪಕ್ಕೆ ಕಾರಣವಾಗುತ್ತದೆ. ಈ ವಾದ ಅರಸನ ಬಳಿಗೆ ಹೋಗಿ ವಿವೇಕಿಯಾದ ಅರಸ ತಾಳ್ಮೆಯಿಂದ ಪರಿಶೀಲಿಸಿ, ಜನ್ಮಜನ್ಮಾಂತರಗಳ ಕತೆ ತಿಳಿದು ತನ್ನ ಪರಿವಾರದೊಂದಿಗೆ ತಾನೂ ಜೈನದೀಕ್ಷೆ ತೆಗೆದುಕೊಳ್ಳುತ್ತಾನೆ. ಜೊತೆಗೆ ನಾಗಶ್ರೀ ನಮ್ಮ ಮಗಳೆನ್ನಲು ಆಕೆಯ ಬಾಯಿಂದ ಚಿಮ್ಮಿದ ವೇದ, ಮಂತ್ರ, ವ್ಯಾಕರಣ, ಛಂದಸ್ಸು ಮೊದಲಾದುವನ್ನು ಕಂಡು ಜನ ಬೆಕ್ಕಸ ಬೆರಗಾಗಿ ಈಕೆ ನಾಗಶ್ರೀಯೋ, ಸರಸ್ವತಿಯೋ? ಎನ್ನುವ ತಾಕಲಾಟಕ್ಕೆ ಗುರಿಯಾಗಿ ಎಲ್ಲವೂ ಅರಿವಾದ ಮೇಲೆ ತಾವು ಕೇವಲ ಜ್ಞಾನಿಗಳಾಗಲು ಮುಂದಾದದ್ದು, ಜೈನಧರ್ಮದ ಪ್ರಸಾರ, ಅಹಿಂಸೋ ಪರಮ ಧರ್ಮ ಎನ್ನುವುದನ್ನು ಕಾದಂಬರಿಕಾರರು ಎತ್ತಿ ಹಿಡಿಯುತ್ತಾರೆ.

ಐತಿಹಾಸಿಕ ದೃಷ್ಟಿಯಿಂದ ಮಹತ್ವವಾದ ಈ ಹಿಂದೆಯೇ ಪ್ರಸ್ತಾಪಿಸಬೇಕಾದ ಮತ್ತೊಂದು ಅಧ್ಯಾಯ 'ನೀನು ಮಾನವ ರೂಪದ ಧರ್ಮದೇವತೆ' ಎನ್ನುವ ಭಾಗದಲ್ಲಿ ಪಾಟಲೀಪುತ್ರದ ವಸುದತ್ತನೆಂಬ ವರ್ತಕನ ಮಗಳಾದ ಸುದಾಮೆಯು

ನಿಷ್ಠೆ, ವಚನಪಾಲನೆ, ಇವೆಲ್ಲ ಈ ಕಾದಂಬರಿಯ ಮೌಲ್ಯಯುಕ್ತ ಗುಣಗಳು. ಒಮ್ಮೆ ಸುದಾಮೆ ಕೊಳದಲ್ಲಿ ಸ್ನಾನ ಮಾಡುತ್ತಿರುವಾಗ ಮೊಸಳೆ ಕಾಲಿಡಿದೆಳೆದು, ಅದನ್ನು ಬಿಡಿಸಲು ಯಾಚಿಸಿದಾಗ ಆಕೆಯ ಸೋದರಮಾವ ಧನದೇವ 'ಒಡ್ಡಿದ ಷರತ್ತೆಂದರೆ' ನಿನ್ನ ಮದುವೆಯ ದಿನ ಅಲಂಕಾರವನ್ನು ಮಾಡಿಕೊಂಡು ಬಂದು ಮೊದಲು ನನಗೆ ತೋರಿಸಬೇಕೆಂದು ಆಕೆಯನ್ನು ಮೊಸಳೆ ಬಾಯಿಂದ ಪಾರು ಮಾಡುತ್ತಾನೆ. ಆ ದಿನ ಬಂತು. ಸುದಾಮೆ ಆಡಿದ ಮಾತಿಗೆ ತಪ್ಪುವವಳಲ್ಲ. ಎಲ್ಲರೂ ಮಲಗಿ ನಿದ್ರಿಸುತ್ತಿರುವಾಗ ಅಲಂಕಾರ ಭೂಷಿತಳಾಗಿ, ಹೊರಬಂದಾಗ ಮೊದಲು ಬ್ರಹ್ಮ ರಾಕ್ಷಸ ಅಡ್ಡಲಾಗಿ ತಿನ್ನಲು ಮುಂದಾಗುತ್ತದೆ. ಅದಕ್ಕೆ ಸಮಜಾಯಿಸಿ ಹೇಳಿ, ಮುಂದೆ ಕಳ್ಳಒಡವೆಯನ್ನು ಬಯಸಿದ, ಅವನಿಗೆ ಅಭಯಕೊಟ್ಟು, ಮುಂದೆ ತಳವಾರ ಏಕಾಂಗಿಯಾದ ನಿನ್ನನ್ನು ನಿನ್ನ ಮನೆಗೆ ತಲುಪಿಸುವೆನು ಎನ್ನಲು ಅವರೆಲ್ಲರೂ ಇವಳ ಮಾತಿನ ಮೇಲೆ ನಿಗಾ ಇಟ್ಟುಬಿಡುವರು. ಅದರಂತೆ ಸುದಾಮೆ 'ಧನದೇವನನ್ನು' ಎಬ್ಬಿಸಿ, ಅವನಿಗೆ ಪರಿಸ್ಥಿತಿ ವಿವರಿಸಿದಾಗ ಆತನೇ ನೊಂದು ನುಡಿಯುವ ಮಾತು ಗಳು, ಜೊತೆಗೆ ನೀನು ಬರಬೇಡ ಎನ್ನುವ ಸುದಾಮೆಯ ನುಡಿಯ ಹಿಂದಿನ ಶೀಲದ ಬಗ್ಗೆ ಜನರಿಗೆ ಗುಮಾನಿ ಉಂಟಾಗಬಹುದೆಂಬ ನೀತಿ, ತಳವಾರ, ಕಳ್ಳ, ರಾಕ್ಷಸ ಇವರೆಲ್ಲ ಸತ್ಯವಾದಿಯ ಮುಂದೆ ಹೇಗೆ ತಮ್ಮ ಕೃತ್ಯವನ್ನೇ ದೂರ ಮಾಡಿದರು ಅನ್ನುವುದು ಪ್ರಸ್ತುತವಾಗುತ್ತದೆ. ಜೊತೆಗೆ ತಳವಾರರು ಹಿಂದೆ ಊರುಗಳಲ್ಲಿ ಕಾವಲುಗಾರರಾಗಿ ಹೇಗೆ ಕರ್ತವ್ಯ ನಿರ್ವಹಿಸುತ್ತಿದ್ದರು ಅನ್ನುವುದು ಈ ಕಾದಂಬರಿ ಯಿಂದ ಧ್ವನಿತವಾಗುತ್ತದೆ.

ತಪದಲ್ಲಿ ನಿರತಳಾದ ನಾಗಶ್ರೀ ಅಣುವ್ರತ ದೀಕ್ಷೆಯಿಂದ ಜೀವ ತ್ಯಜಿಸಿ 'ಪದ್ಮಪ್ರಭನೆಂಬ' ದೇವನಾಗಿ ಅವತರಿಸುತ್ತಾಳೆ. ಈ ಭಾಗದಲ್ಲಂತೂ ಕಾದಂಬರಿ ಕಾರರು ಮಾಡುವ ಪ್ರಕೃತಿಯ ವರ್ಣನೆ, ದೇವಾಲಯಗಳ ವರ್ಣನೆ, ದುಂಬಿ, ಪಶು ಪಕ್ಷಿಗಳ ವರ್ಣನೆ ಅತ್ಯದ್ಭುತವಾಗಿ, ಜೋಗ್ ಜಲಪಾತದಂತೆ ಭೋರ್ಗರಿ ಯುತ್ತಾ, ಸಹಜ ಶಕ್ತಿಯನ್ನು ಮೈಗೂಡಿಸಿಕೊಂಡು ತೃಪ್ತಿಕರವಾಗಿ ಮೂಡಿಬಂದಿದೆ. ಉಜ್ಜೇನಿ ನಗರದಲ್ಲಿ ಸೂರದತ್ತನೆಂಬ ರಾಜ ಶ್ರೇಷ್ಠ ಶ್ರೇಷ್ಠಿ ಆತನು ಸೌಂದರ್ಯದಲ್ಲಿ ಇಂದ್ರನನ್ನು ಮೀರಿಸುವಷ್ಟು ಕಳೆಬರಹ, ಹಿಂದಿನ ಜನ್ಮದಲ್ಲಿ ತ್ರಿವೇದಿಯಾಗಿದ್ದು ನಾಗಶ್ರೀಯ ತಾಯಿ ಆದವಳು ಇದೀಗ ಸುಪುತ್ರಿಯಾಗಿ ಹುಟ್ಟಿ–'ಯಶೋಭದ್ರೆ' ಎಂಬ ಕುವರಿಯನ್ನು ಹಡೆದಳು, ಇವಳೇ 'ನಾಗಶ್ರೀ'.

ಸೂರದತ್ತ ನಾಗಶ್ರೀ ಇವರ ವಿವಾಹ ಅತ್ಯಂತ ವೈಭವಪೂರಿತವಾಗಿ ನಡೆಯುತ್ತದೆ, ಆದರೆ ಇವರಿಗೆ ಬಹುಕಾಲ ಮಕ್ಕಳಿಲ್ಲದೆ ಕೊರಗುಂಟಾಗುತ್ತದೆ. 'ಬಂಜೆಎಂಬ ಶಪತ ಹೊರಲಾರೆ' ಎನ್ನುವ ನೋವು ಯಶೋಭದ್ರೆಯ ಪಾಲಿಗೆ ಪಾಷಾಣವಾಗಿ ಕಾಡುತ್ತದೆ. ಪುಣ್ಯಕ್ಷೇತ್ರ ದರ್ಶನ, ಪವಿತ್ರ ಗಂಗಾಸ್ನಾನ

ಮೊದಲಾದ ಧಾರ್ಮಿಕ ವಿಧಿಗಳಿಂದಲೂ ಪ್ರಯೋಜನವಾಗಲಿಲ್ಲ. ನೋವಿನಾಳದಲ್ಲಿ ದಿನ ಕಳೆದಳು. ಒಂದು ದಿನ ಈಕೆಯ ಪಾಲಿಗೆ ಅಮೃತಮಯವಾದ ದಿನವಾಗಿ ಪರಿಣಮಿಸಿತು. ಅದೆಂದರೆ ಯತಿವರ್ಯರಾದ ಅಭಿನಂದನ ಮುನಿಗಳು ಸಮೀಪದ ವನದಲ್ಲಿ ಧ್ಯಾನ ಮಗ್ನರಾಗಿದ್ದು ಎಲ್ಲರೂ ಅವರನ್ನು ಕಂಡು ಆಶೀರ್ವಾದ ಪಡೆದರು. ಇದು ಯಶೋಭದ್ರೆಗೆ ಹೇಳಿ ಮಾಡಿಸಿದ ಕಾಲವಾಗಿತ್ತು. ಫಲಪುಷ್ಪಗಳೊಂದಿಗೆ ಅಭಿನಂದನ ಮುನಿಯ ಬಳಿಗೆ ಸಖಿಯೊಂದಿಗೆ ಬಂದಳು. ಅಡ್ಡಬಿದ್ದು ತನ್ನ ಇಂಗಿತ ವನ್ನು ತೋಡಿಕೊಂಡಳು. ಮುನಿಗಳು ಅಮ್ಮ ನಿನಗೆ ಪುತ್ರ ಸಂತಾನವುಂಟು. ಆದರೂ ಗಂಡ ಯತಿಯಾಗುವನು, ಜೊತೆಗೆ ಯಾರಾದರೂ ಸವಣರು ಕಂಡರೆ ಸಾಕು ನಿನ್ನ ಮಗನೂ ಯತಿಯಾಗುವನು ಎಂದು ಭವಿಷ್ಯ ನುಡಿದರು. ಅವರ ಮಾತಿಗೆ ಹಿಗ್ಗಿ ಈರೇಕಾಯಿಯಾದಳು.

ಗುರುಗಳು ತಿಳಿಸಿದಂತೆ ಮಗು ಹುಟ್ಟಿತು. ವ್ಯಾಪಾರ ನಿಮಿತ್ತ ಬೇರೆ ಊರಿಗೆ ಹೋಗಿದ್ದ ಸೂರದತ್ತ ಕಿಕ್ಕಿರಿದ ಜನಗಳನ್ನು ಕಾಣುತ್ತಲೇ ವಿಷಯ ಅರಿವಾಗಿ ಜಾಗ ಮಾಡಿಕೊಂಡು ಬಂದು ತೊಟ್ಟಿಲಲ್ಲಿ ಕಿಲಕಿಲನೆ ನಗುತ್ತಾ ಮಲಗಿರುವ ಮಗುವನ್ನು, ನಗುನಗುತ್ತಾ ಹಾಸಿಗೆಯ ಮೇಲೆ ಕುಳಿತಿದ್ದ ಮಡದಿ ಯಶೋಭದ್ರೆ ಯನ್ನು ಕಂಡು ತೇಜಪುಂಜವಾದ ಕಣ್ಣುಗಳು, ಅತ್ಯಂತ ಸುಕುಮಾರನಾದ ಈ ಮಗುವಿಗೆ 'ಸುಕುಮಾರ' ಎಂಬ ಹೆಸರೇ ಸರಿಯಾದುದೆಂದು ಪಿಸುಗುಟ್ಟಿ, ತಕ್ಷಣ ಏನೋ ದೂರದ ಕನಸೊಂದು ಕಂಡಂತಾಗಿ ತಾನೂ ದಿಗಂಬರನಾಗಿ ತಪೋ ಹಾದಿ ಹಿಡಿದ.

ಯಶೋಭದ್ರೆ ನೋವನ್ನು ನುಂಗಿಕೊಂಡು ಪುತ್ರನನ್ನು ಅತ್ಯಂತ ಭೋಗ ಜೀವನದಲ್ಲಿ ಅರಮನೆಯ ಒಳಗೇ ಎಲ್ಲ ವ್ಯವಸ್ಥೆಯನ್ನು ಮಾಡಿ ಸಾಕಿ ಬೆಳೆಸಿದಳು.

ಸುಕುಮಾರನ ಬೆಳವಣಿಗೆಯನ್ನು ವರ್ಣಿಸುವಾಗ ಕಾದಂಬರಿಕಾರರು ಅತ್ಯದ್ಭುತವಾದ ಚಮತ್ಕಾರವನ್ನು ತಂದಿದ್ದಾರೆ. ವರ್ಣನೆಯಲ್ಲಿ ತಲ್ಲೀನವಾಗಿ ಸವಿಸವಿಯಾಗಿ ಸಾಹಿತ್ಯಪ್ರೇಮಿಗಳಿಗೆ ಉಣಬಡಿಸುತ್ತಾರೆ.

ನಾಟಕ, ನೃತ್ಯ, ಸಂಗೀತ ಮೊದಲಾದ ಎಲ್ಲ ಬಗೆಯ ವ್ಯವಸ್ಥೆಯನ್ನು ಯಶೋಭದ್ರೆ, ಅರಮನೆಯೊಳಗೆ ನಡೆಸಿದಳು. ರತ್ನಕಂಬಳಿ ವ್ಯಾಪಾರಿ ಬಂದಾಗಲೂ ರಾಜ ಬೇಡವೆಂದು ಕಳಿಸಿಕೊಟ್ಟ ಕಂಬಳಿಯನ್ನು ಕೊಂಡಳು ಯಶೋಭದ್ರೆ. ಅಷ್ಟೆ ಅಲ್ಲ ಸುಕುಮಾರನಿಗೆ ಒಂದು ಶುಭ ಮುಹೂರ್ತದಲ್ಲಿ ಚತುರಿಕೆ, ಚಿತ್ರೆ, ಪದ್ಮಿನಿ ಮೊದಲಾದ ಮೂವತ್ತೆರಡು ಕನ್ಯೆಯರೊಂದಿಗೆ ವೈಭವಪೂರಿತವಾಗಿ ವಿವಾಹ ನಡೆಸಿದಳು. ಧಾನ, ಅನ್ನಸಂತರ್ಪಣೆ ತಿಂಗಳುಗಟ್ಟಲೆ ನಡೆದವು. ಹೊರಗಿನಿಂದ ಬಂದವರಿಗೆ ಸೀರೆ, ಪಂಚೆ ಮೊದಲಾದ ಕೋರಿಯನ್ನಿತ್ತು ಸತ್ಕರಿಸಿ ಕಳುಹಿಸಿದಳು.

ಇದನ್ನೆಲ್ಲ ಕಂಡರೆ ಒಂದು ಕಾಲದ ಬಹುಪತ್ನಿತ್ವದಂತ ಪದ್ದತಿಗಳು, ಅದರ ಆಚರಣೆ, ವಿಧಿ ಮೊದಲಾದವು ಈ ಕಾದಂಬರಿಯಲ್ಲಿ ಸುಂದರವಾಗಿ ದಾಖಲಾಗಿವೆ.

ಇಂಥ ವೈಭವದಿಂದ ಬಾಳುವವನನ್ನು ನೋಡಬೇಕು. ನಮಗೆ ಹಣ ಕೊಟ್ಟು ಕೊಳ್ಳಲಾಗದ ರತ್ನಕಂಬಳಿಯನ್ನು ಕೊಂಡವರು ಯಾರಿರಬೇಕೆಂದು ಉಜ್ಜೇನಿಯ ದೊರೆ ವೃಷಭಾಂಕ ತನ್ನ ಪರಿವಾರದವರೊಂದಿಗೆ ಯಶೋಭದ್ರೆಯ ಮನೆಗೆ ಬಂದನು. ಆರತಿ ಎತ್ತಿ, ಶೃಂಗಾರಮಯ ದೃಶ್ಯಗಳಿಂದ ಅಲಂಕರಿಸಲ್ಪಟ್ಟ ಜಾಗಕ್ಕೆ ವೃಷಭಾಂಕ ನನ್ನು ಕರೆತಂದರು. ಇದೊಂದು ಇಂದ್ರನ ಅರಮನೆಯೇ ಎಂದು ಭಾಸವಾಗುತ್ತಿತ್ತು. ಅಲ್ಲದೆ ರತ್ನಗಂಬಳಿಯನ್ನು ತನ್ನ ಸೊಸೆಯರಿಗೆ ಸಮನಾಗಿ ಪಾದರಕ್ಷೆಯನ್ನು ಮಾಡಿಸಿದ್ದಳು ಅನ್ನುವುದು ವೃಷಬಾಂಕನ ಗಮನಕ್ಕೆ ಬಂದಿತ್ತು. ವೃಷಭಾಂಕನಿಗೆ ಸುಕುಮಾರ ಸ್ವಾಮಿಯನ್ನು ನೋಡುವ ತನಕ ತಾಯಿ ಯಶೋಭದ್ರೆ ಮಗನಿಗೆ ಈ ವಿಷಯವನ್ನು ತಿಳಿಸಿದಾಗ ಅರಸ ಯಾರೆಂದು ನಮ್ಮನ್ನು ಆಳುವವರೂ ಇದ್ದಾರೆಯೋ ? ಎಂದು ಪ್ರಶ್ನಿಸುವಷ್ಟು ಬಾಹ್ಯ ಪ್ರಪಂಚದ ಪರಿವೆ ಅತನಿಗಿರಲಿಲ್ಲ ಅನ್ನುವುದು. ಆತನೊಂದು ಬೆಣ್ಣೆಯ ಮುದ್ದೆಯಾಗಿಯೇ ಬೆಳೆದ ಎನ್ನುವುದೂ ಒಟ್ಟಾಗಿ ಅರಿವಾಗುತ್ತದೆ.

ವೃಷಬಾಂಕ-ಸುಕುಮಾರ-ಇಬ್ಬರೂ ಜೊತೆಯಲ್ಲಿ ಜಲಕ್ರೀಡೆಯಾಡಿದರು, ಆರತಿ ಎತ್ತಿಸಿಕೊಂಡರು, ಸೇಸೆ ಇಕ್ಕಿಸಿಕೊಂಡರು, ಸಹ ಭೋಜನ ಮಾಡಿದರು. ಇಲ್ಲೆಲ್ಲ ಸುಕುಮಾರ ವ್ಯತಿರಿಕ್ತವಾಗಿ ನಡೆದುಕೊಳ್ಳುತ್ತಾನೆ. ಅಂದರೆ ಕಣ್ಣಿನಿಂದ ನೀರು ಸುರಿಯುವುದು, ಸರಿಯಾಗಿ ಕುಳಿತುಕೊಳ್ಳದೆ ಅತ್ತಾ ಇತ್ತ ಅಲ್ಲಾಡುವುದು ಅನ್ನವನ್ನು ಕಚ್ಚಿ ಉಗುಳಿ ತಿನ್ನುವುದು.

ತನ್ನ ಅರಮನೆಗೆ ಹೊರಡುವ ಮುನ್ನ ಅರಸ ಈ ಸೂಚನೆಯನ್ನು ಯಶೋಭದ್ರೆಯ ಗಮನಕ್ಕೆ ತರುತ್ತಾನೆ. ಆಗ ಈಕೆ ಸಮಾದಾನವಾದ ಉತ್ತರ ನೀಡುವಲ್ಲಿ ಸುಕುಮಾರನ ಸುಖದ ವಿಲಾಸವನ್ನು ಕಾದಂಬರಿಕಾರರು ಪರಿಣಾಮಕಾರಿಯಾಗಿ ಚಿತ್ರಿಸಿದ್ದಾರೆ.

ಮುಕ್ತಿಗೃಹದ ಮಹಾಬಾಗಿಲು ಧರ್ಮ ! ಇದು ಈ ಕಾದಂಬರಿಯ ಕೊನೆಯ ಅಧ್ಯಾಯ ಹಾಗು ಕೇಂದ್ರ ಪ್ರಜ್ಞೆ ಕೂಡ. ಇಲ್ಲಿ ಸುಕುಮಾರನನ್ನು ಅಲೌಕಿಕದೆಡೆಗೆ ಕರೆದೊಯ್ಯಲು ದೇವರ ಸಂದೇಶ ಬಂದಿದೆ. ಅವರೇ ಯಶೋಭದ್ರಮುನಿಗಳು. ಇವರು ತಂಗಿರುವ ಜಾಗ ಸುಕುಮಾರಸ್ವಾಮಿ ಗೃಹದ ಸಮೀಪ. ಇದರಿಂದ ಯಶೋಭದ್ರೆಗೆ ಜಂಗಾಬಲವೇ ಹುದುಗಿ ಹೋದಂತಾಯಿತು. ಕೂಡಲೇ ಹೋಗಿ ತಾವು ದೂರ ತೆರಳುವಂತೆ ಕೋರಿಕೊಂಡಳು. ಆದರೂ ಧರ್ಮದ ಜಯವೇ ಆಗಿ ಕೊನೆಗೆ ಸುಕುಮಾರ ಆ ಸವಣರ ಮಂತ್ರಗಳನ್ನು ಆಲಿಸಿ, ಎಲ್ಲ ಅರಿವಾಗಿ ರಾತ್ರೋ ರಾತ್ರಿ ಮನೆಯಿಂದ ಹೊರಬಿದ್ದು ದೀಕ್ಷೆ ಸ್ವೀಕರಿಸಿ ಸವಣನಾಗಿ, ಕೊನೆಗೆ ಅಣಿವ್ರತ ಕೈಗೊಂಡು ಮಹಾಕಾಳ ಸ್ಮಶಾನದಲ್ಲಿ ಜೀವ ತ್ಯಜಿಸಿದ್ದನು. ಅರಮನೆಯಲ್ಲಿ ಇದರಿಂದುಂಟಾದ ನೋವು ಅಪಾರ. ಯಶೋಭದ್ರೆ, ಮೂವತ್ತೆರಡು ಮಂದಿ ಸೊಸೆಯಂದಿರು ಮಗನನ್ನು ಹುಡುಕುತ್ತಾ ಬಂದರು. ಮಹಾಕಾಳ ಸ್ಮಶಾನದಲ್ಲಿ ಪುಷ್ಪವೃಷ್ಟಿಯಾಗುವುದನ್ನು, ಸುಗಂಧಯುಕ್ತ ಪರಿಮಳ ಮೂಡುವುದರಿಂದ ಕುಮಾರ

ಇಲ್ಲಿಯೇ ಇರಬಹುದೆಂದು ಶಂಕಿಸಿ ಆ ಸ್ಥಳಕ್ಕೆ ಬಂದು ಹೂ ರಾಶಿಯನ್ನ ಸರಿಸಿ ನೋಡಿದರೆ ಸುಕುಮಾರಸ್ವಾಮಿ ಶವವಾಗಿ ಬಿದ್ದಿದ್ದ. ಇದರಿಂದ ನೊಂದು ಎಂಟು ಮಂದಿ ಗರ್ಭಿಣಿ ಸ್ತ್ರೀಯರನ್ನುಳಿದು ಉಳಿದವರೆಲ್ಲ ದೀಕ್ಷೆ ತೆಗೆದುಕೊಂಡು ತಪೋನಿರತ ರಾದರು. ಇಲ್ಲಿಗೆ ಕಾದಂಬರಿ ಮುಕ್ತಾಯವಾಗುತ್ತದೆ. ಕಾದಂಬರಿಯ ವಸ್ತು ಪೌರಾಣಿಕವಾದರೂ ಸಮಕಾಲೀನ ಪ್ರಜ್ಞೆಯಿಂದಾಗಿ ಕಾದಂಬರಿ ಸಾರ್ವತ್ರಿಕ ಮನ್ನಣೆಗೆ ಪಾತ್ರವಾಗುತ್ತದೆ. ಕಾದಂಬರಿಯಲ್ಲಿ ಬಳಸಿರುವ ಜನಪದ ಆಟಗಳು, ಗಾದೆ, ನಾಣ್ಣುಡಿಗಳು ಜೊತೆಗೆ ವಿಧಿ ಸಂಪ್ರದಾಯ ಇವೆಲ್ಲ ಕಾದಂಬರಿಕಾರರಿಗಿರುವ ವಿಸ್ತಾರವಾದ ಪರಿಜ್ಞಾನದ ದ್ಯೋತಕವಾಗಿವೆ. ಹಾಗೆಯೇ ಪಾತ್ರ ಪೋಷಣೆಯೂ ಸಂದರ್ಭಕ್ಕೆ ತಕ್ಕಂತೆ ಬಂದಿದೆ. ಮತ್ತೊಂದು ಅಧ್ಯಾಯಕ್ಕೆ ಸಂಪರ್ಕವನ್ನು ಕಲ್ಪಿಸಿರುವುದರಿಂದ ಕಾದಂಬರಿ ಸುಲಲಿತವಾಗಿ ಓದಿಸಿಕೊಂಡು, ಮತ್ತೆ ಮತ್ತೆ ಮೆಲುಕು ಹಾಕಬಲ್ಲ ಆಹಾರವೂ ಕಾದಂಬರಿಯಲ್ಲಿದೆ.

# ಲೇಖಕರ ವಿಳಾಸ

1. ಡಾ॥ ಸಂಗಮೇಶ ಸವದತ್ತಿಮಠ<br>ಜ್ಞಾನಗಂಗಾ, ಗುಲ್ಬರ್ಗಾ ವಿಶ್ವವಿದ್ಯಾನಿಲಯ<br>ಗುಲ್ಬರ್ಗಾ 585105
2. ಡಾ॥ ದೇ. ಜವರೇಗೌಡ<br>ಕಲಾನಿಲಯ, ಜಯಲಕ್ಷ್ಮೀಪುರಂ<br>ಮೈಸೂರು 570012
3. ಡಾ॥ ಸೋಮಶೇಖರಗೌಡ<br>ಉಪನ್ಯಾಸಕರು, ಭಾಷಾವಿಜ್ಞಾನ<br>ಕನ್ನಡ ಅಧ್ಯಯನ ಸಂಸ್ಥೆ,<br>ಮಾನಸಗಂಗೋತ್ರಿ, ಮೈಸೂರು 570006
4. ಸಿ. ಎಸ್. ಶಿವಕುಮಾರಸ್ವಾಮಿ<br>ಕನ್ನಡ ಉಪನ್ಯಾಸಕರು, ಕುವೆಂಪು ವಿಶ್ವವಿದ್ಯಾನಿಲಯ<br>ಬಿ. ಆರ್. ಪ್ರಾಜೆಕ್ಟ್, ಶಿವಮೊಗ್ಗ ಜಿಲ್ಲೆ 577115
5. ಆರ್. ರಾಚಪ್ಪ<br>ಪ್ರಾಚಾರ್ಯರು<br>ಶ್ರೀ ಜಗದ್ಗುರು ರೇಣುಕಾಚಾರ್ಯ ವಿಜ್ಞಾನ, ಕಲಾ ಮತ್ತು<br>ವಾಣಿಜ್ಯ ವಿದ್ಯಾಲಯ, ಬೆಂಗಳೂರು 560009
6. ಡಾ॥ ಎಚ್. ಎಂ. ಮಹೇಶ್ವರಯ್ಯ<br>ರೀಡರ್, ಕನ್ನಡ ಅಧ್ಯಯನ ಪೀಠ<br>ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ-580003
7. ಚಂದ್ರಗೌಡ ಕುಲಕರ್ಣಿ<br>ಕನ್ನಡ ಅಧ್ಯಾಪಕ<br>ಶ್ರೀ ಭಾಸ್ಕತೇಶ ಕಲಾ/ವಾಣಿಜ್ಯ ಮಹಾವಿದ್ಯಾಲಯ<br>ತಾಳಿಕೋಟೆ 58624
8. ಎಚ್. ಎಸ್. ಹರಿಶಂಕರ್<br>ಉಪನ್ಯಾಸಕರು,<br>ಕನ್ನಡ ಅಧ್ಯಯನ ಸಂಸ್ಥೆ, ಮಾನಸಗಂಗೋತ್ರಿ<br>ಮೈಸೂರು-570006

9. ಡಾ॥ ಜಿ. ಎಂ. ಹೆಗಡೆ
ಉಪನ್ಯಾಸಕರು,
ಕನ್ನಡ ಅಧ್ಯಯನ ಪೀಠ, ಕರ್ನಾಟಕ ವಿಶ್ವವಿದ್ಯಾಸಿಲಯ
ಧಾರವಾಡ-580003

10. ಸರಸ್ವತಿ ವಿಜಯಕುಮಾರ್
798, 4ನೇ ಹಂತ, ಸರಸ್ವತೀಪುರಂ
ತೊಣಚಿಕೊಪ್ಪಲು. ಮೈಸೂರು 570009

11. ಬಿ. ಆರ್. ಹಿರೇಮಠ
ರೀಡರ್, ಕನ್ನಡ ಅಧ್ಯಯನ ಪೀಠ
ಕರ್ನಾಟಕ ವಿಶ್ವವಿದ್ಯಾಲಯ
ಧಾರವಾಡ-580003

12. ಟಿ. ಕೇಶವಭಟ್ಟ
754, 'ಶ್ರೀವರ್ಧನ' 15ನೇ ಮುಖ್ಯರಸ್ತೆ
ಬನಶಂಕರಿ ಎರಡನೇ ಹಂತ
ಬೆಂಗಳೂರು 560070

13. ಪ್ರೊ॥ ಬಾಳಣ್ಣ ಶೀಗೀಹಳ್ಳಿ
ಕಲಾ-ವಾಣಿಜ್ಯ ಮಹಾವಿದ್ಯಾಲಯ
ಕಿತ್ತೂರು 591115
ಬೆಳಗಾವಿ ಜಿಲ್ಲೆ

14. ಡಾ॥ ಬಸವರಾಜ ಮಲಶೆಟ್ಟಿ
ಕನ್ನಡ ಉಪನ್ಯಾಸಕರು
ವಿಜಯನಗರ ಕಾಲೇಜು, ಹೊಸಪೇಟೆ
ಬಳ್ಳಾರಿಜಿಲ್ಲೆ

15. ಎಂ. ಎ. ಜಯಚಂದ್ರ
250, ಮಹಡಿಮನೆ, 5ನೇ ಮುಖ್ಯರಸ್ತೆ, 4ನೇ ಹಂತ,
ಕೈಗಾರಿಕಾನಗರ, ರಾಜಾಜಿನಗರ
ಬೆಂಗಳೂರು 560014

16. ಡಾ॥ ಬಿ. ಸಿ. ಜವಳಿ
ಪ್ರಾಧ್ಯಾಪಕರು
ಕನ್ನಡ ಅಧ್ಯಯನ ಕೇಂದ್ರ, ಕರ್ನಾಟಕ ವಿಶ್ವವಿದ್ಯಾಲಯ
ಧಾರವಾಡ 580003

17. ಡಾ|| ನಂ. ತಪಸ್ವೀಕುಮಾರ್
ಕನ್ನಡ ವಿಭಾಗ
ಅಂಚೆ ಮತ್ತು ತೆರಪಿನ ಶಿಕ್ಷಣ ಸಂಸ್ಥೆ
ಮೈಸೂರು 570006

18. ಡಾ|| ಎಸ್. ಪಿ, ಪಾಟೀಲ
'ಧವಲ' ನಿರ್ಮಲನಗರ
ಧಾರವಾಡ 580003

19. ಜಿ. ಪಾರ್ಶ್ವನಾಥ ಕೆಂಪಣ್ಣವರ
ಮು ಪೋ ಮುತನಾಳ-591109
ಬೆಳಗಾವಿ ಜಿಲ್ಲೆ

20. ಮ. ಗು. ಬಿರಾದಾರ
ಮುಖ್ಯಸ್ಥರು, ಕನ್ನಡ ಅಧ್ಯಯನ ಸಂಸ್ಥೆ
ಗುಲ್ಬರ್ಗಾ ವಿಶ್ವವಿದ್ಯಾನಿಲಯ, ಗುಲ್ಬರ್ಗಾ 585106

21. ಬಿ. ಜಯದೇವಪ್ಪ
ಕನ್ನಡ ರೀಡರ್
ಸರ್ಕಾರಿ ಕಾಲೇಜು. ಚಿಂತಾಮಣಿ 563125

22. ಸಿ. ಹನುಮಂತರಾಯಪ್ಪ
ಅಧೀಕ್ಷಕರು, ರಿಮ್ಯಾಂಡ್‌ಹೋಂ ವಸಂತನಗರ
ಶಿವಮೊಗ್ಗ 567204

23. ಡಾ|| ಎಸ್. ಎಸ್. ಕೋತಿನ
ಪ್ರಾಧ್ಯಾಪಕರು, ಕನ್ನಡ ಅಧ್ಯಯನ ಪೀಠ
ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ-580003

24. ಕೆ. ಎಂ. ಮುನಿಕೃಷ್ಣಪ್ಪ
17/1, 'ಶ್ರೀರಂಗ ನಿಲಯ' ಚಿಕ್ಕಣ್ಣ ಗಾರ್ಡನ್,
ಚಾಮರಾಜಪೇಟೆ, ಬೆಂಗಳೂರು-560018

25. ಸುಶೀಲಾ ನೆಲ್ಲೀಸರ
C/o ಡಾ|| ಬಸವರಾಜ ನೆಲ್ಲೀಸರ, ಕುವೆಂಪು ವಿಶ್ವವಿದ್ಯಾಲಯ
ಬಿ. ಆರ್. ಪ್ರಾಜೆಕ್ಟ್ 577115, ಶಿವಮೊಗ್ಗಜಿಲ್ಲೆ.

26. ರಂಗಾರೆಡ್ಡಿ ಕೋಡಿರಾಂಪುರ
ಕನ್ನಡ ಉಪನ್ಯಾಸಕರು, ಎ. ಇ. ಎಸ್. ನ್ಯಾಷನಲ್ ಕಾಲೇಜು
ಗೌರೀಬಿದನೂರು-561208, ಕೋಲಾರಜಿಲ್ಲೆ

27. ನೀಲಮ್ಮ ಕತ್ನಳ್ಳಿ
ಕನ್ನಡ ಪ್ರಾಧ್ಯಾಪಕಿ
ಎಸ್. ಎಸ್. ಮುರಿಗೇಶ್ ಕಾಲೇಜು
ಶಾಹಬಾದ 588228

28. ಎಚ್. ವಿ. ನಾಗೇಶ್
ಕನ್ನಡ ಉಪನ್ಯಾಸಕರು
ಜೆ. ಎಸ್. ಎಸ್. ಕಾಲೇಜು
ಧಾರವಾಡ-580004

29. ಎಚ್. ಶ್ರೀಶೈಲ ಆರಾಧ್ಯ
ಕನ್ನಡ ರೀಡರ್, ಸರ್ಕಾರಿ ವಿಜ್ಞಾನ ಕಾಲೇಜು
ಚಿತ್ರದುರ್ಗ-57

30. ಡಾ।। ಕೆ. ಆರ್. ಸಂಧ್ಯಾರೆಡ್ಡಿ
ನಂ 588. (ಮಹಡಿ), ಭವಾನಿನಗರ, ಗವೀಪುರಂ ಬಡಾವಣೆ
ಬೆಂಗಳೂರು-560019

31. ಡಾ॥ ಮಲ್ಲಿಕಾರ್ಜುನ ಲಠ್ಠೆ
'ಶಿವ', 55, ವಿಶ್ವೇಶ್ವರಯ್ಯನಗರ
ಸೇಡಂ ರಸ್ತೆ. ಗುಲ್ಬರ್ಗಾ 585105

32. ನೀಲಗಿರಿ ತಳವಾರ
ಕನ್ನಡ ಉಪನ್ಯಾಸಕರು
ಸರ್ಕಾರಿ ಕಿರಿಯ ಕಾಲೇಜ್
ಕೌಜಗೇರಿ, ರೋಣ (ತಾಲ್ಲೂಕ್)

33. ಪ್ರೊ॥ ಎಸ್ ಎಸ್ ಭೂಸರೆಡ್ಡಿ,
ಉಪನ್ಯಾಸಕರು
ಕನ್ನಡ ಅಧ್ಯಯನ ಪೀಠ
ಕರ್ನಾಟಕ ವಿಶ್ವವಿದ್ಯಾಲಯ
ಧಾರವಾಡ—580003

34. ಡಾ॥ ಶ್ರೀಕಂಠ ಕೂಡಿಗೆ
ರೀಡರ್
ಕುವೆಂಪು ವಿಶ್ವವಿದ್ಯಾಲಯ
ಬಿ. ಆರ್. ಪ್ರಾಜೆಕ್ಟ್ 577115
ಶಿವಮೊಗ್ಗ ಜಿಲ್ಲೆ

35. ಟಿ. ಎಸ್. ನಾಗರಾಜಶೆಟ್ಟಿ
ನಿರ್ಮಲ ಪ್ರಕಾಶನ
ರಾಮಲಕ್ಷ್ಮಣ ನಿಲಯ, ಕೆ. ಆರ್. ಬಡಾವಣೆ
ತಿಪಟೂರು–572202

36. ಸಿ. ನಾಗರಾಜು
ಕನ್ನಡ ಉಪನ್ಯಾಸಕರು
ಮಾರುತಿ ಕಿರಿಯ ಕಾಲೇಜು, ಹದಡಿ,
ದಾವಣಗೆರೆ ತಾಲ್ಲೂಕು
ಚಿತ್ರದುರ್ಗ ಜಿಲ್ಲೆ

37. ಜಿ. ಬ್ರಹ್ಮಪ್ಪ
ಯುಜಿಸಿ ಪ್ರಿನ್ಸಿಪಾಲ್
ಕನ್ನಡ ಅಧ್ಯಯನ ಸಂಸ್ಥೆ. ಮಾನಸಗಂಗೋತ್ರಿ
ಮೈಸೂರು–570006

38. ಡಾ॥ ಪದ್ಮಾಶೇಖರ್,
ಕನ್ನಡ ಉಪನ್ಯಾಸಕರು
ಪುರಸಭಾ ಪ್ರಥಮ ದರ್ಜೆ ಕಾಲೇಜು
ಹುಣಸೂರು
ಮೈಸೂರು ಜಿಲ್ಲೆ

39. ಪ್ರೊ॥ ಸಿ. ವ್ಹಿ. ಕೆರಿಮನಿ
ಕನ್ನಡ ಉಪನ್ಯಾಸಕರು
ಮುನ್ಸಿಪಲ್ ಆರ್ಟ್ಸ್ ಕಾಲೇಜು, ಲಕ್ಷ್ಮೇಶ್ವರ–582116
ಧಾರವಾಡ ಜಿಲ್ಲೆ

40. ಪ್ರೊ॥ ಎಸ್. ಪ್ರಭಾಕರ್
ಶ್ರೀಮಂಜುನಾಥೇಶ್ವರ ಪುಸ್ತಕ ಪ್ರಕಾಶನ ಮಾಲೆ
ಶ್ರೀಧರ್ಮಸ್ಥಳ ಎಜುಕೇಷನಲ್ ಟ್ರಸ್ಟ್ (ರಿ)
ಉಜಿರೆ–574240 (ದಕ್ಷಿಣ ಕನ್ನಡ)

41. 'ನಾ' ವುಜಿರೆ,
ಶ್ರೀ ಧರ್ಮಸ್ಥಳ ಮಂಜನಾಥೇಶ್ವರ ಕಾಲೇಜು
ಉಜಿರೆ–574240
ದಕ್ಷಿಣ ಕನ್ನಡ ಜಿಲ್ಲೆ

42. ವಿ. ಗೋಪಾಲಕೃಷ್ಣ
ಸಹೋಪಾಧ್ಯಾಯರು
ಎನ್. ಆದಿರಾಮಯ್ಯ ಪ್ರೌಢಶಾಲೆ
ದಾರಿನಾಯಕಪಾಳ್ಯ, ಕೊಲಾರ ಜಿಲ್ಲೆ

43. ಹೀ. ಚಿ. ಶಾಂತವೀರಯ್ಯ
ಸಂಪಾದಕರು
ಕನ್ನಡ ನಿಘಂಟು
ಕನ್ನಡ ಸಾಹಿತ್ಯ ಪರಿಷತ್ತು, ಚಾಮರಾಜಪೇಟೆ
ಬೆಂಗಳೂರು-560018

44. ಎಂ. ಜಿ. ನಾಗರಾಜ್
ಸರ್ಕಾರಿ ಕಿರಿಯ ಕಾಲೇಜು
ತ್ಯಾಮಗೊಂಡ್ಲು
ಬೆಂಗಳೂರು ಜಿಲ್ಲೆ

45. ಸರಿತಾ ಜ್ಞಾನಾನಂದ
ಎ-106. ಜ್ಞಾನಭಂಡಾರ.
ಭಾರತ್‌ನಗರ
ಬಿಇಎಂಎಲ್ ಅಂಚೆ
ಕೆ ಜಿ ಎಫ್-56115

46. ಎಚ್. ದಂಡಪ್ಪ
ಕನ್ನಡ ಉಪನ್ಯಾಸಕರು
ಸರ್ಕಾರಿ ಕಾಲೇಜು
ಚಿಂತಾಮಣಿ-563125

47. ಡಾ॥ ಚಂದ್ರಶೇಖರ ಕಂಬಾರ
ಕನ್ನಡ ಅಧ್ಯಯನ ಕೇಂದ್ರ
ಜ್ಞಾನಭಾರತಿ, ಬೆಂಗಳೂರು-560056

48. ಚಿಕ್ಕಣ್ಣ ಯಣ್ಣೆಕಟ್ಟೆ.
ಕನ್ನಡ ಉಪನ್ಯಾಸಕರು
ರೇಣುಕಾಚಾರ್ಯ ಮಹಿಳಾ ಕಾಲೇಜು
1/ಡಿ 4ನೇ ಎಂ ಬ್ಲಾಕ್
ರಾಜಾಜಿನಗರ, ಬೆಂಗಳೂರು-560010



ಡಾ॥ ಹಂಪ. ನಾಗರಾಜಯ್ಯ ಅವರು ಪ್ರಾರಂಭ ದಿಂದಲೂ ತಮ್ಮ ವ್ಯಕ್ತಿತ್ವವನ್ನು ಸಂಸ್ಕರಿಸುತ್ತಾ ತಮ್ಮ ಐದು ದಶಕಗಳ ಬದುಕಿನಲ್ಲಿ ಕನ್ನಡನಾಡು, ನುಡಿ, ಸಂಸ್ಕೃತಿಗೆ ತಮ್ಮದೇ ಆದ ವಿಶಿಷ್ಟ ಕೊಡುಗೆ ಯನ್ನು ನೀಡಿ ಜನರ ಭಾಷೆಯ ಸಂಸ್ಕೃತಿಯ ಏಳಿಗೆಗೆ ಕಾರಣರಾಗಿದ್ದಾರೆ. ಹಾಗೆಯೇ ತಮ್ಮ ಉಜ್ವಲವಾದ ಅನುಕರಣೀಯವಾದ ವ್ಯಕ್ತಿತ್ವ ದಿಂದ, ಪರೋಪಕಾರ, ಪ್ರೀತಿ, ವಿನಯ, ವಿಶ್ವಾಸ, ಸೌಜನ್ಯ, ಸರಳತೆ ಮುಂತಾದ ಗುಣ ಗಳಿಂದ ದುರ್ಬಲ ವರ್ಗಗಳ ಜನರ ಪ್ರೀತಿಯನ್ನು ಅಪಾರವಾಗಿ ಗಳಿಸಿದ್ದಾರೆ. ಸಾಹಿತ್ಯದ ಹಲವು ಕ್ಷೇತ್ರಗಳಲ್ಲಿ ಸುಮಾರು ಐವತ್ತಕ್ಕೂ ಹೆಚ್ಚು ಕೃತಿಗಳನ್ನು ಹೊರತಂದಿರುವ ಡಾ॥ ಹಂಪನಾ ಅವರು ಸದಾ ಹಸನ್ಮುಖಿಗಳು. ಸಂಕಟ, ನೋವು, ತೆಗಳಿಕೆಗಳನ್ನು ಉತ್ಸಾಹ, ಸಂತೋಷ, ಹೊಗಳಿಕೆಗಳನ್ನಾಗಿ ಮಾರ್ಪಡಿಸಿ ಸ್ವಾಗತಿಸುವ ಅವರ ಮನೋಧೈರ್ಯ ಅಪರೂಪದ್ದು. ಸಂಘಟಕ ರಾಗಿ ಉತ್ತಮ ಭಾಷಣಕಾರರಾಗಿ ಅಚ್ಚುಮೆಚ್ಚಿನ ಪ್ರಾಧ್ಯಾಪಕರಾಗಿ ಹಿರಿಯ ಸಾಹಿತಿಯಾಗಿ ಡಾ॥ ಹಂಪನಾ ಹೆಸರು ಮಾಡಿರುವಂತೆ ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾಗಿ ಸಲ್ಲಿಸಿರುವ ಸೇವೆ ಅಪಾರವಾದದು, ಅಮೋಘವಾದದು.

ಸಂಪಾದಕರು